ಡಿತ
.ಗೆ ... ಕಾಲಾ... ಹಾ ಸಮ್ಮಿಶ್ರ ಬಾಡಿ ಕಟ್ಟಡ

ಸಕಲರಿಗೂ ನಮ್ಮ ಹಾರ್ದಿಕ ದೀಪಾವಳಿ ಶುಭಾಶಯಗಳು







ಉತ್ತಮ
ಆಟೋಮೊಬೈಲ್
ಬಾಡಿ ಕಟ್ಟಡ
ಸೊಗಸು ಮತ್ತು ಬಲುಗಟ್ಟಿ
ಬಹುಕಾಲ
ಬಾಳಿಕೆ






DESAI

## ಮೈಸೂರು ಮತ್ತು ಆಂಧ್ರಪ್ರದೇಶ ಸರ್ಕಾರಿ ವಾಹನಗಳ ಬಾಡಿ ಕಟ್ಟುವವರು

ಅಧಿಕೃತ ವ್ಯಾಪಾರಿಗಳು

**ರಾಯಲ್ ಎನ್ ಫೀಲ್ಡ್**
ಮೋಟಾರ್ ಸೈಕಲ್ ಮತ್ತು ಸ್ಕೂಟರ್
ಬಳ್ಳಾರಿ, ಕರ್ನೂಲು, ನೆಲ್ಲೂರು ಮತ್ತು ಅನಂತಪುರ
ಜಿಲ್ಲೆಗಳಿಗೆ

**ಟಾಟಾ ಮೆರ್ಸಿಡೀಜ್ ಬೆಂಜ್**
ಬಳ್ಳಾರಿ ಮತ್ತು ರಾಯಚೂರ
ಜಿಲ್ಲೆಗಳಿಗೆ

# ಎಂ. ಜಿ. ಆಟೋಮೊಬೈಲ್ಸ್

ಆಟೋಮೊಬೈಲ್ ಇಂಜಿನೀರ್ಸ್ ಮತ್ತು ಕೋಚ್ ಬಿಲ್ಡರ್ಸ್.
ಬಳ್ಳಾರಿ.

ಪಂಡಿತ
ಡಿ. ಗೋಪಾಲಾಚಾರ್ಲು ಅವರ

# ಅಶೋಕ

ಸ್ತ್ರೀಯರ ಆರೋಗ್ಯಕ್ಕೆ



ಆಯುರ್ವೇದಾಶ್ರಮಂ
ಪ್ರೈವೇಟ ಲಿಮಿಟೆಡ್
ಮದರಾಸು-17

---

ದೀಪಾವಳಿಯು ಸರ್ವರಿಗೂ ಸುಖ-ಶಾಂತಿ ಸಂಪತ್ತು ಅಭಿವೃದ್ಧಿಯನ್ನೀಯಲಿ



# ದಿ ಬ್ಯಾಂಕ ಆಫ್ ಕರ್ನಾಟಕ ಲಿ.

(ಶೆಡ್ಯೂಲ್ಡ ಬ್ಯಾಂಕ)

ರಜಿಸ್ಟರ್ಡ ಆಫೀಸ: ದುರ್ಗದ ಬೈಲು, ಹುಬ್ಬಳ್ಳಿ

ತಂತಿ: ಕುಬೇರ ಪೋ. ಬಾ. ನಂ. ೯೦ ಫೋನ: ೧೩೨, ಹುಬ್ಬಳ್ಳಿ

ಶಾಖೆಗಳು: ಬೆಳಗಾವಿ, ಜಮಖಂಡಿ, ಬನಹಟ್ಟಿ, ಧಾರವಾಡ, ದಾಂಡೇಲಿ, ವಿಜಾಪೂರ,
ಗದಗ, ಸವಣೂರ, ಕುಂದಗೋಳ, ಹೊಸ ಕಾಟನ ಮಾರ್ಕೆಟ, ಹುಬ್ಬಳ್ಳಿ.

ದೀಪಾವಳಿಯ ದೀಪೋತ್ಸವದ ಸವಿ ನೆನಪಿಗಾಗಿ ನಿಮ್ಮದೊಂದು ಖಾತೆಯನ್ನು ತೆರೆಯಿರಿ

## ದುಡಿಯುವ ಬಂಡವಲು ರೂಪಾಯಿ ಒಂದು ಕೋಟಿಯ ವರೆಗೆ

ವಿಶಿಷ್ಟ ಆಕರ್ಷಕ ಯೋಜನೆಗಳು:—

೧. ಕ್ಯುಮ್ಯುಲೇಟಿವ್ಹ ಡಿಪಾಜಿಟ್‌ಗಳು.
೨. ಕುಬೇರ ಸ್ಮಾಲ ಸೇವಿಂಗ್ಸ ಡಿಪಾಜಿಟ್‌ಗಳು.
೩. ಕುಬೇರ ಕ್ಯಾಶ ಸರ್ಟಿಫಿಕೇಟುಗಳು.
೪. ಹೋಮ ಸೇವಿಂಗ್ಸ ಸೇಫ ಡಿಪಾಜಿಟ್‌ಗಳು.

ವಿವರಗಳಿಗೆ ಮುಖ್ಯ ಕಚೇರಿ ಇಲ್ಲವೇ ಶಾಖೆಗಳೊಡನೆ ಸಂಪರ್ಕ ಬೆಳೆಸಿರಿ. ಎಲ್ಲ ಬಗೆಯ ಬ್ಯಾಂಕಿನ ವ್ಯವಹಾರ ಮಾಡಲಾಗುವದು

ಆರ್. ಜಿ. ದೇಶಪಾಂಡೆ
ಚೇರಮನ್

ಎಲ್. ಡಿ. ನಾಡಗೀರ
ಮ್ಯಾನೇಜಿಂಗ ಡಾಯರೆಕ್ಟರ

# ಪರಿವಿಡಿ

ಕನ್ನಡನಾಡಿನ ಜನಪ್ರಿಯ




ಅತ್ಯುತ್ತಮ ತಂಬಾಕಿನಿಂದ ತಯಾರಿಸಲ್ಪಡುತ್ತಿವೆ

ವ್ಯಾಪಾರಿಗಳಿಗೆ ವಿಶೇಷ ಸವಲತ್ತುಗಳು

ಈ ದಿನವೇ ಪತ್ರವ್ಯವಹಾರ ಮಾಡಿರಿ:

# ಸವರನ್ ಬೀಡಿ ಫ್ಯಾಕ್ಟರಿ

ತಂತಿ : 'ಸವರನ್' (ಸ್ಥಾಪಿತ : 1920) ಫೋನ್ : 88

ಸಿ. ಬಿ. ಬಳ್ಳಾರಿ

(ಮಾಲಕರು : ಪಿ. ಸಯ್ಯದ್‌ಸಾಹೇಬ್ & ಸನ್ಸ್)



ನಮ್ಮೆಲ್ಲಾ ಗ್ರಾಹಕರಿಗೆ 'ದೀಪಾವಳಿಯ ಶುಭಾಶಯಗಳು'

ಆಧುನಿಕ ಫ್ಯಾಷನ್ನಿನ ಮುಂದಾಳಾಗಿರಿ

## ಮೈಸೂರು ಸರಕಾರದ ರೇಶ್ಮೆಗಳು

ಮೈಸೂರು ಸರಕಾರದ
ರೇಶ್ಮೆ ಶೀರೆಗಳು, ಜಾರ್ಜಟಗಳು,
ಕ್ರೇಪುಗಳು
ಇವುಗಳನ್ನು ಧರಿಸಿ ನೀವು ಆಧುನಿಕ
ಫ್ಯಾಷನ್ನಿನ ಮುಂದಾಳಾಗಿರಿ!
ಈ ರೇಶ್ಮೆಗಳು ಅತ್ಯಂತ ನಯವಾಗಿವೆ
ಹಾಗೂ ನಯನ ಮನೋಹರ
ಬಣ್ಣ ಬಣ್ಣಗಳಲ್ಲಿ ದೊರೆಯುತ್ತವೆ.
ಅವು ಎಲ್ಲೆಡೆಯಲ್ಲಿಯೂ ಫ್ಯಾಷನ್ನಿನ
ಆಯ್ಕೆಯಾಗಿವೆ.




ಶೋ ರೂಮ: ಕೆಂಪೇಗೌಡಾ ರೋಡ, ಅಲಂಕಾರ ಥೇಟರದೆದುರು
ಬೆಂಗಳೂರು-೯

# ಮೈಸೂರು ಗವರ್ನಮೆಂಟ ಸಿಲ್ಕ ವೀವಿಂಗ ಫ್ಯಾಕ್ಟರಿ

ಮೈಸೂರು

# ದಿ ಮೈಸೂರು ಇಂಪ್ಲಿಮೆಂಟ್ಸ್ ಫ್ಯಾಕ್ಟರಿ

## ಹಾಸನ

## ಯಶಸ್ವೀ ತೋಟಗಾರಿಕೆ
## ಅಥವಾ
## ವ್ಯವಸಾಯಕ್ಕೆ ಶ್ರೇಷ್ಠ ತರಗತಿಯ
## ಸಲಕರಣೆಗಳು

ದೀಪಾವಳಿಯು ಸರ್ವರಿಗೂ
ಸುಖದಾಯಕವಾಗಲಿ

**ಹವ್ಯಾಸದ ಒಂದು ಸಾಮಾನ್ಯ ತೋಟಗಾರಿಕೆಯೋ ಆಗಿರಲಿ ಅಥವಾ ಸಂಪೂರ್ಣ ಮಟ್ಟದ ವ್ಯವಸಾಯ ನಡೆಸುವುದೇ ಆಗಿರಲಿ ಮೈಸೂರು ಇಂಪ್ಲಿಮೆಂಟ್ಸ್ ಫ್ಯಾಕ್ಟರಿಯಿಂದ ತಯಾರಿಸಲ್ಪಟ್ಟ ಸಲಕರಣೆಗಳು ಒರಟು ಕೆಲಸಗಳಿಗೆ ಸುಲಭವಾಗಿದ್ದು ತಡೆದು ಬರುವವು**



ಈ ಸಲಕರಣೆಗಳು ಶ್ರೇಷ್ಠ ದರ್ಜೆಯ ಉಕ್ಕಿನಿಂದ ತಯಾರಿಸಲ್ಪಟ್ಟು, ದೀರ್ಘ ಕಾಲದ ಸೇವೆಗಾಗಿ ಸರಿಯಾದಷ್ಟು ಹದಮಾಡಲ್ಪಟ್ಟವೆ. ಚಹ, ಕಾಫಿ, ರಬ್ಬರ ತೋಟಗಳಿಗೂ ಸಹ ಸಲಕರಣೆಗಳನ್ನು ಒದಗಿಸುವೆವು

Specially Blended

ES BRAND

ES BRAND COFFEE

PURE & FRESH

EASTERN STORFS

BHADRAVATI

ದೀಪಾವಳಿ ಶುಭಾಶಯಗಳು

## ಈಸ್ಟರ್ನ್ ಕಾಫಿ

ಪುಡಿಯನ್ನೇ ಉಪಯೋಗಿಸಿರಿ.

**ಈಸ್ಟರ್ನ್ ಸ್ಟೋರ್ಸ್**

ಪೋ.ಬಾ. ನಂ. 11

ಭದ್ರಾವತಿ

( ಮೈಸೂರ ರಾಜ್ಯ )



Phone: **42** Telegram: GANESHAUTO

We feel proud to announce that we can cater anything at anytime for you all kind of vehicles such as.

| | |
|---|---|
| **FORD,** | **DODGE** |
| **T. M. BENZ** | **LEYLAND** etc. |

**All sizs of Tyres and Tubes for your vehicles also can be had from us.**

## Ganesh Auto Emporium

**B. H. Road, SHIMOGA**



*Prop:* B. N. Kamath & Bros.
FOREST CONTRACTORS, SHIMOGA.

## LIFE AND BELIFE

When the Hindusthan Ideal Insurance Company was born, there were no fan fares, no hand-outs, no headlines. It was almost unknown to fame and fate. But the men behind "HINDUSTHAN'S" origin possessed belief in the nation's economic future and had a missionary zeal and vigour. The year was 1935.

A quarter of a century has spread by—a sizeable segment of a life time. This is the time "HINUSTHAN IDEAL" has spent in crossing many a vicissitude, in enlarging its resources, widening its activities and streamlining its services. It has developed over the years a personality and way of life of its own.

To-day, "HINDUSTAN IDEAL" holds the master cards in the provision of protection to the nation's Commerce and Industrv. It renders easy the flow of credit into industry. It extends Comprehensive Cover for Goods in Factories and Godowns, in Railways and Lorries, and in Sea-going Vessels. It affords stability to Industrial Economy,

To-day also the faith and directive energy, characterstic of its Founders, rule the "HINDUSTHAN IDEAL"

*Issued by:*

THE HINDUSTHAN IDEAL INSURANCE COMPANY LIMITED

**( Incorporated in India in 1935 )**

HEAD OFFICE:

**Post Box No. 144, Andhra Bank Building, Sultan Bazar, HYDERABAD.**

ದೀಪಾವಳಿಯ ಶುಭಾಶಯಗಳು

## ದಿ ರಾಯಲ್ ಫರ್ನಿಷಿಂಗ್ ಕಂ.,



ಖ್ಯಾತಿಗಳಿಸಿರುವ ಮಳಿಗೆ

— ಸ್ಥಾಪನೆ **1930** —

No. 36,
ಡಿಕನ್‌ಸನ್ ರೋಡು,
ಬೆಂಗಳೂರು – **1**

ಶ್ರೇಷ್ಠ ದರ್ಜೆಯ **ಫರ್ನಿಚರ್‌ಗಳು** ನುರಿತ ಕುಶಲ ಕೆಲಸಗಾರರಿಂದ ತಯಾರಿಸಲ್ಪಟ್ಟಿರುತ್ತೆ

**ಬೆಡ್‌ರೂಮ್, ಡ್ರಾಯಿಂಗ್‌ರೂಮ್ ಮತ್ತು ಮನೆಗಳಿಗೆ**

ನಿತ್ಯವೂ ಉಪಯೋಗಿಸುವ ಇತರ ಫರ್ನಿಚರ್‌ಗಳು ಮತ್ತು ಐರನ್ ಸಾಲ್ವಾಸ್ ಸ್ಪ್ರಿಂಗ್‌ಗಳೂ ಯಾವಾಗಲೂ ತಕ್ಷಣ ಸಿಗುತ್ತವೆ.

ಅಧಿಕೃತ ಮಾರಾಟಗಾರರು:

**ಡನ್‌ಲೋಪಿಲೋ ಮ್ಯಾಟ್ರೆಸೆಸ್ ಮತ್ತು ಪ್ರಾಡಕ್ಟ್ಸ್**

ಎಲ್ಲಾ ಸೈಜ್‌ಗಳಲ್ಲಿ ದೊರೆಯುತ್ತೆ.

ಫೋನ್: **4404** ಸೋಲ್ ಪ್ರೊಪ್ರೈಟರ್: ಎಂ. ಲಚ್ಮಯ್ಯ

## ಹೋಟೆಲ್ ಪ್ರಕಾಶ್

( ತುಂಗಾ ರೈಸ್ & ಆಯಿಲ್ ಮಿಲ್ ಸಮೀಪ )

ಬಿ. ಹೆಚ್. ರೋಡ, ಶಿವಮೊಗ್ಗ

- **ಪ್ರಯಾಣಿಕರಿಗೆ ತಂಗಲು ಸುಸಜ್ಜಿತ ಕೋಣೆಗಳು**
- **ಶುಚಿ-ರುಚಿಕರವಾದ ತಿಂಡಿ, ಪಾನೀಯಗಳು**
- **ಉತ್ತಮವಾದ ಊಟದ ವ್ಯವಸ್ಥೆ**

ಇವೆಲ್ಲಕ್ಕೂ ಹೆಸರಾಂತ ಉಪಾಹಾರ, ಊಟ ಮತ್ತು ವಸತಿಗೃಹ ನೂತನವಾಗಿ S. A. L. C. ಕಂಬೈಂಡ್ ಆಫೀಸಿನ ಪಕ್ಕದಲ್ಲಿ ಪ್ರಾರಂಭವಾಗಿದೆ. ಇಂದೇ ಭೇಟಿ ಕೊಡಿ.



ಮಾಲೀಕರು:
**ಹೋಟೆಲ್ ಪ್ರಕಾಶ್ ಶಿವಮೊಗ್ಗ**

ದೀಪಾವಳಿಯು ಸಕಲರಿಗೂ ಮಂಗಳವನ್ನುಂಟುಮಾಡಲಿ !

**ದಣಿದ ಮನಸ್ಸಿಗೆ ಉಲ್ಲಾಸಕರವಾದ "ಕಾಫಿ"ಯು ಅವಶ್ಯಕವಲ್ಲವೆ ?**

**ಹಾಗಾದರೆ ಪರಿಶುದ್ಧ ಹಾಗೂ ಪರಿಮಳಯುಕ್ತವಾದ**



## ಮತ್ತೂರು ಕಾಫಿಪುಡಿ

**ಉ ಪ ಯೋ ಗಿ ಸಿ ರಿ**

ಗಿರಾಕಿಗಳ ಮನಒಪ್ಪುವಂತೆ ಕಾಫೀಬೀಜಗಳನ್ನು ಹುರಿದು ಕೊಡಲಾಗುತ್ತೆ ಮತ್ತು ಪುಡಿಮಾಡಿಕೊಡಲಾಗುತ್ತದೆ. ಇದಲ್ಲದೆ ಎಲ್ಲಾ ವಿಧವಾದ ದಿನಸಿ ಮತ್ತು ಕಿರಾಣಿ ಸಾಮಾನುಗಳು ಯೋಗ್ಯ ಬೆಲಿಯಲ್ಲಿ ಒಟ್ಟಾಗಿಯೂ, ಚಿಲ್ಲರೆಯಾಗಿಯೂ ದೊರೆಯುತ್ತದೆ. ಒಂದು ಸಾರೆ ಸಂಪರ್ಕ ಬೆಳೆಸಿ ಪರೀಕ್ಷಿಸಿರಿ

Phone: **46** **ಮತ್ತೂರು ಕಾಫಿ ವರ್ಕ್ಸ್** ಗಾಂಧಿಬಜಾರ್ ಶಿವಮೊಗ್ಗ

**ಮಾಲೀಕರು: M. ನರಸಿಂಹಮೂರ್ತಿ & ಸನ್ಸ್**

ದೀಪಾವಳಿಯ ದೀಪಜ್ಯೋತಿಗಳು ಸರ್ವರಿಗೂ ಮಂಗಳದಾಯಕ ಬೆಳಕನ್ನು ಬೆಳಗಲಿ!



"NAGARAJA SANDAL
Soap
of
Unsurpassed
Quality



ನಿಮ್ಮ ಮೃದು-ವಾದ ಮತ್ತು ಸುಂದರವಾದ ಚರ್ಮಕ್ಕೆ

The Soap that has Fragrance & Smoothening effect on your Skin

Nagaraja Sandal SOAP






NAGARAJA INDUSTRIES-YESHVANTPUR P.O. BANGALORE-22

'ನಾಗರಾಜ' ಸ್ಯಾಂಡಲ್ ಸಾಬೂನನ್ನೇ ಉಪಯೋಗಿಸಿರಿ

ಆಫೀಸ್ : 222, ಹಳೇ ತರಗುಪೇಟೆ, ಬೆಂಗಳೂರು-2

---

ನಮ್ಮ ಗ್ರಾಹಕವೃಂದಕ್ಕೆಲ್ಲ ದೀಪಾವಳಿಯು ಸುಖಪ್ರದವಾಗಲಿ

## ಕಟ್ಟಡಗಳ ಉಪಕರಣಗಳಿಗೆ

ಸ್ಟಾಕಿಸ್ಟರು:

- ಹೈದರಾಬಾದ ಅಸ್ಬೆಸ್ಟಸ್ ಸಿಮೆಂಟ ತಯಾರಿಕೆಗಳು
- ಚಾಲೀಬೋರ್ಡ-ಹಾರ್ಡಬೋರ್ಡಗಳು
- ಆಂಧ್ರ ಗವ್ನರ್ನಮೆಂಟ ಸಿರ್‍ಯಾಮಿಕ್ ಫ್ಯಾಕ್ಟರಿ ಗುಡೂರ ಇವರ ತಯಾರಿಕೆಗಳಾದ ಪೋರ್ಸಲೀನ್ ಸ್ಯಾನಿಟರೀ-ವೇರಗಳು

ಇವುಗಳಲ್ಲದೇ ಹಂಚುಗಳು, ಮಾರ್ಬಲುಗಳು, ಸ್ಯಾನಿಟರೀ-ವೇರಗಳು, ಫಿಟಿಂಗುಗಳು ಹಾಗೂ ಕಟ್ಟಡಗಳಿಗೆ ಬೇಕಾಗುವ ಅನೇಕ ಬಗೆಯ ಶ್ರೇಷ್ಠ ಕಟ್ಟಡಗಳ ಉಪಕರಣಗಳು.



ವಿಚಾರಿಸಿರಿ :



ಕುಲಕರ್ಣಿ ಮತ್ತು ನಾಡಗೀರ

ಲ್ಯಾಮಿಂಗಟನ್ ರೋಡ, ಹುಬ್ಬಳ್ಳಿ

---

ದೀಪಾವಳಿಯು ಸರ್ವರಿಗೂ ಸುಖದಾಯಕವಾಗಲಿ!



ಜಯ ಭಾರತ ಸೊಪ ಫ್ಯಾಕ್ಟರಿ

ಶಾಹುಪುರಿ, ಕೊಲ್ಹಾಪುರ

---

ಯಾವಾಗಲೂ ನಿಮ್ಮ ವಸ್ತ್ರಗಳಗೋಸ್ಕರ

೫೦೫

ಸ್ಪೆಶಲ್ ಬಾರು ಹಾಗೂ ವಡೆ

ಸಾಬೂನಗಳನ್ನೇ ಉಪಯೋಗಿಸಿರಿ







ಎಲ್ಲಕಡೆಗೆ ಸಿಗುತ್ತವೆ



ಜಯ ಭಾರತ ಸೋಪ ಫ್ಯಾಕ್ಟರಿ, ಶಾಹುಪುರಿ ಕೊಲ್ಹಾಪುರ.


ದೀಪಾವಳಿ ಶುಭಾಶಯಗಳು!
ಶ್ರೀ ಭಾರತೀ ಚಿತ್ರ ಸಮರ್ಪಿಸುವ ಪ್ರಥಮ ಕಾಣಿಕೆ...
ನಂದಾದೀಪ
(ಕನ್ನಡ)
ಕಥೆ
ವಾದಿರಾಜ್
ಸಂಭಾಷಣೆ-ಹಾಡುಗಳು
ಸೋರಟ್ ಅಶ್ವಥ್
ಸಂಗೀತ
ಎಂ. ವಿ. ರಾಜು
ಛಾಯಾಗ್ರಹಣ
ಮಧು
ಸ್ಟುಡಿಯೋ.. ಗೋಲ್ಡನ್
ನಿರ್ದೇಶಕ ... ಎಂ. ಆರ್. ವಿಠಲ್
ಹಂಚಿಕೆಗಾರರು:—
ಮೈಸೂರು, ಬಳ್ಳಾರಿ, ಕೊಳ್ಳೇಗಾಲ
ದಕ್ಷಿಣ ಕನ್ನಡ ಜಿಲ್ಲೆ ಪ್ರಾಂತ್ಯಕ್ಕೆ...
ವಿಜಯಾ ಪಿಕ್ಚರ್ಸ್
ಸರ್ಕ್ಯೂಟ್, ಬೆಂಗಳೂರು-9.
ನಿರ್ಮಾಪಕರು
ವಾದಿರಾಜ್ + ಜವಹರ್
Arts E. Coy.

# INDEX TO ADVERTISERS

# ಕರ್ಮವೀರ

ದೀಪಾವಳಿ ಸಂಚಿಕೆ - ೧೯೬೨


ತಮಸೋ ಮಾ ಜ್ಯೋತಿರ್ಗಮಯ ।
ಅಸತೋ ಮಾ ಸದ್ಗಮಯ ।
ಮೃತ್ಯೋರ್ಮಾ ಅಮೃತಂ ಗಮಯ ।

## ನಮ್ಮ ನುಡಿ

'ದೀಪಾವಳಿ'ಯು ಭಾರತೀಯರಿಗೆಲ್ಲ ಸಂಭ್ರಮದ, ಸಂತಸದ ಹಬ್ಬ; ಬಂಧು-ಬಳಗದವರನ್ನು, ಮಿತ್ರರನ್ನು ಕೂಡಿಕೊಂಡು ಸಂತೋಷದಿಂದ ಆಚರಿಸುವ ಹಬ್ಬ. ಪರಮಾತ್ಮನ ಪ್ರೀತ್ಯರ್ಥವಾಗಿ ದೀಪೋತ್ಸವವನ್ನು ಮಾಡಿ ನಮ್ಮಲ್ಲಿದ್ದ ಅಜ್ಞಾನಾಂಧಕಾರವನ್ನು ಹೊಡೆದೋಡಿಸಿ ಜ್ಞಾನಜ್ಯೋತಿಯನ್ನು ಬೆಳಗಿಸೆಂದು ಆ ಜಗಜ್ಜನಕನನ್ನು ಪ್ರಾರ್ಥಿಸುವ ಹಬ್ಬವಿದು. ಇಂಥ ಸಂಭ್ರಮದ ಸಮಯದಲ್ಲಿ ನಮ್ಮ ವಾಚಕರಿಗೆ ಸಾಹಿತ್ಯದ ಸವಿಯೂಟವನ್ನು ನಾವು ಕಳೆದ ಹಲವಾರು ವರುಷಗಳಿಂದ ನೀಡುತ್ತಬಂದಿರುವೆವು. ವರುಷ ವರುಷಕ್ಕೂ ನಮ್ಮ ಈ ದೀಪಾವಳಿಯ ವಿಶೇಷ ಸಂಚಿಕೆಯು ಹೆಚ್ಚು ಲೋಕಪ್ರಿಯವಾಗುತ್ತ ನಡೆದುದು ನಮಗೆ ಉತ್ಸಾಹಪ್ರದವಾಗಿದೆ. ಈ ಸಂಚಿಕೆಯಲ್ಲಿ ಕನ್ನಡ ನಾಡಿನ ಪ್ರಮುಖ ವಿದ್ವಾಂಸರು, ಲೇಖಕರು, ಕತೆಗಾರರು, ಕವಿಗಳು, ಹರಟೆಗಾರರು, ನಾಟಕಕರ್ತರು ಮೊದಲಾದವರಿಂದ ಬರೆಹಗಳನ್ನು ಬರೆಯಿಸಿ ಪ್ರಸಿದ್ಧಿಸಿರುವೆವಲ್ಲದೆ ವಾರ್ಷಿಕ ಭವಿಷ್ಯವನ್ನು ಕೊಟ್ಟಿರುವೆವು. ವ್ಯಂಗ್ಯಚಿತ್ರಗಳು, ವಿವಿಧ ಬಣ್ಣಗಳ ಆಕರ್ಷಕ ಮೇಲ್ಹೊದಿಕೆ ಮತ್ತು ಶ್ರೀಕೃಷ್ಣಪರಮಾತ್ಮನು ಹಾಲುಕರೆವ ಮನೋಮೋಹಕ ಚಿತ್ರವನ್ನು ಕೊಟ್ಟು ಇದನ್ನು ಸರ್ವಾಂಗಸುಂದರ ಮಾಡಲು ಪ್ರಯತ್ನಿಸಿರುವೆವು . . . . . . . . . .

ಭಾರತವು ಕಳೆದ ವರ್ಷದಲ್ಲಿ ಸರ್ವಸಮೃದ್ಧಿಯನ್ನು ಸಾಧಿಸುವ ತನ್ನ ಧ್ಯೇಯದತ್ತ ಪ್ರಗತಿಪರವಾಗಿ ಸಾಗಿದೆ. ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿಯ ವಿವಿಧ ಯೋಜನೆಗಳ ಕಾರ್ಯ ಭರದಿಂದ ಮುಂದೆ ಸಾಗಿದೆ. ಸಾರ್ವತ್ರಿಕ ಚುನಾವಣೆಗಳು ಕಳೆದ ವರುಷದಲ್ಲಿ ನಡೆದು ಎಲ್ಲ ರಾಜ್ಯಗಳಲ್ಲಿಯೂ ಕೇಂದ್ರದಲ್ಲಿಯೂ ಕಾಂಗ್ರೆಸ್ ಪಕ್ಷವು ಬಹುಮತವನ್ನು ಪಡೆದು ಆಡಳತೆಯನ್ನು ನಡೆಸುತ್ತಿದೆ. ಆಡಳತೆಯಲ್ಲಿ ಹೆಚ್ಚೆಚ್ಚು ವಿಕೇಂದ್ರೀಕರಣವನ್ನು ಸಾಧಿಸಬೇಕೆಂಬ ಕಾಂಗ್ರೆಸ್ಸಿನ ಧ್ಯೇಯವನ್ನು ಕಾರ್ಯರೂಪದಲ್ಲಿ ತರಲು ಎಲ್ಲೆಡೆ ಪಂಚಾಯತಿಗಳು ಸ್ಥಾಪಿತವಾಗಹತ್ತಿವೆ. ಅವುಗಳ ಮುಖಾಂತರ ಗ್ರಾಮಾಡಳತೆ ಪ್ರಗತಿಪರವಾಗಿ ಸಾಗಹತ್ತಿದೆ . . . . . . .

ಅಂತಾರಾಷ್ಟ್ರೀಯ ರಂಗದಲ್ಲಿ ಭಾರತವು ಒಂದು ಮಹತ್ವದ ಕಾರ್ಯಕ್ಕಣಿಯಾಗಿದೆ. ಅಣ್ವಸ್ತ್ರ ಪ್ರಯೋಗಗಳನ್ನು ನಿಲ್ಲಿಸಿರೆಂದು ಕೇಳಿಕೊಳ್ಳುವುದಕ್ಕಾಗಿ ಗಾಂಧೀಸ್ಮಾರಕ ನಿಧಿಯ ಶಾಂತಿಪ್ರತಿಷ್ಠಾನದ ನಿಯೋಗಗಳು ಅಮೇರಿಕೆ-ರಶಿಯಗಳ ಧುರೀಣರನ್ನು ಕಂಡುಬಂದವು. ಸದ್ಯದಲ್ಲಿಯೇ ಈ ನಿಯೋಗಗಳು ಕೈಕೊಂಡ ಕಾರ್ಯಕ್ಕೆ ಯಶಸ್ಸು ಸಿಕ್ಕದಿದ್ದರೂ ಇವುಗಳ ಪ್ರಭಾವ ಆಯಾ ರಾಷ್ಟ್ರಗಳ ಮುಂದಾಳುಗಳ ಮೇಲೆ ಬೀಳದಿರಲಾರದು. ಕಾಲಾನಂತರದಲ್ಲಿಯಾದರೂ ಅಣ್ವಸ್ತ್ರ-ಸ್ಫೋಟ ಪ್ರಯೋಗಗಳು ನಿಲ್ಲಬಹುದೆಂದು ಆಶಿಸೋಣ. . . . . . . . .

ಈ ಸಂಚಿಕೆಯನ್ನು ಸರ್ವಾಂಗಸುಂದರ ಮಾಡಲು ಸಹಕರಿಸಿದವರಿಗೆಲ್ಲ ನಾವು ಹಾರ್ದಿಕ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಜಾಹೀರಾತುಗಳನ್ನು ಕೊಟ್ಟು ಸಹಾಯ ಮಾಡಿದವರನ್ನು ಅಭಿನಂದಿಸುತ್ತೇವೆ. ಈ ಸಂತೋಷದ ಸಮಯದಲ್ಲಿ ವಾಚಕರಿಗೆಲ್ಲ ಹಾರ್ದಿಕ ಶುಭಾಶಯಗಳು . . .

॥ ಸಮಸ್ತ ಸನ್ಮಂಗಳಾನಿ ಭವಂತು ॥


ಸಂಪಾದಕರು : ಶ್ರೀ ತ ರಾ ಪುರೋಹಿತ



# ಮೈಸೂರು ರಾಜ್ಯದಲ್ಲಿ ಸಹಕಾರದ ಮುನ್ನಡೆ

ಲೇಖಕರು:
**ಶ್ರೀ ರಾಮಕೃಷ್ಣ ಹೆಗ್ಗಡೆಯವರು,**
ಅಭಿವೃದ್ಧಿ ಮತ್ತು ಸಹಕಾರ ಶಾಖೆಗಳ ಸಚಿವರು,
ಮೈಸೂರು ಸರಕಾರ.

ಭಾರತೀಯರಿಗೆ ಸಹಕಾರ ತತ್ತ್ವವು ಹೊಸದೇನಲ್ಲ. ವೇದೋಪನಿಷತ್ತುಗಳಲ್ಲಿ ಸಹಕಾರತತ್ತ್ವದ ಸಾರೋಕ್ತಿಗಳು ಸಿಕ್ಕುತ್ತವೆ; ಭಾರತೀಯ ಸಂಸ್ಕೃತಿಯ ಇತಿಹಾಸವೆಲ್ಲ ಸಹಜೀವನದ, ಸಹಕಾರದ ಹಿರಿಮೆಯ ಹೆಗ್ಗುರುತಾಗಿದೆ.

ಕೃಷಿಪ್ರಧಾನವಾದ ಭಾರತದ ರಾಷ್ಟ್ರಪುರುಷನಿಗೆ ವ್ಯವಸಾಯ ಸಹಕಾರಗಳೇ ನೇತ್ರದ್ವಯಗಳೆನಿಸಿವೆ. ವ್ಯವಸಾಯವಿಲ್ಲದ ಸಹಕಾರ ರೆಕ್ಕೆಯಿಲ್ಲದ ಹಕ್ಕಿ; ಸಹಕಾರವಿಲ್ಲದ ವ್ಯವಸಾಯ ಚಕ್ರವಿಲ್ಲದ ರಥ. ಅವೆರಡೂ ಅನ್ಯೋನ್ಯ ಸಾಪೇಕ್ಷಗಳು.

ವ್ಯವಸಾಯವಂತೂ ಆದಿಯಿಂದಲೂ ನಮ್ಮ ಜನಜೀವನದ ಜೀವನಾಡಿಯಾಗಿ ಬೆಳೆದುಬಂದಿದೆ; ಅದರೊಡನೆ ಸಹಕಾರವೂ ನಮ್ಮ ಜನಾಂಗಜೀವನದ ಉಸಿರಾಗಿ ವ್ಯಾಪಿಸಿಕೊಂಡರೆ ನಮ್ಮ ಪ್ರಗತಿ ತ್ವರಿತಗತಿಯಿಂದ ಸಾಗುವುದು; ನಮ್ಮ ಕನಸಾದ ಕಲ್ಯಾಣ ರಾಜ್ಯಸ್ಥಾಪನೆಯು ನನಸಾಗುವುದು.

ಆರು ದಶಕಗಳ ಅವಧಿ ಕಳೆದ ಮೇಲೂ ಸಹಕಾರೀ ಆಂದೋಲನ ನಮ್ಮ ದೇಶದಲ್ಲಿನ್ನೂ ಶೈಶವಾವಸ್ಥೆಯಲ್ಲಿದೆಯೆಂದೇ ಹೇಳಬೇಕು. ಅನೇಕ ಕಾರ್ಯಕ್ರಮಗಳಲ್ಲಿ ಅದೂ ಒಂದು ಕಾರ್ಯಕ್ರಮವಾಗಿ ಉಳಿದರೆ ಸಾಲದು. ಅದು ಎಲ್ಲ ಕಾರ್ಯಕ್ರಮಗಳ ಅಸ್ತಿವಾರವಾಗಬೇಕು, ಎಲ್ಲರ ಜೀವನ ಸೂತ್ರವಾಗಬೇಕು, ಹೆಚ್ಚೇಕೆ, ಅದು ಸ್ವತಂತ್ರ ಭಾರತದ ಸವಾಜಧರ್ಮವಾಗಬೇಕು. 'ನಾನ್ಯಃಪಂಥಾ ವಿದ್ಯತೇಽಯನಾಯ'

### ತಕ್ಕ ಪ್ರಾಶಸ್ತ್ಯ

ಹಿಂದಿನ ಕಥೆ ಹೇಗೋ ಇರಲಿ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮಾತ್ರ ಸಹಕಾರಕ್ಕೆ ತಕ್ಕ ಪ್ರಾಶಸ್ತ್ಯ ಸಿಕ್ಕಿರುವುದು ಸಂತೋಷದ ಸಂಗತಿಯಾಗಿದೆ. ನಮ್ಮ ಪ್ರಥಮ ಪಾಂಚವಾರ್ಷಿಕ ಯೋಜನೆಯು ಸಹಕಾರವು ಆರ್ಥಿಕ ಪ್ರಗತಿಯ ಪ್ರಬಲಸಾಧನವೆಂಬ ಅಂಶವನ್ನು ಅಂಗೀಕರಿಸಿತು; ದ್ವಿತೀಯ ಪಾಂಚವಾರ್ಷಿಕ ಯೋಜನೆಯು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಯೋಜನಾಬದ್ಧ ಆರ್ಥಿಕಪ್ರಗತಿಯ ಕಾರ್ಯವಿಧಾನದ ಅವಿಭಾಜ್ಯ ಅಂಗವಾಗಿ ಸಹಕಾರೀ ಕ್ಷೇತ್ರವನ್ನು ಅಭಿವೃದ್ಧಿಗೊಳಿಸುವುದು ನಮ್ಮ ರಾಷ್ಟ್ರದ ಆರ್ಥಿಕ ನೀತಿಯ ಮೂಲೋದ್ದೇಶಗಳಲ್ಲಿ ಒಂದಾಗಿದೆಯೆಂದು ಘೋಷಿಸಿತು; ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ಸರಕಾರದ ಸುಸಂಯೋಜಿತ ಭದ್ರ ಬುನಾದಿಯನ್ನು ಬಲಪಡಿಸುವುದರ ಜೊತೆಗೆ ಅದರ ವೈವಿಧ್ಯವನ್ನೂ ವ್ಯಾಪ್ತಿಯನ್ನೂ ಹೆಚ್ಚಿಸಿ ನಗರಗಳಿಂದ ಗ್ರಾಮಗಳ ವರೆಗೆ ಎಲ್ಲ ಬಗೆಯ ಆರ್ಥಿಕ ಚಟುವಟಿಕೆಗಳನ್ನೂ ಸಹಕಾರದ ಕಕ್ಷೆಯಲ್ಲಿ ತರಲು ಪ್ರಯತ್ನಿಸಲಾಗುವುದು.

---

**ಹಳೆಯ ಮೈಸೂರಲ್ಲಿ ಸಹಕಾರಿ ಆಂದೋಲನವು ೧೯೦೫ರಲ್ಲಿ ಪ್ರಾರಂಭವಾಗಿ ಈಗ ವಿಶಾಲ ಮೈಸೂರಲ್ಲಿ ಭರದಿಂದ ಮುನ್ನಡೆಯುತ್ತಿದೆ. ಅನೇಕ ಪ್ರಕಾರದ ಸಹಕಾರಿ ಸಂಘಗಳು ಈಗ ರಾಜ್ಯದಲ್ಲಿ ಕಾರ್ಯಪ್ರವೃತ್ತವಾಗಿವೆ. ಸಹಕಾರಿ ವ್ಯವಸಾಯವೂ ಪ್ರಾರಂಭವಾಗಿದೆ. ಸಹಕಾರಿಗಳಿಗೆ ಯೋಗ್ಯ ರೀತಿ ತರಬೇತಿ ನೀಡುವ ವ್ಯವಸ್ಥೆಯನ್ನು ಮಾಡಲಾಗಿದೆ. ಸಹಕಾರವು ಬಹುಮುಖವಾಗಿ ಬೆಳೆಯಲು ಅವಶ್ಯವಾದ ಏರ್ಪಾಡುಗಳನ್ನೆಲ್ಲ ಮಾಡಲಾಗಿದೆ. ಈಗ ಸಹಕಾರದ ಸುಂದರಮಂದಿರವು ಈ ಭವ್ಯಬುನಾದಿಯ ಮೇಲೆ ಮೂಡಿಬರಬೇಕಾಗಿದೆ. ರಾಜ್ಯದ ಸಹಕಾರದ ಮುನ್ನಡೆಯ ಚಿತ್ರ ಇಲ್ಲಿದೆ.**

---

ಮೈಸೂರು ರಾಜ್ಯದಲ್ಲಿ ಸಹಕಾರೀ ಆಂದೋಲನವು ೧೯೦೫ರಲ್ಲಿ ಪ್ರಾರಂಭವಾಯಿತೆನ್ನಬಹುದು. ಆ ವರುಷದಲ್ಲಿ ಈ ರಾಜ್ಯದಲ್ಲಿ ಕೃಷಿಬ್ಯಾಂಕುಗಳ ಸ್ಥಾಪನೆಯಾಯಿತು. ಅವುಗಳ ಉದ್ದೇಶ ಭೂಮಿಯ ಹಿಡಿವಳಿದಾರರನ್ನು ಸಹಕಾರತತ್ತ್ವದ ಪ್ರಕಾರ ಸಂಘಟಿಸಿ, ಅವರಿಂದ ಹಣವನ್ನು ಶೇಖರಿಸಿ, ಲಾಭದಾಶೆಯಿಲ್ಲದೆ ಸದಸ್ಯರಿಗೆ ಅವರವರ ಅಗತ್ಯಗಳಿಗೆ ಅನುಗುಣವಾಗಿ ಸಾಲವನ್ನು ಒದಗಿಸುವುದಾಗಿದ್ದಿತು. ೧೯೦೫ರೊಳಗಾಗಿ ಇಂಥ ೬೪ ಬ್ಯಾಂಕುಗಳು ಅಸ್ತಿತ್ವದಲ್ಲಿ ಬಂದುವು.

ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಭಾರತದಲ್ಲೆಲ್ಲ ೧೯೦೪ರ ಸಹಕಾರೀಸಾಲ ಸಂಘಗಳ ಶಾಸನ (Co-operative Credit Societies Act of 1904 ) ಪ್ರಚುರವಾಗಿದ್ದರೆ ಮೈಸೂರಿನಲ್ಲಿ ೧೯೦೫ರ ಕೋ-ಆಪರೇಟಿವ್ಹ ರೆಗ್ಯುಲೇಶನ್ ಜಾರಿಯಲ್ಲಿ ಬಂದಿತು. ಮೈಸೂರು ಸಂಸ್ಥಾನದ ಆವಶ್ಯಕತೆಗಳನ್ನು ಪರಿಮಿತಪ್ರಮಾಣದಲ್ಲಿ ಪೂರೈಸಲು ಸಮರ್ಥವಾಗಿದ್ದ ಈ ಸರಳ ಶಾಸನವು ಗ್ರಾಮಾಂತರ ಸಾಲದ ಸಮಸ್ಯೆ ಬಿಡಿಸುವಲ್ಲಿ ಸಹಕಾರಿ ಯೆಂಬ ಶ್ಲಾಘನೆಗೆ ಪಾತ್ರವಾಯಿತು.

### ವಿವಿಧೋದ್ದೇಶ ಸಂಘಗಳು

ತದನಂತರ ಸಹಕಾರ ಚಳವಳಿಯು ಹೇಳಿಕೊಳ್ಳುವಂತಹ ಹೆಮ್ಮೆಯ ಪ್ರಗತಿಯನ್ನು ಸಾಧಿಸದಿದ್ದರೂ ಈ ಸಂಸ್ಥಾನಕ್ಕೆ ಗೌರವ ತರುವಂಥ ಒಂದೆರಡು ಪ್ರಯೋಗಗಳನ್ನು ಕೈಕೊಳ್ಳಲಾಯಿತು. ಭಾರತದಲ್ಲಿ ವಿವಿಧೋದ್ದೇಶ ಸಂಘಗಳ ವಿಚಾರವಿನ್ನೂ

ಅಂಕುರಿಸದಿರುವಾಗ ಈ ಸಂಸ್ಥಾನದಲ್ಲಿ ಸರ್ಕಲ್ ವಿವಿಧೋದ್ದೇಶ ಸಂಘಗಳ ಪ್ರಯೋಗವನ್ನು ಪ್ರಪ್ರಥಮವಾಗಿ ಕೈಕೊಳ್ಳಲಾಯಿತು.

೧೯೧೫ ರ ಮೆಕ್ಲಗನ್ ಸಮಿತಿಯ ವರದಿ ೧೯೩೬ ರ ಮೈಸೂರು ಸಹಕಾರಿ ಸಮಿತಿಯ ವರದಿ, ೧೯೪೦ ರ ಮದ್ರಾಸು ಸಹಕಾರೀ ಸಮಿತಿಯ ವರದಿ ಇತ್ಯಾದಿ ವರದಿಗಳನ್ನು ಅನುಲಕ್ಷಿಸಿ ಈ ಸಂಸ್ಥಾನದ ಸಹಕಾರದ ಗೊತ್ತುಗುರಿಗಳನ್ನು ರೂಪಿಸಲಾಯಿತು.

ಆ ಮೇಲೆ ಸ್ವಾತಂತ್ರ್ಯಪ್ರಾಪ್ತಿ, ಪಾಂಚವಾರ್ಷಿಕ ಯೋಜನೆಗಳು, ರಾಜ್ಯ ಪುನರ್ಘಟನೆಗಳು ಒಂದರ ಹಿಂದೊಂದಾಗಿ ಬಂದುವು. ದ್ವಿತೀಯ ಪಾಂಚವಾರ್ಷಿಕ ಯೋಜನೆ ಸಿದ್ಧವಾಗುತ್ತಿದ್ದಂತೆ ಭಾರತದ ರಿಝರ್ವಬ್ಯಾಂಕು ನಿಯಮಿಸಿದ್ದ ಅಖಿಲ ಭಾರತ ಗ್ರಾಮಾಂತರ ಋಣಪರಿಶೀಲನಾಸಮಿತಿಯ ವರದಿ ಪ್ರಕಟವಾಯಿತು. ಸರಕಾರದ ಪಾಲುಗಾರಿಕೆ ಮಾರಾಟ ಮತ್ತು ರೂಪಾಂತರದೊಂದಿಗೆ ಸಾಲದ ಜೋಡಣೆ ಮತ್ತು ಸಾಕಷ್ಟು ಪ್ರಶಿಕ್ಷಿತ ಜನರ ಮೂಲಕ ಆಡಳಿತದ ನಿರ್ವಹಣೆ ಈ ಮೂರು ಮೂಲಭೂತ ತತ್ತ್ವಗಳನ್ನು ಆಧರಿಸಿ ಗ್ರಾಮಾಂತರ ಸಾಲದ ಸಮಗ್ರ ಪದ್ಧತಿಯನ್ನೂ ಪರಿವರ್ತಿಸಬೇಕೆಂದು ಈ ಸಮಿತಿ ಶಿಫಾರಸು ಮಾಡಿತು.

ಇನ್ನು ಕಾರ್ಯರೂಪಕ್ಕೆ ತರುವ ಮುನ್ನ ಪುನಾರಚಿತ ಮೈಸೂರು ರಾಜ್ಯವು ಮತ್ತೊಂದು ಸಮಸ್ಯೆಯನ್ನು ಪರಿಹರಿಸಿಕೊಳ್ಳಬೇಕಾಗಿದ್ದಿತು. ವಿಲೀನಗೊಂಡ ಐದು ವಿಭಾಗಗಳಲ್ಲಿ ಭಿನ್ನ ಭಿನ್ನ ರೂಪಗಳಲ್ಲಿ ಬೆಳೆದುಬಂದಿದ್ದ ಸಹಕಾರ ಪದ್ಧತಿಗಳಲ್ಲಿ ಏಕರೂಪತೆಯನ್ನು ತರುವುದೇ ಆ ಸಮಸ್ಯೆಯಾಗಿದ್ದಿತು. ಈಗ ಈ ವಿವಿಧ ಪದ್ಧತಿಗಳನ್ನು ಯಶಸ್ವಿಯಾಗಿ ಕ್ರೋಡೀಕರಿಸಿ ರಾಜ್ಯಕ್ಕೆಲ್ಲ ಅನ್ವಯಿಸುವ ಏಕರೂಪ ಸಹಕಾರೀ ಶಾಸನವನ್ನೂ ತದಂತರ್ಗತ ನಿಯಮಾವಳಿಯನ್ನೂ ಜಾರಿಗೆ ತಂದು ರಾಜ್ಯದಲ್ಲಿ ಸಹಕಾರೀ ಆಂದೋಲನದ ಸರ್ವತೋಮುಖವಾದ ಅಭಿವೃದ್ಧಿಗೆ ರಂಗವನ್ನು ಸಜ್ಜುಗೊಳಿಸಲಾಗಿದೆ. ಸಹಕಾರದ ಮುನ್ನಡೆ ಸುಸೂತ್ರವಾಗಿ ಸುಗಮವಾಗಿ ಸಾಗಿದೆ. ಕೆಳಗಣ ಕಾರ್ಯವಿವರಣೆಯಿದಕ್ಕೆ ನಿದರ್ಶನ.

## ವ್ಯವಸಾಯ ಸಾಲ

ಪ್ರಾಥಮಿಕ, ಮಾಧ್ಯಮಿಕ ಮತ್ತು ಅಪೆಕ್ಸ್ ಎಂಬ ಮೂರು ಮುಖಗಳನ್ನೊಳಗೊಂಡಿದೆ ಈ ರಾಜ್ಯದ ಸಹಕಾರೀ ಸಾಲದ ರಚನೆ. ಅಪೆಕ್ಸ್ ಮಟ್ಟದಲ್ಲಿರುವ ಮೈಸೂರ್ ಸ್ಟೇಟ್ ಕೋ.ಆಪರೇಟಿವ್ ಬ್ಯಾಂಕು ಎರಡನೆಯ ಯೋಜನೆಯ ಅಂತ್ಯದೊಳಗಾಗಿ ೧.೨೪ ಕೋಟಿ ರೂಪಾಯಿಗಳ ಶೇರು ಭಾಂಡವಾಳವನ್ನೂ ೩.೬೮ ಕೋಟಿ ರೂಪಾಯಿಗಳ ಠೇವಣಿಗಳನ್ನೂ ೧೪.೨೨ ಕೋಟಿ ರೂಪಾಯಿಗಳ ದುಡಿಯುವ ಭಾಂಡವಾಳವನ್ನೂ ಹೊಂದಿದ್ದಿತು. ಸುಸ್ತಿ ಸಾಲದ ಪ್ರಮಾಣವು ಕಡಮೆಯಾಗತೊಡಗಿದೆ.

ಜಿಲ್ಲೆಯ ಮಟ್ಟದಲ್ಲಿ ಪ್ರತಿಜಿಲ್ಲೆಗೊಂದರಂತೆ ೧೯ ಜಿಲ್ಲಾ ಕೇಂದ್ರ ಸಹಕಾರೀ ಬ್ಯಾಂಕುಗಳಿವೆ. ಎರಡನೆಯ ಯೋಜನಾವಧಿಯಲ್ಲಿ ಈ ಎಲ್ಲ ಬ್ಯಾಂಕುಗಳನ್ನು ಪುನ-ರ್ಘಟಿಸಲಾಯಿತು. ಎರಡನೆ ಯೋಜನೆಯ ಅಂತ್ಯಕ್ಕೆ ಇವುಗಳ ದುಡಿಯುವ ಭಾಂಡವಾಳವು ೨೩.೬೨ ಕೋಟಿ ರೂಪಾಯಿಗೇರಿತು.

ದೇಶದ ಇತರ ಭಾಗಗಳಲ್ಲಿರುವಂತೆ ನಮ್ಮ ರಾಜ್ಯದಲ್ಲಿಯೂ ಗ್ರಾಮಮಟ್ಟದಲ್ಲಿ ಸಹಕಾರೀ ಆಂದೋಲನದ ಪ್ರಮುಖ ಅಂಗವೆನಿಸಿರುವ ವ್ಯವಸಾಯ ಸಾಲ ಸಂಘಗಳಿವೆ. ಎರಡನೆಯ ಯೋಜನೆಯ ಕೊನೆಗೆ ಇಂಥ ಗ್ರಾಮ ಸಹಕಾರ ಸಂಘಗಳ ಸಂಖ್ಯೆ ೯೧೦೭ಕ್ಕೇರಿತು, ಇವುಗಳ ಸದಸ್ಯತ್ವಸಂಖ್ಯೆ ೩.೪೫ ಲಕ್ಷದಿಂದ ೧೨ ಲಕ್ಷಗಳಿಗೇರಿತು, ಸಂದಾಯವಾದ ಶೇರುಮೊಬಲಗು ೧.೪೫ ಕೋಟಿಯಿಂದ ೪.೭೨ ಕೋಟಿ ರೂಪಾಯಿಗಳಿಗೇರಿತು, ಅಲ್ಪ ಮತ್ತು ಮಧ್ಯಮ ಕಾಲಾವಧಿಯ ಸಾಲಗಳ ಮೊತ್ತ ೬೯.೪೭ ಲಕ್ಷದಿಂದ ೧೪.೧೪ ಕೋಟಿಗಳಿಗೇರಿತು. ೧೯೫೮ರಲ್ಲಿ ರಾಷ್ಟ್ರೀಯ ಅಭಿವೃದ್ಧಿ ಮಂಡಳವು ಅಂಗೀಕರಿಸಿದ ಗೊತ್ತುವಳಿಗನುಗುಣವಾಗಿ ಸೇವಾ ಸಂಘಗಳಿಗೆ ಮಹತ್ವ ನೀಡಲಾಯಿತು. ತತ್ಪರಿಣಾಮವಾಗಿ ೩೬೮೯ ಸೇವಾ ಸಂಘಗಳನ್ನು ಎರಡನೆಯ ಯೋಜನೆಯ ಅವಧಿಯಲ್ಲಿ ಸ್ಥಾಪಿಸಲಾಯಿತು. ಇವುಗಳನ್ನು ಒಳಗೊಂಡು ಒಟ್ಟು ಸಂಘಗಳ ಸಂಖ್ಯೆ ೯೧೦೭ ಸೇವಾ ಸಂಘಗಳ ಸದಸ್ಯರ ಸಂಖ್ಯೆ ೪.೭೭ ಲಕ್ಷಕ್ಕೇರಿತು.

## ಸಹಕಾರೀ ಮಾರಾಟ

ದ್ವಿತೀಯ ಪಾಂಚವಾರ್ಷಿಕ ಯೋಜನೆಯ ಅಂತ್ಯದೊಳಗಾಗಿ ಈ ರಾಜ್ಯದಲ್ಲಿ ೨೦೮ ಪ್ರಾಥಮಿಕ ಮಾರಾಟ ಸಂಘಗಳೂ ಒಂದು ಅಪೆಕ್ಸ್ ಮಾರಾಟ ಸಂಘವೂ ಸ್ಥಾಪಿತವಾಗಿದ್ದುವು. ಪ್ರಾಥಮಿಕ ಮಾರಾಟ ಸಂಘಗಳ ಸದಸ್ಯರ ಸಂಖ್ಯೆ ೧.೦೫ ಲಕ್ಷ, ಸಂದಾಯವಾದ ಶೇರು ಮೊಬಲಗು ೮೦.೮೭ ಲಕ್ಷ ರೂಪಾಯಿಗಳು, ದುಡಿಯುವ ಭಾಂಡವಾಳವು ೩.೮೨ ಕೋಟಿ ರೂಪಾಯಿಗಳು.

ಮಂಡಿ ಮತ್ತು ಮಾರುಕಟ್ಟೆಗಳಿಗೆ ಬರುವ ಒಟ್ಟು ಮಾರಾಟವಸ್ತುಗಳಲ್ಲಿ ನೂರಕ್ಕೆ ೨೦ ರಷ್ಟು ವಸ್ತುಗಳ ಮಾರಾಟವು ಈ ಮಾರಾಟ ಸಂಘಗಳ ಮೂಲಕ ನಡೆಯಬೇಕೆಂಬುದು ಎರಡನೆಯ ಯೋಜನೆಯ ಗುರಿಯಾಗಿದ್ದಿತು. ಕೆಲವು ಮಾರಾಟ ಸಂಘಗಳು ಆಯಾ ಕ್ಷೇತ್ರದಲ್ಲಿ ಬೆಳೆದ ಇಲ್ಲವೆ ಆಯಾ ಮಾರುಕಟ್ಟೆಗೆ ಬಂದ ವ್ಯವಸಾಯೋತ್ಪತ್ತಿಯಲ್ಲಿ ನೂರಕ್ಕೆ ೫೦ ರಿಂದ ೭೦ ರಷ್ಟು ಹುಟ್ಟುವಳಿಯನ್ನು ಮಾರಾಟ ಮಾಡಿವೆ. ದ್ವಿತೀಯ ಯೋಜನೆಯಲ್ಲಿ ಏರ್ಪಟ್ಟ ಈ ಮಾರಾಟ ಸಂಘಗಳ ಸಂಘಟನೆಯು ಮುಂಬರುವ ವರ್ಷಗಳಲ್ಲಿ ಇದಕ್ಕೂ ಹೆಚ್ಚಿನ ಪ್ರಯೋಜನಗಳನ್ನು ನೀಡುವ ನಿರೀಕ್ಷೆಯಿದೆ.

## ರೂಪಾಂತರ ( Processing )

ಒಕ್ಕಲುತನದ ಹುಟ್ಟುವಳಿಯನ್ನು ಕೊಳ್ಳುವವನಿಗೆ ಬಳಸಲು ಬರುವ ರೂಪದಲ್ಲಿ ( Finished form ) ಒದಗಿಸಬೇಕಾಗುವುದರಿಂದ ರೂಪಾಂತರವು ಮಾರಾಟದ ಅತ್ಯಗತ್ಯವಾದ ಅಂಗವಾಗಿದೆ. ಎರಡನೆಯ ಯೋಜನೆಯ ಅವಧಿಯಲ್ಲಿ ೩೪ ರೂಪಾಂತರ ಸಂಘಗಳನ್ನು ಸ್ಥಾಪಿಸಲಾಗಿದ್ದು ಅವುಗಳಲ್ಲಿ ೧೫ ಈಗಾಗಲೇ ಕಾರ್ಯಪ್ರವೃತ್ತವಾಗಿವೆ.

## ಸಹಕಾರೀ ಸಕ್ಕರೆ ಕಾರಖಾನೆಗಳು

ಸಹಕಾರೀ ಚಳವಳಿಯಲ್ಲಿ ಸಹಕಾರೀ ಸಕ್ಕರೆ ಕಾರಖಾನೆಗಳು ಗಣ್ಯ ಸ್ಥಾನವನ್ನು ಪಡೆಯತೊಡಗಿವೆ. ವ್ಯವಸಾಯಗಾರರು ತಾವು ಬೆಳೆದ ಕಬ್ಬಿನಿಂದ ತಾವೇ ಸಕ್ಕರೆ ಸಿದ್ಧಗೊಳಿಸುವರೆಂದೂ ತಮ್ಮವೇ ಆದ ಸಹಕಾರೀ ಸಕ್ಕರೆಯ ಕಾರಖಾನೆಗಳನ್ನು ನಡೆಸುವರೆಂದೂ ಕೆಲವು ವರ್ಷಗಳ ಹಿಂದೆ ಯಾರೂ ಕಲ್ಪಿಸಿರಲಿಲ್ಲ. ಆದರೆ ಸಹಕಾರವು ಸಾಧ್ಯವಾಗಿಸಿತು ಇದನ್ನೂ. ಈಗ ನಮ್ಮ ರಾಜ್ಯದಲ್ಲಿ ಕಂಪ್ಲಿ, ಪಾಂಡವಪುರ, ಸಂಕೇಶ್ವರ, ಕಮಲಾಪುರ, ಮುಗುಟಖಾನ ಹುಬ್ಬಳ್ಳಿ, ಗೌರಿಬಿದನೂರು, ಬೀದರ ಮತ್ತು ಹಿರಿಯೂರುಗಳಲ್ಲಿ ಎಂಟು ಸಹಕಾರೀ ಸಕ್ಕರೆ ಕಾರಖಾನೆ ಸ್ಥಾಪಿಸುವ ಪ್ರಯತ್ನಗಳಾಗಿದ್ದು ಇವುಗಳಲ್ಲಿ ಮೊದಲಿನ ಮೂರು ಉತ್ಪಾದನೆಯನ್ನಿಗಾಗಲೇ ಆರಂಭಿಸಿ ಬಿಟ್ಟಿವೆ; ಗೌರಿಬಿದನೂರಿಗೆ ಲೈಸೆನ್ಸ್ ದೊರೆತಿದೆ; ಉಳಿದ ನಾಲ್ಕು ಲೈಸೆನ್ಸಿಗೆ ಬರೆದುಕೊಂಡಿದ್ದು ಅವು ಭಾರತ ಸರ್ಕಾರದ ಪರಿಶೀಲನೆಯಲ್ಲಿವೆ.

## ಸಹಕಾರೀ ವ್ಯವಸಾಯ

ನೂತನ ಸಹಕಾರೀ ನೀತಿ ಮತ್ತು ಸಹಕಾರೀ ವ್ಯವಸಾಯ ಕಾರ್ಯ ಸಮಿತಿಯ

ಸಿಫಾರಸುಗಳಿಂದಾಗಿ ಸಹಕಾರೀ ಬೇಸಾಯಕ್ಕೆ ಬಹಳ ಮಹತ್ವ ಬಂದಿದೆ. ಎರಡನೆಯ ಯೋಜನೆಯ ಅಂತ್ಯದಲ್ಲಿ ವಿಭಿನ್ನ ಪ್ರಕಾರಗಳ ೧೪೮ ಸಹಕಾರೀ ವ್ಯವಸಾಯ ಸಂಘಗಳು ಈ ರಾಜ್ಯದಲ್ಲಿದ್ದುವು. ಅವುಗಳ ಸದಸ್ಯರ ಸಂಖ್ಯೆ ೫,೩೨೯ ಮತ್ತು ಒಟ್ಟು ಶೇರು ಭಾಂಡವಾಳ ೧.೮೭ ಲಕ್ಷ ರೂಪಾಯಿಗಳು. ಅವರ ಆಧೀನದಲ್ಲಿರುವ ಭೂಮಿ ೩೪,೮೨೭ ಎಕರೆಗಳು. ಇದರಲ್ಲಿ ೧೮,೭೬೭ ಎಕರೆಗಳಲ್ಲಿ ಸಾಗುವಳಿ ನಡೆದಿದೆ. ರಾಜ್ಯಸರ್ಕಾರವು ಈ ಸಂಘಗಳಿಗೆ ೭.೬೭ ಲಕ್ಷ ರೂಪಾಯಿಗಳನ್ನು ಸಾಲವಾಗಿಯೂ ೪.೩ ಲಕ್ಷ ರೂಪಾಯಿಗಳನ್ನು ಸಹಾಯವಾಗಿಯೂ ಕೊಟ್ಟಿದೆ. ಸಹಕಾರೀ ವ್ಯವಸಾಯವು ಇದಕ್ಕೂ ಹೆಚ್ಚು ಸಾಧಿಸಬೇಕಾದುದು ಅಗತ್ಯ.

## ಸಹಕಾರೀ ಗೃಹನಿರ್ಮಾಣ ಸಂಘಗಳು

ಈ ರಾಜ್ಯದಲ್ಲೀಗ ೩೯ ಪ್ರಾಥಮಿಕ ಗೃಹನಿರ್ಮಾಣ ಸಂಘಗಳಿವೆ. ಮತ್ತು ಒಂದು ಅಪೆಕ್ಸ್ ಸಂಘ—ಮೈಸೂರ ಸ್ಟೇಟ ಕೋ-ಆಪರೇಟಿವ್ಹ ಹೌಸಿಂಗ ಕಾರ್ಪೋರೇಶನ್, ಬೆಂಗಳೂರು—ಇದೆ. ಸ್ಟೇಟ್ ಹೌಸಿಂಗ್ ಕಾರ್ಪೋರೇಷನ್ನಿನಲ್ಲಿ ೧೧೧ ಸದಸ್ಯರಿದ್ದು ಸಂದಾಯವಾದ ಶೇರು ಮೊಬಲಗು ೩.೮೩ ಲಕ್ಷ ರೂಪಾಯಿಗಳು ; ಕಾರ್ಪೋರೇಷನ್ ಕಟ್ಟಿರುವ ಮನೆಗಳು ೩೪೯; ಅವುಗಳ ಬೆಲೆ ೨೫ ಲಕ್ಷ ರೂಪಾಯಿಗಳು. ಪ್ರಾಥಮಿಕ ಸಂಘಗಳು ೩೩೬೯ ಮನೆಗಳನ್ನು ೧೧೬.೯೬ ಲಕ್ಷ ರೂಪಾಯಿಗಳ ವೆಚ್ಚದಲ್ಲೂ ೧೧೪ ಕುಟೀರಗಳನ್ನು ೩.೪೨ ಲಕ್ಷ ರೂಪಾಯಿಗಳ ವೆಚ್ಚದಲ್ಲೂ ಕಟ್ಟಿಸಿವೆ.

ಸಹಕಾರದ ವೈವಿಧ್ಯ ಮತ್ತು ವ್ಯಾಪ್ತಿಗಳು ಹೆಚ್ಚಬೇಕೆಂಬುದು ನಮ್ಮ ಯೋಜನೆಯ ಗುರಿಯಾಗಿದೆಯೆಂದು ಹಿಂದೆಯೇ ಹೇಳಿದೆ. ಇದನ್ನು ಕಾರ್ಯಗತಗೊಳಿಸಲು ವಿಭಿನ್ನ ಕ್ಷೇತ್ರಗಳಲ್ಲಿ ಸಹಕಾರ ಅಡಿಯಿಡುತ್ತಲಿದೆ. ಕೊಳ್ಳುವವರ, ಹೈನುಗಾರಿಕೆಯ, ಮೀನುಗಾರಿಕೆಯ, ಕೈಗಾರಿಕೆಗಳ ನಗರ ಬ್ಯಾಂಕುಗಳ ಸೇದುನೀರಾವರಿಯ ಸಹಕಾರ ಸಂಘಗಳು ಉದಯವಾಗುತ್ತಲಿವೆ. ಎರಡನೆಯ ಯೋಜನೆಯ ಕೊನೆಗೆ ಈ ರಾಜ್ಯದಲ್ಲಿ ೩೯೫ ಬಳಕೆಗಾರರ ಸ್ಟೋರುಗಳೂ ೭೦ ಹೈನುಗಾರಿಕೆಯ ಸಂಘಗಳೂ ೩೫ ಸೇದುನೀರಾವರಿ ಸಂಘಗಳೂ ೬೯ ಮೀನುಗಾರಿಕೆಯ ಸಂಘಗಳೂ ಒಂದು ಹಿಮ ಮತ್ತು ಶೀತ ಸಂಗ್ರಹಾಲಯವೂ ೧೭೧೪ ಕೈಗಾರಿಕಾ ಸಂಘಗಳೂ ೧೩೧ ನಗರ ಸಹಕಾರೀ ಬ್ಯಾಂಕುಗಳೂ ಸ್ಥಾಪಿತವಾದವು.

## ತರಬೇತು ಮತ್ತು ಪ್ರಶಿಕ್ಷಣ

ಅಖಿಲ ಭಾರತ ಗ್ರಾಮಾಂತರ ಋಣ ಪರಿಶೀಲನಾ ಸಮಿತಿಯು ಸಾಕಷ್ಟು ಪ್ರಶಿಕ್ಷಿತ ಜನರ ಮೂಲಕ ಸಹಕಾರಿ ಆಡಳಿತದ ನಿರ್ವಹಣೆ ನಡೆಯಬೇಕೆಂದು ಶಿಫಾರಸು ಮಾಡಿರುವುದನ್ನು ಇದಾಗಲೇ ಪ್ರಸ್ತಾಪಿಸಲಾಗಿದೆ. ಇದನ್ನು ಕಾರ್ಯಾನ್ವಿತಗೊಳಿಸಲು ತರಬೇತು ಪ್ರಶಿಕ್ಷಣ ಕಾರ್ಯಕ್ರಮಗಳ ಗಮನವನ್ನೀಯಲಾಗಿದೆ.

ತರಬೇತು ಎರಡು ಬಗೆಯದಾಗಿದೆ. (೧) ಸಹಕಾರಿ ಇಲಾಖೆ ಮತ್ತು ವಿಭಿನ್ನಸ್ತರಗಳ ಸಹಕಾರೀ ಸಂಸ್ಥೆಗಳ ಸಿಬ್ಬಂದಿಯ ತರಬೇತಿ (೨) ಸಹಕಾರೀ ಸಂಸ್ಥೆಗಳ ಅಧಿಕಾರಿಗಳ ಸದಸ್ಯರ ಮತ್ತು ಭಾವೀ ಸದಸ್ಯರ ತರಬೇತಿ.

ಇಲಾಖೆಯ ಮತ್ತು ಸಹಕಾರಿ ಸಂಸ್ಥೆಯ ಸಿಬ್ಬಂದಿಯ ತರಬೇತಿಗಾಗಿ ನಾಲ್ಕು ತರಬೇತಿ ಕೇಂದ್ರಗಳು ಬೆಂಗಳೂರು, ಮೈಸೂರು, ಧಾರವಾಡ, ಮಡಿಕೇರಿಗಳಲ್ಲಿವೆ. ಎರಡನೆಯ ಯೋಜನೆಯ ಅವಧಿಯಲ್ಲಿ ೨,೧೯೯ ಉಮೇದವಾರರಿಗೆ ತರಬೇತಿಯನ್ನು ಕೊಡಲಾಯಿತು. ರಾಜ್ಯದಲ್ಲೆಲ್ಲ ಅಧಿಕಾರೇತರ ಸದಸ್ಯರಿಗೆ ಮೈಸೂರ ಸ್ಟೇಟ ಕೋ-ಆಪರೇಟಿವ್ ಯೂನಿಯನ್ ತರಬೇತು ಕೊಡುತ್ತಿದೆ. ಕಳೆದ ಐದು ವರ್ಷಗಳಲ್ಲಿ ಅದು ೬೨೫ ಅಧಿಕಾರಿಗಳಿಗೂ ೪೭೨೬ ವ್ಯವಸ್ಥಾಪಕ ಸಮಿತಿ ಸದಸ್ಯರಿಗೂ ೧೧೩೧೬ ಸದಸ್ಯರಿಗೂ ೩೬೫೬ ಭಾವೀ ಸದಸ್ಯರಿಗೂ ಪ್ರಶಿಕ್ಷಣವನ್ನು ಕೊಟ್ಟಿದೆ.

ಹೀಗೆ ಸಹಕಾರವು ಈ ರಾಜ್ಯದಲ್ಲಿ ಬಹುಮುಖವಾಗಿ ಬೆಳೆಯಲು ಬೇಕಾಗುವ ಪೂರ್ವಸಿದ್ಧತೆ, ಪ್ರಾರಂಭಿಕ ಕಾರ್ಯ, ಪರಿಶೀಲನೆ ಪ್ರಯೋಗಗಳೆಲ್ಲ ಮುಗಿದಿವೆ. ಈ ಭದ್ರ ಬುನಾದಿಯ ಮೇಲೆ ಸಹಕಾರದ ಸುಂದರ ಮಂದಿರವು ಮೂಡಿ ಸುಖೀರಾಜ್ಯದ ಕೇಂದ್ರ ಬಿಂದುವಾಗಬೇಕಾಗಿದೆ. ಅದು ಬೇಗ ಆಗಲೆಂದು ಹಾರೈಸುತ್ತೇನೆ.

---

# ಅಸಿಧಾರಾವ್ರತ

ನೋಡಿವಳ,—ಆದರೂ
ನೋಡದಿರು ಬಹಳ.

ನನಗೆ ಗೊತ್ತು
ಇವಳು ಎಷ್ಟು ಹೊತ್ತು
ಇದಕೆ ದುಡಿದಿರುವಳೆಂಬ ಗುಟ್ಟು. —

ತಿಕ್ಕೀ ತೊಳೆದೂ
(ಶರದ ಚಂದ್ರನ ಮುಖಕೆ ಫೇನಮೇಘ)

ಹಿಕ್ಕೀ ಹೆಣೆದೂ
(ಕತ್ತಲೆಯ ಮುಪ್ಪುರಿಯ ನಾಗಭೋಗ).

ಹಚ್ಚೀ ತೊಡೆದೂ
(ಹಗಲ ಮುನ್ನುಡಿಯ ಪಂಕ್ತಿಗಳಡಿಗೆ ಕೆಂಪು ರೇಖಾ)

ಬಿಚ್ಚೀ ತೊಟ್ಟೂ
(ಅಸವರ್ಣ ಮೈತ್ರಿಸಂಯೋಗ).

ನೋಡುತ್ತಲಿದ್ದ ಕನ್ನಡಿಯು ಕೂಡ
ಹೇಳುತ್ತಲಿತ್ತು, "ನನ್ನನ್ನಗಲಿ ಹೋಗಬೇಡ!"

ವಕ್ರವನು ವಕ್ರತರ
ರಕ್ತವನು ರಕ್ತತರ
ಪೀನವನು ಪೀನತರ
ಕ್ಷೀಣವನು ಕ್ಷೀಣತರ
ಮಾಡಿಕೊಂಡವಳೀಗ ಹೊರಟಿರುವಳು :

ಇವಳು ಮರೆಸದ್ದು ಕಣ್ಣ ಕಾಲಿಗೆ ಹುದುಲು,
ಮರೆಸಿದ್ದೊ ಅಂತರಂಗಕೆ ದಿಗಿಲು.

ಹಾ! ನೋಡದಿರು ಬಹಳ
ಆದರೂ ನೋಡಿವಳ.

ಜೋಕೆ !
ಕಣ್ಣಿಟ್ಟು ನೋಡಿದರೆ ಆಗುವಳು ಸರೋಷೆ
ನೋಡದೇ ದಾಟಿದರೆ ಆಗುವಳು ನಿರಾಶೆ.

— ಪಿ. ವೆಂಕಟರಮಣಾಚಾರ



ಲೇಖಕರು:
ಜಿ. ಪಿ. ರಾಜರತ್ನಂ
ಬೆಂಗಳೂರು

# ಸ್ವದಾರಸಂತೋಷ

ಸುಮಾರು ಹತ್ತು ವರ್ಷಗಳಿಗೂ ಹಿಂದೆ ಇರಬೇಕು— 'ಕರ್ಮವೀರ'ದ ದೀಪಾವಳಿ ವಿಶೇಷ ಸಂಚಿಕೆಗೆ 'ಪತ್ನೀವ್ರತ' ಎಂಬ ಒಂದು ಲೇಖನವನ್ನು ಬರೆದುಕಳಿಸಿದ್ದೆ. ಅಚ್ಚಾದ ಆ ಲೇಖನದಲ್ಲಿ ಹೇಳದೆ ಇದ್ದ ಇನ್ನೂ ಹಲವು ಸಂಗತಿಗಳನ್ನು ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ. ಈ ಲೇಖನದ ಹೆಸರು 'ಸ್ವದಾರಸಂತೋಷ.'

ಪತ್ನೀವ್ರತ ಎಂದರೂ ಒಂದೆ, ಸ್ವದಾರಸಂತೋಷ ಎಂದರೂ ಒಂದೆ. ಸ್ವಂತ ಪತ್ನಿಯಿಂದ ತಾನು ಸಂತೋಷಪಡುವುದು, ಹಾಗೂ ಸ್ವಂತ ಪತ್ನಿಯನ್ನು ತಾನು ಸಂತೋಷಪಡಿಸುವುದು, ಎಂದು ಇದರ ಅರ್ಥ. ಸ್ವದಾರಸಂತೋಷವೆಂಬ ಈ ಪತ್ನೀವ್ರತಕ್ಕೆ ಇನ್ನೊಂದು ಮುಖ. ಪರದಾರನಿವೃತ್ತಿ, ಅಥವಾ ಪರಾಂಗನಾವಿರತಿ; ಎಂದರೆ ಪರಸ್ತ್ರೀಯ ಕಡೆಗೆ ಮನಸ್ಸು ಹೋಗದಂತೆ ತಡೆಯುವ ಪ್ರವೃತ್ತಿ. ಇದನ್ನು ಜೈನಮುನಿಗಳು 'ಸ್ಥೂಲ ಬ್ರಹ್ಮಚರ್ಯಾಣುವ್ರತ' ಎಂದು ಕರೆಯುತ್ತಾರೆ.

ಕೆಲವು ತಿಂಗಳ ಹಿಂದೆ, ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯಲ್ಲಿ 'ಪಂಪಕವಿಯ ಅರಿಕೇಸರಿ'ಯನ್ನು ಕವಿಯ ಮಾತುಗಳಲ್ಲೇ ಪರಿಚಯ ಮಾಡಿಕೊಡುವಾಗ ಈ ಪದ್ಯಬಂತು.

**ಮೇಲೆಳ್ದ ಬಲಂ ಕೋಟಗೆ**
**ಮೇಲಪ್ಪೊಡಮನ್ಯವನಿತೆ**
**ನೆಗಳ್ದೂರ್ವಶಿಗಂ**
**ಮೇಲಪ್ಪೊಡಮುಕ್ಕೆಂದುಂ**
**ಸೋಲವು ಕಣ್ ಪರಬಲಾಬ್ಧಿಗಂ**
**ಪರವಧುಗಂ**

ಪರಬಲಕ್ಕೆ ಸೋಲದವರು ಹಲವರುಂಟು. ಪರವಧುವಿಗೆ ಸೋಲದವರು ವಿರಳ. ಅಂಥ ವಿರಳರಲ್ಲಿ ಅರಿಕೇಸರಿ ಒಬ್ಬ. 'ಶೌಚಾಂಜನೇಯ' ಎಂಬುದು ಆತನ ಬಿರುದುಗಳಲ್ಲಿ ಒಂದು 'ಕಪಿಗೆ ಚಪಲತೆ ಸಹಜಂ' ಎಂಬ ಮಾತು ನಿಜವಾದುದಾದರೂ ಆಂಜನೇಯನಂಥ ಮಹಾಕಪಿಯ ಶುಚಿತ್ವ, ಎಂದರೆ ಸ್ತ್ರೀ ಸಂಬಂಧವಾದ ಪಾರಿಶುದ್ಧ್ಯ ದೇವದಾನವ ಮಾನವರುಗಳಲ್ಲಿ ಎಷ್ಟು ಜನಕ್ಕೆ ಉಂಟು? ಇಂದ್ರ ಅಹಲ್ಯೆಗೆ ಸೋತ! ರಾವಣ ಸೀತೆಗೆ ಸೋತ! ಕೀಚಕ ದ್ರೌಪದಿಗೆ ಸೋತ! ಅವರ ಸೋಲು ಆಚಂದ್ರಾರ್ಕ ತಾರಕವಾಗಿ ಹೋಯಿತು!

ಪಂಪ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿದ. ಅರ್ಜುನನು ಹೇಗೆ ಸಾಹಸಾಭರಣನೋ ಹಾಗೆಯೇ ಶೌಚಾಭರಣನು ಕೂಡ. ಇಂದ್ರಕೀಲದಲ್ಲಿ ಪಾಶುಪತವನ್ನು ಪಡೆದ ಮೇಲೆ, ಇಂದ್ರನು ತನ್ನನ್ನು ಸ್ವರ್ಗಕ್ಕೆ ಕರೆದುಕೊಂಡು

**ಪರಬಲಕ್ಕೆ ಸೋಲದವರುಂಟಾದರೂ ಪರವಧುವಿಗೆ ಸೋಲದವರು ವಿರಳ. ಸ್ತ್ರೀ ಸಂಬಂಧವಾದ ಪಾರಿಶುದ್ಧ್ಯ ದೇವ, ದಾನವ, ಮಾನವರುಗಳಲ್ಲಿ ಎಷ್ಟು ಜನಕ್ಕಿದೆ? ಈ ವಿಷಯದ ಅನೇಕರ ಸೋಲು ಆಚಂದ್ರಾರ್ಕವಾಗಿದೆ. "ಸಾವಿರ ಲೆಕ್ಕವನ್ನು ಒಂದು ಮಸಿ ನುಂಗಿತು" ಎಂಬ ಗಾದೆಯ ಹಾಗೆ ಈ ಅಶುಚಿ ಎಂದು ಲೋಕಾನುಭವವುಳ್ಳವರು ಹೇಳುತ್ತಾರೆ. ಆದರೆ ಶುಚಿಯನ್ನು ಪಾಲಿಸಿದ ಹಲವರು ಇಂದು ಕೀರ್ತಿಶಾಲಿಗಳಾಗಿ ಬೆಳಗುತ್ತಿದ್ದಾರೆ. ವ್ಯಕ್ತಿಯ ಸುಖಕ್ಕೆ ಸಮಾಜದ ವ್ಯವಸ್ಥೆಗೆ ರಾಷ್ಟ್ರದ ಭದ್ರತೆಗೆ ಲೋಕದ ಕ್ಷೇಮಕ್ಕೆ ಸ್ವದಾರಸಂತೋಷ—ಪರದಾರನಿವೃತ್ತಿ ಅತ್ಯಗತ್ಯ. ಸ್ವಂತ ಪತ್ನಿಯಿಂದ ತಾನು ಸಂತೋಷಪಡುವ ಈ ಸ್ವದಾರಸಂತೋಷದ ಸುಂದರವಾದ ವಿವೇಚನೆ ಇಲ್ಲಿದೆ.**

---

ಹೋಗಿದ್ದಾಗ, ತನ್ನ ಪರಾಕ್ರಮಕ್ಕೂ ಗಂಡಗಾಡಿಗೂ ಊರ್ವಶಿ ಸೋತು ಸೈರಿಸಲಾರದೆ ಏಕಾಂತದಲ್ಲಿ ಮೇಲೆ ಬಿದ್ದರೆ—ಅರ್ಜುನ ಏನಂದ? "ಎಂದು ಪುರಂದರನ ಅರಸಿಯಯ್ ಅಂದು ದಲ್ ಎನಗೆ ಅಬ್ಬೆಯೆ! ತೊದಳ್ ನುಡಿಯದೆ ಪೋಗು!" ಊರ್ವಶಿಗೆ ರೋಷಬಂತು. 'ಒಂದು ವರ್ಷ ನೀನು ನಪುಂಸಕನಾಗು' ಎಂದು ಶಾಪಕೊಟ್ಟಳು. ಅರ್ಜುನನ ಪಾಲಿಗೆ ಆ ಶಾಪವೇ ವರವಾಯಿತು, ಅಜ್ಞಾತವಾಸಕ್ಕೆ ಅನುಕೂಲವಾಯಿತು.

ಈ ರೀತಿಯಾದ 'ಶೌಚದ ಮೇಗಣ ಕಲಿತನ'ವನ್ನು ಉಳ್ಳ ಅರ್ಜುನನಿಗೆ ಎಲ್ಲ ರೀತಿಯಿಂದಲೂ ಅರ್ಹನಾದ ಪ್ರತಿನಾಯಕನೆಂದರೆ— 'ನೆನೆಯದಿರಣ್ಣ ಭಾರತದೊಳಿನ್ ಪೆರರಾರುಮಂ' ಎಂದು ಪಂಪನಿಂದ ಕೀರ್ತಿಸಲ್ಪಟ್ಟ ಕರ್ಣ. ಕರ್ಣನ ಶೌಚಗುಣದ ಪ್ರಸ್ತಾಪ ಪಂಪನಲ್ಲಿ ಅಷ್ಟು ಸ್ಫುಟವಾಗಿಲ್ಲವಾದರೂ ಪಂಪನ ಹೃದಯವನ್ನು ಬಲ್ಲ ಕವಿ ರನ್ನ ತನ್ನ ದುರ್ಯೋಧನನ ಮುಖದಿಂದ ಈ ರೀತಿ ಹೇಳಿಸಿದ್ದಾನೆ:

**ವಸುವಂ ದ್ವಿಜನ್ಮದಾನದೆ**
**ಪೊಸಜವ್ವನಮಂ ಸ್ವದಾರ-**
**ಸಂತೋಷದೆ ನಿ—**
**ನ್ನಸುವಂ ಪತಿಕಾರ್ಯದೆ ವ-**
**ರ್ಜಿಸಿದ್ಯೆ ನಿನ್ನನ್ನನಾವನಂಗಾಧಿಪತೀ**

ರನ್ನಕವಿಯ ಕರ್ಣ ಸ್ವದಾರಸಂತೋಷಕ್ಕೆ ಪ್ರಸಿದ್ಧನಾದರೆ, ಈ ಶತಮಾನದ ಕೈಲಾಸಂ ತಮ್ಮ ಕರ್ಣನಲ್ಲಿ ಇದೇ ವ್ರತದ ಇನ್ನೊಂದು ಮುಖವನ್ನು ಕಂಡಿದ್ದಾರೆ. ಅವರ 'ಕರ್ಣ'ನಾಟಕದಲ್ಲಿ, ದುರ್ಯೋಧನನೊಡನೆ ಕರ್ಣನೂ ದ್ರೌಪದೀ ಸ್ವಯಂವರಕ್ಕೆ ಹೋಗಿದ್ದಾನೆ. ಅಲ್ಲಿ ದುರ್ಯೋಧನ ದ್ರೌಪದಿಯನ್ನು ತೋರಿಸುತ್ತ "ಕನ್ಯೆ ನಿನಗೆ ಇಷ್ಟವಾಯಿತೆ, ಕರ್ಣ?" ಎಂದು ಕೇಳಿದರೆ, ಕರ್ಣ ಪೆಳಿಚ್ಚನೆ ನಗುತ್ತ ಹೇಳಿದ:

"ನಾನರಿಯೆ, ನನ್ನ ದೊರೆ! ನಾ ಹೇಳಲಾರೆ. ನನ್ನ ತಾಯಿಯ ಹೊರತು ಬೇರೆ ಹೆಂಗಸರ ಕುರಿತು ನಾ ನೋಡಿಕಾಣೆ. ನನ್ನ ಗುರು ಆ ರಾಮ—ಅವರಾದರೂ ತಮ್ಮ ತಾಯಿಯ ಹೊರತು ಬೇರೆ ಹೆಂಗುಸರ ಕುರಿತು ಕಂಡವರಲ್ಲ. ನನ್ನ ಗುರು ಹೇಗೆಯೋ ನಾ ಕೂಡ ಹಾಗೆಯೇ!" ಮುಂದೆ ಇದೇ ಕರ್ಣ, ಜೂಜಿನಲ್ಲಿ ಪಾಂಡವರು ಸೋತ ಮೇಲೆ, ದ್ರೌಪದಿಯ ಮಾನಭಂಗದ ಹೊತ್ತಿನಲ್ಲಿ, ದ್ರೌಪದಿಯ ಮಾನಸಂರಕ್ಷಣೆಗಾಗಿ ದುರ್ಯೋಧನನ ಎದುರು ಪ್ರತಿಭಟಿಸಿ ಎದ್ದು ನಿಲ್ಲುತ್ತಾನೆ—ರಾವಣನಿಗೆ ಎದುರಾಗಿ ಜಟಾಯು ನಿಂತ ಹಾಗೆ! ಕೈಲಾಸಂ ಅವರ ಕರ್ಣ ತಾನೂ ಶೌಚಾಂಜನೇಯನೇ!

ಕೈಲಾಸಂ ಅವರ ಕರ್ಣ ಮಾತ್ರವಲ್ಲ, ಅವರ ತಿಪ್ಪಾರಳ್ಳಿಯ ಬೋರನೂ ಸ್ವದಾರಸಂತೋಷವನ್ನು ಅವಲಂಬಿಸಿ ಬದುಕುವವನೇ. 'ತಿಪ್ಪಾರಳ್ಳಿ'ಯ ಮೊದಲನೆಯ ಚರಣ ಜ್ಞಾಪಿಸಿಕೊಳ್ಳಿ:

**ಬೋರೆಗೌಡನೆಂಬೊ ಗೌಡ ಬಂದ**
**ಬೆಂಗಳೂರ್ಗೆ**
**ಬಳೇಪೇಟೆ ಬಾಟೆ ಮೇಲೆ**
**ಹೋಗುತಿದ್ದಾಗ—**
**ಪೌಡರ್ ಗಿವ್ಡರ್ ಹಾಕಿಕೊಂಡ**
**ಮನುಷ್ಯಳೊಬ್ಬಳು**
**ಕಣ್ಣು ಗಿಣ್ಣು ಮಿಟಕ್ಸಿ ಗಿಟಕ್ಸಿ**
**ನೋಡಿ ನಕ್ಕಾಗ—**
**"ಬೇಡಮ್ಮಾ ಬಳೇಪೇಟೆ!**
**ನಮಸ್ಕಾರ ನಗರ್ತರ್‌ಪೇಟೆ!**
**ನಂ ತಿಪ್ಪಾರಳ್ಳಿ ಬಲುದೂರ!**
**ಆದರ್ ನಂ ಬಸವ್ನಲ್ಲವ್ವೆ!!**

ಪರಾಂಗನಾವಿರತಿಯನ್ನು ಬಿಗಿಹಿಡಿದು ಬೋರ ಸ್ವದಾರಸಂತೋಷಕ್ಕಾಗಿ ತನ್ನ ಹಳ್ಳಿಗೆ ಓಡಿದ!

ವಾಲ್ಮೀಕಿರಾಮಾಯಣದಲ್ಲಿ ರಾವಣನ ಕಾಮುಕತೆಯನ್ನು ಕೇಳಿಲ್ಲವೆ? ಅಂತಹ ಮಂಡೋದರಿಯಿದ್ದೂ ಅಂತಹ ದೇವಾಪ್ಸರೆಯರ ಅಂತಃಪುರವಿದ್ದೂ ವೇದವತಿ ಪುಂಜಿಕಸ್ಥಲಾ ಮೊದಲಾದವರನ್ನು ಕೆಣಕಿ ಶಾಪಪಡೆದು, ಸೀತೆಯನ್ನು ಅಪಹಾರಮಾಡಿ ಸರ್ವನಾಶಕ್ಕೆ ಈಡಾಗಿ ಹೋಗಲಿಲ್ಲವೆ? ಅದೇ ರಾವಣ ಜೈನರ ಸಂಪ್ರದಾಯದಲ್ಲಿ ಪರಾಂಗನಾವಿರತಿವ್ರತವನ್ನು ದೀಕ್ಷೆಯಾಗಿ ಕೈಕೊಂಡಿದ್ದವನು. ನಳಕೂಬರನ ಪತ್ನಿಯಾದ ಉಪರಂಭೆ ಒಮ್ಮೆ ತಾನಾಗಿಯೇ ಬಂದು ಬಯಸಿ

ದರೂ ರಾವಣನು ಆಕೆಗೆ ಸೋಲದೆ, ತನ್ನ ಶುಚಿತ್ವವನ್ನು ಕಾಪಾಡಿಕೊಂಡು, ಆಕೆಯ ಚಾರಿತ್ರ್ಯವನ್ನು ಕಾಪಾಡಿಕೊಟ್ಟು ಕಳಿಸಿದ. ಇಂತಹ ಸಂಯಮಿ ಸೀತೆಗೆ ಸೋತ ಎಂದಮೇಲೆ ಸ್ವದಾರ ಸಂತೋಷವೆಂಬ ವ್ರತದ ಪರಿಪಾಲನೆ ಸುಲಭವಲ್ಲವೆಂಬುದು ಸುವ್ಯಕ್ತ.

ಎಂದರೆ, ಈ ವ್ರತವನ್ನು ನಡಸುವ ಹಾದಿಯಲ್ಲಿ ಪರೀಕ್ಷೆಗಳು ಎದುರುಬಂದಾಗ, ಚಿತ್ತವನ್ನು ಬಿಗಿಹಿಡಿದು ಗೆದ್ದವರು ಇಲ್ಲವೆಂದಲ್ಲ. ಇದಕ್ಕೆ ಪ್ರಸಿದ್ಧವಾದ ಉದಾಹರಣೆ– ಶ್ರೀಮದ್ರಾಮಾಯಣದ ಲಕ್ಷ್ಮಣ. ಮದುವೆಯಾದ ತರುಣದಲ್ಲಿಯೇ ಹೆಂಡತಿಯನ್ನು ಬಿಟ್ಟು ಕಾಡಿಗೆ ಹೋದವನು. ಸುಮಾರು ಹದಿಮೂರು ವರ್ಷಗಳ ಕಾಲ ಸೀತಾರಾಮರ ದಾಂಪತ್ಯಜೀವನವನ್ನು ನೋಡುತ್ತ ಒಂಟಿಯಾಗಿದ್ದವನು. ಆದರೂ ಸೀತೆಯ ಕಾಲಿನ ನೂಪುರಗಳನ್ನು ಹೊರತು ಬೇರೆ ಆಭರಣಗಳ ಪರಿಚಯ ಕೂಡ ಇಲ್ಲದವನು. ನದಿಯನ್ನು ದಾಟಿಸುವಾಗ, ದೋಣಿಯನ್ನು ಹತ್ತಿಸುವಾಗ, ಲಕ್ಷ್ಮಣನು ಸೀತೆಯ ಮೈಯನ್ನು ಮುಟ್ಟಬೇಕಾದ ಪ್ರಸಂಗ ಬರುತ್ತಿತ್ತು. ಆದರೂ ಅವರ ಚಿತ್ತದಲ್ಲಿ ಯಾವರೀತಿಯ ವಿಕಾರವೂ ಆಗುತ್ತಿರಲಿಲ್ಲ. ಏಕೆಂದರೆ, ಆಕೆ "ಮನಸ್ವಿನಿ", ಆತ "ಆತ್ಮವಾನ್"; ಇಬ್ಬರೂ ತಮ್ಮ ಚಿತ್ತಗಳನ್ನು ತಮ್ಮ ವಶದಲ್ಲಿ ಇಟ್ಟುಕೊಂಡಿದ್ದವರು!

ಕ್ರೈಸ್ತರ ಹಳೆಯ ಒಡಂಬಡಿಕೆಯಲ್ಲಿ, ಈಜಿಪ್ಟಿನ ಚಕ್ರವರ್ತಿ ಫೇರೋವನ ಪತ್ನಿ ಯುವಕ ಜೋಸೆಫನನ್ನು ಕೂಡಬಯಸಿದಾಗ, ಪರದೇಶಿಯಾದ ಆ ಯುವಕ ದೇವರು ಮೆಚ್ಚದ ಆ ಕಾರ್ಯವನ್ನು ಮಾಡಲು ಒಲ್ಲದೆ, ಆ ರಾಣಿಯ ದುರಾಗ್ರಹಕ್ಕೆ ಗುರಿಯಾಗುತ್ತಾನೆ. ನಮ್ಮ ಆನೆಗೊಂದಿಯ ಕಂಪಿಲರಾಯನ ಮಗನಾದ ಕುಮಾರ ರಾಮನಾಥನು ತನ್ನ ಚಿಕ್ಕತಾಯಿಯಾದ ರತ್ನಾಜಿಯ ಕಾಮದ ಕರೆಗೆ ಓಗೊಡದೆ, ಪಟ್ಟಪಾಡು ಯಾರಿಗೆ ಗೊತ್ತಿಲ್ಲ?

ಇಂಥವರು ಕೆಲವರಾದರೂ ಜಗತ್ತಿನ ಇತಿಹಾಸದಲ್ಲಿ, ಜಗತ್ತಿನ ಚರಿತ್ರೆಯಲ್ಲಿ ಇದ್ದಾರೆ.

ಗ್ರೀಸ್ ದೇಶಕ್ಕೆ ಆದಿಕವಿಯಾದ ಹೋಮರ್ ತನ್ನ 'ಒಡಿಸ್ಸಿ' ಎಂಬ ಮಹಾಕಾವ್ಯದಲ್ಲಿ ಒಡಿಸಿಯಸ್ಸನ ಕಥೆಯನ್ನು ಹೇಳುತ್ತಾನೆ. ಈ ಮಹಾವೀರನಿಗೆ ಸಂಭವಿಸಿದ ಅನೇಕ ಘಟನೆಗಳಲ್ಲಿ, ಆತನು ಕ್ಯಾಲಿಪ್ಸೊ ಎಂಬ ದೇವತೆಯೊಡನೆ ನಿರ್ಜನವಾದ ದ್ವೀಪದಲ್ಲಿ ಎಂಟು ವರ್ಷಗಳನ್ನು ಕಳೆದದ್ದು ಒಂದು. ಅಷ್ಟುಕಾಲವೂ ಆ ದೇವತೆಯೊಡನೆ ಸಹಶಯ್ಯೆಯಲ್ಲಿ ದೇವಭೋಗಗಳನ್ನೆಲ್ಲ ಅನುಭವಿಸುತ್ತಿದ್ದರೂ ಆತ ಒಂದುಕ್ಷಣವಾದರೂ ತಾನು ತನ್ನ ಹೆಂಡತಿಯನ್ನು ಮರೆತಿರಲಿಲ್ಲ. ಈ ದೇವತೆಯ ಬಾಹುಬಂಧದಿಂದ ತಪ್ಪಿಸಿಕೊಂಡು ತನ್ನ ಊರಿನಲ್ಲಿದ್ದ ತನ್ನ ಪತ್ನಿಯ ಹತ್ತಿರ ಹೋದೇನೇ ಎಂದು ಅವನು ಹಂಬಲಿಸಿ ದೇವರಿಗೆ ಮೊರೆಯಿಡದ ದಿನವಿಲ್ಲ. ಈ ರೀತಿಯಾದ ಪತ್ನೀಪ್ರೇಮಕ್ಕೆ ಮೆಚ್ಚಿ, ದೇವಾಧಿದೇವನಾದ ಜ್ಯೂಪ್ ಆತನಿಗೆ ಬಂಧಮುಕ್ತಿಯನ್ನು ಕರುಣಿಸುತ್ತಾನೆ.

ಜಗತ್ತಿನ ಎಲ್ಲ ಧರ್ಮಗಳೂ ಎಲ್ಲ ಸಾಹಿತ್ಯಗಳೂ ಸ್ತ್ರೀ ವಿಷಯಕವಾದ ಶುಚಿಯನ್ನು ಕೀರ್ತಿಸುತ್ತವೆ, ಅಶುಚಿಯನ್ನು ಖಂಡಿಸುತ್ತವೆ.

''ಸಮ್ಮದವಾಗಲಾಗ ಕೊಲೆಯುಂ ಕಳವುಂ ಪುಸಿಯುಂ ಪರಾಂಗನಾಸಮ್ಮತಿಯುಂ ಪರಿಗ್ರಹದಕಾಂಕ್ಷೆಯುಂ ಆದೊಡೆಂದು ಮನುಜಂಗಿಹತ್ರಯು ಪರತ್ರೆಯು ಕೇಡು.'' ಎನ್ನುತ್ತದೆ ಜೈನ ಮಹಾವಾಣಿ.

ಬುದ್ಧಗುರು ತನ್ನ ಧರ್ಮಪದದಲ್ಲಿ ಹೇಳುತ್ತಾನೆ. ಇದರಿಂದ ಪಾಪ ಸಂಪಾದನೆ ಆಗುತ್ತದೆ. ದುರ್ಗತಿಗೆ ಹೋಗುತ್ತಾನೆ. ಭಯಗೊಂಡವನು ಭಯ ಪಡುವವಳೊಡನೆ ಪಡೆಯುವ ಸಂತೋಷ ಅತ್ಯಲ್ಪ. ದೊರೆಗೆ ತಿಳಿದರೆ ದೊಡ್ಡ ದಂಡ ವಿಧಿಸುತ್ತಾನೆ. ''ತಸ್ಮಾನರೋ ಪರದಾರಂ ನ ಸೇವೇ. ಆದ್ದರಿಂದ ಯಾರೂ ಪರಸ್ತ್ರೀಯನ್ನು ಸೇವಿಸದಿರಲಿ.''

ಬಸವಣ್ಣನವರ ಈ ವಚನಗಳಂತೂ ಮುತ್ತಿನ ಮಾಲೆ. "ಪರ ವಧುವನು ಮಹಾದೇವಿ ಎಂಬೆ... ಅನ್ಯವಧುವೆಂಬುದು ನಿಮ್ಮ ರಾಣಿವಾಸ. . . ನೋಡಲಾಗದು ನುಡಿಸಲಾಗದು. ಪರಸ್ತ್ರೀಯರ ಬೇಡ ಕಾಣಿರೋ. ತಗರ ಬೆನ್ನಲ್ಲಿ ಹರಿವ ಸೊಣಗನಂತೆ ಬೇಡ ಕಾಣಿರೋ. . . ತುಡುಗುಣಿತದಲ್ಲಿ ಪರವಧುವ ನೋಡುವ ಸರಸಬೇಡ ಕಾಣಿರಣ್ಣಾ ಹರಿವ ಹಾವಿಗಂಜೆ, ಉರಿಯ ನಾಲಿಗೆಗಂಜೆ ಸುರಿಗೆಯ ಮೊನೆಗಂಜೆ. ಒಂದಕ್ಕಂಜುವೆನೊಂದಕ್ಕಳುಕುವೆ. ಪರಸ್ತ್ರೀ ಪರಧನವೆಂಬ ಜೂಜಿಂಗಂಜುವೆ. ಮುನ್ನಂಜದ ರಾವಣನೇ ವಿಧಿಯಾದ?. . . ಛಲಬೇಕು ಶರಣಂಗೆ ಪರಸತಿಯ. ನೊಲ್ಲೆನೆಂಬ. . .''

ಶ್ರೇಯಸ್ಸಿಗೆ ಸಾಧಕವಾದ ಶೌಚವನ್ನು ಮರೆತು ಕೀಚಕನು ಪಡೆದ ಫಲವನ್ನು ಚಿತ್ರಿಸುವಾಗ ಪಂಪಕವಿ ಹೇಳುತ್ತಾನೆ.

**ರಾವಣನುಂ ಗಡ ಸೀತಾ**
**ದೇವಿಗೆ ಸೋಲ್ತದರ**
**ಫಲಮನೆಯ್ದಿದನಿವನಾ**
**ರಾವಣನಿಂ ಪಿರಿಯನೆ ಪೇ**
**ಳೇವುದೊ ಶುಚಿಯಿಲ್ಲದವನ**
**ಗಂಡುಂ ತೊಂಡುಂ**

ಎಂದು ವಿರಾಟನಗರದ ಜನರೆಲ್ಲ ಗುಜುಗುಟ್ಟಿದರಂತೆ.

'ಸಾವಿರ ಲೆಕ್ಕವನ್ನು ಒಂದು ಮಸಿ ನುಂಗಿತು' ಎಂಬ ಗಾದೆಯ ಹಾಗೆ ಈ ಅಶುಚಿ— ಎಂದು ಲೋಕಾನುಭವ ಉಳ್ಳವರೆಲ್ಲ ಅನಾದಿಕಾಲದಿಂದಲೂ ಹೇಳುತ್ತ ಬಂದಿದ್ದಾರೆ.

ಪರಿಹಾಸ್ಯಮಾಡುವ ವ್ಯಾಜದಿಂದ ಒಬ್ಬ ಕುಡುಕ ತನ್ನ ಗೆಳೆಯನೊಬ್ಬನಿಗೆ ಹೀಗೆ ಬುದ್ಧಿ ಹೇಳಿದ್ದಾನೆ.

**ಯೆಣ್ ನಾಯ್ ಇಂದಿನ ಗಂಡ್-**
**ನಾಯುಂಗೆ**
**ಸುತ್ ಬಾರ್ದ್ ಸಂದಿ ಸಂದಿ;**
**ಬೀದೀಲೋಗೋ ಎಣ್ಣಂಗಿಸ್ಗೆ**
**ಕಣ್ಣಾ ಕೋನು ಹಂದಿ!**
**ಕುಡುಕನ್ ಕೈಲಿ ಎಂಡಿದ್ದಂಗೆ**
**ನಿನ್ಗಾಗೆಲೊಬ್ಬು ಯೆಡ್ತಿ;**
**ಇದ್ದಿದ್ದುಬ್ಬಟ್ಟು ಇಲ್ಲದ್ ಬೇಡಿ**
**ಸಿಕ್ದಾಳ್ ಇಂದ್ ಯಾಕೋಡ್ತಿ?**
**ಮೂರ್ನೇಯೋಳ್ಗೆ ನೋಡ್ದೊಗ್ಗಿರೊ**
**ನರಕ ತಿನ್ಲಿ ಟಕ್ಕರ್!**
**ಇಲ್ದ್ರೋಳ್ಗಲ್ಯೋ ಸಂಬ್ರಂದಲ್ಲಿ**
**ಇರೋಲ್ ಕೊಟ್ವಾಳ್ ಟಕ್ಕರ್!**

ದೇವರು ಮೆಚ್ಚುವುದಿಲ್ಲ, ಪರಲೋಕದಲ್ಲಿ ಕೇಡಾಗುತ್ತದೆ ಎಂಬುದನ್ನು ನಂಬದೆ ಹೋದರೆ ಹೋಗಲಿ. ಇಹಲೋಕಕ್ಕೆ ಸಂಬಂಧಪಟ್ಟಂತೆ ವ್ಯಾವಹಾರಿಕವಾಗಿ ನೋಡಿದರೂ ವ್ಯಕ್ತಿಯ ಸುಖಕ್ಕೆ, ಸಮಾಜದ ವ್ಯವಸ್ಥೆಗೆ, ರಾಷ್ಟ್ರದ ಭದ್ರತೆಗೆ, ಲೋಕದ ಕ್ಷೇಮಕ್ಕೆ ಸ್ವದಾರಸಂತೋಷ ಮತ್ತು ಪರದಾರನಿವೃತ್ತಿ ಎಂಬ ಇಮ್ಮಡಿಯಾದ ಶುಚಿತ್ವ ಅತ್ಯಗತ್ಯ.





“ಹಾರ್ದಿಕ ಅಭಿನಂದನೆಗಳು. ತಾವು ಈಸಲವೂ ಆರಿಸಿ ಬಂದಿರಿ. ತುಂಬ ಸಂತೋಷವಾಯ್ತು”, ಫೋನಿನಿಂದ ದೂರದ ಧ್ವನಿಯೊಂದು ತೂರಿಬಂತು. ಫೋನನ್ನು ಕೈಯ್ಯಲ್ಲಿ ಹಿಡಿದು ಕೇಳುತ್ತಿದ್ದ ಮೀರಾದೇವಿ ನಗುಮುಖದಿಂದ ಹೇಳಿದಳು.

“ತುಂಬ ಕೃತಜ್ಞಳಾಗಿದ್ದೇನೆ. ಅಲ್ಲದೆ ಹೆಣ್ಣುಮಕ್ಕಳಿಗೆ ಈ ಕೆಲಸವೇನೊ ತುಂಬ ಸುಲಭ; ವಿಶೇಷ ಪರಿಶ್ರಮವೂ ಇಲ್ಲ, ಕೈಯಲ್ಲಿ ನಾಲ್ಕು ಕಾಸೂ ಇರುತ್ತದೆ. ಇದನ್ನು ಬಿಟ್ಟರೆ ನಾವಿನ್ನೇನನ್ನು ಮಾಡಬಹುದು !”

ಉತ್ತರ ಪ್ರದೇಶದ ಮೀರಾದೇವಿಯ ಮಾತನ್ನು ಕೇಳುತ್ತಿದ್ದ ನನಗೆ ಅಚ್ಚರಿಯಾಯ್ತು. “ಸಂಸತ್ತಿನ ಸದಸ್ಯತ್ವದ ಹೊಣೆ ಇಷ್ಟು ಸುಲಭವೆ” ಎಂದು ನನಗೆ ನಾನೇ ಕೇಳಿಕೊಂಡೆ. ಪ್ರಾಥಮಿಕ ಶಿಕ್ಷಣಕ್ಷೇತ್ರದಲ್ಲಿ ಮಹಿಳೆಯರು ಶಿಕ್ಷಿಕೆಯರಾಗಿರುವದೇ ಹೆಚ್ಚು ಯೋಗ್ಯವಾದುದು ಎಂದು ಆತ್ಮವಿಶ್ವಾಸದಿಂದ ಹೇಳುತ್ತಿರುವಂತೆಯೇ ಮೀರಾದೇವಿ ಸಂಸತ್ತಿನ ಸದಸ್ಯತ್ವದ ಬಗ್ಗೆ ಹೇಳಿದ್ದಳು.

೫-೬ ಲಕ್ಷ ಜನತೆಯ ಪ್ರತಿನಿಧಿಯಾಗಿ ಒಂದು ಭಾಗದ ಹಿತಸಂಬಂಧಗಳನ್ನು ಬೆಳೆಸಿ ಉಳಿಸಿಕೊಳ್ಳುವ ಹೊಣೆ ಸಂಸತ್ಸದಸ್ಯರ ಮೇಲೆ ಇರುವಾಗ ಅದನ್ನು ನಿರ್ವಹಿಸುವದು ಸುಲಭವಾದ ಕೆಲಸವೆಂದು ಹೇಳುವದು ಕಷ್ಟ ! ಇನ್ನು ಸದಸ್ಯರಿಗೆ ತಮ್ಮ ಸ್ಥಾನಮಾನಗಳನ್ನಷ್ಟೇ ಉಳಿಸಿಕೊಳ್ಳುವ ಪ್ರಶ್ನೆಬಂದಾಗ, ಅದಕ್ಕೆ ಏನನ್ನು ಯಾವ ಸಂದರ್ಭದಲ್ಲಿ ಮಾಡಿದರಾಯಿತೋ ಅಷ್ಟನ್ನು ಮಾತ್ರ ಮಾಡಿದರಾಯಿತು ಎಂಬ ಮನೋವೃತ್ತಿಯುಂಟಾಗುವದು ಸಮಾಜ, ಸದಸ್ಯರಿಬ್ಬರ ದೃಷ್ಟಿಯಿಂದಲೂ ಇಷ್ಟವಾದುದಲ್ಲ.

ಜನಾಂಗದ ಅರ್ಧಭಾಗವನ್ನು, ತತ್ಪರಿಣಾಮವಾಗಿ ಮತದಾರ ಸಂಖ್ಯೆಯ ಅರ್ಧಭಾಗವನ್ನು ಆಕ್ರಮಿಸಿದ್ದ ಮಹಿಳೆಗೆ, ಪ್ರಜಾಪ್ರಭುತ್ವದ ಸಂಕೇತವಾಗಿ ಪ್ರಾತಿನಿಧ್ಯವುಳ್ಳ ಸಂಸ್ಥೆಗಳೆಲ್ಲದರಲ್ಲೂ ಪ್ರಾತಿನಿಧ್ಯವಿರಬೇಕೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದರೆ ಅದನ್ನು ನಿರ್ವಹಿಸುವ ಹೊಣೆ ದೇಶದ ದೃಷ್ಟಿಯಿಂದ ಅವಳಲ್ಲಿ ಎಷ್ಟು ಮಟ್ಟಿಗಿದೆ? ಅನೇಕ ಜನ ಸದಸ್ಯರಲ್ಲಿಯೂ ಇಂತಹ ಹೊಣೆ ಹೊರುವ ಶಕ್ತಿಯಿರಲಿಕ್ಕಿಲ್ಲವೆಂಬುದೇ, ಅವಳಿಗೆ ಪ್ರಾತಿನಿಧ್ಯಬೇಕು ಎಂಬುದಕ್ಕೆ ಸಮರ್ಥನೆಯಾಗಲಾರದು. ಪ್ರಯತ್ನಪಟ್ಟರೆ ಮಹಿಳೆ ಸಂಸತ್ತಿನಲ್ಲೂ

# ಸಂಸತ್ತಿನಲ್ಲಿ ಮಹಿಳೆ



ಲೇಖಕಿ :
**ಸರೋಜಿನಿ ಮಹಿಷಿ,**
ಎಂ. ಎ., ಎಲ್. ಎಲ್. ಬಿ. (ಎಂ. ಪಿ.)
**ಧಾರವಾಡ**

**ಭಾರತದಲ್ಲಿ ಯಾವದೇ ಒಂದು ಹೋರಾಟವಿಲ್ಲದೆ ಮಹಿಳೆ ಅನೇಕ ಸಂವಿಧಾನಾತ್ಮಕ ಹಕ್ಕು-ಬಾಧ್ಯತೆಗಳನ್ನು ಪಡೆದಿದ್ದಾಳೆ. ಮತದಾನದ ಹಕ್ಕು ಅವಳಿಗೆ ದೊರಕಿದೆ; ರಾಜಕಾರಿಣಿಯಾಗಿದ್ದಾಳೆ; ರಾಯಭಾರಿಯಾಗಿ ಹೋಗಿಬಂದ ಕೀರ್ತಿ ಅವಳಿಗಿದೆ; ಮಂತ್ರಿಣಿಯಾಗಿದ್ದಾಳೆ. ವಿಧಾನಸಭೆ, ಲೋಕಸಭೆಗಳಲ್ಲಿ ಇಂದು ಮಹಿಳಾ ಸದಸ್ಯರ ಸಂಖ್ಯೆ ಹಿಂದೆಂದಿಗಿಂತಲೂ ಹೆಚ್ಚಿದೆ. ಅವರು ಈ ಕಾರ್ಯವನ್ನು ಬಹು ಸುಲಭರೀತಿಯಿಂದಲೇ ನಿರ್ವಹಿಸುತ್ತಿದ್ದಾರೆ. ನಮ್ಮ ಭಾಗದಿಂದ ಸಂಸತ್ತಿಗೆ ಆರಿಸಿ ಹೋಗಿರುವ ಶ್ರೀಮತಿ ಸರೋಜಿನಿ ಮಹಿಷಿ ಇವರು ಮಹಿಳಾ ಸಂಸತ್ ಸದಸ್ಯರ ಕಾರ್ಯಕಲಾಪಗಳನ್ನು ಕುರಿತು ಇಲ್ಲ ಚರ್ಚಿಸಿದ್ದಾರೆ.**

ಅಥವಾ ಅಂತಹ ಇನ್ನಾವುದೇ ಸಭೆಯಲ್ಲೂ ಸಮರ್ಥಳಾಗಿ ಕಾರ್ಯ ನಿರ್ವಹಿಸಬಹುದು ಎಂಬುದಕ್ಕೆ ನಮ್ಮ ಸಂಸತ್ತಿನಲ್ಲಿಯೇ ಉದಾಹರಣೆಗಳಿಲ್ಲದೆಯಿಲ್ಲ. ಆದರೆ ಶತಮಾನದಿಂದ ಹಿನ್ನೆಲೆಯಲ್ಲಿದ್ದ ಮಹಿಳೆಗೆ ಸಮಾನ ಪ್ರಾತಿನಿಧ್ಯವನ್ನು ಒಮ್ಮೆಲೆ ಕೊಡಲು ಮತ್ತು ಹಾಗೆ ಕೊಟ್ಟಾಗ ಸಮಾನ ಹಕ್ಕುಗಳನ್ನು ಕಾರ್ಯರೂಪದಲ್ಲಿ ಆಕೆ ತರಲು ಯತ್ನಿಸುವದನ್ನು ತಾಳಿಕೊಳ್ಳಲು, ನಮ್ಮ ಸಮಾಜದ ಮಾನಸಿಕ ಸಿದ್ಧತೆಯೇ ಇನ್ನೂ ಆಗಿಲ್ಲ. ಆಗುವ ಕ್ರಮದಲ್ಲಿದೆ. ಪಂಚಾಯತಿಯಲ್ಲಿ ಕೂಡ ಮಹಿಳೆಯರಿಗೆ ಪ್ರಾತಿನಿಧ್ಯವಿರಲೇಬೇಕೆಂದಾಗ, ಹೆಸರಿಗೊಬ್ಬ ಮಹಿಳೆಯನ್ನು ಸೇರಿಸಿಕೊಳ್ಳಲಾಗುತ್ತಿದೆ. ‘ಮಹಿಳೆ, ಆಕೆ ಏನು ಬಲ್ಲಳು’ ಎಂಬ ದೃಷ್ಟಿಕೋನ ಪಂಚಾಯತಿಯ ಮಟ್ಟದಲ್ಲಿದ್ದದ್ದು ಪಾರ್ಲಿಮೆಂಟಿನ ಮಟ್ಟದಲ್ಲಿಯೂ ಮುಂದುವರಿಯಲೆತ್ನಿಸುತ್ತದೆ.

ರಾಜಕೀಯ ಸಮಾನಾವಕಾಶ ಮಹಿಳೆಗೆ ದೊರೆತಿದೆ : ಮತದಾನದ ಅಧಿಕಾರ ದೊರೆತಂತೂ ಹಳೆಯ ಮಾತಾಯ್ತು. ಆದರೆ ಅದನ್ನು ತಮ್ಮ ಕರ್ತವ್ಯವೆಂದು ಕಾರ್ಯಗತಗೊಳಿಸುವ ಅರಿವು ಎಷ್ಟು ಜನಕ್ಕಿದೆ? ದೇಶದಲ್ಲಿ ಒಟ್ಟಿನಲ್ಲಿಯೇ ಕಡಿಮೆ ಪ್ರಮಾಣದಲ್ಲಿದ್ದ ಸಾಕ್ಷರತೆ ಮತ್ತೆ ಅವರಲ್ಲಿಯೇ ಪುರುಷರಲ್ಲಿ ಹೆಚ್ಚು, ಸ್ತ್ರೀಯರಲ್ಲಿ ಕಡಿಮೆಯಿರುವಂತೆ, ಎಲ್ಲ ಕ್ಷೇತ್ರಗಳಲ್ಲಿಯೂ ಸ್ತ್ರೀಯರ ಪ್ರಾತಿನಿಧ್ಯ ಕಡಿಮೆ ಪ್ರಮಾಣದಲ್ಲಿಯೇ ಇದೆ. ಸುಮಾರು ೫೪೦ ರಷ್ಟು ಸದಸ್ಯಸಂಖ್ಯೆಯುಳ್ಳ ಲೋಕಸಭೆಯಲ್ಲಿ ಮಹಿಳಾ ಸದಸ್ಯರ ಸಂಖ್ಯೆ ಕೇವಲ ೩೪, ಆಳುವ ಪಕ್ಷದಲ್ಲಿದ್ದವರ ಸಂಖ್ಯೆ ೨೮, ವಿರೋಧಿಪಕ್ಷದಲ್ಲಿದ್ದವರ ಸಂಖ್ಯೆ ೬, ಆಳುವ ಪಕ್ಷದಲ್ಲೂ ವಿರೋಧೀ ಪಕ್ಷದಲ್ಲೂ ಉಮೇದುವಾರರನ್ನು ಚುನಾವಣೆಗೆ ನಿಲ್ಲಿಸುವದು ವಿಶಿಷ್ಟ ನೀತಿ ಹಾಗೂ ತತ್ವಗಳನ್ನು ಅವಲಂಬಿಸಿದ್ದರಿಂದ, ಆ ವಿಶಿಷ್ಟನೀತಿಯ ಪ್ರತಿನಿಧಿಗಳೇ ಆರಿಸಿಬಂದಿರುವದನ್ನು ಕಾಣಬಹುದಾಗಿದೆ. ವಿರೋಧಿ ಪಕ್ಷದ ಮಹಿಳೆಯರಲ್ಲಿ ಬಹುಸಂಖ್ಯಾಕರು ರಾಜಕೀಯದಲ್ಲಿ ಸ್ವತಂತ್ರ ಪಕ್ಷಕ್ಕೆ ಸೇರಿದವರು, ರಾಜಮನೆತನದವರು ! ಕಾಂಗ್ರೆಸ ಪಕ್ಷದಲ್ಲಿ ಪರಿಶಿಷ್ಟವರ್ಗ ಹಾಗೂ ಜಾತಿಗಳಿಗೆ ಸಂಬಂಧಪಟ್ಟ ಮಹಿಳೆಯರು ಹಾಗೂ ಒಂದು ಪ್ರಾಂತದ ಕೆಲವು ಮಟ್ಟಿಗಾದರೂ ಮಹಿಳೆಯರಿಗೆ ಪ್ರಾತಿನಿಧ್ಯವನ್ನು ಕೊಡಲೇಬೇಕೆಂಬ ತತ್ವಕ್ಕನುಸರಿಸಿ ಬಂದವರು ಇದ್ದಾರೆ.

ಸದಸ್ಯರೇ ಇರಲಿ ಅಥವಾ ಸದಸ್ಯೆಯರೇ ಇರಲಿ ಶೈಕ್ಷಣಿಕ ಹಿನ್ನೆಲೆ, ಕಾರ್ಯಕ್ಷೇತ್ರದಲ್ಲಿ ಪರಿಶ್ರಮಪಟ್ಟ ಅನುಭವ ಇರದಿದ್ದರೆ, ಅಧಿಕಾರವಾಣಿಯಿಂದ ಮಾತನಾಡಲೂ ಅವರಿಗೆ ಬರಲಾರದು. ಇನ್ನು ಕೆಲವರು ಮಾತನಾಡುವದನ್ನೇ ಒಂದು ಕಲೆಯೆಂದು ಬೆಳೆಸಿಕೊಂಡವರು ಇರಲೂಬಹುದು ! ಈ ಎರಡೂ ಒಂದೆಡೆ ಸೇರಿದಾಗ ಮಾತಿಗೆ ವಿಶೇಷ ಬೆಲೆ ಬರುತ್ತದೆ : ಆದರೆ ಅದು ಕ್ವಚಿತ್ತಾಗಿ! ಸಂಸತ್ತಿನಲ್ಲಿ ಇಂತಹರು ಕೆಲವೇ ಜನರು ! ಇಲ್ಲಿದ್ದ ಮಹಿಳೆಯರಲ್ಲಿ ವಿಶೇಷ ಶೈಕ್ಷಣಿಕ ಹಿನ್ನೆಲೆಯಿದ್ದವರು ಸಂಖ್ಯೆಯಲ್ಲಿ ಕಡಿಮೆ.

ಆದರೆ ಕಾರ್ಯಕ್ಷೇತ್ರದಲ್ಲಿ ದುಡಿದವರು ಹೆಚ್ಚು ಸಂಖ್ಯೆಯಲ್ಲಿದ್ದಾರೆ: ಅನುಭವವಿದ್ದರೂ ಕೆಲವು ಮಾತುಗಳನ್ನು ಹೇಳಬೇಕೆಂದರೆ ಅನೇಕ ಮಹಿಳೆಯರಿಗೆ ಧೈರ್ಯಸಾಲದು ( ಈ ಮಾತು ಕೆಲ ಸದಸ್ಯರಿಗೂ ಅನ್ವಯಿಸೀತು! ) ಇದೂ ಅಲ್ಲದೆ ಭಾಷೆಯ ಪ್ರಶ್ನೆಯೊಂದು ಸಂಸತ್ತಿನಲ್ಲಿ ಬಹುದೊಡ್ಡದಾಗಿದೆ. ಇನ್ನುಳಿದ ಯಾವುದೇ ಭಾರತೀಯ ಭಾಷೆಯಲ್ಲಿ ಮಾತನಾಡಬಹುದಾಗಿದ್ದರೂ ಪ್ರಾರಂಭದಲ್ಲಿ ಆ ಭಾಷಣದ ಲಿಖಿತ ಅನುವಾದವನ್ನು ಹಿಂದಿಯಲ್ಲಿ ಅಥವಾ ಇಂಗ್ಲೀಷಿನಲ್ಲಿ ಕೊಟ್ಟು ಬಳಿಕ ಮಾತನಾಡಬೇಕು: ಆದರೆ ಕೇಳುಗರು ಎಷ್ಟು ಜನ ದೊರೆತಾರೆಂದು ಹೇಳಲು ಬಾರದು.

ಇಂಗ್ಲೀಷು ಹಿಂದಿಗಳೆರಡೇ ಅಲ್ಲಿಯ ಪ್ರಚಲಿತ ಭಾಷೆಗಳು. ಮಾತೃಭಾಷೆ ಹಿಂದೀಯಾಗಿದ್ದರೂಸಂಸತ್ತಿನಲ್ಲಿ ಮಾತನಾಡಲು ಧೈರ್ಯಸಾಲದೆ ಕೆಲ ಸದಸ್ಯ ಸದಸ್ಯೆಯರು ಹಲವು ಸಲ ಬರೆದು ತಂದುದನ್ನು ಓದಲೂ ಪ್ರಾರಂಭಿಸುತ್ತಾರೆ: ಆಗ ಇಬ್ಬಣಗಳಲ್ಲೂ ವಿರೋಧೀ ಸದಸ್ಯರು, 'ಸದಸ್ಯರೊಬ್ಬರು ಕಾಗದವನ್ನು ಎದುರಿಗೆ ಹಿಡಿದು ಓದುತ್ತಿರುವದು ಆಕ್ಷೇಪಾರ್ಹ'ವೆಂದು ಅಧ್ಯಕ್ಷರ ಗಮನಕ್ಕೆ ತರುತ್ತಾರೆ. ಅಧ್ಯಕ್ಷರು:ಮತ್ತೊಂದು ಬಾರಿ ಹಾಗೆ ಓದಕೂಡದೆಂದು ಮಾನ್ಯ ಸದಸ್ಯರಿಗೆ(ಸದಸ್ಯೆಯರಿಗೂ) ಸೂಚನೆ ಮಾಡುತ್ತಾರೆ. ಈ ವಿಷಯದಲ್ಲಿ ಸದಸ್ಯೆಯರಿಗೆ ಇನ್ನೂ ಸ್ವಲ್ಪ ಹೆಚ್ಚು ಸವಲತ್ತನ್ನೇ ಕೊಡುತ್ತಾರೆಂದರೂ ಆದೀತು!

ಮಹಿಳೆಯರು ಮಾತನಾಡಲು ಹೆಸರಾಗಿದ್ದರೂ ಸಭೆ ಸಮ್ಮೇಲನಗಳಲ್ಲಿ ಅಷ್ಟು ಮಟ್ಟಿಗೆ ಮಾತನಾಡುವದಿಲ್ಲ. ಅಲ್ಲದೆ ಸಂಸತ್ತಿನಲ್ಲಿ ಎಂಟು ದಿನಕ್ಕೊಂದು ಸಲ ಮಾತನಾಡಿದರೂ 'ಬಹಳ ಚುರುಕಾಗಿದ್ದವರು, ಬಹಳ ಮಾತನಾಡುವರು' ಎಂಬ ಅಭಿಧಾನ ಕೊಡಲ್ಪಡುತ್ತದೆ. ಈ ಅಳತೆಗೋಲಿನಿಂದ ನೋಡಿದರೆ ಮಾತನ್ನೇ ಆಡದ ಸದಸ್ಯ-ಸದಸ್ಯೆಯರ ಸಂಖ್ಯೆ ಎಷ್ಟಿದೆಯೆಂಬುದರ ಕಲ್ಪನೆ ಬರಬಹುದು. ಅದರಲ್ಲಿಯೂ ಸದಸ್ಯೆಯೊಬ್ಬಳು ವಾರಕ್ಕೊಂದು ಸಲವೋ, ಎರಡು ಸಲವೋ ಮಾತನಾಡಿದರೆ ಹೆಚ್ಚು ಮಾತನಾಡುತ್ತಿದ್ದಾರೆ ಎಂಬ ಆಭಾಸ ಕೆಲವರಿಗಾಗುವದೂ ಉಂಟು! ಹೆಚ್ಚು ಸಲ ಮಾತನಾಡಬೇಕೆಂದರೂ ಮಾತನಾಡುವವರ ಸಂಖ್ಯೆ ಒಟ್ಟಿನಲ್ಲಿಯೇ ಹೆಚ್ಚಿದ್ದುದರಿಂದ, ಅವಕಾಶ ಸಿಗುವದಿಲ್ಲ. ಆದರೆ ಯಾವ ಸದಸ್ಯರಿಗೇ ಆಗಲಿ ಅಥವಾ ಸದಸ್ಯೆಯರಿಗೇ ಆಗಲಿ, ತಾವು ಪ್ರತಿನಿಧಿಸುವ ಜನತೆಯ ತೊಂದರೆಗಳನ್ನು, ಅವರ ಬೇಡಿಕೆಗಳನ್ನು ಆಧಿಕಾರದಲ್ಲಿದ್ದವರ ಎದುರು ಮಾತಿನಿಂದಲೇ ಇಟ್ಟು ನಿವಾರಿಸಿಕೊಳ್ಳುವದೂ ಒಂದು ಮಹತ್ವದ ಸಾಧನವಾದ್ದರಿಂದ ಮಾತನಾಡುವದೂ ಅನಿವಾರ್ಯವಾಗುತ್ತದೆ.

ಈಗಿನ ಸಂಸತ್ತಿನಲ್ಲಿ, ಘಟನೆಯನ್ನು ಸಿದ್ಧಗೊಳಿಸಲು ರಚಿಸಲಾಗಿದ್ದ ಶಾಸನಸಭೆಯಿಂದಲೂ (Constituent Assembly) ಸದಸ್ಯೆಯರಾಗಿದ್ದ ಒಬ್ಬಿಬ್ಬರು ಮಹಿಳೆಯರಿದ್ದಾರೆ. ಇಂತಹ ಒಬ್ಬ ಸದಸ್ಯೆ ಶ್ರೀಮತಿ ರೇಣುಕಾ ರೇ ಮೂರನೆಯ ಸಂಸತ್ತಿನಲ್ಲಿ ಮಹಿಳಾ ಸದಸ್ಯೆಯರತಿಳುವಳಿಕೆಯ ಮಟ್ಟ ಹಾಗೂ ಚರ್ಚೆಗಳಲ್ಲಿ ಭಾಗವಹಿಸುವದರ ಪ್ರಮಾಣವು ನಿಜಕ್ಕೂ ಅಭಿನಂದನೀಯವಾಗಿದೆ ಎಂದು ಆಗಾಗ ಹೇಳುತ್ತಿರುತ್ತಾರೆ. ವೃದ್ಧ ಸದಸ್ಯೆ ಶ್ರೀಮತಿ ಉಮಾ ನೆಹರೂ ಮಹಿಳಾ ಸದಸ್ಯೆಯರ ಸಂಖ್ಯೆ ಎಷ್ಟೊಂದು ಬೆಳೆದಿದೆ ಎಂದು ಮೊದಲನೆಯ ಸಂಸತ್ತಿನ ವಾತಾವರಣಕ್ಕೂ, ಇಂದಿನ ಮೂರನೆಯ ಸಂಸತ್ತಿನ ವಾತಾವರಣಕ್ಕೂ ಹೋಲಿಸಿ ನೋಡಿ ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ವಯಸ್ಸಿನಲ್ಲಿ ಚಿಕ್ಕವರಾದರೂ ಬೇರೆ ಬೇರೆ ಜಾತಿ ಜನಾಂಗಗಳಿಂದ ಬಂದವರೂ ಈ ಸಲದ ಸಂಸತ್ತಿನಲ್ಲಿದ್ದಾರೆಂದು ಅವರ ಅಭಿಪ್ರಾಯ ! ಅದರಿಂದಾಗಿ ಆಗಾಗ ಮಹಿಳೆಯರ ಕೊಠಡಿಯಲ್ಲಿ, ಅವರು ಉಪದೇಶದ ಮಾತುಗಳನ್ನೂ ತಮ್ಮ ಅನುಭವವನ್ನೂ ಕುರಿತು ಹೇಳುತ್ತಿರುವುದನ್ನು ಕಾಣಬಹುದು. ಹುಬ್ಬಳ್ಳಿಯಲ್ಲಿಯೇ ತಮ್ಮ ಬಾಲ್ಯದ ಹತ್ತು ವರುಷಗಳನ್ನು ಕಳೆದ ಶ್ರೀಮತಿ ಉಮಾ ನೆಹರೂ, 'ಭಾವೈಕ್ಯವೆಂದರೇನು! ಕರ್ನಾಟಕವೂ ಭಾರತದ ಭಾಗವೇ, ದಿಲ್ಲಿಯೂ ಭಾರತದ ಭಾಗವೇ ; ಒಬ್ಬೊಬ್ಬರಿಂದ ಒಂದೊಂದನ್ನು ಕಲಿತೇ ನಾವು ಜಾಣರಾಗುವದು,' ಎಂದು ವಿಶಾಲ ಹೃದಯದಿಂದ ಹೇಳುತ್ತಾರೆ.

ಉತ್ತರಪ್ರದೇಶದ ಗಂಗಾದೇವಿ, ಮಧ್ಯಪ್ರದೇಶದ ಜಮುನಾದೇವಿ, ಸಹೋದರಾ ರಾಯ ಮತ್ತು ಮಿನಿಮಾತಾ ಪರಿಶಿಷ್ಟ ಜಾತಿ ಹಾಗೂ ವರ್ಗಗಳ ಪ್ರತಿನಿಧಿಗಳು! ತಮ್ಮ ಕಾರ್ಯಕ್ಷೇತ್ರದಲ್ಲಿ ಹೆಚ್ಚಿನ ಆಸ್ಥೆಯನ್ನು ವಹಿಸುತ್ತಾರೆ. ಮಧ್ಯಪ್ರದೇಶದ ಶ್ರೀಮತಿ ಸೀತಾ ಪರಮಾನಂದ ಅವರು ಸ್ವಲ್ಪ ಗಂಭೀರ ಪ್ರಕೃತಿಯವರು, ಆಗಾಗ ಸದಸ್ಯೆಯರ ಕೊಠಡಿಯಲ್ಲಿ ಕುಳಿತು, 'ಮಹಿಳಾ ಸದಸ್ಯೆಯರು ತಮ್ಮ ಹಕ್ಕುಬಾಧ್ಯತೆಗಳ ಬಗ್ಗೆ, ಕಾನೂನುಗಳಲ್ಲಾಗುತ್ತಿರುವ ವ್ಯತ್ಯಾಸಗಳ ಬಗ್ಗೆ ಹೆಚ್ಚು ಯೋಚಿಸುವದಿಲ್ಲ; ತಿಳಿಸಿಕೊಡಲು ಹೋದರೂ ಲಕ್ಷ್ಯ ಪೂರೈಸುವುದಿಲ್ಲ,' ಎಂದು ಗೊಣಗುತ್ತಿರುತ್ತಾರೆ.

ಈ ಸಲದ ಸಾರ್ವತ್ರಿಕ ಚುನಾವಣೆಗಳ ಮತದಾನದ ದೃಷ್ಟಿಯಿಂದಲೇ ನೋಡಲಾಗಿ ಹೆಚ್ಚು ಜನ ಮಹಿಳೆಯರು (ಹಿಂದಿನ ಚುನಾವಣೆಗಳಿಗೆ ಹೋಲಿಸಿ ನೋಡಿದಾಗ) ಮತದಾನ ಮಾಡಿದ್ದು ಕಂಡುಬರುತ್ತದೆ. ಅದರಲ್ಲಿಯೂ ಉಮೇದುವಾರರು ಮಹಿಳೆಯರಾಗಿದ್ದಲ್ಲಿ ಈ ಮಾತು ಇನ್ನೂ ಹೆಚ್ಚಿನ ಅನುಭವಕ್ಕೆ ಬರುತ್ತದೆ. ಮಹಿಳೆಯರು ಸಾಂಘಿಕವಾಗಿ ತಮ್ಮ ಬೇಡಿಕೆಗಳೇನೆಂಬುದನ್ನು ತಿಳಿಯುತ್ತಿದ್ದಾರೆ. ಅವುಗಳನ್ನು ಪೂರೈಸಲು ಕೇಳುತ್ತಿದ್ದಾರೆ. ಆರಿಸಿ ಬಂದವರು ತಮ್ಮ ಮತದಾರರೊಡನೆ ಸಂಪರ್ಕವನ್ನೇ ಇಟ್ಟುಕೊಳ್ಳದೆಯಿದ್ದಾಗ ಆಕ್ಷೇಪವನ್ನೆತ್ತುತ್ತಿದ್ದಾರೆ.

ಸಂಸತ್ತಿನ ಸದಸ್ಯರುಗಳ ಹೊಣೆ ಬಹು ದೊಡ್ಡದಾಗಿದೆ. ಮಹಾಪೂರದಂತೆ ಬರುವ ಕಾನೂನನ್ನು ಸಮಗ್ರವಾಗಿ ಅಧ್ಯಯನ ಮಾಡಿ ದೇಶದ ಬಹುಸಂಖ್ಯಾಕ ಜನತೆಯ ಹಿತದ ದೃಷ್ಟಿಯಿಂದ ಸಮರ್ಥವಾದ ರೀತಿಯಲ್ಲಿ ಸಭೆಯೆದುರು ಇಡುವದು ಸಾಮಾನ್ಯ ಮಾತಲ್ಲ. 'ಮಹಿಳೆಯರೂ ಭಾಗವಹಿಸುತ್ತಿದ್ದಾರೆ," ಎಂಬ ಪ್ರತ್ಯೇಕತೆಯ ಮಾತು ಹೋಗಬೇಕಾಗಿದ್ದರೆ ದೇಶದ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಎಲ್ಲ ಹಂತಗಳಲ್ಲಿಯೂ ಕ್ರಾಂತಿಕಾರೀ ಬದಲಾವಣೆಯಾಗಬೇಕು. ಹೆಚ್ಚಿನ ವಿದ್ಯಾವಂತರು ರಾಜಕೀಯ ರಂಗದಲ್ಲಿಯೂ ಬರಬೇಕು. 'ಯಾವ ಉದ್ಯೋಗವೂ ಬಗೆಹರಿಯದೆಯಿದ್ದಾಗ ರಾಜಕೀಯ ರಂಗಕ್ಕೆ ಮೊರೆ ಹೋಗುತ್ತಾರೆ ಜನ' ಎಂಬ ಮಾತು ಇನ್ನೂ ಎಷ್ಟು ದಿನ ಬಳಕೆಯಲ್ಲಿರಬೇಕು? ದೇಶದ ಜನತೆಯ ಭವಿಷ್ಯವನ್ನೇ ಬರೆಯುವ ಪ್ರಾತಿನಿಧಿಕ ಸಂಸ್ಥೆಗಳಲ್ಲಿ; ವಿಶೇಷತಃ ಶಾಸನ ಸಭೆಗಳಲ್ಲಿ ಸಮರ್ಥರಾದವರು ಬಂದಾಗ ಈ ಮಾತು ತನ್ನಿಂದ ತಾನೇ ಅಳಿಸಿ ಹೋಗುತ್ತದೆ. ಪಂಚಾಯತಿ ಸಂಸ್ಥೆಯಲ್ಲಿ ಒಳ್ಳೆಯ ಸದಸ್ಯ ಸದಸ್ಯೆಯರನ್ನಾರಿಸಿ ಸಂಸ್ಥೆಗೆ ಗೌರವವನ್ನು ತಂದುಕೊಟ್ಟು ಬೇರನ್ನು ಗಟ್ಟಿ ಮಾಡಿದರೆ ಮುಂದಿನ ಎಲ್ಲಸಂಸ್ಥೆಗಳಲ್ಲಿಯೂ ಸ್ವಲ್ಪಮಟ್ಟಿಗೆ ಒಳ್ಳೆಯ ಭವಿಷ್ಯದ ಆಶೆ ಕುದುರೀತು :

ಲೇಖಕರು :
ಪ್ರೊ. ಕೆ. ಟಿ. ಪಾಂಡುರಂಗಿ,
ಕೋಲಾರ



# ಮಹಾಭಾರತದಲ್ಲಿಯ ಪ್ರಣಯದ ಕಥೆಗಳು

ಪ್ರಣಯವು ಮನುಷ್ಯನ ಜೀವನದಲ್ಲಿ ಒಂದು ಅತ್ಯಂತ ಮಹತ್ವದ ಘಟ್ಟವಾಗಿದೆ. ಸಾಹಿತ್ಯದಲ್ಲಂತೂ ಅದು ಪ್ರಮುಖವಾದ ಸ್ಥಾನಪಡೆದಿದೆ. ಹಿಂದಿನ, ಇಂದಿನ ಶ್ರೇಷ್ಠ ಸಾಹಿತ್ಯ ಕೃತಿಗಳಿಗೆ ಇದು ವಸ್ತುವಾಗಿದೆ. ಮಾನವನ ಧೈರ್ಯ, ಸಾಹಸ, ತ್ಯಾಗ, ಪ್ರೀತಿಗಳು ವ್ಯಕ್ತವಾಗುವದು ಈ ಸಂದರ್ಭದಲ್ಲಿಯೇ. ಕೆಲವೊಮ್ಮೆ ಅವನು ಪಶುಸಮಾನವಾಗುವದು ಉಂಟು. ಮಹಾಭಾರತದಲ್ಲಿ ಪ್ರಣಯದ ವಿವಿಧ ಮುಖಗಳನ್ನು ತೋರುವ ಹಲವಾರು ಕತೆಗಳಿದ್ದು ಕೆಲ ಸುಂದರ ಕತೆಗಳನ್ನು ಅವುಗಳ ವೈಶಿಷ್ಟ್ಯಗಳೊಂದಿಗೆ ಇಲ್ಲಿ ನಿರೂಪಿಸಲಾಗಿದೆ.

ಪ್ರಣಯವು ಸಾಹಿತ್ಯಕ್ಕೆ ಚಿರಂತನವಾದ ವಿಷಯವು. ಜಗತ್ತಿನಲ್ಲಿಯ ಶ್ರೇಷ್ಠವಾದ ಸಾಹಿತ್ಯ ಕೃತಿಗಳು ಪ್ರಣಯವನ್ನೇ ಕಾವ್ಯವಸ್ತುವಾಗಿ ಪಡೆದಿವೆ. ಮಾನವರ ಜೀವನಯಾತ್ರೆಯಲ್ಲಿ ಪ್ರಣಯವು ಒಂದು ಮಹತ್ವದ ಘಟ್ಟ, ಪ್ರಣಯದ ಸಂದರ್ಭ ಬಂದಾಗ ಸಾತ್ವಿಕ ಸ್ವಭಾವದ ಮಾನವನು ಸ್ಥೈರ್ಯ, ಔದಾರ್ಯ, ತ್ಯಾಗ, ಪ್ರೀತಿಗಳನ್ನು ತೋರಿಸಿ ತನ್ನ ಮನುಷ್ಯೋತ್ತಮತೆಯನ್ನು ವ್ಯಕ್ತಪಡಿಸುವನು. ರಾಜಸ ಅಥವಾ ತಾಮಸ ಸ್ವಭಾವದ ಮಾನವನು ಚಂಚಲತೆ, ಆಶೆ, ಅಸೂಯೆ, ಕಾಮುಕತೆಗಳನ್ನು ತೋರಿಸಿ ತನ್ನ ಪಶುಸಮಾನತೆಯನ್ನು ವ್ಯಕ್ತಪಡಿಸುವನು. ಹೀಗೆ ಪ್ರಣಯದ ಸಂದರ್ಭದಲ್ಲಿ ಮಾನವಹೃದಯದ ವಿವಿಧ ಮುಖಗಳು ಪ್ರಕಟವಾಗುವವು. ಆದುದರಿಂದ ಪ್ರಣಯವು ಸಾಹಿತ್ಯಕ್ಕೆ ನಿತ್ಯ ನೂತನ ವಿಷಯವಾಗಿದೆ.

ಮಹಾಭಾರತವು ಮುಖ್ಯವಾಗಿ ಕೌರವ-ಪಾಂಡವರ ಸಂಗ್ರಾಮದ ಕಥೆಯಾಗಿದ್ದರೂ ಅನೇಕ ಸುಂದರವಾದ ಉಪಾಖ್ಯಾನಗಳಿಂದ ಕೂಡಿದೆ. ಇವುಗಳಲ್ಲಿ ಕೆಲವು ನೀತಿ ಮತ್ತು ಧರ್ಮಬೋಧಕವಾಗಿದ್ದರೆ ಇನ್ನು ಕೆಲವು ಸುಂದರವಾದ ಕಾವ್ಯ ಗುಣಗಳಿಂದ ಕೂಡಿದ ಪ್ರಣಯದ ಕಥೆಗಳಾಗಿವೆ- ಇವುಗಳಲ್ಲಿ ಕೆಲವನ್ನು ಮುಂದಿನ ಕವಿಗಳು ತಮ್ಮ 'ಕಾವ್ಯವಸ್ತು'ವಾಗಿ ಬಳಸಿಕೊಂಡಿದ್ದಾರೆ. ಮಹಾಕವಿ ಕಾಲಿದಾಸನು ದುಷ್ಯಂತ ಶಕುಂತಲೆಯರ ಪ್ರಣಯದ ಕಥೆಯನ್ನು ಮಹಾಭಾರತದಿಂದಲೇ ಆಯ್ದುಕೊಂಡಿದ್ದಾನೆ. ಆದರೆ ಇನ್ನೂ ಅನೇಕ ಸುಂದರವಾದ ಪ್ರಣಯದ ಕಥೆಗಳು ಈ ವಿಶಾಲವಾದ ಗ್ರಂಥದಲ್ಲಿ ಅಡಗಿಕೊಂಡಿವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ಕೊಡಲಾಗಿದೆ.*

* ಸುಪ್ರಸಿದ್ಧವಾದ ದುಷ್ಯಂತ-ಶಕುಂತಲೆ, ನಲ-ದಮಯಂತಿ, ಅರ್ಜುನ-ಸುಭದ್ರಾ, ಅರ್ಜುನ-ಚಿತ್ರಾಂಗದಾ, ಅರ್ಜುನ-ಉಲೂಪಿ, ಸತ್ಯವಾನ್-ಸಾವಿತ್ರಿಯರ ಕಥೆಗಳು ಬಹುಜನರಿಗೆ ಪರಿಚಿತವಾಗಿರುವದರಿಂದ ಈ ಲೇಖನದಲ್ಲಿ ಅವುಗಳನ್ನು ಕೊಟ್ಟಿಲ್ಲ.

## ರುರು > ಪ್ರಮದ್ವರಾ

ರುರು-ಪ್ರಮದ್ವರೆಯರ ಪ್ರಣಯದ ಕಥೆಯು ಮಹಾಭಾರತದ ಆದಿಪರ್ವದಲ್ಲಿ ಬಂದಿದೆ. ಪ್ರಮದ್ವರೆಯು 'ವಿಶ್ವಾವಸು' ಎಂಬ ಹೆಸರಿನ ಗಂಧರ್ವ ಮತ್ತು 'ಮೇನಕೆ'ಯೆಂಬ ಅಪ್ಸರೆಯ ಮಗಳು. ಮೇನಕೆಯು ಇವಳನ್ನು ಹುಟ್ಟಿದ ಕೂಡಲೇ 'ಸ್ಥೂಲಕೇಶ'ನೆಂಬ ಋಷಿಯ ಆಶ್ರಮದ ಬಳಿಯಲ್ಲಿ ನದೀತೀರದಲ್ಲಿ ಬಿಟ್ಟುಹೋಗಿದ್ದಳು. ಸ್ಥೂಲಕೇಶನು ಇವಳನ್ನು ಸಾಕಿ ದೊಡ್ಡವಳನ್ನಾಗಿ ಮಾಡಿದನು. ರೂಪಯೌವನ ಸಂಪನ್ನಳಾದ ಇವಳು ಒಂದು ದಿನ ತನ್ನ ಆಶ್ರಮದ ಬಳಿ ಸಂಚರಿಸುತ್ತಿರುವಾಗ ಚ್ಯವನನ ಮೊಮ್ಮಗ 'ರುರು' ಎಂಬ ಋಷಿಕುಮಾರನು ಇವಳನ್ನು ನೋಡಿ ಮೋಹಿತನಾದನು. ಆಗ ರುರುವು ತನ್ನ ಬಯಕೆಯನ್ನು ಗೆಳೆಯರ ಮುಖಾಂತರ ತಂದೆ ಪ್ರಮತಿಗೆ ತಿಳಿಸಿದನು. ಪ್ರಮತಿಯು ಸ್ಥೂಲಕೇಶನಿಗೆ ತನ್ನ ಮಗನು ಪ್ರಮದ್ವರೆಯಲ್ಲಿ ಅನುರಕ್ತನಾಗಿದ್ದನ್ನು ತಿಳಿಸಿದನು. ಸ್ಥೂಲಕೇಶನು ಸಂತೋಷದಿಂದ ರುರು-ಪ್ರಮದ್ವರೆಯರ ವಿವಾಹಕ್ಕೆ ಒಪ್ಪಿಕೊಂಡನು. ವಿವಾಹದ ಸಿದ್ಧತೆಗಳು ಆರಂಭವಾದವು. ವಿವಾಹದ ದಿನವೂ ನಿಶ್ಚಿತವಾಯಿತು. ಆದರೆ ವಿವಾಹಕ್ಕೆ ಮೊದಲು ಒಂದು ದಿನ ಪ್ರಮದ್ವರೆಯು ಗೆಳತಿಯರೊಡನೆ ಆಶ್ರಮದಲ್ಲಿ ಆಡುತ್ತಿರುವಾಗ ಅವಳಿಗೆ ಹಾವು ಕಚ್ಚಿತು. ಮೈಯೆಲ್ಲ ವಿಷವೇರಿ ಅವಳು ಮೂರ್ಛಿತಳಾದಳು. ಈ ವಾರ್ತೆಯು ಕ್ಷಣಮಾತ್ರದಲ್ಲಿ ಸಮೀಪದ ಆಶ್ರಮಗಳಿಗೆಲ್ಲ ಹಬ್ಬಿತು. ಪ್ರಮತಿಯೂ ರುರುವೂ ಧಾವಿಸಿಬಂದರು. ಸುತ್ತಲಿನ ಆಶ್ರಮದ ತಪಸ್ವಿಗಳೆಲ್ಲ ಸೇರಿದರು. ನಿಶ್ಚೇಷ್ಟಳಾಗಿ ಮಲಗಿದ ತನ್ನ ಪ್ರೇಯಸಿಯನ್ನು ನೋಡಿ ರುರುವಿಗೆ ದುಃಖವನ್ನು ತಡೆಯುವದಾಗಲಿಲ್ಲ. ಗಟ್ಟಿಯಾಗಿ ಅತ್ತನು. ತನ್ನ ತಪಸ್ಸನ್ನೆಲ್ಲ ಪಣಕ್ಕೆ ಹಚ್ಚಿ ತನ್ನ ಪ್ರೇಯಸಿಯನ್ನು ತಿರುಗಿ ಕೊಡಬೇಕೆಂದು ದೇವರಲ್ಲಿ ಮೊರೆಯಿಟ್ಟನು. ತಾನೂ ಪ್ರಮದ್ವರೆಯೂ ಈ ವರೆಗೆ ಬ್ರಹ್ಮಚರ್ಯವ್ರತಸ್ಥರಾಗಿದ್ದು ಅಂತಃಕರಣಪೂರ್ವಕವಾಗಿ ಪರಸ್ಪರರನ್ನು ಪ್ರೀತಿಸಿದ್ದರಿಂದ

ತಮ್ಮನ್ನು ಹೀಗೆ ಅಗಲಿಸುವ ಹಕ್ಕು ದೇವತೆಗಳಿಗೆ ಇಲ್ಲವೆಂದು ಸಾರಿದನು. ಆಗ ದೇವದೂತನು ಬಂದು 'ಪ್ರಮದ್ವರೆಯ ಆಯುಷ್ಯವು ತೀರಿದೆ. ಮರ್ತ್ಯರಿಗೆ ಆಯುಷ್ಯವು ತೀರಿದ ಮೇಲೆ ಇಲ್ಲಿರುವ ಹಕ್ಕಿಲ್ಲ. ಆದುದರಿಂದ ಅವಳಿಗಾಗಿ ಶೋಕಿಸಬೇಡ.' ಎಂದು ರುರುವಿಗೆ ತಿಳುವಳಿಕೆಯನ್ನು ಹೇಳಲು ಪ್ರಯತ್ನಿಸಿದನು. ಆಗ ರುರುವು ತನ್ನ ಆಯುಷ್ಯದ ಅರ್ಧಭಾಗವನ್ನು ಅವಳಿಗೆ ಕೊಟ್ಟು ಅವಳ ಪ್ರಾಣವನ್ನು ತಿರುಗಿ ಪಡೆದುಕೊಂಡು ತನ್ನ ಪ್ರಣಯನಿಷ್ಠೆಯನ್ನು ವ್ಯಕ್ತಪಡಿಸಿದನು.

ಈ ಕಥೆಯಲ್ಲಿಯ ಪ್ರಮದ್ವರೆಯ ಜನ್ಮ ಮತ್ತು ಪೋಷಣೆಯ ವೃತ್ತಾಂತಗಳೂ ಆಶ್ರಮದ ನಿಸರ್ಗ ಸುಂದರವಾದ ಪರಿಸರದಲ್ಲಿ ರುರು-ಪ್ರಮದ್ವರೆಯರ ಪ್ರಥಮದರ್ಶನ ಪ್ರೇಮಾಂಕುರಗಳು ದುಷ್ಯಂತ ಶಕುಂತಲೆಯರ ಕಥೆಯ ಸನ್ನಿವೇಶಗಳನ್ನೇ ಹೋಲುತ್ತವೆ. ರುರುವು ತನ್ನ ಬಯಕೆಯನ್ನು ಗೆಳೆಯರ ಮುಖಾಂತರ ತಂದೆಗೆ ತಿಳಿಸಿ ಪ್ರಮತಿ ಮತ್ತು ಸ್ಥೂಲಕೇಶರೇ ರುರು-ಪ್ರಮದ್ವರೆಯರ ವಿವಾಹವನ್ನು ನಿಶ್ಚಯಿಸಿದ ಸಂದರ್ಭವನ್ನು ಚತುರನಾದ ಕವಿಯು ಯಥೋಚಿತವಾಗಿ ಮಾರ್ಪಡಿಸಿಕೊಳ್ಳಬಹುದು. ಪ್ರಮದ್ವರೆಯು ಹಾವು ಕಚ್ಚಿ ಮೂರ್ಛಿತಳಾದದ್ದು ಪ್ರಣಯಪರೀಕ್ಷೆಗೆ ವಿರಹವನ್ನು ಕಲ್ಪಿಸಲು ನಿರ್ಮಿಸಿದ ಒಂದು ಘಟನೆ. ಇದರಿಂದ ರುರುವು ಭಾವೋದ್ರಿಕ್ತನಾಗಿ ರೋದಿಸುವದು ಮತ್ತು ರುರು ದೇವದೂತರ ಸಂವಾದಗಳೇ ಈ ಕಥೆಯಲ್ಲಿ ಮುಖ್ಯವಾದ ಅಂಶಗಳು-ಮಹಾಭಾರತದ ಸರಳ-ಸುಂದರವಾದ ಪದ್ಯಗಳಲ್ಲಿಯೇ 'ರುರು'ವಿನ ಭಾವನಾಪರವಶತೆಯು ನಮ್ಮ ಮನಸ್ಸನ್ನು ಕರಗಿಸುವದು. ವಿರಹವ್ಯಥೆಯನು ಚಿತ್ರಿಸಬಲ್ಲ ನಿಪುಣಕವಿಯು ಈ ಸಂದರ್ಭವನ್ನು ಇನ್ನೂ ಹೆಚ್ಚಾಗಿ ಚಿತ್ರಿಸಬಲ್ಲನು. ರುರುವು ತನ್ನ ತಪಸ್ಸು, ಗುರುಭಕ್ತಿ, ದೇವಭಕ್ತಿ, ಸಜ್ಜೀವನಗಳನ್ನೆಲ್ಲ ಪಣಕ್ಕೆ ಹಚ್ಚಿ ಪ್ರೇಯಸಿಯ ಪ್ರಾಣವನ್ನು ತಿರುಗಿ ಬೇಡುತ್ತಾನೆ. ರುರು—ಪ್ರಮದ್ವರೆಯರಂಥ ನಿರ್ಮಲ ಪ್ರೇಮಿಗಳನ್ನು ಅಗಲಿಸುವದು ಅಧರ್ಮ, ನಿಸರ್ಗಕ್ಕೆ ದ್ರೋಹ. ಆದರೆ ಆಯುಷ್ಯ ತೀರಿದ ಮೇಲೆ ಇರುವದೂ ನಿಸರ್ಗಕ್ಕೆ ವಿರುದ್ಧ. ನಿಸರ್ಗ ನಿಯಮಗಳನ್ನು ಮಾನವರೂ ಪಾಲಿಸಬೇಕು, ದೇವತೆಗಳೂ ಪಾಲಿಸಬೇಕು-ಈ ಧರ್ಮಸಂಕಟದಲ್ಲಿ ಇಲ್ಲಿ ನಿರ್ಮಲಪ್ರೇಮದ ವಿಜಯವಾಗಿದೆ. ಆಯುಷ್ಯದ ಕಾಲಮಾನವು ಭೌತಿಕವಾದ ನಿಸರ್ಗನಿಯಮ. ಹೃದಯೈಕ್ಯವು ನೈತಿಕವಾದ ನಿಸರ್ಗನಿಯಮ. ದೇವತೆಗಳು ಮಾನವರ ವ್ಯವಹಾರದಲ್ಲಿ ಕೈಹಾಕುವದೇ ನಿಜವಿದ್ದರೆ ಭೌತಿಕ ನಿಯಮಗಳನ್ನು ನೈತಿಕ ನಿಯಮಗಳಿಗಾಗಿ ಸಂಕುಚಿತಗೊಳಿಸಿ ಅವರಿಗೆ ನೆರವಾಗಬೇಕು. ರುರುವು ತನ್ನ ಅರ್ಧ ಆಯುಷ್ಯವನ್ನು ಪ್ರಮದ್ವರೆಗೆ ಕೊಡಲು ಧರ್ಮರಾಜನು ಒಪ್ಪಿಕೊಂಡದ್ದು ಇಂಥ ಭೌತಿಕ-ನೈತಿಕ ಧರ್ಮಸಂಕಟದಲ್ಲಿ ದೇವ-ಮಾನವ ಸಹಕಾರಕ್ಕೆ ಒಂದು ನಿದರ್ಶನ.

ನಿರ್ಮಲವಾದ ಪ್ರಣಯವು ಎಂಥ ತ್ಯಾಗಕ್ಕೂ ಸಿದ್ಧ ಎಂಬುದೇ ಈ ಪ್ರಣಯಕಥೆಯ ಸಂದೇಶ. ಪ್ರಾಚೀನ ಸಾಹಿತ್ಯದಲ್ಲಿ ಬರುವ ಇಂಥ ಕಥೆಗಳಲ್ಲಿಯ ಭಾವನಾತ್ಮಕ ಮತ್ತು ನೈತಿಕ ಅಂಶಗಳನ್ನು ಮುಖ್ಯವಾಗಿ ಗಮನಿಸಬೇಕು. ಅರ್ಧ ಆಯುಷ್ಯವನ್ನು ಕೊಡುವ 'ಅಮಾನುಷ' ಘಟನೆ ಇಂದಿನ ವಾಸ್ತವಸಾಹಿತ್ಯಕ್ಕೆ ರುಚಿಸದಿರಬಹುದು. ಅದು ಅಂದಿನ ಸಾಹಿತ್ಯದ ಶೈಲಿ. ಶಾಪ ಮತ್ತು ಇಂದ್ರಲೋಕ ಗಮನದಂಥ 'ಅಮಾನುಷ' ಘಟನೆಗಳಿದ್ದರೂ 'ಶಾಕುಂತಲ' ವನ್ನು ಇಂದಿನ ಸಾಹಿತ್ಯವೂ ಮೆಚ್ಚಿಕೊಳ್ಳುವದಿಲ್ಲವೇ? ಕವಿಯ ಸೃಷ್ಟಿಗಿಂತ ಕವಿಯ ದೃಷ್ಟಿಯನ್ನು ಗಮನಿಸುವದು ಮುಖ್ಯ.

## ಯಯಾತಿ > ಶರ್ಮಿಷ್ಠಾ

ನಹುಷರಾಜನ ಮಗ ಯಯಾತಿ ಮತ್ತು ವೃಷಪರ್ವನ ಮಗಳು ಶರ್ಮಿಷ್ಠೆಯರ ಪ್ರಣಯದ ಕಥೆಯೂ ಮಹಾಭಾರತದ ಆದಿಪರ್ವದಲ್ಲಿ ಬಂದಿದೆ. ಇವರೀರ್ವರಿಗೆ ಪ್ರಣಯಸಂಬಂಧವುಂಟಾಗಲು ಅಸುರಗುರು ಶುಕ್ರಾಚಾರ್ಯರ ಮಗಳು ದೇವಯಾನಿಯೇ ಕಾರಣಳು. ದೇವಯಾನಿಯು ಅಹಂಕಾರದ ಸ್ವಭಾವದವಳು ಮತ್ತು ಆಕ್ರಮಣಶೀಲವೃತ್ತಿಯವಳು. ತನ್ನ ತಂದೆಯಲ್ಲಿ ವಿದ್ಯಾಭ್ಯಾಸ ಮಾಡಲು ಬಂದ ಕಚನಿಗೆ ತನ್ನನ್ನು ಮದುವೆಯಾಗಬೇಕೆಂದು ಆಗ್ರಹಪಡಿಸಿದಳು. ಅದಕ್ಕೆ ಅವನು ಒಪ್ಪಿಕೊಳ್ಳದ್ದರಿಂದ 'ನನ್ನ ತಂದೆಯು ಕೊಟ್ಟ ವಿದ್ಯೆಯು ನಿನಗೆ ಸಿದ್ಧಿಸಬೇಡ' ಎಂದು ಶಾಪಕೊಟ್ಟಳು. 'ನನಗೆ ಸಿದ್ಧಿಸದಿದ್ದರೂ ನನ್ನ ಶಿಷ್ಯರಿಗೆ ಅದು ಸಫಲವಾಗುವದು' ಎಂದು ಹೇಳಿ ಕಚನು ಇವಳನ್ನು ತಿರಸ್ಕರಿಸಿದನು. ಒಂದು ದಿನ ಇವಳು ವನದಲ್ಲಿ ವಿಹರಿಸುತ್ತ ಒಂದು ಸರೋವರದಲ್ಲಿ ಸ್ನಾನ ಮಾಡುತ್ತಿದ್ದಾಗ ಅದೇ ಸರೋವರದಲ್ಲಿ ಸ್ನಾನಮಾಡುತ್ತಿದ್ದ ವೃಷಪರ್ವರಾಜನ ಮಗಳಾದ ಶರ್ಮಿಷ್ಠೆಯ ಬಟ್ಟೆಗಳೂ ಇವಳ ಬಟ್ಟೆಗಳೂ ಗಾಳಿಗೆ ಅದಲುಬದಲಾದವು. ಇದರಿಂದ ಇವಳು ಶರ್ಮಿಷ್ಠೆಯೊಡನೆ ಜಗಳವನ್ನಾರಂಭಿಸಿದಳು. ಶರ್ಮಿಷ್ಠೆಯ ದಾಸಿಯರು ಇವಳನ್ನು ಬಾವಿಯೊಂದರಲ್ಲಿ ನೂಕಿ ಹೊರಟು ಹೋದರು. ಅದೇ ಮಾರ್ಗದಿಂದ ಬೇಟೆಗೆ ಹೊರಟ ಯಯಾತಿಯು ಇವಳ ಕೂಗನ್ನು ಕೇಳಿ ಇವಳ ಪ್ರಾರ್ಥನೆಯಂತೆ ಬಲಗೈಯಿಂದ ಇವಳನ್ನು ಮೇಲಕ್ಕೆತ್ತಿದನು. ನನ್ನ ಬಲಗೈಯನ್ನು ಹಿಡಿದದ್ದರಿಂದ ನೀನು ನನ್ನನ್ನು ಮದುವೆಯಾಗಬೇಕೆಂದು ಇವಳು ಆಗ್ರಹ ತೊಟ್ಟಳು. ಯಯಾತಿಯು ಒಪ್ಪದೆ ತಿರುಗಿ ಹೋದನು. ಬಾವಿಯಿಂದೆದ್ದು ಮನೆಗೆ ಮರಳಿದ ಇವಳು ಶರ್ಮಿಷ್ಠೆಯಿಂದ ತನಗಾದ ಅವಮಾನವನ್ನು ತಂದೆ ಶುಕ್ರಾಚಾರ್ಯರಿಗೆ ತಿಳಿಸಿದಳು.

ಅವನು ಕೋಪಾವಿಷ್ಟನಾಗಿ ವೃಷಪರ್ವಲ್ಲಿಗೆ ಹೋಗಿ ತನ್ನ ಮಗಳ ಇಷ್ಟದಂತೆ ಶರ್ಮಿಷ್ಠೆಯು ಸಾವಿರ ಕನ್ನಿಕೆಯರೊಡನೆ ತನ್ನ ಮಗಳ ದಾಸಿಯಾಗಬೇಕೆಂದು ಸಾರಿದನು. ತಂದೆಗೆ ಶಾಪವನ್ನು ತಪ್ಪಿಸಲು ಶರ್ಮಿಷ್ಠೆ ಒಪ್ಪಿಕೊಂಡಳು. ದೇವಯಾನಿಯು ಶರ್ಮಿಷ್ಠೆ ಮತ್ತು ಸಾವಿರ ಕನ್ನಿಕೆಯರನ್ನು ಕಟ್ಟಿಕೊಂಡು ಆಶ್ರಮದ ಸುತ್ತಲಿನ ವನದಲ್ಲೆಲ್ಲ ವಿಹರಿಸುತ್ತಿದ್ದಳು. ಯಯಾತಿಯು ಮತ್ತೊಮ್ಮೆ ಅದೇ ಮಾರ್ಗವಾಗಿ ಬೇಟೆಗೆ ಬಂದನು. ದೇವಯಾನಿಯು ಮತ್ತೆ ಅವನಿಗೆ ಮದುವೆಯಾಗಬೇಕೆಂದು ಆಗ್ರಹಪಡಿಸಿದಳು. ಅವನಿಗೆ ಇಷ್ಟವಿಲ್ಲದಿದ್ದರೂ ಶುಕ್ರಾಚಾರ್ಯರ ಭಯದಿಂದ ಮದುವೆಮಾಡಿಕೊಂಡನು. ದೇವಯಾನಿಯು ಪತಿಗೃಹಕ್ಕೆ ಹೋಗುವಾಗ ಶರ್ಮಿಷ್ಠೆಯನ್ನೂ ಸಾವಿರ ಕನ್ನಿಕೆಯರನ್ನೂ ಕರೆದುಕೊಂಡೇ ಹೋದಳು. ಶರ್ಮಿಷ್ಠೆಯೊಡನೆ ಯಾವ ವಿಧವಾಗಿಯೂ ಏಕಾಂತವನ್ನು ಮಾಡಬಾರದೆಂದು ಶುಕ್ರಾಚಾರ್ಯರು ಯಯಾತಿಗೆ ಎಚ್ಚರಿಕೆಯನ್ನು ಕೊಟ್ಟರು. ಯಯಾತಿಯು ಶರ್ಮಿಷ್ಠೆಯನ್ನು ತನ್ನ ರಾಜಧಾನಿಯ ಹೊರಗಿನ ಉದ್ಯಾನದಲ್ಲಿ ಇಟ್ಟನು.

ಶರ್ಮಿಷ್ಠೆಯು ಒಂದು ದಿನ ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡಳು. ರೂಪಯೌವನಸಂಪನ್ನೆಯಾದ ತನಗೆ ವಿವಾಹ ಮತ್ತು ಪ್ರಣಯಕ್ಕೆ ಅವಕಾಶವಿಲ್ಲದೆ ಹೋಯಿತಲ್ಲ ಎಂದು ವ್ಯಥೆಪಟ್ಟುಕೊಂಡಳು. ತನ್ನ ಯೌವನವು ವ್ಯರ್ಥವಾಗದಂತೆ ದೇವಯಾನಿಯ ಪತಿಯನ್ನೇ ತನ್ನ ಪತಿಯನ್ನಾಗಿ ಮನಸ್ಸಿನಲ್ಲಿ ವರಿಸಿಕೊಂಡಳು. ಕಾಲಕ್ರಮದಲ್ಲಿ ಅವಳು ಋತುಕಾಲದಲ್ಲಿದ್ದಾಗ ಯಾದೃಚ್ಛಿಕವಾಗಿ ಯಯಾತಿಯು ಉದ್ಯಾನಕ್ಕೆ ಬಂದನು. ಆಗ ಶರ್ಮಿಷ್ಠೆಯು ಪ್ರಣಯಯಾಚನೆ ಮಾಡಿದಳು. 'ರಾಜನೇ! ಸೋಮ ಇಂದ್ರ ಯಮ ವರುಣರ ಆಶ್ರಯದಲ್ಲಿದ್ದ ಸ್ತ್ರೀಯರಂತೆ ನಿನ್ನ ಆಶ್ರಯದಲ್ಲಿದ್ದ ಸ್ತ್ರೀಯರೂ ಪರಪುರುಷರ ದರ್ಶನಕ್ಕೆ ಅರ್ಹರಲ್ಲ. ಆದುದರಿಂದ ನನಗೆ ಈ ವರೆಗೆ ಯಾವ ಪುರುಷನ ಸಂಪರ್ಕವೂ ಉಂಟಾಗಿಲ್ಲ. ರೂಪಕುಲಶೀಲಗಳಿಂದ ಕೂಡಿದ ನನ್ನ ಯೌವನವು ವ್ಯರ್ಥವಾಗುತ್ತಿದೆ. ಆದುದರಿಂದ ನನ್ನ ಸಖಿಯ ಪತಿಯಾದ ನಿನ್ನನ್ನು ನನ್ನ ಪತಿಯೆಂದು ಮನದಲ್ಲಿ ವರಿಸಿರುವೆನು. ಶುಕ್ರಾಚಾರ್ಯರಿಗೆ ನನ್ನೊಡನೆ ಏಕಾಂತವಾಗಿರುವದಿಲ್ಲವೆಂದು ನೀನು ಮಾತು ಕೊಟ್ಟಿದ್ದು ನಿಜ. ಆದರೆ ಪ್ರಣಯಯಾಚನೆಯನ್ನು ಪೂರೈಸಲು ಅನೃತವು ದೋಷವಲ್ಲ. ಅನೃತವು ದೋಷವಲ್ಲದ ಐಯ್ದು ವಿಷಯಗಳಲ್ಲಿ ಇದೂ ಒಂದು. ದೇವಯಾನಿಯ ದಾಸಿಯಾದ ನಾನು ಅವಳ ಸ್ವತ್ತು. ಪತ್ನಿಯ ಸ್ವತ್ತು ಪತಿಗೇ ಸೇರಿದ್ದು ಆದುದರಿಂದ ನಾನು ನಿನಗೆ ಸೇರಿದವಳು' ಎಂದು ಅವನ ಮನವೊಲಿಸಿದಳು. ಯಯಾತಿಯು ಶರ್ಮಿಷ್ಠೆಯ ಪ್ರಣಯವನ್ನು ಅಂಗೀಕರಿಸಿದನು. ಕಾಲಕ್ರಮದಲ್ಲಿ ಅವಳಿಗೆ ಒಂದು ಮಗುವಾಯಿತು. ದೇವಯಾನಿಯು ಚಕಿತಳಾಗಿ ನಿನಗೆ ಮಗುವು ಹೇಗಾಯಿತು ಎಂದು ಕೇಳಿದಳು. ಆಗ ಶರ್ಮಿಷ್ಠೆಯು ಓರ್ವ ಋಷಿಯು ಬಂದಿದ್ದನೆಂದೂ ಅವನು ವರವನ್ನು ಕೊಡುತ್ತೇನೆಂದು ಹೇಳಿ ಕಾಮಯಾಚನೆಯನ್ನು ಮಾಡಿದನೆಂದೂ ಈ ಮಗುವು ಆ ಋಷಿಕುಮಾರನೆಂದೂ ಹೇಳಿದಳು. ಯಯಾತಿಗೆ ದೇವಯಾನಿಯ ಉದರದಲ್ಲಿ ಯದು, ತುರ್ವಸು ಮತ್ತು ಶರ್ಮಿಷ್ಠೆಯ ಉದರದಲ್ಲಿ ದ್ರುಹ್ಯು, ಅನು, ಪುರು ಎಂಬ ಐದು ಜನ ಮಕ್ಕಳಾದರು. ಶರ್ಮಿಷ್ಠೆಯ ಮಕ್ಕಳು ದೊಡ್ಡವರಾದಂತೆ ರೂಪ-ಗುಣಗಳಲ್ಲಿ ಯಯಾತಿಯನ್ನು ಹೋಲುತ್ತಿರುವದನ್ನು ನೋಡಿ ದೇವಯಾನಿಗೆ ಸಂದೇಹವುಂಟಾಯಿತು. ಆ ಮಕ್ಕಳನ್ನೇ ಕೇಳಿದಾಗ ಅವು ಯಯಾತಿಯೇ ತಮ್ಮ ತಂದೆಯೆಂದು ಬೆರಳು ಮಾಡಿ ತೋರಿಸಿದವು. ಶರ್ಮಿಷ್ಠೆಯೂ ನಿಜ ಸಂಗತಿಯನ್ನು ಒಪ್ಪಿಕೊಂಡಳು. ಶುಕ್ರಾಚಾರ್ಯರಿಗೆ ಈ ಸಮಾಚಾರ ತಿಳಿದು ಯಯಾತಿಗೆ 'ಮುಪ್ಪು'ಬರಲಿ ಎಂದು ಶಾಪ ಕೊಟ್ಟರು. ಆದರೆ ಯಯಾತಿಗೆ ಇನ್ನೂ ವಿಷಯಾಸಕ್ತಿ ತಪ್ಪಿರಲಿಲ್ಲ. ಆದುದರಿಂದ ತನ್ನ ಮುಪ್ಪನ್ನು ತೆಗೆದುಕೊಳ್ಳ

ಬೇಕೆಂದು ತನ್ನ ಎಲ್ಲ ಮಕ್ಕಳನ್ನೂ ಕೇಳಿದನು. ನಾಲ್ವರೂ ಒಪ್ಪಲಿಲ್ಲ. ಕೊನೆಯ ಮಗ ಪುರುವು ಮಾತ್ರ ಒಪ್ಪಿ ತನ್ನ ಯೌವನವನ್ನು ತಂದೆಗೆ ಕೊಟ್ಟನು. ಬಹುಕಾಲ ವಿಷಯಾಸಕ್ತನಾಗಿದ್ದು ಕೊನೆಗೆ ವೈರಾಗ್ಯವನ್ನು ಪಡೆದು ಯಯಾತಿಯು ಕೊನೆಯ ಮಗ ಪುರುವಿಗೆ ಪಟ್ಟಾಭಿಷೇಕ ಮಾಡಿಸಿ ವನಕ್ಕೆ ಹೋದನು.

ಈ ಪ್ರಣಯ ಕಥೆಯಲ್ಲಿ ಬರುವ ಮುಖ್ಯವಾದ ಮೂರು ಪಾತ್ರಗಳಲ್ಲಿ ದೇವಯಾನಿಯ ಅಹಂಕಾರವೇ ಅವಳ ವ್ಯಸನಕ್ಕೆ ಕಾರಣವಾಯಿತು ಎಂಬುದು ಸ್ಪಷ್ಟವಿದೆ. ಸ್ತ್ರೀಯರಿಗೆ ಸಹಜವಾಗಿ ಇರಬೇಕಾದ ಅನುರಾಗವು ಅವಳಲ್ಲಿ ಎಷ್ಟು ಮಾತ್ರವೂ ಇರಲಿಲ್ಲ. ತಾನು ಅಧಿಕಾರ ನಡೆಸಲು ತನಗೊಬ್ಬ 'ಗಂಡ' ಬೇಕೆಂಬುದೇ ಅವಳ ಪ್ರವೃತ್ತಿಯಿದ್ದಂತೆ ಕಾಣುತ್ತದೆ. ಮೊದಲು ಕಚನನ್ನು ಬಲಾತ್ಕಾರದಿಂದ ಮದುವೆಯಾಗಲು ಪ್ರಯತ್ನಿಸಿದಳು. ನಂತರ ಯಯಾತಿಯನ್ನು ಅವನ ಇಷ್ಟವಿಲ್ಲದೆ ಮದುವೆಯಾದಳು. ತನ್ನ ತಂದೆಗೆ ಆಶ್ರಯದಾತನಾದ ವೃಷಪರ್ವರಾಜನ ಮಗಳು ಶರ್ಮಿಷ್ಠೆಯನ್ನು ಚಿಕ್ಕ ಕಾರಣಕ್ಕಾಗಿ ಆಜನ್ಮ ದಾಸಿಯನ್ನಾಗಿ ಮಾಡಿಕೊಂಡಳು. ಶರ್ಮಿಷ್ಠೆಗೆ ವಿವಾಹ ಮತ್ತು ಪ್ರಣಯದ ಸುಖಗಳಿಲ್ಲದಿದ್ದರೆ ಅವಳ ಗತಿಯೇನಾಗಬಹುದು ಎಂಬುದನ್ನು ಚಿಂತಿಸಲಿಲ್ಲ. ತನ್ನಲ್ಲಿ ಅನುರಾಗವಿಲ್ಲದೆ ಮದುವೆಯಾದ ಯಯಾತಿಗೆ ಶರ್ಮಿಷ್ಠೆಯ ಸಾನ್ನಿಧ್ಯದಿಂದ ಅವಳಲ್ಲಿ ಆಸಕ್ತಿಯುಂಟಾಗಬಹುದು ಎಂಬುದನ್ನೂ ಚಿಂತಿಸಲಿಲ್ಲ. ತನ್ನ ಮದುವೆಯಾದ ಮೇಲೆಯೂ ಅವಳನ್ನು ದಾಸಿಯೆಂದು ತನ್ನ ಜೊತೆಗೆ ಕರೆದುಕೊಂಡು ಹೋದಳು. ದೇವಯಾನಿಯ ದಾಸಿಯಾಗಿ ಹೋಗಿ ಉದ್ಯಾನದಲ್ಲಿ ಬಂಧಿತಳಂತಿದ್ದ ಶರ್ಮಿಷ್ಠೆಗೆ ವಯೋಗುಣಸಹಜವಾದ ಅನುರಾಗವುಂಟಾಗುವದು ಸಹಜ. ದೇವಯಾನಿಯ ಪತಿಯನ್ನೇ ತನ್ನ ಪತಿಯೆಂದು ಮನಸ್ಸಿನಲ್ಲಿ ವರಿಸಿದ್ದರಲ್ಲಿ ಮತ್ತು ಯಯಾತಿಯು ಉದ್ಯಾನಕ್ಕೆ ಬಂದಾಗ ತನ್ನ ಅನುರಾಗವನ್ನು ವ್ಯಕ್ತಪಡಿಸಿದ್ದರಲ್ಲಿ ಅವಳ ವಯೋಧರ್ಮ ವ್ಯಕ್ತವಾಗುತ್ತದೆ. ಅವಳ ಅನುರಾಗವು ಸಹಜವೂ ಏಕನಿಷ್ಠವೂ ಆಗಿದ್ದಿತು. 'ಯಯಾತೇರಿವ ಶರ್ಮಿಷ್ಠಾ ಭರ್ತುಃ ಬಹುಮತಾಭವ' ಎಂದು ಇವಳ ನಿಷ್ಠೆಯನ್ನು ಮಹಾಕವಿ ಕಾಲಿದಾಸನು ಹೊಗಳಿದ್ದಾನೆ. ಇವಳ ಈ ನಿಷ್ಠೆಯೇ ಇವಳ ಮಗ 'ಪುರು'ವಿನಲ್ಲಿ ಮೂಡಿಬಂದಿದೆ. ತಂದೆಯ ಮುಪ್ಪನ್ನು ತಾನು ತೆಗೆದುಕೊಂಡು ತನ್ನ ಯೌವನವನ್ನು ಅವನಿಗೆ ಕೊಟ್ಟಿದ್ದಾನೆ. ಯಯಾತಿಯು ಮಾತ್ರ ವಿಷಯಾಸಕ್ತನಾಗಿದ್ದಾನೆ. ದೇವಯಾನಿಯನ್ನು ಮೊದಲು ಒಲ್ಲೆನೆಂದವನು ಶರ್ಮಿಷ್ಠೆ ಮತ್ತು ಸಾವಿರ ಕನ್ನಿಕೆಯರು ಅವಳ ದಾಸಿಯರಾದ ಮೇಲೆ ಅವಳ ವೈಭವವನ್ನು ನೋಡಿ ಮದುವೆಯಾಗಲು ಒಪ್ಪಿಕೊಂಡಿದ್ದಾನೆ. ಒಪ್ಪಿಗೆ ಕೊಡುವಾಗಲೂ ದೇವಯಾನಿಯ ವಿಷಯದಲ್ಲಿ ಅವನಿಗೆ ಅನುರಾಗವಿಲ್ಲ. ಒಂದು ಕಡೆ ದೇವಯಾನಿಯ ವೈಭವದ ಆಕರ್ಷಣೆ, ಇನ್ನೊಂದು ಕಡೆಗೆ ಶುಕ್ರಾಚಾರ್ಯರ ಭಯ. ಹೀಗೆ ಬಲವಂತಕ್ಕೆ ದೇವಯಾನಿಯ ಕೈ ಹಿಡಿದರೂ ಒಮ್ಮೆ ಅವಳೊಡನೆ ದಾಂಪತ್ಯಜೀವನಕ್ಕೆ ಕಟ್ಟುಬಿದ್ದ ಮೇಲೆ ಶರ್ಮಿಷ್ಠೆಯ ಪ್ರಣಯವನ್ನು ಸ್ವೀಕರಿಸಿದ್ದು ನ್ಯಾಯ್ಯವಲ್ಲ. ಶರ್ಮಿಷ್ಠೆಯೊಡನೆ ಏಕಾಂತವಾಗಿರುವದಿಲ್ಲ ಎಂದು ಶುಕ್ರಾಚಾರ್ಯರಿಗೆ ಮಾತು ಕೊಟ್ಟು ಅದನ್ನು ಮುರಿದದ್ದು, ಮತ್ತು ಶರ್ಮಿಷ್ಠೆಯ ಉದರದಲ್ಲಿ ಮೂರು ಮಕ್ಕಳಾಗುವವರೆಗೆ ದೇವಯಾನಿಗೆ ಆ ವಿಷಯವೇ ತಿಳಿಯದಂತೆ ಮಾಡಿದ್ದು ಎಷ್ಟು ಮಾತ್ರವೂ ಸಮರ್ಥನೀಯವಲ್ಲ. ಶುಕ್ರಾಚಾರ್ಯರ ಶಾಪದಿಂದ ತನಗೆ ಬರಬೇಕಾದ ಮುಪ್ಪನ್ನು ಮಕ್ಕಳಲ್ಲಿ ಯಾರಾದರೂ ತೆಗೆದುಕೊಳ್ಳುವಂತೆ ಕೇಳುವದೂ 'ಪುರು' ವು ಒಪ್ಪಲು ಅವನಿಗೆ ಕೊಡುವದೂ ಯಯಾತಿಯ ವಿಷಯಲಂಪಟತೆಯನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಹೀಗೆ ಈ ಕಥೆಯಲ್ಲಿರುವ ಮೂರು ಪಾತ್ರಗಳು ಮೂರು ವಿಧವಾಗಿವೆ. ದೇವಯಾನಿಯಲ್ಲಿ ಅನುರಾಗಕ್ಕೆ ಪ್ರತಿಕೂಲವಾದ ಧರ್ಮ ಅಹಂಕಾರವಿದೆ. ಆದುದರಿಂದ ಅವಳ ಮತ್ತು ಯಯಾತಿಯ ದಾಂಪತ್ಯಜೀವನವು ವಿರಸವಾಯಿತು. ಯಯಾತಿಗೆ ಅನುರಾಗಕ್ಕಿಂತ ವಿಷಯಾಸಕ್ತಿ ಹೆಚ್ಚಾಗಿದೆ. ಅನುರಾಗಕ್ಕೆ ಅತ್ಯವಶ್ಯವಾದ ಸಂಯಮ ಅವನಲ್ಲಿಲ್ಲ. ಶರ್ಮಿಷ್ಠೆಯಲ್ಲಿ ಮಾತ್ರ ಅನುರಾಗವೂ ನಿಷ್ಠೆಯೂ ಕಂಡುಬರುತ್ತವೆ. ಅವಳ ಪ್ರಣಯದಿಂದ ದೇವಯಾನಿಗೆ ವಿರಸವಾಗಿದ್ದರೆ ಅದಕ್ಕೆ ಅವಳಿಗಿಂತ ದೇವಯಾನಿಯೇ ಹೆಚ್ಚು ಕಾರಣಳಾಗಿದ್ದಾಳೆ.

ರುರು-ಪ್ರಮದ್ವರೆಯರ ಪ್ರಣಯಕಥೆಯಂತೆ ಪ್ರೇಮನಿಷ್ಠೆಯ ಉನ್ನತರೂಪವು ಇಲ್ಲಿ ಕಾಣದಿ

ದ್ದರೂ ಮಾನವ ಹೃದಯದ ನೂರಾರು ಮುಖಗಳನ್ನು ತೋರಿಸುವ ಈ ಕಥೆಯೂ ಉತ್ತಮ ಕಾವ್ಯವಸ್ತುವಾಗಬಲ್ಲದು.

### ಶಂತನು > ಸತ್ಯವತೀ

ಸ್ತ್ರೀ ಪುರುಷರ ಪ್ರಣಯಬಂಧನವು ಪರಸ್ಪರರ ಅನುರಾಗ ಮತ್ತು ನಿಷ್ಠೆಗೆ ಮಾತ್ರ ಪರಿಮಿತವಾಗಿದ್ದರೆ ಅವರಿಗೂ ಶ್ರೇಯಸ್ಸು ಇನ್ನಿತರರಿಗೂ ಶ್ರೇಯಸ್ಸು. ಆದರೆ ಅನೇಕ ಸಂದರ್ಭಗಳಲ್ಲಿ ಇನ್ನಿತರ ಲೋಭಗಳು ಈ ಪ್ರಣಯವ್ಯವಹಾರದಲ್ಲಿ ಸೇರಿಕೊಳ್ಳುತ್ತವೆ. ಪ್ರಣಯಿಗಳಲ್ಲಿ ಓರ್ವನು ದುರ್ಬಲಚಿತ್ತನಾಗಿದ್ದರೆ ಇನ್ನೊಬ್ಬಳು ಪ್ರಣಯದ ವ್ಯಾಪ್ತಿಗೆ ಸಂಬಂಧವಿಲ್ಲದ ಲೋಭವೊಂದನ್ನು ಪೂರೈಸಿಕೊಳ್ಳಲು ಅಪೇಕ್ಷಿಸುತ್ತಾಳೆ. ಅದರ ಪರಿಣಾಮವನ್ನು ಇಡೀ ಕುಟುಂಬವೇ, ಕೆಲವು ಸಲ ಇಡೀ ರಾಷ್ಟ್ರವೇ ಅನುಭವಿಸಬೇಕಾಗುತ್ತದೆ. ಇಂಥ ಒಂದು ಮಹದನರ್ಥಕ್ಕೆ ಕಾರಣವಾದ ಪ್ರಣಯ ಶಂತನು ಸತ್ಯವತಿಯರ ಪ್ರಣಯ.

ಶಂತನು ಪ್ರತೀಪರಾಜನ ಮಗನು. ಇವನಿಗೆ ಪೂರ್ವಜನ್ಮದಲ್ಲಿ 'ಮಹಾಭಿಷ'ನೆಂಬ ಹೆಸರು. ಆಗ ಇವನು ಸ್ವರ್ಗದಲ್ಲಿ ಗಂಗೆಯನ್ನು ಕಂಡು ಮೋಹಿಸಿದ್ದರಿಂದ ಈ ಜನ್ಮದಲ್ಲಿ ಗಂಗೆಯು ಇವನ ಹೆಂಡತಿಯಾಗಿ ಬಂದು ಎಂಟು ಮಕ್ಕಳಿಗೆ ಜನ್ಮವನ್ನು ಕೊಟ್ಟು ಏಳನ್ನು ಹುಟ್ಟಿದ ತಕ್ಷಣ ಕೊಂದು ಎಂಟನೆಯವನಾದ ದೇವವ್ರತ (ಭೀಷ್ಮ)ನನ್ನು ದೊಡ್ಡವನನ್ನಾಗಿ ಮಾಡಿ ಇವನಿಗೆ ಒಪ್ಪಿಸಿ ಇವನನ್ನು ಬಿಟ್ಟು ಹೋಗಿದ್ದಳು. ಈ ವಿಧುರನಾದ ಶಂತನುವು ಒಂದು ದಿನ ಯಮುನಾ ನದಿಯ ತೀರದಲ್ಲಿ ಸಂಚರಿಸುತ್ತಿರುವಾಗ ಓರ್ವ ಮತ್ಸ್ಯಕನ್ನಿಕೆಯನ್ನು ಕಂಡನು. ಇವಳೇ ಸತ್ಯವತಿಯು. ಅವಳ ರೂಪವನ್ನು ಕಂಡು ಮೋಹಗೊಂಡ ಶಂತನುವು ಅವಳಲ್ಲಿ ಪ್ರಣಯಯಾಚನೆಯನ್ನು ಮಾಡಿದನು. ಆದರೆ ಅವಳ ತಂದೆಯು ಅವಳನ್ನು ಧರ್ಮಪತ್ನಿಯಾಗಿ ಸ್ವೀಕರಿಸಿದರೆ ಮತ್ತು ಅವಳ ಮಗನಿಗೆ ಪಟ್ಟಗಟ್ಟಿದರೆ ಮಾತ್ರ ಅವಳನ್ನು ಕೊಡುವದಾಗಿ ಸಾರಿದನು. ಇದು ಶಂತನುವಿಗೆ ಕೂಡಲೇ ಒಪ್ಪಿಗೆಯಾಗಲಿಲ್ಲ. ಈ ವಿಷಯವನ್ನು ಚಿಂತಿಸುತ್ತಲೇ ಮನೆಗೆ ಬಂದು ಭೀಷ್ಮನನ್ನು ಕರೆದು 'ನನಗೆ ನೀನೊಬ್ಬನೇ ಮಗನು. ಒಬ್ಬ ಮಗನಿದ್ದರೆ ಮಗನಿದ್ದಂತಲ್ಲ ನಿನಗೇನಾದರೂ ಅಪಾಯವಾದರೆ ನನ್ನ ವಂಶದ ಗತಿಯೇನು ? ಚಿಂತಿಸು' ಎಂದು ಹೇಳಿದನು. ಭೀಷ್ಮನು ಮಂತ್ರಿಗಳಿಂದ ವಿಷಯವನ್ನು ತಿಳಿದುಕೊಂಡು ಮತ್ಸ್ಯಕನ್ನಿಕೆಯ ತಂದೆಯನ್ನು ಸಂಧಿಸಿದನು. ಭೀಷ್ಮನಂಥ ಬಲಿಷ್ಠನಾದ ದಾಯಾದಿಯಿರುವಾಗ ತನ್ನ ಮಗಳ ಮಗನಿಗೆ ಪಟ್ಟ ದೊರೆಯುವದೆಂತು ಎಂಬ ಅವನ ಚಿಂತೆಯನ್ನು ನಿವಾರಿಸಲು ಭೀಷ್ಮನು ತಾನು ರಾಜ್ಯದ ಉತ್ತರಾಧಿಕಾರವನ್ನು ಬಿಟ್ಟುಬಿಡುವದಾಗಿಯೂ ಆಜನ್ಮ ಬ್ರಹ್ಮಚಾರಿಯಾಗಿರುವದಾಗಿಯೂ ಪ್ರತಿಜ್ಞೆ ಮಾಡಿದನು. ನಂತರ ಮತ್ಸ್ಯಕನ್ಯೆ ಸತ್ಯವತಿಯು ಶಂತನುವನ್ನು ವರಿಸಿದಳು. ಕಾಲಕ್ರಮದಲ್ಲಿ ಶಂತನುವಿಗೆ ಚಿತ್ರಾಂಗದ ಮತ್ತು ವಿಚಿತ್ರವೀರ್ಯನೆಂಬ ಇಬ್ಬರು ಮಕ್ಕಳಾದರು. ಶಂತನು ಮರಣಹೊಂದಿದನು. ಗಂಧರ್ವನೊಡನೆ ಯುದ್ಧಮಾಡಿ ಚಿತ್ರಾಂಗದನೂ ಮಡಿದನು. ಬಳಿಕ ಭೀಷ್ಮನು ಅಂಬಿಕೆ, ಅಂಬಾಲಿಕೆಯರನ್ನು ತಂದು ವಿಚಿತ್ರವೀರ್ಯನಿಗೆ ಮದುವೆ ಮಾಡುವನು. ಯಕ್ಷ್ಮರೋಗವು ಬಂದು ಈ ವಿಚಿತ್ರವೀರ್ಯನೂ ಮಡಿಯುವನು. ನಿಯೋಗ ಪದ್ಧತಿಯಿಂದ ವ್ಯಾಸರಿಂದ ಅಂಬಿಕೆ, ಅಂಬಾಲಿಕೆಯರು ಧೃತರಾಷ್ಟ್ರ ಮತ್ತು ಪಾಂಡುರಾಜನನ್ನು ಪಡೆಯುವರು. ಅವರಲ್ಲಿ ಒಬ್ಬನು ಕುರುಡನಾಗುವನು. ಇನ್ನೊಬ್ಬನು ಅರಣ್ಯದಲ್ಲಿ ಶಾಪದಿಂದ ಮಡಿದುಹೋಗುವನು. ಇವರ ಮಕ್ಕಳಾದ ಕೌರವ-ಪಾಂಡವರು ಪರಸ್ಪರ ಅಸೂಯೆ ದ್ವೇಷಗಳಿಂದ ಯುದ್ಧಮಾಡಿ ರಾಷ್ಟ್ರವನ್ನೇ ಕುರುಕ್ಷೇತ್ರದ ಅಗ್ನಿಕುಂಡದಲ್ಲಿ ಹಾಕುವರು. ಹೀಗೆ ಶಂತನು ಮತ್ತು ಸತ್ಯವತಿಯರ ಪ್ರಣಯದ ವ್ಯವಹಾರವು ಭೀಷ್ಮನಂಥ ಸಮರ್ಥನೂ ಸಚ್ಚರಿತ್ರನೂ ರಾಜ್ಯವನ್ನು ಸ್ವೀಕರಿಸದಂತೆ ವಂಶಾಭಿವೃದ್ಧಿಯನ್ನು ಕೈಕೊಳ್ಳದಂತೆ ಮಾಡಿ ಕುರುವಂಶ ಮತ್ತು ದೇಶವೆಲ್ಲ ಅನೇಕ ಕಷ್ಟಗಳಿಗೆ ಗುರಿಯಾಗುವಂತೆ ಮಾಡಿತು. ಗಂಗೆಯ ಉದರದಲ್ಲಿ ಪಡೆದ ಏಳು ಮಕ್ಕಳನ್ನು ಕಳೆದುಕೊಂಡು ಎಂಟನೆಯವನನ್ನು ಮಾತ್ರ ಉಳಿಸಿಕೊಂಡ ಶಂತನುವಿಗೆ ಮತ್ಸ್ಯಕನ್ನಿಕೆ ಸತ್ಯವತಿಯಲ್ಲಿ ಮೋಹವುಂಟಾದುದು ಮಾನವ ಹೃದಯದ ದೌರ್ಬಲ್ಯವನ್ನು ಎತ್ತಿತೋರಿಸುತ್ತದೆ. ಭೀಷ್ಮನಂಥ ಸಮರ್ಥನೂ ಸಚ್ಚರಿತ್ರನೂ ಆದ ಮಗನಿರುವಾಗ ತನ್ನ ಸ್ತ್ರೀಲಾಲಸೆಯನ್ನು ಮುಚ್ಚಿಕೊಳ್ಳಲು 'ಒಬ್ಬ ಮಗನಿರುವದು ಮಗನಿದ್ದಂತಲ್ಲ' ಎಂದು ಅವನು ಹೇಳುವದು ಬುದ್ಧಿವಂತಿಕೆಯ ದುರುಪಯೋಗವೇ ಸರಿ. ಮತ್ಸ್ಯಕನ್ನಿಕೆ ಸತ್ಯವತಿಯು ಶಂತನುವಿನ ಪ್ರಣಯವನ್ನು ಅಂಗೀಕರಿಸುವದು ಬಿಡುವದು ಅವಳಿಗೆ ಸೇರಿದ ವಿಷಯ. ಆದರೆ ಅದನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡದ್ದು ಎಷ್ಟೂ ಸಮರ್ಥನೀಯವಲ್ಲ. ಅದೂ ಒಂದು ವಿಧವಾದ ಮನೋದೌರ್ಬಲ್ಯವೇ. ಹೀಗೆ ಇವರಿಬ್ಬರ ಮನೋದೌರ್ಬಲ್ಯದಿಂದ ಕುರುವಂಶವೇ ಕಷ್ಟಕ್ಕೀಡಾಯಿತು, ರಾಷ್ಟ್ರವೇ ಕಷ್ಟಕ್ಕೀಡಾಯಿತು. ಇಂಥ ಮನೋದೌರ್ಬಲ್ಯಕ್ಕೆ ನೆರವನ್ನಿತ್ತ ಭೀಷ್ಮನ ತ್ಯಾಗವನ್ನು ನಾವು ಹೊಗಳಿದರೂ ವಿವೇಕವನ್ನು ಹೊಗಳುವದು ಕಷ್ಟವಾಗುತ್ತದೆ. ಶಂತನುವಿಗೆ ಪುತ್ರ ಮತ್ತು ಪ್ರೇಯಸಿಯರ ಆಕರ್ಷಣೆಯ ಮಾನಸಿಕ ಅಂತಃಕಲಹ, ಸತ್ಯವತಿಯ ಲೋಭ ಮತ್ತು ಪಶ್ಚಾತ್ತಾಪ, ಭೀಷ್ಮನ ದುಡುಕಿನ ತ್ಯಾಗಗಳನ್ನು ಈ ಕಥೆಯಿಂದ ಆಯ್ದು ಚನ್ನಾಗಿ ಚಿತ್ರಿಸಬಹುದು.

### ಸಂವರಣ > ತಪತೀ

ಪ್ರಣಯಬಂಧನದಲ್ಲಿ ಪ್ರಥಮ ದರ್ಶನಕ್ಕೆ ತುಂಬ ಮಹತ್ವದ ಸ್ಥಾನವಿದೆ. ಪ್ರಣಯದ ಶ್ರೇಷ್ಠವಾದ ಕಥೆಗಳಲ್ಲೆಲ್ಲ ಪ್ರಣಯಿಗಳು ಪ್ರಥಮ ದರ್ಶನದಲ್ಲಿಯೇ ಬಂಧಿತರಾಗುತ್ತಾರೆ. ಪರಸ್ಪರರ ರೂಪ ಯೌವನಗಳು ಪ್ರಣಯಕ್ಕೆ ಬಾಹ್ಯಕಾರಣವಾಗಿದ್ದರೂ ಇವನ್ನು ಮೀರಿನಿಂತ ಒಂದು ಕಾರಣವು ಪ್ರಥಮದರ್ಶನದಲ್ಲಿ ಮೂಡಿಬರುತ್ತದೆ. ಆ ಕಾರಣಕ್ಕೆ ಕಾರಣವಿಲ್ಲ.

ಸಂವರಣ-ತಪತಿಯರ ಪ್ರೇಮದ ಕಥೆಯು ಇಂಥ ಒಂದು ಪ್ರಥಮದರ್ಶನದಲ್ಲುಂಟಾದ ಪ್ರೇಮದ ಕಥೆಯು. ಸಂವರಣನು 'ಋಕ್ಷ'ನೆಂಬ ರಾಜನ ಮಗನು. ತಪತಿಯು ಸೂರ್ಯನ ಮಗಳು. ಸಂವರಣನು ಒಂದು ದಿನ ಬೇಟೆಗಾಗಿ ಅಡವಿಯಲ್ಲಿ ಸಂಚರಿಸುತ್ತಿದ್ದಾಗ ಅಸದೃಶ ಸೌಂದರ್ಯದ ಓರ್ವ ಕನ್ನಿಕೆಯನ್ನು— ಸೂರ್ಯನ ಪ್ರಭೆಯೇ ರೂಪ ತಾಳಿ ಬಂದಂತಿದ್ದವಳನ್ನು— ನೋಡಿದನು. ದೇವ, ಯಕ್ಷ, ಗಂಧರ್ವ, ಮಾನುಷ. ಹೀಗೆ ಯಾರಲ್ಲಿಯೂ ಕಾಣದ ಸೌಂದರ್ಯದ ಮೂರ್ತಿ ಆ ಕನ್ನಿಕೆಯಾಗಿದ್ದಳು. ಪ್ರಥಮದರ್ಶನದಲ್ಲಿಯೇ ಸಂವರಣನಿಗೆ ಅವಳಲ್ಲಿ ಆಳವಾದ ಅನುರಾಗವುಂಟಾಯಿತು. 'ನೀನು ಯಾರು ? ಈ ನಿರ್ಜನ ಅರಣ್ಯದಲ್ಲಿ ಏಕೆ ಸಂಚರಿಸುವಿ ? ನಿನ್ನಂಥ ಸುಂದರಿಯನ್ನು ನಾನು ಮೂರು ಲೋಕಗಳಲ್ಲಿಯೇ ಕಂಡಿಲ್ಲ' ಎಂದು ಸಂವರಣನು ಅವಳನ್ನು ಮಾತನಾಡಿಸಿದನು. ಆದರೆ ಅವಳು ಲಜ್ಜಾವನತವದನಳಾಗಿ ನಿಂತುಬಿಟ್ಟಳು. ಸಂವರಣನೇ ಮುಂದುವರೆದು ತನ್ನ ಅನುರಾಗವನ್ನು ವ್ಯಕ್ತಪಡಿಸಿದನು. ಅವಳು ಮಿಂಚಿನಂತೆ, ಓಡಿಹೋದಳು. ಸಂವರಣನು ತುಂಬ ವ್ಯಥೆ ಪಟ್ಟುಕೊಂಡು ಅಲ್ಲಿಯೇ ಕುಳಿತುಬಿಟ್ಟನು. ಅವನ ವ್ಯಥೆಯನ್ನು ನೋಡಲಾರದೆ ತಪತಿಯು ಮತ್ತೆ ಬಂದು 'ನಾನು ಸೂರ್ಯನ ಮಗಳು. ನನ್ನ ತಂದೆಯನ್ನು ಕೇಳು' ಎಂದು ಸೂಚಿಸಿ ಹೊರಟುಹೋದಳು. ಗಾಂಧರ್ವವಿವಾಹಕ್ಕೆ ಸಮ್ಮತಿಸಲಿಲ್ಲ. ಆದರೆ ಸಂವರಣನು ಆ ಸ್ಥಳವನ್ನೇ ಬಿಟ್ಟು ಕದಲಲಿಲ್ಲ. ಅವನನ್ನು ಹುಡುಕುತ್ತ ಬಂದ ಅವನ ಮಂತ್ರಿಯು ವಿಷಯವನ್ನು ತಿಳಿದು ಪುರೋಹಿತನನ್ನು ಸೂರ್ಯನಲ್ಲಿಗೆ ಕಳಿಸಿದನು. ಸೂರ್ಯನು ತಪತಿಯನ್ನು ಸಂವರಣನಿಗೆ ಕೊಟ್ಟು ಮದುವೆ ಮಾಡಿದನು. ಸಂವರಣನು ತಪತಿಯನ್ನು ಕಂಡ ಸ್ಥಳದಲ್ಲಿಯೇ ಅವಳೊಡನೆ ಇರಹತ್ತಿದನು. ಇವನು ಇಲ್ಲಿದ್ದ ಹನ್ನೆರಡು ವರುಷಗಳ ಕಾಲ ಇವನ ದೇಶದಲ್ಲಿ ಅನಾವೃಷ್ಟಿಯಾಯಿತು. ಪ್ರಜೆಗಳೆಲ್ಲ ಬಂದು ನಗರಕ್ಕೆ ಬರಲು ಮೊರೆಹೊಕ್ಕರು. ಸಂವರಣನೂ ತಪತಿಯೂ ರಾಜಧಾನಿಗೆ ಮರಳಿದರು.

ಈ ಪ್ರಣಯಕಥೆಯು ಬಹುಶಃ ಬಿಸಿಲು ಮತ್ತು ನೆರಳುಗಳ ಪ್ರಣಯದ ಕಥೆಯಾಗಿದೆ. ತಪತಿಯು ಬಿಸಿಲು, ಸಂವರಣನು ನೆರಳು. ನೆರಳಿಗೆ ಬಿಸಲನ್ನು ಕಂಡರೆ ಅನುರಾಗ. ಅಡವಿಯಲ್ಲಿ ಈ ಬಿಸಿಲು ನೆರಳುಗಳ ಸಮಾಗಮ ನಿಂತು ನೋಡಲು ಬಲು ಸೊಗಸು. ನೆರಳು ಬಿಸಿಲನ್ನು ತನ್ನ ಸ್ಥಳ ಬಿಟ್ಟು ಹೋಗದೆ ಪಡೆಯಬೇಕು. ಸೂರ್ಯನನ್ನು ಮರೆಮಾಚಿ ಬಿಸಿಲು ನೆರಳುಗಳ ಗಾಂಧರ್ವವಿವಾಹ ಆಗದು. ನೆರಳು ಸೂರ್ಯನಿಂದಲೇ ಬಿಸಿಲನ್ನು ಪಡೆಯಬೇಕು. ವನಾಂತರಗಳಲ್ಲಿ ಆಶ್ರಮವಾಸಿಗಳ ಕಣ್ಣಿಗೆ ಬೀಳುವ ಈ ಬಿಸಿಲು-ನೆರಳುಗಳ ಅನುರಾಗದ ದೃಶ್ಯ ಈ ಪ್ರಣಯಕಥೆಯಾಗಿ ಮೂಡಿ ಬಂದಿದೆ.

### ಋಷ್ಯಶೃಂಗ > ಶಾಂತಾ

ಈ ಕಥೆಯನ್ನು ಋಷ್ಯಶೃಂಗ ಮತ್ತು ಶಾಂತೆಯರ ಪ್ರಣಯದ ಕಥೆಯೆನ್ನುವದಕ್ಕಿಂತ ಋಷ್ಯಶೃಂಗನ ಪ್ರಣಯದ ಕಥೆಯೆಂದು ಕರೆಯುವುದೇ ಹೆಚ್ಚು ಸೂಕ್ತವಾಗುವದು. ಇಲ್ಲಿ 'ಶಾಂತಾ' ಎಂಬ ವ್ಯಕ್ತಿಗೆ ಮಹತ್ವವಿಲ್ಲ. ಪುರುಷನನ್ನು ಸ್ತ್ರೀಯ ಸಂಪರ್ಕದಿಂದ ದೂರವಾಗಿಟ್ಟು ಮನುಷ್ಯ ಸಹಜವಾದ ಸ್ತ್ರೀ ಪುರುಷರ ಅನುರಾಗ ಸಂಬಂಧವನ್ನು ಹತ್ತಿಕ್ಕಬಹುದೇ ಎಂಬುದೇ ಈ ಕಥೆಯಲ್ಲಿ

ಉದ್ಭವಿಸಿದ ಪ್ರಶ್ನೆ. ಈ ಕಥೆಯು ಮಹಾಭಾರತದ ವನಪರ್ವದಲ್ಲಿ ಬಂದಿದೆ.

ವಿಭಾಂಡಕನೆಂಬ ಋಷಿಗೆ ಋಷ್ಯಶೃಂಗನೆಂಬ ಮಗನಿದ್ದನು. ಇವನು ತಂದೆಯನ್ನು ಬಿಟ್ಟು ಬೇರೆ ಯಾರನ್ನೂ ನೋಡದಂತೆ ಮನುಷ್ಯ ಸಂಪರ್ಕವಿಲ್ಲದೆಯೆ ಇವನನ್ನು ವಿಭಾಂಡಕನು ಬೆಳೆಸಿದ್ದನು. ವಿಶೇಷತಃ ಸ್ತ್ರೀದರ್ಶನವಿಲ್ಲದಂತೆ ಜಾಗರೂಕತೆ ವಹಿಸಿದ್ದನು. ವಂಗದೇಶದ ರಾಜನಾದ ಲೋಮಪಾದನ ರಾಜ್ಯದಲ್ಲಿ ಪುರೋಹಿತನ ಪ್ರಮಾದದಿಂದ ಅನಾವೃಷ್ಟಿಯಾಯಿತು. ಋಷ್ಯಶೃಂಗನನ್ನು ಬರಮಾಡಿಕೊಂಡರೆ ಮಳೆಯಾಗುವದೆಂದು ಬ್ರಾಹ್ಮಣರು ರಾಜನಿಗೆ ಉಪದೇಶಿಸಿದರು. ಆಗ ಲೋಮಪಾದನು ಮಂತ್ರಿಗಳೊಡನೆ ಸಮಾಲೋಚಿಸಿ ಓರ್ವ ವೇಶ್ಯೆಯನ್ನು ಋಷ್ಯಶೃಂಗನನ್ನು ಮೋಹಗೊಳಿಸಿ ರಾಜ್ಯಕ್ಕೆ ಕರೆತರಲು ಕಳಿಸಿಕೊಟ್ಟನು. ಅವಳು ಒಂದು ದೋಣಿಯುಲ್ಲಿ ಒಂದು ಕೃತ್ರಿಮ ಆಶ್ರಮವನ್ನು ಕಟ್ಟಿ ಅದರ ಸುತ್ತಲೂ ಗಿಡಬಳ್ಳಿಗಳನ್ನು ರಚಿಸಿ ವನದಲ್ಲಿಯ ಆಶ್ರಮದಂತೆಯೇ ಕಾಣುವಂತೆ ಮಾಡಿ ಋಷ್ಯಶೃಂಗನ ಆಶ್ರಮದಿಂದ ತುಸು ದೂರದಲ್ಲಿ ನೆಲೆಸಿದಳು. ಬಳಿಕ ವಿಭಾಂಡಕನು ಹೊರಗೆ ಹೋದ ಸಮಯವನ್ನು ಸಾಧಿಸಿ ಋಷ್ಯಶೃಂಗನ ಆಶ್ರಮಕ್ಕೆ ಹೋಗಿ ಕುಶಲಪ್ರಶ್ನೆಯನ್ನು ಮಾಡಿದಳು. ಋಷ್ಯಶೃಂಗನು ಇವಳೂ ತನ್ನಂತೆ ಓರ್ವ ತಪಸ್ವಿಯೆಂದು ಭಾವಿಸಿ ಅವಳಿಗೆ ಅರ್ಘ್ಯ ಪಾದ್ಯಗಳನ್ನು ಕೊಟ್ಟು ಉಪಾಹಾರಕ್ಕಾಗಿ ಹಣ್ಣು-ಹಂಪಲಗಳನ್ನು ಕೊಟ್ಟನು. ಅವಳು ಅವನ್ನೆಲ್ಲ ತಾನು ತಿನ್ನುವುದಿಲ್ಲವೆಂದು ಹೇಳಿ ನಗರದಿಂದ ತಂದ ರುಚಿಕರವಾದ ಪದಾರ್ಥಗಳನ್ನೂ ಗಂಧಮಾಲ್ಯ ರೇಶಿಮೆಯ ವಸ್ತ್ರ ಮೊದಲಾದವುಗಳನ್ನೂ ಕೊಟ್ಟಳು. ಅವನೊಡನೆ ಕೆಲಹೊತ್ತು ಚಂಡಿನಾಟವಾಡಿ ಅವನನ್ನು ಮರುಳುಗೊಳಿಸಿದಳು. ಹೀಗೆ ಅವನಲ್ಲಿ ಸ್ತ್ರೀ ಲಾಲಸೆಯನ್ನು ಹುಟ್ಟಿಸಿ ತಪಸ್ಸಿಗೆ ಹೊತ್ತಾಯಿತು ಇನ್ನೊಮ್ಮೆ ಬರುವೆನು ಎಂದು ಹೇಳಿ ಹೊರಟು ಹೋದಳು. ನಂತರ ತುಸುಹೊತ್ತಿನಲ್ಲಿ ವಿಭಾಂಡಕನು ಆಶ್ರಮಕ್ಕೆ ಮರಳಿಬಂದನು. ಮಗನು ನಿತ್ಯದಂತೆ ಆಶ್ರಮದ ಕೆಲಸಕಾರ್ಯಗಳನ್ನು ಪೂರೈಸದೆ ಶೂನ್ಯಮನಸ್ಕನಾಗಿರುವದನ್ನು ನೋಡಿ ಕಾರಣವನ್ನು ಕೇಳಿದನು. ಆಗ ಋಷ್ಯಶೃಂಗನು 'ಕೋಮಲವಾದ ಜಟೆಗಳಿರುವ, ಬಂಗಾರದ ಮೈಬಣ್ಣದ, ಅಷ್ಟೊಂದು ಎತ್ತರವೂ ಅಲ್ಲದ ಹ್ರಸ್ವನೂ ಅಲ್ಲದ, ಸುಂದರವಾದ ಕಣ್ಣುಗಳಿರುವ, ಕಂಠದ ಕೆಳಗೆ ಎರಡು ಫಲಗಳಂತಿರುವ ಪಿಂಡಗಳನ್ನು ಧರಿಸಿದ, ವಿಶಾಲವಾದ ಕಟಿ ಮತ್ತು ಸೂಕ್ಷ್ಮವಾದ ಮಧ್ಯವಿರುವ ಓರ್ವ ತಪಸ್ವಿಯು ಬಂದಿದ್ದನು. ಅವನ ಪಾದ ಮತ್ತು ಮುಂಗೈಗಳಲ್ಲಿ ಮಧುರವಾದ ಧ್ವನಿ ಮಾಡುವ ಆಭರಣಗಳಿದ್ದವು. ಅವನ ಬಟ್ಟೆಗಳು ಮೃದುವಾಗಿಯೂ ಮನೋಹರವಾಗಿಯೂ ಇದ್ದವು, ಅವನ ಧ್ವನಿಯು ಕೋಕಿಲದಂತೆ ಮಧುರವಾಗಿತ್ತು. ಅವನು ಒಂದು ವಿಚಿತ್ರವಾದ ಹಣ್ಣನ್ನು ತಂದಿದ್ದನು. ಅದನ್ನು ನೆಲದ ಮೇಲೆ ಪುಟಿಸುತ್ತ ತಾನೂ ಕುಣಿಯುತ್ತಿದ್ದನು. ಆಗಾಗ ತನ್ನ ಮುಖವನ್ನು ನನ್ನ ಮುಖದ ಹತ್ತಿರ ತಂದು ಶಬ್ದ ಮಾಡುತ್ತಿದ್ದನು. ಅವನನ್ನು ನೋಡಿ ನನಗೆ ಬಹಳ ಹರ್ಷವಾಯಿತು. ನಮ್ಮ ಆಶ್ರಮದಲ್ಲಿರುವ ಹಣ್ಣು-ಹಂಪಲಗಳಿಗಿಂತ ರುಚಿಕರವಾದ ಪದಾರ್ಥಗಳನ್ನು ಅವನು ನನಗೆ ತಿನ್ನಲು ಕೊಟ್ಟನು. ಅವನು ಹೊರಟು ಹೋದಾಗಿನಿಂದ ನನಗೆ ತುಂಬ ವ್ಯಥೆಯಾಗಿದೆ' ಎಂದು ಹೇಳಿದನು. ಇದನ್ನು ಕೇಳಿ ವಿಭಾಂಡಕನಿಗೆ ಬಹಳ ಖೇದವಾಯಿತು. 'ಮಗು ಇಂಥವರು ರಾಕ್ಷಸರು, ತಪಸ್ವಿಗಳಲ್ಲ. ನಿನ್ನ ತಪಸ್ಸನ್ನು ಕೆಡಿಸಲು ಬರುವರು. ಅವರನ್ನು ನೋಡಬಾರದು' ಎಂದು ಹೇಳಿ ತನ್ನ ಮಗನನ್ನು ಹಾಳುಮಾಡಲು ಬಂದ ಸ್ತ್ರೀಯನ್ನು ಹುಡುಕಲು ವನದಲ್ಲೆಲ್ಲ ಸಂಚರಿಸತೊಡಗಿದನು. ಆದರೆ ಆ ವೇಶ್ಯೆಯು ವಿಭಾಂಡಕನು ಹೊರಗೆ ಹೋದ ಸಮಯವನ್ನು ಸಾಧಿಸಿ ಇನ್ನೊಮ್ಮೆ ಋಷ್ಯಶೃಂಗನ ಆಶ್ರಮಕ್ಕೆ ಹೋದಳು. ಋಷ್ಯಶೃಂಗನು ಆತುರದಿಂದ ಅವಳನ್ನು ಬರಮಾಡಿಕೊಂಡು ನನ್ನ ತಂದೆ ಬರುವದರೊಳಗಾಗಿ ನಿನ್ನ ಆಶ್ರಮಕ್ಕೆ ಹೋಗೋಣ ಎಂದು ಹೇಳಿದನು. ಅವಳು ಅವನನ್ನು ದೋಣಿಯಲ್ಲಿ ರಚಿಸಿದ ಆಶ್ರಮದಲ್ಲಿ ಕುಳ್ಳಿರಿಸಿಕೊಂಡು ಉಪಾಯದಿಂದ ವಂಗದೇಶಕ್ಕೆ ತಂದಳು. ಲೋಮಪಾದನು ಅವನನ್ನು ಸತ್ಕರಿಸಿ ತನ್ನ ಸಾಕುಮಗಳು 'ಶಾಂತಾ'ಳನ್ನು ಕೊಟ್ಟು ಮದುವೆ ಮಾಡಿದನು. ದೇಶದಲ್ಲೆಲ್ಲ ಮಳೆಯಾಯಿತು. ಇತ್ತ ಆಶ್ರಮದಲ್ಲಿ ಮಗನಿಲ್ಲದ್ದನು ನೋಡಿ ವಿಭಾಂಡಕನಿಗೆ ಬಹಳ ಕೋಪ ಬಂದಿತು. ಮಗನನ್ನು ಹುಡುಕುತ್ತ ಅವನು ವಂಗದೇಶವನ್ನು ತಲುಪಿದನು. ದಾರಿಯಲ್ಲಿ ಎಲ್ಲರೂ ಅವನನ್ನು ಸತ್ಕರಿಸುವವರೇ. ಅವನ ಕೋಪ ಎಷ್ಟೋಮಟ್ಟಿಗೆ ಇಳಿಯಿತು.

ಲೋಮಪಾದನ ಮನೆಗೆ ಬಂದು ಸೊಸೆ 'ಶಾಂತಾ'ಳ ಮುಖವನ್ನು ನೋಡಿದಾಗ ಅವನ ಕೋಪ ಸಂಪೂರ್ಣವಾಗಿ ಇಳಿಯಿತು. ಮಗ-ಸೊಸೆಯರನ್ನು ಆಶೀರ್ವದಿಸಿ ಒಂದು ಮಗುವಾಗುವ ವರೆಗೆ ಇಲ್ಲಿದ್ದು ನಂತರ ಆಶ್ರಮಕ್ಕೆ ಬಾ ಎಂದು ಮಗನಿಗೆ ಹೇಳಿ ವನಕ್ಕೆ ಮರಳಿದನು.

ಇಲ್ಲಿ ಋಷ್ಯಶೃಂಗ ಮತ್ತು ಶಾಂತಾ ಎಂಬ ವ್ಯಕ್ತಿಗಳ ವಿವಾಹ ಮುಖ್ಯವಲ್ಲ. ವೇಶ್ಯೆಯ ಮೇಲೆ ಋಷ್ಯಶೃಂಗನಿಗೆ ವೈಯಕ್ತಿಕವಾಗಿ ಅನುರಾಗವೂ ಉಂಟಾಗಿರಲಿಲ್ಲ. ಮನುಷ್ಯಮಾತ್ರ ಸಹಜವಾದ ಸ್ತ್ರೀ-ಪುರುಷರ ಅನುರಾಗಕ್ಕೆ ಇದೊಂದು ಉತ್ತಮ ನಿದರ್ಶನ. ಸ್ತ್ರೀ ಸಂಪರ್ಕವನ್ನೇ ಕಡಿದುಮಾಡುವ ತಪಸ್ಸಿಗೆ ಅಥವಾ ವೈರಾಗ್ಯಕ್ಕೆ ಬೆಲೆ ಇಲ್ಲ. ಅದು ನೈಸರ್ಗಿಕವಲ್ಲ. ಸ್ತ್ರೀದರ್ಶನವಾದ ತಕ್ಷಣ ಇಂಥ ಬಲವಂತದ ವೈರಾಗ್ಯ ಕಳಚಿ ಹೋಗುವದು. ಅಲ್ಲದೆ ವೇಶ್ಯೆಯರಂಥ ವಂಚಕರ ಬಲೆಯಲ್ಲಿಯೂ ಬೀಳಬಹುದು. ಆದುದರಿಂದ ನೈಸರ್ಗಿಕವಾದ ಸ್ತ್ರೀ-ಪುರುಷರ ಅನುರಾಗವನ್ನು ಬಲಾತ್ಕಾರದಿಂದ ತಪ್ಪಿಸಬಾರದು. ವೈರಾಗ್ಯವು ನಿಸರ್ಗಕ್ಕೆ ವಿರುದ್ಧವಲ್ಲದಂತೆ ಬೆಳೆದು ಬರಬೇಕು. 'ವಾ ರ್ಧ ಕೇ ಮುನಿವೃತ್ತೀನಾಮ್' ಎಂಬ ಕವಿವಚನದ ಸುವರ್ಣದ ದಾರಿಯನ್ನು ಅನುಸರಿಸಬೇಕು ಎಂಬುದೇ ಈ ಕಥೆಯ ಸಂದೇಶ.

### ಚ್ಯವನ > ಸುಕನ್ಯಾ

ಚ್ಯವನ ಸುಕನ್ಯೆಯರ ಪ್ರಣಯದ ಕಥೆಯಿಂದ ಪ್ರಣಯವು ಉಂಟಾದ ಸಂದರ್ಭವು ಕಹಿಯಾಗಿದ್ದರೂ ಒಮ್ಮೆ ಪ್ರಣಯವನ್ನೊಪ್ಪಿಕೊಂಡ ಸ್ತ್ರೀಯು ಸಾಮಾನ್ಯವಾಗಿ ನಿಷ್ಠಳಾಗಿರುತ್ತಾಳೆ ಮತ್ತು ನಿಷ್ಠಳಾದ ಸ್ತ್ರೀಯನ್ನು ಎಂಥ ಆಮಿಷವೂ ಕದಲಿಸಲಾರದು ಎಂಬುದು ತಿಳಿದುಬರುತ್ತದೆ. ಪರಸ್ಪರರ ತಾರುಣ್ಯ ಮತ್ತು ಸೌಂದರ್ಯಗಳು ಪ್ರಣಯಕ್ಕೆ ಕೇವಲ ಬಾಹ್ಯಪರಿಸರಗಳು. ಪ್ರಣಯದಿಂದ ಇವುಗಳಿಗೆ ಬೆಲೆ ಇದೆಯೇ ಹೊರತು ಇವುಗಳಿಂದ ಪ್ರಣಯದ ಬೆಲೆ ಕಟ್ಟಲಾಗದು. ತಾರುಣ್ಯ ಮತ್ತು ಸೌಂದರ್ಯಗಳೇ ಪ್ರಣಯಕ್ಕೆ ಮೂಲಾಧಾರ ಎಂದು ಭಾವಿಸುವದು ಮೋಹ ಮತ್ತು ಪ್ರಣಯಗಳಲ್ಲಿಯ ವ್ಯತ್ಯಾಸವನ್ನು ತಿಳಿಯದೆ ಹೇಳುವ ಮಾತು ಎಂಬಂಶವೂ ಈ ಕಥೆಯಿಂದ ತಿಳಿದುಬರುವದು.

ಭೃಗುಪುತ್ರ ಚ್ಯವನನು ನರ್ಮದಾತೀರದಲ್ಲಿಯ ವೈದೂರ್ಯಪರ್ವತದಲ್ಲಿ ಅನೇಕ ವರುಷಗಳಿಂದ ತಪಸ್ಸು ಮಾಡುತ್ತಿದ್ದನು. ಅವನ ಮೈಮೇಲೆ ಹುತ್ತು ಬೆಳೆದುಹೋಗಿದ್ದಿತು. ಒಂದು ದಿನ ಶರ್ಯಾತಿ ಎಂಬ ರಾಜನು ಅಲ್ಲಿಗೆ ವಿಹಾರಕ್ಕೆಂದು ಬಂದನು. ಸುಕನ್ಯೆಯೆಂಬ ಶರ್ಯಾತಿಯ ಮಗಳೂ ತಂದೆಯ ಜತೆಗೆ ಬಂದಳು. ಚ್ಯವನನು ತಪಸ್ಸಿಗೆ ಕುಳಿತ ಹುತ್ತಿನ ಬಳಿಯಲ್ಲಿ ಅವಳು ಸಂಚರಿಸುತ್ತಿದ್ದಾಗ ಅವಳನ್ನು ನೋಡಿ ಚ್ಯವನನಿಗೆ ಅವಳಲ್ಲಿ ಅನುರಾಗವುಂಟಾಯಿತು. ಹುತ್ತಿನೊಳಗಿಂದಲೇ ಅವಳನ್ನು ಮಾತನಾಡಿಸಿದನು. ಅವಳಿಗದು ಕೇಳಿಸಲಿಲ್ಲ. ಆದರೆ ಹುತ್ತಿನೊಳಗೆ ಎರಡು ಹೊಳೆಯುವ ಪದಾರ್ಥಗಳನ್ನು ನೋಡಿ ಅವೇನೆಂದು ತಿಳಿದುಕೊಳ್ಳಲು ಕುತೂಹಲವುಂಟಾಯಿತು. ಮುಳ್ಳನ್ನು ಚುಚ್ಚಿ ನೋಡಿದಳು. ಅವು ಚ್ಯವನನ ಕಣ್ಣುಗಳಾಗಿದ್ದು ಅದರಿಂದ ರಕ್ತವು ಸುರಿಯಿತು. ತನ್ನ ಮಗಳಿಂದಾದ ಈ ಅಪಚಾರವನ್ನು ತಿಳಿದು ಶರ್ಯಾತಿಯು ಚ್ಯವನನ ಕ್ಷಮೆ ಬೇಡಿದನು. ಅದಕ್ಕೆ ಚ್ಯವನನು ನಿನ್ನ ಮಗಳನ್ನು ಕೊಟ್ಟರೆ ಕ್ಷಮಿಸುವೆನು ಎಂದನು. ಚ್ಯವನ-ಸುಕನ್ಯೆಯರ ವಿವಾಹವಾಯಿತು. ಅವರು ಅಲ್ಲಿಯೇ ಆಶ್ರಮ ಕಟ್ಟಿಕೊಂಡು ಸಂಸಾರ ಹೂಡಿದರು. ಕೆಲವು ದಿನಗಳಾದ ಮೇಲೆ ಅಶ್ವಿನೀಕುಮಾರರು ಅಲ್ಲಿಗೆ ಬಂದರು. ಸುಂದರಳೂ ಯುವತಿಯೂ ಆದ ಸುಕನ್ಯೆಯು ವೃದ್ಧನ ಆಶ್ರಮದಲ್ಲಿರುವದನ್ನು ನೋಡಿ ''ಈ ವೃದ್ಧನಿಂದೇನು ಪ್ರಯೋಜನ? ನಿನ್ನನ್ನು ಪೋಷಿಸಲಾರ, ಸಂತೋಷಪಡಿಸಲಾರ. ನಮ್ಮನ್ನು ಮದುವೆಯಾಗು''ಎಂದು ಸೂಚಿಸಿದರು. 'ವೃದ್ಧನಾದರೂ ನನ್ನ ಪತಿಯಲ್ಲಿ ನನಗೆ ಅನುರಾಗವಿದೆ, ನಿಷ್ಠೆಯಿದೆ. ಆದುದರಿಂದ ನನ್ನನ್ನು ಮೋಹಗೊಳಿಸುವ ಹವ್ಯಾಸವನ್ನು ಬಿಟ್ಟುಬಿಡಿರಿ' ಎಂದು ಸುಕನ್ಯೆ ಖಂಡಿತವಾಗಿ ಹೇಳಿದಳು. 'ಹಾಗಾದರೆ ದೇವತೆಗಳ ವೈದ್ಯರಾದ ನಾವು ನಿನ್ನ ಪತಿಗೆ ತಾರುಣ್ಯವನ್ನು ಕೊಡುವೆವು' ಎಂದು ಹೇಳಿ ಚ್ಯವನವನ್ನು ಕರೆದುಕೊಂಡು ಒಂದು ಸರೋವರಕ್ಕೆ ಹೋಗಿ ಅಶ್ವಿನೀಕುಮಾರರೂ ಚ್ಯವನನೂ ಅದರಲ್ಲಿ ಮುಳುಗಿ ಎದ್ದರು. ಮೂವರ ರೂಪವೂ ಒಂದೇ ವಿಧವಾಗಿ ಕಾಣುತ್ತಿತ್ತು. ಮೂವರೂ ಸುಂದರರು, ತರುಣರು. ಈ ಮೂವರಲ್ಲಿ ಯಾರಲ್ಲಿ ನಿನಗೆ ನಿಜವಾದ ಅನುರಾಗವಿರುವದೋ ಅವರನ್ನು ಆರಿಸಿಕೋ ಎಂದು ಹೇಳಿದರು. ಅವಳು ಚ್ಯವನನನ್ನೇ ಆರಿಸಿಕೊಂಡಳು. ಅಶ್ವಿನೀಕುಮಾರರು ಅವಳ ನಿಜವಾದ ಅನುರಾಗದಿಂದ ಸಂತುಷ್ಟರಾಗಿ ತಿರುಗಿಹೋದರು.

ಈ ಕಥೆಯಲ್ಲಿ ಸುಕನ್ಯೆಯ ಅನುರಾಗವು ಭೌತಿಕ ಎಲ್ಲೆಯನ್ನು ಮೀರಿ ನೈತಿಕ ಮೌಲ್ಯಗಳನ್ನು ಅವಲಂಬಿಸಿದೆ ಎಂಬುದು ಸ್ಪಷ್ಟವಾಗಿದೆ. ಅವಳಲ್ಲಿ ಮೊದಲು ಪ್ರಣಯವನ್ನು ತಾಳಿದವನು ಚ್ಯವನನು. ಅಂಥ ವಯೋವೃದ್ಧನು ಚಿಕ್ಕವಳಲ್ಲಿ ಅನುರಾಗವನ್ನು ತಾಳಿದ್ದು ಉಚಿತವೇ ಎಂಬ ಪ್ರಶ್ನೆ ನಮ್ಮ ಮನದಲ್ಲಿ ಬರುವದು. ಆದರೆ ಈ ಅನೌಚಿತ್ಯಕ್ಕೆ ಕಾರಣವಾದ ಕಣ್ಣುಗಳಲ್ಲಿ ಮುಳ್ಳು ಚುಚ್ಚಿಯೇ ಸುಕನ್ಯೆಯು ಅವನನ್ನು ವರಿಸಿರುವಳು. ಆದುದರಿಂದ ಅವಳು ಒಪ್ಪಿಕೊಂಡದ್ದು ಮನಸ್ಸನ್ನು. ಅವಳಿಗೆ ಕಂಡದ್ದು ವೃದ್ಧ ಶರೀರವಲ್ಲ. ಅದರೊಳಗಿನ ಪ್ರಣಯವನ್ನು ಯಾಚಿಸಿದ ಮನಸ್ಸು. ಆದುದರಿಂದಲೇ ಅಶ್ವಿನೀಕುಮಾರರು ಅವನಿಗೆ ತಾರುಣ್ಯವನ್ನು ಕೊಟ್ಟು ತಮ್ಮಂತೆಯೇ ಕಾಣುವ ರೂಪವನ್ನು ಕೊಟ್ಟರೂ ಅವಳಿಗೆ ಚ್ಯವನನ ಗುರುತು ಹಿಡಿಯಲು ಕಷ್ಟವಾಗಲಿಲ್ಲ. ಪತಿವ್ರತೆಯರಿಗೆ ಮೂರನೆಯ ಕಣ್ಣೊಂದಿರುತ್ತದೆ. ಅದೇ ಅನುರಾಗದ ಕಣ್ಣು, ನಿಷ್ಠೆಯ ಕಣ್ಣು. ಈ ಕಣ್ಣು ಬಾಹ್ಯರೂಪಕ್ಕೆ ಮೋಸಹೋಗುವದಿಲ್ಲ. ಇದು ಯಾವಾಗಲೂ ಸೌಂದರ್ಯ ಮತ್ತು ತಾರುಣ್ಯಗಳನ್ನು ಮೀರಿ ನಿಂತಿರುತ್ತದೆ. ಇಂಥ ಕಣ್ಣಿಲ್ಲದ ಕಣ್ಣು ಭೌತಿಕ ಕಣ್ಣು. ಅದು ಸೃಷ್ಟಿಸುವ ಅನುರಾಗ ಅನುರಾಗವಲ್ಲ, ಮೋಹ. ಚ್ಯವನನು ಸುಕನ್ಯೆಯನ್ನು ಕಂಡ ಕಣ್ಣು ಭೌತಿಕಕಣ್ಣು. ಅದನ್ನು ಮುಳ್ಳಿನಿಂದ ಚುಚ್ಚುವದೇ ಯೋಗ್ಯ. ನೈತಿಕ ಮೌಲ್ಯಗಳಂತೆ ವರ್ತಿಸುವ ಸ್ತ್ರೀಯರ ರೂಪವೇ ಮುಳ್ಳು. ಆ ರೂಪವನ್ನು ಕೇವಲ





ಭೌತಿಕ ದೃಷ್ಟಿಯಿಂದ ನೋಡಲು ಹೋದರೆ ಅದು ಟೊಳ್ಳುವದು ಖಂಡಿತ. ಸಮಾನರೂಪರಾದ ಮೂವರಲ್ಲಿ ಸುಕನ್ಯೆಯು ಚ್ಯವನನನ್ನು ಹುಡುಕಿ ಕೊಂಡ ಕಣ್ಣು ನೈತಿಕಕಣ್ಣು, ಅದನ್ನು ತಾರುಣ್ಯವು ಅರಳಿಸಲಾರದು, ವೃದ್ಧಾಪ್ಯವು ಕುಗ್ಗಿಸಲಾರದು. ಅಶ್ವಿನೀಕುಮಾರರು ಚ್ಯವನನಿಗೆ ಕೊಟ್ಟ ಕಾಯಕಲ್ಪ ಒಂದು ವೈದ್ಯಶಾಸ್ತ್ರದ ಭೌತಿಕಘಟನೆಯಲ್ಲ. ಆದರೆ ಸುಕನ್ಯೆಯ ದೃಷ್ಟಿಕೋನದ ಕವಿಕಲ್ಪನೆಯ ನಿರೂಪಣೆ.

### ಶೃಂಗವಾನ್ > ವೃದ್ಧಕನ್ಯಾ

ಗರ್ಗವಂಶದ ಕುಣಿ ಎಂಬ ಋಷಿಯು ವಿಪುಲವಾದ ತಪಸ್ಸನ್ನು ಮಾಡಿ ಓರ್ವ ಮಗಳನ್ನು ಪಡೆದನು. ಅವಳು ವಯಸ್ಕಳಾದ ಮೇಲೆ ತಂದೆಯು ಎಷ್ಟು ವರಗಳನ್ನು ತೋರಿಸಿದರೂ ಯಾರಲ್ಲಿಯೂ ಅವಳಿಗೆ ಅನುರಾಗ ಉಂಟಾಗಲಿಲ್ಲ. ಆದುದರಿಂದ ಅವಳು ಕನ್ಯೆಯಾಗಿಯೇ ಉಳಿದಳು. ತಂದೆಯು ಮಡಿದ ನಂತರ ಅದೇ ಆಶ್ರಮದಲ್ಲಿದ್ದು ತಪಸ್ಸು ಮಾಡುತ್ತ ಕಾಲ ಕಳೆದಳು. ವಯಸ್ಸು ಕಳೆದಂತೆ ಅವಳಿಗೆ ವೃದ್ಧಾಪ್ಯ ಬಂದಿತು. ಆಶ್ರಮದಲ್ಲಿಯೂ ಕೂಡ ಅತ್ತಿಂದಿತ್ತ ಹೆಜ್ಜೆಯಿಡಲು ಅಸಮರ್ಥಳಾಗುವಷ್ಟು ಮುಪ್ಪು ಹೆಚ್ಚಾಯಿತು. ಆಗ ತನ್ನ ತಪಸ್ಸಿನ ಬಲದಿಂದ ಪರಲೋಕವನ್ನೆದಲು ಇಚ್ಛಿಸಿದಳು. ಆದರೆ ಕನ್ಯೆಯರಿಗೆ ವಿವಾಹ ಸಂಸ್ಕಾರವಿಲ್ಲದೆ ಪರಲೋಕವು ಲಭಿಸಲಾರದೆಂದು ನಾರದರು ಹೇಳಿದರು. ಆಗ ಅವಳು ತನ್ನನ್ನು ಮದುವೆ ಮಾಡಿಕೊಂಡವರಿಗೆ ತನ್ನ ತಪಸ್ಸಿನ ಅರ್ಧ ಭಾಗವನ್ನು ಕೊಡುವುದಾಗಿ ಸಾರಿದಳು. ಗಾಲವವಂಶದ 'ಶೃಂಗವಾನ್' ಎಂಬವನು ಅವಳನ್ನು ಮದುವೆಯಾಗಲು ಸಿದ್ಧನಾದನು. ಆದರೆ ಪ್ರಣಯವಿಲ್ಲದ ವಿವಾಹ ಎಂಥದು? ಆದುದರಿಂದ ಒಂದು ದಿನವಾದರೂ ತನ್ನೊಡನೆ ದಾಂಪತ್ಯಜೀವನವನ್ನು ನಡೆಯಿಸಬೇಕು ಎಂಬ ಕರಾರಿನಿಂದ ಅವಳನ್ನು ಮದುವೆಯಾದನು. ಅವಳು ತಾನು ಒಪ್ಪಿಕೊಂಡಂತೆ ಒಂದು ದಿನ ತರುಣಿಯಂತೆ ಗಂಧಮಾಲ್ಯಾದಿಗಳಿಂದ ಭೂಷಿತಳಾಗಿ ಅವನೊಡನೆ ದಾಂಪತ್ಯ ಜೀವನವನ್ನು ನಿರ್ವಹಿಸಿ ಮರುದಿನ ಪರಲೋಕ ಯಾತ್ರೆಗೈಯ್ದಳು. 'ಶೃಂಗವಾನ್'ನಿಗೆ ತುಂಬ ದುಃಖವಾಗುವದು. ಅವಳೊಡನೆ ಒಂದು ದಿನದ ಪ್ರಣಯದ ಜೀವನದಿಂದಲೇ ಅವನಿಗೆ ಅವಳಲ್ಲಿ ತುಂಬ ಅನುರಾಗವುಂಟಾಗಿದ್ದಿತು. ಆ ಒಂದು ದಿನ ಅವಳು ಅವನಿಗೆ ತರುಣಿಯೂ ಸುಂದರಿಯೂ ಆಗಿ ಭಾಸವಾಗಿದ್ದಳು. ಅವನು ತುಂಬ ದಾಂಪತ್ಯ ಜೀವನವನ್ನು ನಡೆಯಿಸಿದವರಂತೆ ದುಃಖಪಟ್ಟನು.

ಋಷ್ಯಶೃಂಗನ ಕಥೆಯಲ್ಲಿ ಪುರುಷನು ಸ್ತ್ರೀಯಿಂದ ಬಲವಂತದಿಂದ ದೂರವಿರುವದು ಅಸಹಜವೆಂದು ತೋರಿಸಿದಂತೆ ಇಲ್ಲಿ ಸ್ತ್ರೀಯು ಪುರುಷರಿಂದ ದೂರವಿರುವದು ಅಸಹಜವೆಂದು ತೋರಿಸಲಾಗಿದೆ. ಪ್ರಣಯಬಂಧನಕ್ಕೆ ಬಹುಕಾಲದ ವ್ಯಾಪ್ತಿಯು ಅವಶ್ಯಕವಿಲ್ಲ. ಒಂದು ದಿನದ ಪ್ರಣಯವೂ ಚಿರಂತನವಾದ ಅನುರಾಗವನ್ನು ಹುಟ್ಟಿಸಿ ವಿರಹವ್ಯಥೆಯನ್ನುಂಟು ಮಾಡಬಲ್ಲದು ಎಂಬುದನ್ನು ಇಲ್ಲಿ ತೋರಿಸಲಾಗಿದೆ.

### ಶ್ವೇತಕೇತು > ಸುವರ್ಚಲಾ

ಪ್ರೇಮಕ್ಕೆ ನಿಮಿತ್ತವಿರುವದಿಲ್ಲ. ಅದೊಂದು ಸಹಜಮೈತ್ರಿ. ಎರಡು ಹೃದಯಗಳು ಯಾವಾಗ? ಹೇಗೆ? ಮತ್ತು ಏಕೆ? ಬಂಧಿತವಾಗುತ್ತವೆಂದು ಹೇಳಲು ಬರುವದಿಲ್ಲ. ಸಾಮಾನ್ಯವಾಗಿ ಸಮವಯಸ್ಕರು ಬಾಹ್ಯವಾಗಿ ಪರಸ್ಪರರ ರೂಪಯೌವನಗಳಿಂದ ಆಕರ್ಷಿತರಾಗಿ ಆಂತರಿಕವಾಗಿ ಪರಸ್ಪರರ ಸ್ವಭಾವ ಪ್ರವೃತ್ತಿಗಳಲ್ಲಿ ಏಕರೂಪತೆಯನ್ನು ಕಂಡುಕೊಂಡು ಪರಸ್ಪರರಲ್ಲಿ ಅನುರಾಗವನ್ನು ತಾಳುವರು ಮತ್ತು ಪ್ರಣಯದಿಂದ ಬಂಧಿತರಾಗುವರು. ಆದರೆ ಕೆಲವು ಪ್ರಸಂಗಗಳಲ್ಲಿ ಒಂದು ಆದರ್ಶಕ್ಕಾಗಿ, ಒಂದು ಸಾಧನೆಗಾಗಿ, ಒಂದು ದೃಷ್ಟಿಕೋನಕ್ಕಾಗಿ, ಒಂದು ನಂಬಿಕೆಗಾಗಿ ಪ್ರೇಮ ಮತ್ತು ದಾಂಪತ್ಯಸಂಬಂಧವನ್ನು ಪಡೆದ ದೃಷ್ಟಾಂತಗಳೂ ದೊರೆಯುತ್ತವೆ. ಶ್ವೇತಕೇತು ಮತ್ತು ಸುವರ್ಚಲೆಯರ ಪ್ರಣಯವು ಇಂಥದು.

ಸುವರ್ಚಲೆಯು ದೇವಲನ ಮಗಳು. ಅವಳ ತಂದೆಯು ಅವಳ ಮದುವೆಯನ್ನು ಮಾಡಬೇಕೆಂದು ಆಲೋಚಿಸಿದಾಗ ಕುರುಡನೂ ಕಣ್ಣಿದ್ದವನೂ ಆದವನಿಗೆ ನನ್ನನ್ನು ಕೊಡು ಎಂದು ಪ್ರಾರ್ಥಿಸಿದಳು. 'ಈ ನಿನ್ನ ಪ್ರಾರ್ಥನೆ ವಿವೇಕವಿಲ್ಲದ್ದು ಅಂಧನೂ ಅನಂಧನೂ ಆದವನು ದೊರೆಯುವುದು ಹೇಗೆ?' ಎಂದು ತಂದೆ ದೇವಲನು ಎಷ್ಟು ಹೇಳಿದರೂ ಅವಳು ಕೇಳಲಿಲ್ಲ. ಕನ್ಯಾರ್ಥಿಗಳನ್ನೆಲ್ಲ ಕರೆಯಿಸಿದರೆ ತಾನು ಅಂಧನನ್ನು ಹುಡುಕಿಕೊಳ್ಳುವದಾಗಿ ಹೇಳಿದಳು. ದೇವಲನು ಕನ್ಯಾರ್ಥಿಗಳನ್ನೆಲ್ಲ ಬರಮಾಡಿಕೊಂಡು ಕುಲಶೀಲಸಂಪನ್ನರಾದ ಇವರಲ್ಲಿ ಬೇಕಾದ ವರವನ್ನು ವರಿಸು ಎಂದು ಹೇಳಿದನು. ಸುವರ್ಚಲೆಯು ಅವರನ್ನೆಲ್ಲ ಉದ್ದೇಶಿಸಿ ನಿಮ್ಮಲ್ಲಿ ಅಂಧನೂ ಅನಂಧನೂ ಆದವರು ಯಾರಾದರೂ ಇದ್ದರೆ ನನ್ನ ಪಾಣಿಗ್ರಹಣ ಮಾಡಬೇಕು ಎಂದು ಸಾರಿದಳು. ಆಗ ಅಲ್ಲಿ ಬಂದಿದ್ದ ಉದ್ದಾಲಕನ ಮಗ ಶ್ವೇತಕೇತುವು ತಾನು ಅಂಧನೂ ಅನಂಧನೂ ಇರುವದಾಗಿ ಹೇಳಿದನು. 'ಪರಮಾತ್ಮತತ್ತ್ವವನ್ನು ಈ ಚರ್ಮಚಕ್ಷುಸ್ಸಿನಿಂದ ಕಾಣಲಾರೆನಾದ್ದರಿಂದ ನಾನು ಅಂಧನು. ಪರಮಾತ್ಮತತ್ತ್ವದ ಅಸ್ತಿತ್ವದ ವಿಷಯದಲ್ಲಿ ನನಗೆ ಯಾವ ಸಂದೇಹವೂ ಇರದ್ದರಿಂದ ನಾನು ಅನಂಧನು. ಪಂಚೇಂದ್ರಿಯಗಳ ವ್ಯಾಪಾರಗಳೆಲ್ಲ ಪರಮಾತ್ಮನ ಅಧೀನವಾದ್ದರಿಂದ ನಾನು ಸ್ವತಂತ್ರಇಂದ್ರಿಯರಹಿತನು, ಆದುದರಿಂದ ಅಂಧನು. ಆ ಪರಮಾತ್ಮನ ಅರಿವಿದ್ದದ್ದರಿಂದ ಅನಂಧನು. ನನ್ನ ಜೀವನದಲ್ಲಿ ಕೇವಲ ಲೌಕಿಕ ದೃಷ್ಟಿಯುಳ್ಳವನಾದಾಗ ನಾನು ಅಂಧನು, ಆತ್ಮದೃಷ್ಟಿಯುಳ್ಳವನಾದಾಗ ಅನಂಧನು' ಎಂದು ತಾನು ಅಂಧನೂ ಅನಂಧನೂ ಆಗಿರುವುದನ್ನು ವಿವರಿಸಿದನು. ಅವನ ಈ ಉತ್ತರವನ್ನು ಕೇಳಿ ಸುವರ್ಚಲೆಯು ನಿನ್ನನ್ನು ಮನಸ್ಸಿನಿಂದ ನಾನು ವರಿಸಿದ್ದೇನೆ, ವಿವಾಹವನ್ನು ನನ್ನ ತಂದೆಯು



ಮಾಡಿಕೊಡುತ್ತಾನೆ ಎಂದು ಹೇಳುವಳು. ಜ್ಞಾನದ ಮೇಲಿನ ಅವಳ ಅನುರಾಗವು ಆ ವ್ಯಕ್ತಿಯ ಮೇಲೆ ಅನುರಾಗಕ್ಕೆ ದಾರಿಯಾಯಿತು. ಜ್ಞಾನನಿಮಿತ್ತಕವಾದ ಈ ಈರ್ವರ ಪರಸ್ಪರಾನುರಾಗವು ಇವರನ್ನು ದಾಂಪತ್ಯಜೀವನದಲ್ಲಿ ಕೂಡಿಸಿತು.

ಹೀಗೆ ಮಹಾಭಾರತದಲ್ಲಿ ಭೌತಿಕ, ನೈತಿಕ ಮತ್ತು ತಾತ್ವಿಕ ಪ್ರೇಮಮೂಲಕವಾದ, ಉತ್ತಮ ಕಾವ್ಯವಸ್ತುಗಳಾಗಬಲ್ಲ ಪ್ರಣಯದ ಕಥೆಗಳು ದೊರೆಯುತ್ತವೆ. ಮೂಲದಲ್ಲಿಯೇ ಇವು ಕಾವ್ಯಕ್ಕೆ ಬೇಕಾದ ಭಾವನಾಪ್ರಚೋದನಗಳಿಂದ ತುಂಬಿವೆ, ಚತುರರಾದ ಕವಿಗಳ ಕೈಚಳಕದಿಂದ ಇನ್ನೂ ಸುಂದರವಾದ ಸಾಹಿತ್ಯಕೃತಿಗಳಾಗಬಲ್ಲವು. ಸಾಹಿತ್ಯವು ನದಿಯಂತೆ ನಿತ್ಯ ಪ್ರವಾಹ. ಶತಮಾನಗಳು ಕಳೆದಂತೆ ಹೊಸ ಅನುಭವಗಳೂ ಹೊಸ ವಿಚಾರಗಳೂ ಹೊಸ ಶೈಲಿಯೂ ರೂಪುಗೊಳ್ಳುವದು, ಸಹಜ. ಆದರೆ ಕೆಲವು ಮಾನವಮೌಲ್ಯಗಳು ಚಿರಂತನವಾಗಿವೆ. ಅವುಗಳ ತಳಹದಿಯ ಮೇಲೆಯೇ ಹೊಸ ಅನುಭವ, ಹೊಸ ವಿಚಾರ ಮತ್ತು ಹೊಸ ಶೈಲಿಗಳನ್ನು ಹೊಂದಿಸಬೇಕಾಗುತ್ತದೆ. ಆದುದರಿಂದ ಈ ಮೌಲ್ಯಗಳನ್ನು ಈಗಾಗಲೇ ಅರಗಿಸಿಕೊಂಡು ಹಳೆಯ ಕಥೆಗಳನ್ನೇ ಆಯ್ದುಕೊಂಡು ಅವುಗಳ ಹೊಸ ನಿರೂಪಣೆಯನ್ನು ಕೈಕೊಂಡು ಹೊಸ ಅನುಭವ, ಹೊಸ ವಿಚಾರ ಮತ್ತು ಹೊಸ ಶೈಲಿಗಳನ್ನು ಅಳವಡಿಸಿಕೊಂಡರೆ ಚಿರಂತನ ಮೌಲ್ಯಗಳೂ ತಾತ್ಕಾಲಿಕ ಮೌಲ್ಯಗಳೂ ಒಂದೆಡೆಗೆ ಸೇರಿ ಘನವಾದ ಸಾಹಿತ್ಯದ ಸೃಷ್ಟಿಯಾಗುತ್ತದೆ. ಈ ದೃಷ್ಟಿಯಿಂದ ಮಹಾಭಾರತದಲ್ಲಿಯ ಈ ಪ್ರಣಯದ ಕಥೆಗಳು ಹೊಸ ಸಾಹಿತ್ಯಸೃಷ್ಟಿಗೆ ತುಂಬ ಪ್ರಯೋಜನಕಾರಿಯಾಗಿವೆ.



# ಸಹ-ಗಮನ

ಲೇಖಕರು:
ನ್ಯಾಸರಾಯ ಬಲ್ಲಾಳ,
ಮುಂಬಯಿ

**ಪ್ರೇಮಿಯ ಜೊತೆಯಲ್ಲಿ ಬಾಳಲು ಅವಳು ತಂದೆ ಅಣ್ಣ, ಮನೆಮಾರು ತೊರೆದು ಬಂದಳು. ತಂದೆಗೆ ವಿರುದ್ಧವಾಗಿ ನ್ಯಾಯಾಲಯದಲ್ಲಿ ಸಾಕ್ಷಿಯನ್ನು ನುಡಿದಳು. ಪ್ರೇಮಿಯಿಂದಲೂ ಇದೇ ಬಗೆಯ ಉದಾತ್ತ ನಡತೆಯನ್ನು ಅವಳು ಅಪೇಕ್ಷಿಸಿದ್ದಳು. ಅವನೂ ಅದಕ್ಕನುಗುಣವಾಗಿಯೇ ನಡೆದುಕೊಂಡನು. ಆದರೆ ತನ್ನ ತಂದೆಗೆ ಕಾಯಿಲೆಯಾದಾಗ ತಿಳಿಸದೆ ಹೋದ ಅವನು ಅಪರಾಧಿಯಾಗಿ ಕಂಡ. ಅವಳ ಜೀವನದಲ್ಲಿ ಅದು ಬಿರುಗಾಳಿಯನ್ನು ಎಬ್ಬಿಸಿತು. ಆದರೆ ಅವನ ನುಡಿ ಅವಳಿಗ ಸಾಂತ್ವನ ನೀಡಿತು. ಪ್ರೇಯಸಿಯ ಹೃದಯ-ಮಂಥನದ ಅಪೂರ್ವ ಕಥಾವಸ್ತುವನ್ನಿಲ್ಲಿ ಕಾಣಬಹುದು-**

ಅಳಿಯುವ ದಿನದ ಕೊನೆಯುಸಿರನ್ನು ಸೂಚಿಸುವ ಮುಸ್ಸಂಜೆ. ಆದರೆ ಬಾಲ್ಕನಿಯಿಂದ ದೃಷ್ಟಿ ಹಾಯುವಾಗ, ಕಾಣುತ್ತಿರುವುದು ಬರಲಿರುವ ಕತ್ತಲನ್ನು ಪ್ರತಿಭಟಿಸಲೆಂಬಂತೆ ಬೆಳಗಿರುವ ದಿಗಂತ—ದೂರದಲ್ಲಿ ಕಾಣುತ್ತಿರುವ ರಿಫೈನರಿಗಳ ದೀಪರಾಶಿ, ಅಲ್ಲೆ ಮುಗಿಲು ಮುಟ್ಟಲು ತವಕಿಸುವಂತಿರುವ ಬೆಂಕಿಯ ನಾಲಿಗೆ—ರಿಫೈನರಿಯ ಸಂಕೇತಜ್ವಾಲೆ ; ಚಿತೆಯುರಿಯುವಂತೆ.

ಮಗು ಎಲ್ಲಿದೆಯೆಂದು ನೋಡಲು ಬಾಲ್ಕನಿಗೆ ಬಂದ ಸರೋಜಿನಿಗೆ ಮೊದಲು ಕಂಡುದು ಇದೇ ಪರಿಚಿತ—ಹೊಸಮನೆಗೆ ಬಂದಂದಿನಿಂದ ಪರಿಚಿತ—ದೃಶ್ಯ. ಮನೆಗೆ ಬಂದ ಹೊಸತಿನಲ್ಲಿ ರಾತ್ರಿಯ ಊಟತೀರಿಸಿ, ಬಾಲ್ಕನಿಯಲ್ಲಿ ನಿಂತಿರುವಾಗ, ಮನೋಹರ ಬಳಿಯಲ್ಲಿದ್ದರೂ ಮನಸ್ಸಿನ ಆಳದಲ್ಲಿ ಭೀತಿ ಬಲಿಯಲು, ಈ ದೃಶ್ಯ ಕಾರಣವಾಗುತ್ತಿತ್ತು.

"ವೆಸ್ಟರ್ಲಿ (ಪಶ್ಚಿಮಕ್ಕೆ ಮುಖಮಾಡಿದ) ಬ್ಲಾಕ್ ಸಿಕ್ಕಿದ್ದರೆ ಎಷ್ಟು ಒಳ್ಳೆಯದಿತ್ತು! ನಿತ್ಯ ಈ ರಿಫೈನರಿಯ 'ಚಿತೆ' ನೋಡುವ ಪ್ರಸಂಗ ತಪ್ಪುತ್ತಿತ್ತು" ಎಂದಿದ್ದಳು ಮನೋಹರನೊಡನೆ.

ಆತ ನಕ್ಕು ಆಕೆಯ ಜಡೆ ಹಿಡಿದೆಳೆದಿದ್ದ.

"ನೀನು ನೋಡಬೇಕೆಂದೇ ಅವರೇನು ಚಿತೆ ಉರಿಸುತ್ತಿಲ್ಲ. ರೋಜಾ . . . ಇಷ್ಟು ಬೇಗ ಸಾವಿನ ಹೆದರಿಕೆಯೆ?"

ತುಸು ತಡೆದು ಸರೋಜ ಉತ್ತರಿಸಿದ್ದಳು.

"ಹೌದು, ನನಗಾಗಿಯಲ್ಲ. ಪಪ್ಪಿಗಾಗಿ, ಉಮೇಶನಿಗಾಗಿ . . ."

ಮಾತು ಮುಂದುವರಿಸಬೇಕೆಂದಿದ್ದಾಗಲೆ ಮನೋಹರ ಉತ್ತರಿಸಿದ್ದ.

"ನನಗಾಗಿಯಲ್ಲ, ನಿನಗಾಗಿಯಲ್ಲ. ಬರೇ




ಮಕ್ಕಳಿಗಾಗಿ, ಸಾವು ಬೇಡ, ಅಲ್ಲವೆ!"

'ಹೌದು' ಎಂದಿದ್ದಳು ಸರೋಜ "ಬರೇ ಮಕ್ಕಳಿಗಾಗಿ . . ."

ಹಳೆಯ ಸಂಬಂಧಗಳನ್ನೆಲ್ಲ ಕಡಿದೊಗೆದು ಮುಂಬಯಿಗೆ ಬಂದು ಕಳೆದ ಎಂಟು ವರ್ಷಗಳಲ್ಲಿ, ಮನೋಹರನೊಂದಿಗೆ ಹೂಡಿದ್ದ ಪ್ರೀತಿಯ ಸಂಸಾರಜೀವನದಲ್ಲಿ, ಹೊಸತೊಂದೆ ವಂಶವೃಕ್ಷ ಬೆಳೆಯುತ್ತಿದೆಯೆಂದು ಸರೋಜಿನಿ ಭಾವಿಸಿದ್ದಳು . . . . ಆ ಭಾವನೆ ನಿತ್ಯ ಸತ್ಯ ಎನ್ನುವಂತೆಯೇ ಮನೋಹರ ವರ್ತಿಸಿದ್ದ.

ಮನೋಹರ, ರೋಜಿ, ಉಮೇಶ, ಪಪ್ಪಿ.

ಇನ್ನು ಬರಲಿರುವ — ತಾನು ಎಂಟು ವರ್ಷ ಕಾಲ ಆಶಿಸಿದ್ದ-ಮಗಳು.

ಹೊಸ ಮನೆಗೆ ಬಂದು, ಹೊಸ ಜೀವ ಭೂಮಿಗೆ ಬರುವಾಗ, ಈ ಪ್ರೀತಿಯ ಕುಟುಂಬಜೀವನ ಪರಿಪೂರ್ಣವಾದುದಾಗುವುದು ; ಎಂಟು ವರ್ಷ ಕಾಲ ನೆಚ್ಚಿಕೊಳ್ಳಬೇಕಾಗಿದ್ದ ದುಡಿಮೆಯ ಜೀವನಕ್ಕೆ ತಿಲಾಂಜಲಿ ಕೊಡಲು ಸಾಧ್ಯವಾಗುವುದು ಎಂದು ಸರೋಜಿನಿ ಬಗೆದಿದ್ದಳು.

ಈಗ ಮನೋಹರನೇಕೆ 'ಇದು ಬರೀ ಕನಸು' ಎನ್ನುವಂತೆ ಒಮ್ಮೊಂದೊಮ್ಮೆಗೇ ವರ್ತಿಸತೊಡಗಿದ!

ಮಗುವನ್ನು ಹುಡುಕಲು ಬಂದರೂ ಸರೋಜಿನಿಯ ಮನಸ್ಸಿನಲ್ಲಿದ್ದುದು ಮನೋಹರನ ಕಾಗದವೇ. ಎರಡು ದಿನಗಳಿಂದ ಆ ಕಾಗದ ಕೊಡುತ್ತಿದ್ದ ನೋವೆ.

"ಪಪ್ಪೀ..." ಎಂದು ಕರೆದಳು ಸರೋಜ ಅಂಗಳದಲ್ಲಿ ಆ ಮಸುಗತ್ತಲಲ್ಲೂ ಆಡುತ್ತಿದ್ದ ಮಕ್ಕಳ ಗುಂಪಿನೆಡೆ ನೋಡುತ್ತ. ಐದು ವರ್ಷದ ಪಪ್ಪಿ, ಮನೆಯಿಂದ ಕೊಂಡು ಹೋಗಿದ್ದ ಬಟ್ಟೆಯೊಣಗಿಸುವ ಕೋಲು ಹಿಡಿದು ಓಡುತ್ತಿದ್ದ, ನೆರೆಯ ಕಂಪೌಂಡಿನಲ್ಲಿ ಕಡಿದು ಬಿದ್ದ ಗಾಳಿಪಟವೊಂದನ್ನು ಎಳೆದು ತರುವ ಉದ್ದೇಶದಿಂದ.

"ಪಪ್ಪೀ... ಬಿದ್ದೀಯ . . . ಮನೆಗೆ ಬರುತ್ತೀಯೋ ಇಲ್ಲವೋ ?"

ತಾಯಿಯ ಸ್ವರ ಕೇಳಿಸಿದಾಗ ತಲೆಯೆತ್ತಿ ನೋಡಿದ ಪಪ್ಪಿ ಕಿಲಕಿಲನೆ ನಕ್ಕ. ತಾಯಿಯ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಗೋಡೆಯ ಇನ್ನೊಂದು ಬದಿಗೆ ಓಡಿದ.

"ಏಟು ಬೇಕೇನು ? ಬರುತ್ತೀಯೋ ಇಲ್ಲವೊ ?"

ಪಪ್ಪಿಯ ಸದ್ದೇ ಇರಲಿಲ್ಲ.

"ಬಹಳ ತುಂಟ, ಅಲ್ಲವೆ ?" ಎಂದರು ನೆರೆಯ ಬಾಲ್ಕನಿಯಲ್ಲಿದ್ದ ಸುಲಭಾ ರೇಗೆ.

"ಹೌದು, ತುಂಟ . . . ನಮ್ಮ ಉಮೇಶ ಎಷ್ಟೋ ವಾಸಿ . . .".

"ಉಮೇಶ ನಿಮ್ಮಂತೆಯೇ, ಅಲ್ಲವೇ ! ಪ್ರಾಯಶಃ ಪಪ್ಪಿ ತಂದೆಯಂತೆಯೇ ಇರಬೇಕು . . ." ನಗುತ್ತಲೇ ಸುಲಭಾ ಆ ರೀತಿ ಮಾತನಾಡಿದರು . . .

ಸರೋಜಿನಿಯೂ ನಕ್ಕಳು 'ನಿಮಗೇನು ತಿಳಿದಿದೆ ?' ಎಂಬರ್ಥದ ನಗು.

ಹೊಸಬಳಾದ ನೆರೆಯವರ ಸಖ್ಯ. ಮಹಾ ಶಹರದ ಅವಸರದ ಜೀವನಕ್ರಮ. ಸಂಪರ್ಕ ಎಷ್ಟೇ ನಿಕಟವಾದುದಾಗಿರಲಿ, ಅತಿ ಪರಿಚಯ ಅಪೇಕ್ಷಿತವಾದುದಾದರೆ ಮಾತ್ರ ಗ್ರಾಹ್ಯ; ಇಲ್ಲವಾದರೆ ತ್ಯಾಜ್ಯ . . . ಇದೇ ರೂಢಿ.

ಜೋಗೇಶ್ವರಿಯಲ್ಲಿ ಕಳೆದ ಎಂಟು ವರ್ಷಗಳಲ್ಲಿ ತಮ್ಮ ಕಟ್ಟಡದಲ್ಲಿದ್ದ ಹದಿನಾರು ಸಂಸಾರಗಳಲ್ಲಿ ಹತ್ತು ಸಲ ಕೂಡ ನಕ್ಕು ಮಾತನಾಡಿಸದ ನೆರೆಹೊರೆಯವರೇ ಹೆಚ್ಚಿನವರು. ಬೆರೆಯಬೇಕಾದ ಸಂದರ್ಭಗಳು ಸಾಕಷ್ಟು ಬರುತ್ತಿದ್ದ "ಚಾಳ್"ನ ಜೀವನ ಕ್ರಮವೇ ಹಾಗಿದ್ದ ಮೇಲೆ, ಸಾಯನ್‌ನ ಈ ಹೊಸ ಸ್ವಯಂಪೂರ್ಣ ಮನೆಗಳ ವಿಚಾರ ಹೇಳಬೇಕಾದುದೇನೂ ಇಲ್ಲ. ಒಂದೊಂದು ಮನೆಯೂ ಒಂದೊಂದು ಜಗತ್ತು. ಹೊರಗಣ ಸಂಪರ್ಕ ಅಪೇಕ್ಷಿತವಾದುದಾದರೆ ಮಾತ್ರ . . .

"ಪಪ್ಪಿಯ ತಂದೆ ಯಾವಾಗ ಬರುತ್ತಾರೆ?"

"ಬರಬಹುದು, ಇನ್ನೆಂಟು ದಿನಗಳಲ್ಲಿ."

"ಅವರಿಗೆ 'ಟೂರಿಂಗ್' ಯಾವಾಗಲೂ ಇರುತ್ತದೆಯೆ?"

"ಇಲ್ಲ. ಆಗೊಮ್ಮೆ ಈಗೊಮ್ಮೆ ಮಾತ್ರ" ತುಂಬ ಪ್ರಯಾಸದಿಂದ ಸರೋಜ ಉತ್ತರಿಸಿದಳು.

"ನೀವೂ ಏನು ಕೆಲಸಕ್ಕೆ ಹೋದಂತಿಲ್ಲ, ಈಗೆರಡು ದಿನಗಳಿಂದ ರಜೆಯೇನು?"

"ಹೌದು, ರಜೆ."

"ಗಂಡನೂ ಮನೆಯಲ್ಲಿರದಾಗ ರಜೆ ಪಡೆದರೆ ಬೇಸರಬರುವುದಿಲ್ಲವೆ?"

'ಮನೆಯಲ್ಲೆ ಕುಳಿತಿರುವ ನೀನು ಎಷ್ಟು ವಾಚಾಳಿಯೆ?' ಎಂದು ಕೇಳಬೇಕು ಎಂದೆನಿಸಿತು ಸರೋಜಳಿಗೆ. ಆದರೆ ನೆರೆಯವರೊಡನೆ ನಿಷ್ಠುರ ಬೇಕಿರಲಿಲ್ಲ ಎಂತಲೇ.

"ಆಫೀಸಿನ ಕೆಲಸ ಮಾಡಿ ಬೇಸರ ಬರುವಾಗ, ರಜೆ ಪಡೆದು ಕೆಲಸವಿರದೆ ಮನೆಯಲ್ಲಿ ಕುಳಿತಿರುವುದೂ ಒಂದು ರೀತಿಯ ಸುಖವೇ."

"ಅದು ಹೌದು. ಆದರೆ ನನಗೆ ಆರೇ ತಿಂಗಳಲ್ಲಿ ಆಫೀಸಿನ ನರಕ ಬೇಸರ ತರಿಸಿತು. ಮದುವೆಯಾದ ಮೇಲೆ ಒಂದು ದಿನ ಕೂಡ ಕೆಲಸ ಮಾಡಲು ಸಾಧ್ಯವಾಗಲಿಲ್ಲ. ನನ್ನ ಗಂಡನೂ 'ಬೇಡ' ಎಂದೇ ಬಿಟ್ಟರು."

'ಯಾರಿಗೆ ಬೇಕಾಗಿದೆ ನಿನ್ನ ಆತ್ಮಚರಿತ್ರೆ ?' ಎಂದು ಸರೋಜ ಮನಸ್ಸಿನಲ್ಲೆ ಪ್ರಶ್ನಿಸಿದಳು. ಆದರೆ ಉತ್ತರಿಸಿದ್ದು ಬರೀ "ಹಾಗೇನು" ಎಂದು.

"ನೀವು ಎಷ್ಟು ವರ್ಷಗಳಿಂದ ಕೆಲಸ ಮಾಡುತ್ತಿದ್ದೀರಿ ?"

ಈಗ ಸರೋಜಿನಿಗೆ ಮಾತು ಬೇಕಿರಲಿಲ್ಲ. ಆದರೆ ಉತ್ತರಿಸಲು ತಡವಾದರೂ ಸುಲಭಾ ರೇಗೆಯ ಕುತೂಹಲ ಕಡಿಮೆಯಾಗಲಿಲ್ಲ.

"ಪಪ್ಪಿ ಎಲ್ಲಿ ಹೋದರೂ ಜಯಿಸಿಕೊಂಡು ಬರುತ್ತಾನೆ, ಬಿಡಿ. ನೀವು ಮದುವೆಯಾದ ಮೇಲೂ ಆಫೀಸಿಗೆ ನಮಸ್ಕಾರ ಹೇಳಿಯೇ ಇಲ್ಲ, ಅಲ್ಲವೆ !"

ಸರೋಜಿನಿ ನಕ್ಕಳು. "ನಾನು ಮದುವೆಯಾದ ಮೇಲೆಯೆ ದುಡಿಯಲು ತೊಡಗಿದ್ದು."

"ಓ! ಹಾಗೆಯೆ! ಹಾಗಾದರೆ ನಿಮ್ಮ ಗಂಡನದೇ ಪ್ರೋತ್ಸಾಹ ಇದಕ್ಕೆ . . ,"

"ಹಾಗೇನೂ ಇಲ್ಲ. ವಿಚಾರ ನನ್ನದೇ. ಅವರು ಆಕ್ಷೇಪಿಸಲಿಲ್ಲ, ಅಷ್ಟೆ."

"ಹಾಗಾದರೆ ಮಕ್ಕಳನ್ನು ಯಾರು ನೋಡಿಕೊಳ್ಳುತ್ತಿದ್ದರು?"

"ಪಪ್ಪಿ ಹುಟ್ಟಿದ ಮೇಲೆ, ಈಗಿದ್ದಾಳಲ್ಲ, ಕೆಲಸದವಳು, ಅಮ್ಮಣ್ಣಿ...ಅವಳೇ. ಅದಕ್ಕೂ ಮೊದಲು ಇನ್ನಿಬ್ಬರಿದ್ದರು.

"ಬಹಳ ಧೈರ್ಯಶಾಲಿಗಳಪ್ಪ ನೀವು. . . ಸಣ್ಣ ಮಕ್ಕಳನ್ನೂ ಕೆಲಸದವರ ಕೈಯಲ್ಲಿ ಬಿಟ್ಟು. . .ನಿಮ್ಮ ಹತ್ತಿರದವರು ಯಾರೂ ಇಲ್ಲವೆ. ತಂದೆ, ತಾಯಿ ಅತ್ತೆ, ಮಾವ..."

ಈಗ ಸರೋಜಿನಿಗೆ ಸರ್ವಥಾ ಮಾತು ಬೇಕಿರಲಿಲ್ಲ.

"ಪಪ್ಪೀಽಽ" ಎಂದು ಕೂಗಿದಳು. "ಹುಡುಗ ಎಲ್ಲಿದ್ದಾನೋ ನೋಡಬೇಕು. ಆಡಲು ತೊಡಗಿದರೆ ಮನೆಯ ನೆನಪೇ ಇಲ್ಲ..." ಎಂದಳು.

ತನ್ನ ಪ್ರಶ್ನೆಗೆ ಉತ್ತರ ಬರುವಂತಿಲ್ಲವೆಂದು ತಿಳಿಯಲು ಸುಲಭಾಗೆ ಹೆಚ್ಚು ಅವಕಾಶ ಬೇಕಿರಲಿಲ್ಲ. ಬಹಳ ದಿನಗಳಿಂದ ಸರೋಜಿನಿಯನ್ನು ಮಾತಿಗೆಳೆಯಬೇಕು ಎಂದು ಯೋಚಿಸಿಕೊಂಡಿದ್ದರೂ ಸರಿಯಾದ ಅವಕಾಶ ದೊರಕಿದಾಗಲೂ ಎಲ್ಲ ವಿಚಾರಗಳನ್ನು ತಿಳಿಯಲು ಅವಳಿಗೆ ಸಾಧ್ಯವಾಗಿರಲಿಲ್ಲ. ದುಡಿಯುವ ಗಂಡ, ಹೆಂಡತಿ, ಮನೆಯಲ್ಲಿ ಮುದ್ದಾದ ಎರಡು ಮಕ್ಕಳು, ಅವುಗಳ ಪಾಲನೆಗೆಂದು ಕೆಲಸದಾಕೆ. ಯಾರೊಡನೆಯೂ ಹೆಚ್ಚು ಬೆರೆಯದ ಯಾರೊಡನೆಯೂ ವಿಶೇಷ ಆತ್ಮೀಯತೆಯನ್ನು ಪ್ರಕಟಿಸದಂಥ ನಡವಳಿಕೆ, ವ್ಯವಹಾರಕ್ಕೆ ಬೇಕಿದ್ದಷ್ಟೆ ಮಾತುಕತೆ, ಕಾದುಕಾದು ನೋಡಿದರೂ ಬಂಧುಮಿತ್ರರು ಕೂಡ ಹೆಚ್ಚಾಗಿ ಪ್ರವೇಶಿಸದಂಥ ಮನೆ.

ಬಾಲ್ಕನಿ ಬಿಟ್ಟು ಒಳಗೆ ನಡೆದ ಸರೋಜ ಯೋಚಿಸುತ್ತಿದ್ದುದು ಸುಲಭಾ ರೇಗೆಯ ವಿಚಾರವೇ. ಕಟ್ಟಡದಲ್ಲಿದ್ದ ಬೇರೆಯವರೆಲ್ಲ ಮಾತು ನಗುಗಳನ್ನು ವ್ಯವಹಾರದ ಹದ್ದಿನಲ್ಲೆ ಕಾದಿಡುತ್ತಿದ್ದರೆ ಸುಲಭಾ ವರ್ತಿಸುತ್ತಿದ್ದ ರೀತಿ ಮಾತ್ರ ಬೇರೆಯೆ. ತನಗಿಂತ ಎಂಟು ಹತ್ತು ವರ್ಷಗಳಿಗಾದರೂ ಅವರ ವಯಸ್ಸು ಹೆಚ್ಚಿರಬೇಕು. ಕಾಲೇಜಿಗೆ ಹೋಗುವ ಮಗನೇ ಇದ್ದಾನೆಂದಾದ ಮೇಲೆ, ಆಕೆ ನಲವತ್ತರ ನೆರೆಯಲ್ಲೆ ಇರಬೇಕು. ಸ್ಥೂಲಕಾಯದ ಯುವತಿ. ವಯಸ್ಸು ದೇಹದ ಮೇಲೆ ಪರಿಣಾಮವನ್ನು ಮಾಡಿದೆ. ಆದರೆ ಇತರರ ವಿಚಾರ ತಿಳಿಯುವ ಕುತೂಹಲ ಮಾತ್ರ ಎಳೆಯರಿಗಿಂತ ಹೆಚ್ಚಿನದು. ತಮ್ಮಷ್ಟಕ್ಕೆ ಇರಬಾರದೇ !

ಇನ್ನು ಬರುವ ಪ್ರಶ್ನೆಗಳೆಲ್ಲ ಸರೋಜಿನಿಗೆ ಗೊತ್ತು 'ನಿಮ್ಮ ತಂದೆ, ತಾಯಿ ಯಾರು?' ಗಂಡನ ಸಂಸಾರ ಎಷ್ಟು ದೊಡ್ಡದು? ಅಣ್ಣ,

ತಮ್ಮ, ಅಕ್ಕ-ತಂಗಿಯರೆಲ್ಲ ಎಲ್ಲಿದ್ದಾರೆ? ನೀನೇಕೆ ಇನ್ನೂ ದುಡಿಯುತ್ತಿದ್ದೀರಿ?

ಒಳಗೆ ಬಂದುದು ಸರೋಜನಿ ಮಲಗುವ ಮನೆಗೆ. ಕತ್ತಲು ಹೆಚ್ಚುತ್ತಿದ್ದರೂ ಆಕೆ ದೀಪ ಹಚ್ಚದೆ ಡ್ರೆಸ್ಸಿಂಗ್ ಮೇಜಿನ ಬಳಿಯ ಇದ್ದ ಸ್ಟೂಲಿನಲ್ಲಿ ಕುಳಿತು "ಅಮ್ಮಣ್ಣೀ" ಎಂದು ಕರೆದಳು.

ಕರೆ ಕೇಳಿ ಬಂದ ಕೆಲಸದಾಕೆಗೆ ಕತ್ತಲಲ್ಲೆ ಕುಳಿತಿದ್ದ ಸರೋಜಿನಿಯನ್ನು ಕಂಡು ಆಶ್ಚರ್ಯವಾಯಿತು. ಆದರೆ ಅದನ್ನು ತೋರಗೊಡದೆ " ಕರೆದಿರಾ ? " ಎಂದಳು.

" ಮಕ್ಕಳು ಎಲ್ಲಿದ್ದಾರೆ ನೋಡು. . . ಕತ್ತಲಾದರೂ ಮನೆಯ ಯೋಚನೆಯೇ ಇಲ್ಲ."

ಕೆಲಸದಾಕೆ ಹೊರಟು ಹೋದ ಮೇಲೂ ಸರೋಜಿನಿ ಕುಳಿತಿದ್ದ ಸ್ಟೂಲ್ ಬಿಟ್ಟು ಕದಲಲಿಲ್ಲ. ಪರಿಚಿತವಿದ್ದ ಆಲಸ್ಯ.

" ಪಪ್ಪಿಯ ತಂದೆ ಯಾವಾಗ ಬರುತ್ತಾರೆ ? " ಎಂದು ಸುಲಭಾ ರೇಗಿ ಕೇಳಿದಾಗ " ಇನ್ನೆಂಟು ದಿನಗಳಲ್ಲಿ " ಎಂದು ಸರೋಜ ಸಹಜವಾಗಿ, ಸುಲಭವಾಗಿ ಉತ್ತರಿಸಿದ್ದಳು.

ಆದರೆ ದುಡಿಮೆಗೆ ಸಂಬಂಧಿಸಿದ ಪ್ರವಾಸ ಮುಗಿಸಿ ಮನೋಹರ ಮನೆಗೆ ಮರಳುವ ರೀತಿ ಬೇರೆಯೆ. ಈ ಸಲದ ಪ್ರವಾಸ ಮುಗಿಸಿ ಮರಳುವ ರೀತಿ ಬೇರೆಯೆ.

ತಮ್ಮ ಮಧುರ ದಾಂಪತ್ಯದ ಅನುಭವ ಸೃಷ್ಟಿಸಿದ ಕನಸನ್ನು ಮನೋಹರ ಒಡೆದಿದ್ದ, ತನ್ನ ವಂಚನೆಯಿಂದಾಗಿ, ಅದನ್ನು ಸಾರಿ ಹೇಳಿದ್ದ ಕಾಗದದಿಂದಾಗಿ.

ನಾಲ್ಕು ದಿನಗಳ ಹಿಂದೆ ಬಂದಿದ್ದ ಕಾಗದ. ಓದಿ ಓದಿ ಕಂಠಪಾಠವಾಗಿತ್ತು ಒಕ್ಕಣಿಕೆ.

"ಅನಿವಾರ್ಯ ಕಾರಣಗಳಿಂದಾಗಿ ಮಂಗಳೂರಿಗೆ ಬರಬೇಕಾಯಿತು. ನನ್ನ ತಂದೆಯವರು ತೀರಿಕೊಂಡ ವಿಚಾರ ನಿನಗೆ ತಿಳಿದಿರಲಿಕ್ಕಿಲ್ಲ. ಇನ್ನು ಹದಿನೈದು ದಿನಗಳಲ್ಲಿ ಮರಳಿ ಬರುತ್ತೇನೆ. . . ನೀನು, ಉಮೇಶ, ಪಪ್ಪಿ ಚೆನ್ನಾಗಿರುವಿರೆಂದು ನಂಬಿದ್ದೇನೆ."

'ತಂದೆ ತೀರಿಕೊಂಡ ವಿಚಾರ ನಿನಗೆ ತಿಳಿದಿರಲಿಕ್ಕಿಲ್ಲ.'

ಎಷ್ಟು ಸುಲಭವಾಗಿ, ಎಷ್ಟು ಸಹಜವೆನಿಸುವಂತೆ ಮನೋಹರ ಬರೆದಿದ್ದ!

'ಕ್ಷಮಿಸುವ ಸೌಜನ್ಯ ನಿನಗಿರದೆ ಹೋಯಿತೆ !' ಎಂದು ಹೇಗೆ ಕೇಳುವುದು ?

ಏಕೆ ಕೆಲಸಕ್ಕೆ ಸಂಬಂಧಿಸಿದ ಪ್ರವಾಸದ ನೆಪ ! ಏಕೆ ಈ ವಂಚನೆ ! ಎಂಟು ವರ್ಷಗಳ ಹಿಂದೆ ತಾನು ಮಾಡಿದ ತ್ಯಾಗದ, ಇಳಿಸಿದ ಕಣ್ಣೀರಿನ ಪರಿಚಯವೇ ಇಲ್ಲವೆಂಬಂತೆ.

ಕತ್ತಲಲ್ಲೆ ಕುಳಿತಿದ್ದ ಸರೋಜಿನಿಯ ಮನಸ್ಸು ತನ್ನ ಗತಜೀವನದ ಕತ್ತಲಿನ ಪುಟಗಳನ್ನು ತೆರೆದು ನೋಡುತ್ತಿತ್ತು.

" ಮಗಳೆಂದು ನಂಬಿ ಬೆಳಸಿದೆ. ತಾಯಿಯಿಲ್ಲದ ಮಗುವೆಂದು ಇನ್ನಷ್ಟು ಪ್ರೀತಿಯಿಂದ ಮುದ್ದಿಸಿ, ಬೆಳೆಸಿ ಓದಿಸಿದೆ. ನೀನು ಮಾತ್ರ ತಂದೆಗೆ ಎರಡೆಣಿಸಿ, ಜಾತಿ, ನೀತಿಯನ್ನೆಲ್ಲ ಬಿಟ್ಟು ಮನೆಗೆ ಮಾರಿಯಾದೆ. ಕಟ್ಟಿಕೊಂಡವನೊಡನೆ ಸಂಸಾರಮಾಡಿಕೊಂಡು ಯಾವ ನರಕಕ್ಕಾದರೂ ಬೀಳು. ಇನ್ನು ಮೇಲೆ ನೀನು ನನ್ನ ಮಗಳಲ್ಲ ನಾನು ನಿನಗೆ ತಂದೆಯಲ್ಲ."

ತಂದೆಯ ಹೆಸರೂ ನರಸಿಂಹನೆಂದೇ. ಹೆಸರಿಗೆ ಒಪ್ಪುವಂತೆಯೇ ಅವರು ವರ್ತಿಸಿದ್ದರು. ಕಾಲೇಜಿನಲ್ಲಿ ಓದುತ್ತಿದ್ದ ಬೆಳೆದ ಮಗಳು ಮನಮೆಚ್ಚಿದವನೊಡನೆ ಸಂಸಾರ ಹೂಡುವ ಸಿದ್ಧತೆ ನಡಿಸಿದಾಗ ತಡೆಯಲಾಗದ ತನ್ನ ಅಸಹಾಯಕತೆಯನ್ನು ಕಂಡು ಕೋರ್ಟು ಕನಿಕರಪಟ್ಟೀತು ಎಂದು ಭಾವಿಸಿ ಅವರು ನ್ಯಾಯಾಲಯದ ಮೊರೆಹೋಗಿದ್ದರು. ಸತ್ಯವನ್ನು ಸತ್ಯವಲ್ಲ ಎಂದು ಬಗೆದುಬೆಳೆದ ಮಗಳಿಗೆ ಕಲ್ಪನೆಯ ಹಸುಗೂಸಿನ ಅಂಗಿ ತೊಡಿಸಿ, ತನಗೆ ಅನ್ಯಾಯವಾಗಿದೆ ಎಂದು ಚೀರಿದ್ದರು.

"ನಿನ್ನ ಹೆಸರು?"

"ಸರೋಜಿನಿ"

"ವಯಸ್ಸು?"

"ಇಪ್ಪತ್ತೊಂದು"

"ಆಪಾದಿತ ಯುವಕನ ಪರಿಚಯ ವಿದೆಯೆ?"

"ಹೌದು . . ."

"ಅವರು ಯಾರು?"

"ನನ್ನ ಗಂಡ."

"ಅವರು ನಿನ್ನನ್ನು ಬಲಾತ್ಕಾರದಿಂದ ಕರದೊಯ್ದು ವಿವಾಹವಾಗಲಿಲ್ಲವೆ?"

"ಇಲ್ಲ . . ."

"ಹಾಗಾದರೆ, ನಿಮ್ಮ ತಂದೆ ಹೇಳುತ್ತಿರುವುದೆಲ್ಲ ಸುಳ್ಳೇ . . ."

"ಹೌದು. ಸುಳ್ಳು . . ."

ಅಲ್ಲಿಗೆ ಮುಗಿದಿತ್ತು ಸರೋಜನಿಯ ಜೀವನದ ಒಂದು ಮುಹತ್ವದ ಅಧ್ಯಾಯ.

ಮಲಗುವ ಮಂಚದ ಮೇಲೆ, ಗೋಡೆಯಲ್ಲಿ ತಾಯಿಯ ಭಾವಚಿತ್ರ ತೂಗಾಡುತ್ತಿತ್ತು. ಕುಳಿತಲ್ಲಿಂದ ಎದ್ದು ದೀಪ ಹತ್ತಿಸಲೂ ಉದಾಸೀನ. ಅಂಥ ಆಲಸ್ಯ.

ಕರೆಗಂಟೆಯ ದನಿ ಕೇಳಿದಾಗ ಮಕ್ಕಳು ಮನೆಗೆ ಬಂದರೆಂದು ಗೊತ್ತು. ಸರೋಜಿನಿ ಎದ್ದು ದೀಪ ಹತ್ತಿಸಿ, ಹೋಗಿ ಬಾಗಿಲು ತೆರೆದಳು.

ಅಮ್ಮಣ್ಣಿಯ ಎರಡು ಕೈಗಳಿಗೆ, ಉಮೇಶ, ಪಪ್ಪಿ ಜೋತುಗೊಂಡಿದ್ದರು. ಪಪ್ಪಿಯ ಕೈಯ್ಯಲ್ಲೊಂದು ಕೋಲು — ತುಂಡಾದ ಗಾಳಿಪಟವೊಂದು ಬೇರೆ.

"ಹೊತ್ತಾಯಿತೇನೋ ಮನೆಗೆ ಬರಲು?"

ಪಪ್ಪಿ ನಗುತ್ತಲೆ ಇದ್ದ. ಆ ಮುದ್ದು ಮುಖದಿಂದ ನಗು ಮಾಸುತ್ತಿದ್ದುದೆಂದೇ ಇಲ್ಲ. ಆತ ನಕ್ಕಾಗ, ಕಣ್ಣು ಚಿಟುಕಿಸಿದಂತೆ ಭಾಸವಾಗುತ್ತಿದ್ದಾಗ, ನೆನಪು ಓಡಿಯೋಡಿ ಬರುತ್ತಿತ್ತು. ಪಪ್ಪಿ ನಗುತ್ತಿದ್ದುದೇ ತನ್ನ ಅಣ್ಣ ನಕ್ಕಂತೆ.

ಆತಕೂಡ, ತಂದೆಯ ಜತೆಗೇ ನಿಂತು, ಒಡಹುಟ್ಟಿದ ತಂಗಿ ಸಾಮಾನ್ಯ ಕ್ರಿಮಿನಲ್ ಅಪರಾಧಿಯೆಂಬಂತೆ ವರ್ತಿಸಿದ್ದ. ತಂದೆಗಿಂತಲೂ ತನಗೇ ಹೆಚ್ಚು ಅವಮಾನವಾಗಿದೆಯೆಂದು ಬಗೆದು ರೇಗಿದ್ದ. ಸಾವಿನ ಸಂದರ್ಭದಲ್ಲೂ ಆತ ದ್ವೇಷವನ್ನೆ ಸಾಧಿಸಿದ್ದ.

ನಾಲ್ಕು ವರ್ಷಗಳ ಹಿಂದೆ, ಅಣ್ಣನ ಕಾಗದ ಅನಿರೀಕ್ಷಿತವಾಗಿ ಬಂದಿತ್ತು. ಅದರಲ್ಲಿದ್ದುದು ಎರಡೇ ಸಾಲು. "ನೀನು ತಂಗಿಯಾಗಿ ಹುಟ್ಟಿದ ತಪ್ಪಿಗೆ, ಅಪ್ಪ ಮೊನ್ನೆ ಶನಿವಾರ ತೀರಿಕೊಂಡರೆಂದು ತಿಳಿಸಬಯಸುತ್ತೇನೆ. ಅವರ ಪಾಲಿಗೆ ನೀನು ಎಂದೋ ಸತ್ತಿದ್ದಿ. ಈ ಕಾಗದ ಕಂಡು ಇನ್ನು ಇಲ್ಲಿಗೆ ಬರುವ ಸಾಹಸ ಮಾತ್ರ ದಯವಿಟ್ಟು ಮಾಡಬೇಡ. . ."

ಆ ಕಾಗದ ನೋಡಿದ ಮನೋಹರ, ತನ್ನ ಕಣ್ಣಲ್ಲಿ ಒಣಗಿದ ನೀರನ್ನು ಗಮನಿಸಿರಲಿಲ್ಲ. ಅವನು ಹೇಳಿದ್ದುದಿಷ್ಟೆ: "ಸಾಯುವ ಗಳಿಗೆಯಲ್ಲೂ ಮಗಳನ್ನು ಕಾಣಬೇಕು. ಎಂದು ತೋರದ ತಂದೆ ಸತ್ತಾಗ ಅಳಬೇಕು ಎನಿಸುವುದೇ . . . ನಮ್ಮ ಪಾಲಿಗೆ ನಮ್ಮ ಬಂಧು-ಬಾಂಧವರೆಲ್ಲ ಸತ್ತಿದ್ದಾರೆ ರೋಜಾ. . ."

ಅಳಬೇಕು ಎನಿಸಿರಲಿಲ್ಲ. ಉಕ್ಕಿಯುಕ್ಕಿ ಬಂದ ಕಣ್ಣ ನೀರು, ರೆಪ್ಪೆಗಳ ಅಂಚಿನಲ್ಲೆ ಒಣಗಿತ್ತು.

ಆದರೆ ಈಗ ಮನೋಹರ !

"ಮಕ್ಕಳಿಗೆ ಕೈಕಾಲು ತೊಳೆಸಿ ಹಾಲು ಕೊಡು ಅಮ್ಮಣ್ಣೀ. . .ಉಮೇಶ, 'ಹೋಂ ವರ್ಕ್' ಮಾಡು ಹೋಗು . . . ಪಪ್ಪೀ, ಹಾಲು ಕುಡಿದು ಬಾ. 'ನರ್ಸರಿರ್‍ಯ್ಮ್ಸ್' ಹೇಳು ನೋಡೋಣ" ಎಂದ ಸರೋಜ ಪುನಃ ಮಲಗುವ ಮನೆಗೇ ನಡೆದಳು.

ಹಾಲು ಕುಡಿದ ಪಪ್ಪಿ ತಾಯಿಯ ಬಳಿಗೆ ಓಡಿ ಬಂದ—ಶಾಲೆಯಲ್ಲಿ ಕಲಿತ ಹಾಡುಗಳನ್ನೆಲ್ಲ ಪಾಠ ಒಪ್ಪಿಸುವ ಕೆಲಸಕ್ಕಾಗಿ. ಬಂದವನೇ ಹಾಸಿಗೆಯ ಮೇಲೇರಿ ತಾಯಿಯನ್ನು ತಬ್ಬಿಕೊಂಡು "ಅಮ್ಮಾ, ಪಪ್ಪ ಯಾವಾಗ ಬರುತ್ತಾರೆ?" ಎಂದ.

"ಯಾಕೋ, ಅಪ್ಪನ ನೆನಪಾಯಿತು?" ಎಂದಳು ಸರೋಜ, ಮಗುವನ್ನು ತಬ್ಬಿಕೊಂಡೆ.

"ಈಗ ಅಮ್ಮಣ್ಣಿ ಒಳ್ಳೆಯ ಅಡಿಗೆ ಮಾ-



ಡೋರೇ ಇಲ್ಲ. . .ಬರೇ ಸಾರು, ಮಜ್ಜಿಗೆ.,. ಮೀನು ಇಲ್ಲವೇ ಇಲ್ಲ. ."

"ಎಂಥ ಹೊಟ್ಟೆಬಾಕನೋ ನೀನು ?" ಎಂದು ಸರೋಜ ನಗುತ್ತಲೇ ಕೇಳಿದಳು. ಆದರೆ ವೇದನಾಪೂರ್ಣವಾದ ನಗು ಅದು.

ಒಂದು ವರ್ಷ ಕಾಲ, ಮುಂಬಯಿಗೆ ಬಂದ ಮೊದಲನೆಯ ವರ್ಷ, ಉಮೇಶ ಹುಟ್ಟುವುದಕ್ಕೆ ಮೊದಲು, ಮನೋಹರ "ರೋಜಾ, ನಿನಗಾಗಿ ನಾನು ಊಟದ ಪದ್ಧತಿಯನ್ನೇ ಬದಲಿಸಿಕೊಂಡಿದ್ದೇನೆ. ನಾನು ತಿನ್ನುವುದೂ ಬರೇ ತರಕಾರಿ. .," ಎಂದಿದ್ದ. ಆಫೀಸಿನ ಲಂಚ್ ಬಿಡುವಿನ ವೇಳೆ ಅವಕಾಶವಿದ್ದು ಸಂಧಿಸುವ ಪ್ರಸಂಗ ಬಂದಾಗಲೆಲ್ಲ ಆತ ಸಮೀಪದ ಇರಾಣಿಯಂಗಡಿಗೆ ಕರೆದೊಯ್ಯುತ್ತಿದ್ದಾಗ ಬರೇ ಬ್ರೆಡ್ಡು ಚಹಾಗಳಿಗಾಗಿ ಆರ್ಡರ್ ಮಾಡುತ್ತಿದ್ದಾಗ, ಗಂಡನ ಕಷ್ಟ ನೋಡಿ ಕನಿಕರವಾಗುತ್ತಿತ್ತು. ಉಮೇಶ ಹುಟ್ಟಿದ ಮೇಲೆ ಮನೆಯಲ್ಲಿ ಕೆಲಸಕ್ಕೆ ಜನ ನಿಂತಾಗ ಅನಾರೋಗ್ಯ ನೆಪವಾಗಿ ಮನೋಹರ ಬಾಲ್ಯದ ಆಹಾರ ಪದ್ಧತಿಗಳನ್ನೇ ರೂಢಿಸಿಕೊಳ್ಳಲು ತಡವಾಗಲಿಲ್ಲ.

ಮೊದಲು ವಾಸನೆ ತಡೆಯಲು ಕಷ್ಟವಾಗಿ ಓಕರಿಕೆ ಬರುತ್ತಿತ್ತು ಮೀನು, ಮಾಂಸಗಳ ಊಟ. . .ಈಗ ರೂಢಿ.

"ಮೀನು ಬೇಕಾದರೆ ಅಮ್ಮಣ್ಣಿ ತರುವುದಿಲ್ಲವೇನೋ ?" ಎಂದಳು ಸರೋಜ ನಗುವಿನೊಡನೆ.

"ಅಮ್ಮ ತಿನ್ನೋದಿಲ್ಲ. ಈಗ ಬೇಡ ಅಂತಾಳೆ. ಅಪ್ಪ ಬರಲಿ ಎಂದೇ ಹೇಳುತ್ತಾಳೆ."

"ಇನ್ನೆರಡು ವಾರಗಳಲ್ಲಿ ಅಪ್ಪ ಬರುತ್ತಾರೆ ಪಪ್ಪೀ. . .ಈಗ ಹೇಳು ನೋಡೋಣ ಏನೆಲ್ಲ ಕಲಿಸಿದ್ದಾರೆ ಇವೊತ್ತು ಶಾಲೆಯಲ್ಲಿ ?"

ತಾಯಿಯ ಆದೇಶದಂತೆ ಪಪ್ಪಿ ಹಾಡ ತೊಡಗಿದ. . . ಆದರೆ ಸರೋಜಿನಿ ಮಾತ್ರ ಅಂತರ್ಮುಖಿಯಾಗಿದ್ದಳು.

'ತಂದೆ ತೀರಿಕೊಂಡ ವಿಚಾರ ನಿನಗೆ ತಿಳಿದಿರಲಿಕ್ಕಿಲ್ಲ. . .'

"ಆಫೀಸಿನ ಕೆಲಸದ ನಿಮಿತ್ತ ಬೆಂಗಳೂರಿಗೆ ಹೋಗಬೇಕಾಗಿದೆ" ಎಂದು ಮನೋಹರ ಹೇಳಿದಾಗ ಯಾವ ತರದ ಶಂಕೆಯೂ ಸರೋಜಿನಿಯ ಮನಸ್ಸಿನಲ್ಲಿ ಮೂಡಿರಲಿಲ್ಲ. ಮನೊಹರ ಮುಂಬೈ ಬಿಟ್ಟು ಹೋಗುವಾಗ ಅಗಲಿಕೆಯ ನೋವಿತ್ತು. ಆದರೆ ಆತನ ಮರಳುವಿಕೆಯ ನಿರೀಕ್ಷೆಯಲ್ಲಿ ಸುಖವಿತ್ತು. ಈ ಸಲವೂ ಹಾಗೇನೇ. ಪ್ರವಾಸ ತೀರಿ ಬರುತ್ತಾನೆ; ಅಗಲಿಕೆಯಿಂದ ಜಾಡಿದ ಕುಟುಂಬ ಜೀವನವನ್ನು ಮತ್ತೆ ತನ್ನ ನಗುವಿನಿಂದ ತುಂಬುತ್ತಾನೆ; ಆತ ಮರೆಯಾದಾಗಲೆಲ್ಲ ತನ್ನಲ್ಲಿ ಉಂಟಾಗುವ ಭೀತಿ, ಅಪ್ರಬುದ್ಧತೆಯ ಅವಿಶ್ವಾಸದ ಚಿಹ್ನೆಯೆಂದು ಮನಗಾಣಿಸುತ್ತಾನೆ ಎಂದು ಭಾವಿಸಿದ್ದಾಕೆಗೆ ಎಂಥ ಆಘಾತ ಒದಗಿತ್ತು !

ಗಂಡ ಪ್ರವಾಸದ ನೆಪದಿಂದ ಹೋಗಿ ಹದಿನೈದು ದಿನಗಳಾದರೂ ಕಾಗದ ಕಾಣದಾದಾಗ ಸರೋಜಿನಿ ಗಂಡನ ಆಫೀಸಿಗೆ ಟೆಲಿಫೋನ್ ಮಾಡಿದ್ದಳು. "ಮನೋಹರ ಯಾವಾಗ ಪ್ರವಾಸದಿಂದ ತಿರುಗಿ ಬರುತ್ತಾರೆಂದು ತಿಳಿದಿದೆಯೆ ?" ಎಂದು.

## ಗುರು ಗೀತ

ಬಾರೆಲೆ ಗುರು ಬಾಬಾ-ಎನ್ನದೆ-
ದಾರಿ ಬೆಳಕೆ ! ಬಾಬಾ ।
ಆರಾಧನ ಬಲ-ಸಾಧನ ಬಲದಾ
ಧಾರ ಶಕ್ತಿಯಾಗಿರು, ಹೊಂದಿರು! ಬಾ !

ಮೌನವರಳೆ, ಮಾತಿನ ಮಂದಾರದ
ಸೌರಭಸಾರವೆ ! ತುಂಬಲು ನೀ ಬಾ !
ಸುಕೃತದ ಮಿಡಿ ಪರಿಪಕ್ವತೆ ಹೊಂದಲು,
ಅಮೃತರಸವೆ ! ಹೊಮ್ಮಲು ಚಿಮ್ಮಲು ಬಾ !

ಪುಳಕದೊಳಿರು. ಗದ್ಗದದೊಳಗೊಂದಿರು,
ಸುಪ್ತಿ ಬೋಧಗಳ ಸಾತ್ಮ್ಯಕೆಸಂದಿರು.
ಸಾತ್ವಿಕ ಭಾವ ಸಮಾಧಿ ಮಂಟಪದ
ತತ್ವಮಸಿಯ ಸತ್ಯದ ಮೂರ್ತಿಯೊಳಿರು !

ಕಣ್ಮಿಂಚಿನೊಳಿರು, ಬಗೆಯುಂಚಿನೊಳಿರು,
ಪ್ರಾಣಗೀತ ಸಪ್ತಸ್ವರವಾಗಿರು
ತಾನ ತಾನದುತ್ತಾನಲಹರಿಯಲಿ
ಗುರು ಪರಮಾತ್ಮವೆ ! ಸಮರಸವಾಗಿರು !

— ಕಡೆಂಗೋಡ್ಲು ಶಂಕರಭಟ್ಟ

ಆಕೆ ನಿರೀಕ್ಷಿಸಿರದ ಉತ್ತರ ಅಲ್ಲಿಂದ ಬಂದಿತ್ತು. "ಅವರು ರಜೆ ಪಡೆದು ಹೋಗಿದ್ದಾರೆ. ಬರುವುದು ತಿಂಗಳು ಕಳೆದ ಮೇಲೆ."

ಎಂಟು ವರ್ಷ ಕಾಲ ನೆಚ್ಚಿಕೊಂಡಿದ್ದ, ಆತ್ಮೀಯವರ್ತುಲವನ್ನೆಲ್ಲ ತಿರಸ್ಕರಿಸಿ ನೆಚ್ಚಿಕೊಂಡಿದ್ದ ಪ್ರೀತಿಯ ಬಾಂಧವ್ಯದಲ್ಲಿ ಮೊಟ್ಟಮೊದಲ ಬಾರಿಗೆ ಮನೋಹರ ಅವಿಶ್ವಾಸ ಪ್ರದರ್ಶಿಸಿದ್ದ.

ಇಲ್ಲವಾದರೆ ಮನೋಹರ ಏಕೆ ಸುಳ್ಳಾಡಿ ಹೋದ ! ನೆಚ್ಚಿಕೊಂಡ ಪ್ರಿಯತಮೆಗಾಗಿ ಕೌಟುಂಬಿಕ ಬಂಧನಗಳನ್ನೆಲ್ಲ ಕಡೆದೊಗೆದಿದ್ದೇನೆ ಎಂದು ಭರವಸೆ ಕೊಟ್ಟು ತನ್ನನ್ನು ಕರೆದು ತಂದಾತ ಈಗೇಕೆ ಆ ಕಡಿದ ಸಂಬಂಧಗಳ ಬೆಸುಗೆಗೆ ಮತ್ತೆ ತೊಡಗಿದ !

ಸರೋಜಿನಿಗೆ ಸರಿಯಾದ ಉತ್ತರ ಸಿಗುತ್ತಿರಲಿಲ್ಲ. ಗಂಡನ ಕಾಗದ ಬಂದಾಗ ಮೊದಲು ಸಿಟ್ಟು ಉರಿದೆದ್ದಿತ್ತು.

ಎಂಟು ವರ್ಷಗಳ ಹಿಂದೆ ಸರೋಜಿನಿ, ಮನೆಯವರ, ಕುಟುಂಬದ ಜಾತಿಯ ವಿರೋಧವನ್ನು ಕಡೆಗಣಿಸಿ ಮನೋಹರನ ಕೈ ಹಿಡಿದಾಗ, ಆ ತ್ಯಾಗಕ್ಕೆ ಆಕೆ ಬೆಲೆ ಕಟ್ಟಿರಲಿಲ್ಲ, ನಿಜ. ಆದರೆ ಆಕೆಯ ತ್ಯಾಗಕ್ಕೆ ಮನೋಹರನೂ ಬೆಲೆ ಕಟ್ಟದೆ ಇರಬೇಕು ಎಂದು ಆಕೆ ಅಪೇಕ್ಷಿಸಿರಲೂ ಇಲ್ಲ. ಎಂತಲೇ ಆಕೆ ಹೊರಟುದು ಮುಂಬಯಿಗೇ.

ಮನೆಯ ವಿರೋಧದ ಸದ್ದಡಗಿ, ಮನೋಹರ ಮುಂಬಯಿಗೆ ಹೊರಡುವ ಸಿದ್ಧತೆಯಲ್ಲಿದ್ದಾಗ "ನಾಲ್ಕು ದಿನಗಳ ಮಟ್ಟಿಗಾದರೂ ನಮ್ಮ ಮನೆಗೆ ಹೋಗೋಣವೆ, ರೋಜಾ. . ನನ್ನ ತಂದೆ ತಾಯಿ ಈ ಮದುವೆಗೆ ವಿರೋಧ ಸೂಚಿಸಿದ್ದರೂ ನಿನ್ನ ತಂದೆಯಂತೆ ಹಠ ಸಾಧಿಸಿಲ್ಲ." ಎಂದಾಗ ಗಂಡನ ಒತ್ತಾಯಕ್ಕೆಂದು ಒಂದು ದಿನವಷ್ಟೆ ಅವರಲ್ಲಿಗೆ ಹೋಗಿದ್ದಳು.

ಮರುದಿನ "ನಾವು ಹೊಟೆಲಿಗೇ ಮರಳೋಣ" ಎಂದು ಆಕೆ ಸೂಚಿಸಿದಾಗ, ಮನೋಹರ ಆಕೆಯ ಮಾತಿನ ಹಿಂದಿದ್ದ ನೋವನ್ನು ಗಮನಿಸಿಯೇ "ಸರಿ, ನಿನ್ನಿಷ್ಟ" ಎಂದಿದ್ದ.

ಆ ನೋವನ್ನು ಮರೆಯುವುದಿಲ್ಲವೆಂಬ ಭರವಸೆಯನ್ನೂ ಕೊಟ್ಟಿದ್ದ. "ನೀನು ಹುಟ್ಟಿದ ಮನೆಯ ಎಲ್ಲ ಸಂಬಂಧಗಳನ್ನು ಕಡಿದೊಗೆದು ಬಂದೆ— ನನಗಾಗಿ. ಈ ವಿವಾಹಸಂಬಂಧ ನನ್ನ ಮನೆಯವರಿಗೂ ಇಷ್ಟವಿಲ್ಲವೆಂದಾದಮೇಲೆ, ಅವರ ನಿಕಟ ಸಂಬಂಧವನ್ನು ನೀನೂ ನೆಚ್ಚಿಕೊಳ್ಳುವಂತಿಲ್ಲವೆಂದಾದ ಮೇಲೆ ಇಂಥ ನಿಕಟ ಸಂಬಂಧವನ್ನು ನಾನೂ ಬಯಸುವುದಿಲ್ಲ—ನಿನಗಾಗಿ" ಎಂದಿದ್ದ ಮನೋಹರ.

ಎಂಟು ವರ್ಷಕಾಲ ಆ ಮಾತನ್ನು ಪಾಲಿಸಿಯೂ ಇದ್ದ. ಹೊಸತೊಂದೆ ವಂಶವೃಕ್ಷ ಚಿಗುರಿತು, ಉಮೇಶ, ಪಪ್ಪಿ, ಭರವಸೆಯ ಭವಿಷ್ಯವನ್ನು ಸೃಷ್ಟಿಸತೊಡಗಿದ್ದರು. ಎಂಟು ವರ್ಷಕಾಲ ಹುಟ್ಟೂರಿನ ಸಂಪರ್ಕ ಕಡಿದಿತ್ತು. ರಜೆ ಪಡೆದು ಜತೆಯಾಗಿ ಪ್ರವಾಸ ಹೋಗುವಂಥ ಸಂದರ್ಭಗಳಲ್ಲೂ ಅವರು ಹೋಗಿದ್ದುದು ದಿಲ್ಲಿ, ಕಲಕತ್ತಾಗಳಿಗೆ. . .

"ನಿಮ್ಮ ಹತ್ತಿರದವರು ಯಾರೂ ಇಲ್ಲವೆ?

ತಂದೆ, ತಾಯಿ, ಅತ್ತೆ ಮಾವ" ಎಂದಿದ್ದರು ಸುಲಭಾ ರೇಗೆ . . .

ಸರೋಜಿನಿ ಉತ್ತರಿಸದ ಆ ಪ್ರಶ್ನೆಗೆ ಮನೋಹರ ಉತ್ತರ ಹುಡುಕತೊಡಗಿದ್ದ.

ಇನ್ನು ಮರಳಿ ಬರುವಾಗ ಗಂಡ ತರುವ ಸಮಾಧಾನ, ಸಮರ್ಥನೆಗಳೆಲ್ಲ ಆಕೆಗೆ ಗೊತ್ತು.

"ನೋಡು ರೋಜಾ. . . ತಂದೆ ತೀರಿಕೊಂಡ ವಿಚಾರ ತಿಳಿದಾಗ ಹೋಗದೆ ಉಳಿಯುವುದು ಸಾಧ್ಯವಿತ್ತೇ! ನಿನಗೆ ಬೇಸರವಾಗಬಹುದೆಂದು ತಿಳಿಸದೆ ಹೋದೆ . . . ತಾಯಿ ಕಾಯಿಲೆಯವಳು. . . ತಂಗಿ ನಿತ್ಯ ರೋಗಿ. . . ಉಳಿದೆರಡು ಸಣ್ಣ ಮಕ್ಕಳು. . . ಇವರೆಲ್ಲರ ಹೊಣೆ . . ."

ಎಂಟು ವರ್ಷಗಳ ಹಿತವಾದ ದಾಂಪತ್ಯದ ಅನುಭವ ಕನಸಿನ ವಿಶ್ವವನ್ನೆ ಸೃಷ್ಟಿಸಿತ್ತು. ಆದರೆ ಇದು ಸಾಧ್ಯವಾಗಲು ತಾನು ಮಾಡಿದ ತ್ಯಾಗದ ಬೆಲೆ ತಿಳಿದಿಲ್ಲವೆಂಬಂತೆ ಮನೋಹರ ವರ್ತಿಸಿದ್ದ.

'ನಾನು ಮದುವೆಯಾದುದು ನಿನ್ನನ್ನು ಮನೂ, ನಿನ್ನ ಮನೆಯವರನ್ನಲ್ಲ' ಎಂದು ಹೇಳುವ ಬಗೆ ಹೇಗೆ! . . .

ಕಟ್ಟಿದ ಹೊಸ ಜಗತ್ತು ಹಳೆಯ ಬಂಧನಗಳಲ್ಲಿ ಮತ್ತೆ ಆಶ್ರಯ ಪಡೆಯತೊಡಗಿತ್ತು.

ತಂದೆ ತೀರಿದ ನೆಪ ಮುಂದೆ ಮಾಡಿ ಮನೋಹರ ಹುಟ್ಟಿದ ಮನೆಯನ್ನೆ ನೆಚ್ಚಿಕೊಳ್ಳುವಂತಾದರೆ! ಉಮೇಶ, ಪಪ್ಪಿ... ಇನ್ನು ಹುಟ್ಟಲಿರುವ ಪಪ್ಪಿಯ ತಂಗಿ . . . ಹುಟ್ಟುವುದು ಮಗಳೇ ಎಂಬ ಎಂಥ ದೃಢವಾದ ನಂಬಿಕೆಯಿತ್ತು ! ಆ ನಂಬಿಕೆಯಲ್ಲಿ ಎಂಥ ಹಿತವಾದ ಆನಂದವಿತ್ತು !

"ಮೂರು ಮಕ್ಕಳಾದ ಮೇಲೆ ನಾನು ಕೆಲಸ ಮಾಡುವದಿಲ್ಲ, ಮನೂ... ಆ ಮೇಲೆ ಮನೆ ನೋಡಿಕೊಳ್ಳುವವಳು ನಾನೇ. ಆಗ ಆಫೀಸಿನ ಅವಸರದ ದುಡಿಮೆಯ ಜೀವನಕ್ಕೆ ಕೊನೆ. ಆಮೇಲೆಯೇ ನಮ್ಮ ನಿಜವಾದ ಸಂಸಾರಜೀವನ-ಮನೆ, ಮಕ್ಕಳು . . ." ಎಂದು ಸರೋಜಿನಿ ಎಷ್ಟೋ ಬಾರಿ ಗಂಡನೊಡನೆ ಹೇಳಿದ್ದಳು.

ಆತ ನಕ್ಕು ಸೈಗುಟ್ಟಿದ್ದ.

ಆದರೆ ಈಗ, ಹೊಸಮನೆಗೆ ಬಂದು, ಪಪ್ಪಿಯ ತಂಗಿ ಬರಲಿರುವ ಸಂದರ್ಭದಲ್ಲೇ ಕನಸಿನ ಸೌಧ ಕುಸಿಯತೊಡಗಿದೆ.

ಮನೋಹರನ ಕಾಗದ ನೋಡಿ ಉಕ್ಕಿದ ಸಿಟ್ಟು ಕಡಮೆಯಾದಾಗ "ಇಲ್ಲ, ಹೀಗಾಗಲು ಬಿಡುವುದಿಲ್ಲ" ಎಂದು ಸರೋಜಿನಿ ನಿರ್ಧರಿಸಿದ್ದಳು. ಈ ನಿರ್ಧಾರವೇ ಆಕೆ ರಜೆ ಪಡೆಯಲು ಕಾರಣವಾಗಿತ್ತು. ಮನೋಹರ ಮರಳಿ ಬರುವಾಗ, ದುಡಿಮೆಯ ಜೀವನಕ್ಕೆ ತಿಲಾಂಜಲಿ ಬಿಡುವ ನಿಶ್ಚಯವನ್ನು ತಿಳಿಸಬೇಕು," ಕೆಲಸದವರ ಕೈಯಲ್ಲಿ ಬಿಟ್ಟ ಮಕ್ಕಳ ಹೊಣೆಯನ್ನು ಇನ್ನು ಮುಂದೆ ನಾನೇ ಹೊರುತ್ತೇನೆ, ಮನೂ, ಆದರೆ ನಿನ್ನ ಮನೆಯವರ ಸಂಪರ್ಕ ಮಾತ್ರ ಇಲ್ಲಿಗೆ ಎಳೆದು ತರಬೇಡ" ಎಂದು ಹೇಳಬೇಕೆಂಬ ನಿರ್ಧಾರ ಮನಸ್ಸಿನಲ್ಲಿ ಮೂಡಿತ್ತು.

"ತಂದೆ, ತಾಯಿ, ಅತ್ತೆ, ಮಾವ, ಯಾರೂ ಇಲ್ಲವೆ ?'' ಎಂದು ಸುಲಭಾ ರೇಗೆ ಕೇಳಿದ್ದರು. . . ಶಾಲೆಯಲ್ಲಿ ಕಲಿತ ಹಾಡುಗಳನ್ನೆಲ್ಲ ಹಾಡಿ ಹಾಡಿ ನಿದ್ರಿಸಿದ್ದ ಪಪ್ಪಿಯನ್ನು ಎಬ್ಬಿಸಿ, ಮಕ್ಕಳ ಜತೆಗೇ ಊಟ ತೀರಿಸಿ, ಮಲಗುವವರೆಗೂ ಸರೋಜಿನಿಯನ್ನು ಕಾಡುತ್ತಿದ್ದುದು ಇದೇ ವಿಚಾರ. . . "ತಂದೆ, ತಾಯಿ, ಅತ್ತೆ, ಮಾವ ಯಾರೂ ಇಲ್ಲವೆ ?"

ರಜೆಯ ಪ್ರತಿಯೊಂದು ದಿನವೂ ಒಂದೊಂದು ಯುಗದಂತೆ ಕಳೆಯುತ್ತಿತ್ತು. "ಯಾರೂ ಮನೆಯಲ್ಲಿರದಾಗ ರಜೆ ಪಡೆದರೆ ಬೇಸರವಾಗುವುದಿಲ್ಲವೆ ? " ಎಂದು ನೆರೆಯ ಸುಲಭಾ ಕೇಳಿದ್ದರು. ನಾಲ್ಕುದಿನಗಳ ರಜೆಯಲ್ಲೇ ಆ ಮಾತಿನ ಸತ್ಯತೆ ಮನವರಿಕೆಯಾಗಿತ್ತು. ಪರಿಚಿತವಲ್ಲದ ಈ ಏಕಾಂತತೆ, ಸರೋಜಿನಿಯ ಎಂಟು ವರ್ಷಗಳ ಜೀವನ ಕ್ರಮವನ್ನೆ ಕದಡಿತ್ತು. ಉಮೇಶ, ಪಪ್ಪಿಯರ ಬಾಣಂತನದ ಸಂದರ್ಭಗಳಲ್ಲಿ ಮಾತ್ರ ಆಕೆ ಎರಡು ತಿಂಗಳಕಾಲ ಮನೆಯಲ್ಲಿ ಮಲಗಿಕಳೆಯಬೇಕಾಗಿತ್ತು. ಆಗ ಕೂಡ, ರಜೆ ಪಡೆಯುವ ಅನುಕೂಲತೆಯಿದ್ದಾಗಲೆಲ್ಲ ಮನೋಹರ ಆಕೆಯ ಜತೆಗಿದ್ದ. ಉಳಿದ ವೇಳೆ, ಮಗುವಿನ ಆರೈಕೆ, ಪ್ರಶಾಂತತೆಗೆ, ಏಕಾಂತ ಚಿಂತನೆಗೆ ಅವಕಾಶಕೊಡುತ್ತಿದ್ದುದೆಂದಿಲ್ಲ.

ಆದರೆ ಈಗ !

ಹೊಸಮನೆಗೆ ಬಂದ ಮೂರುತಿಂಗಳಲ್ಲೂ ಅವಳು ನೆರೆಕರೆಯ ಸಹವಾಸವನ್ನು ತೂಗಿ ಬಯಸಿರಲಿಲ್ಲ. ಪರಿಚಯ ಅಗತ್ಯವೆನಿಸಿದಾಗಲೂ ಅದಕ್ಕೆ ಅತಿಯಾದ ಮಹತ್ವ ಕೊಟ್ಟಿರಲಿಲ್ಲ. ಆದರೂ ತಾನು ರಜೆಯಲ್ಲಿದ್ದೇನೆಂದು ತಿಳಿದ ಮೇಲೂ ನಾಲ್ಕು ದಿನ ಸುಲಭಾ ರೇಗೆಯ ಮುಖದರ್ಶನವಾಗದೆ ಇದ್ದಾಗ ಸ್ವಾಭಾವಿಕವಾಗಿಯೇ ಸರೋಜಿನಿಗೆ ಆಶ್ಚರ್ಯವಾಗಿತ್ತು. ಆದರೆ ತಾನಾಗಿಯೇ ಆಕೆ ಸುಲಭಾ ರೇಗೆಯ ಮನೆಗೆ ಹೋಗಲಿಲ್ಲ. ಮನಸ್ಸಿನಲ್ಲಿ ಮನೋಹರನ ನಿರೀಕ್ಷೆಯ ನೋವಿತ್ತು. ಆ ನೋವು ಕಡಿಮೆಯಾಗಲೆಂದು ಆಕೆ ಬಳಸಿದ ಸಾಧನವಾದ ಪುಸ್ತಕಗಳ ರಾಶಿ ಕೋಣೆತುಂಬ ಹರಡಿ, ಸಮಯ ಕಳೆಯಲು ಸಹಕಾರ ಮಾಡಿತ್ತು.

ಆದರೆ ಹೀಗಿದ್ದಾಗಲೇ, ಒಂದು ದಿನ

ಬೆಳಿಗ್ಗೆ ಮಕ್ಕಳೆಲ್ಲ ಶಾಲೆಗೆ ಹೋದ ಮೇಲೆ, ಕೆಲಸದಾಕೆ ಸಾಮಾನು ತರಲೆಂದು ಮಾರ್ಕೆಟಿಗೆ ಹೋಗಿದ್ದಾಗ ತುಸು ಬೇಸರ ಕಳೆಯುಲೆಂದು ರೇಡಿಯೋ ಹಚ್ಚಿ ಕುಳಿತಿದ್ದ ಸರೋಜಿನಿಯನ್ನು ಕರೆಗಂಟೆ ಎಚ್ಚರಿಸಿತು. ಒಳಗೆ ಬಂದುದು ಸುಲಭಾ ರೇಗೆ.

ಯಾರನ್ನೂ ಹೆದರಿಸುವಂತಿತ್ತು ಅವರ ಮುಖಭಾವ; ಹೆದರಿದ ಕಣ್ಣುಗಳು—ಬೆವರೊಡೆದ ಹಣೆ.

“ಏನು? ಏನಾಯಿತು ?” ಎಂದಳು ಸರೋಜ.

“ಸ್ವಲ್ಪ ಮನೆಗೆ ಬರುತ್ತೀರಾ ?” ಎಂದರು ಸುಲಭಾ.

ಸರೋಜ ಮನೆಯ ಬಾಗಿಲು ಮುಚ್ಚಿಕೊಂಡು ಸುಲಭಾ ರೇಗೆಯನ್ನೆ ಹಿಂಬಾಲಿಸಿದಳು.

ಸುಲಭಾಳ ಮನೆಯ ಡ್ರಾಯಿಂಗ್ ರೂಮ್‌ಗೆ ಹೊಂದಿಕೊಂಡ ದೊಡ್ಡ ಬಾಲ್ಕನಿಯಲ್ಲಿ ಮುದುಕರೊಬ್ಬರು ಮಲಗಿದ್ದರು. ವಯಸ್ಸು ಅರುವತ್ತೈದಕ್ಕೂ ಹೆಚ್ಚಿರಬೇಕು. ಅವರ ಬಾಯಿಂದ ಜೊಲ್ಲು ಸುರಿಯುತ್ತಿತ್ತು. ಕಣ್ಣಾಲಿಗಳು ಮೇಲಕ್ಕೆದ್ದು ನಿಂತಂತಿದ್ದವು. ಕಾಲು ಗಡಗಡ ನಡುಗುತ್ತಿದ್ದವು.

ಸರೋಜ ಮನೆಯೊಳಗೆ ಬಂದಾಗ, ಸುಲಭಾ ಬಿಕ್ಕಿಬಿಕ್ಕಿ ಅಳಲಾರಂಭಿಸಿದರು.

“ಏನಾಯಿತು ?” ಎಂದವಳೇ ಸರೋಜ ನೀರಿಗಾಗಿ ಹುಡುಕಾಡಿದಳು. ನೀರು ಸಿಕ್ಕಾಗ ಆ ಮುದುಕನ ಬಳಿ ಓಡಿಬಂದು ಕಣ್ಣ ಮೇಲೆ ಚಿಮುಕಿಸಿದಳು. . .ಅವರ ಎದೆ ಕೈ ಕಾಲುಗಳನ್ನು ತಿಕ್ಕಿ ಎಚ್ಚರ ಬರುವಂತೆ ಪ್ರಯತ್ನಿಸಲಾರಂಭಿಸಿದಳು.

ಒಳಗಡೆ ಸುಲಭಾಳ ಮೂರು ವರ್ಷದ ಮಗು ಇಂದು ಅಳುತ್ತಿತ್ತು.

“ಕಾಯಿಪಲ್ಯ ತರಲೆಂದು ಮಾರ್ಕಿಟಗೆ ಹೋಗಿದ್ದೆ. ಮರಳಿ ಬಂದು ಬೆಲ್ ಮಾಡಿದೆ. ಬಾಗಿಲು ತೆರೆಯಲಿಲ್ಲ. ಮಾವ ನಿದ್ರಿಸಿರಬೇಕೆಂದು ನನ್ನ ಕೈಯಲ್ಲಿದ್ದ ಕೀಲಿಯಿಂದ ಬಾಗಿಲು ತೆರೆದು ಒಳಗೆ ಬಂದೆ. ಅಡಿಗೆಯ ಮನೆಯ ಬಾಗಿಲು ಮುಚ್ಚಿಕೊಂಡಿತ್ತು. ಹೊರಗೆ ಮಗು ಅಳುತ್ತಿತ್ತು. ಏನೋ ಸಂದೇಹ ಬಂದು ಬಾಗಿಲು ಬಡಿಯತೊಡಗಿದೆ. ನಾಲ್ಕು ದಿನ ಸೌಖ್ಯವಿಲ್ಲದೆ ಮಲಗಿದ್ದ ಮಾವ ಅಡಿಗೆಯ ಮನೆಯ ಬಾಗಿಲು ಮುಚ್ಚಿಕೊಂಡು ಒಳಗಿದ್ದುದೇ ನನಗೆ ಅರ್ಥವಾಗಲಿಲ್ಲ. ಜೋರಾಗಿ ಬಾಗಿಲು ಬಡಿಯತೊಡಗಿದಾಗ ಅವರು ಬಾಗಿಲು ತೆರೆದರು. . “ನನ್ನನ್ನು ಸಾಯಲು ಬಿಡಬಾರದೆ ಸುಲಭಾ” ಎಂದು ನಡುಗುತ್ತಲೇ ಬಾಲ್ಕನಿಗೆ ಹೋಗಿ ಬಿದ್ದರು. .”

ನೀರು ತರುವ ಅವಸರದಲ್ಲಿ ಸರೋಜ ಗಮನಿಸಿರಲಿಲ್ಲ. ಈಗ ನೋಡಿದಾಗ, ಅಡಿಗೆಯ ಮನೆಯ ಮಾಡಿನಲ್ಲಿದ್ದ ಕೊಂಡಿಗೆ ನೇತುಗೊಂಡಿದ್ದ ಹಳೆಯ ಧೋತ್ರವೊಂದು ಕಾಣುತ್ತಿತ್ತು. .

ಸರೋಜಿನಿಯ ಮೈ ಬೆವರಲಾರಂಭಿಸಿತು.

“ಇಂದು ರಾಜು, ವಿನಾಯಕ ಎಂದರೆ ಅವರಿಗೆ ತನ್ನ ಮಕ್ಕಳಂತೆಯೇ ಜೀವ. ನನ್ನನ್ನು ಮಗಳಂತೆಯೇ ಬಗೆದಿದ್ದರು. ತನ್ನ ಮಗ ತಂದೆಯನ್ನು ಹೊರದೂಡಿದರೂ ನನ್ನ ಗಂಡ ಅವರನ್ನು ತಂದೆಯಂತೆಯೇ ನೋಡಿಕೊಂಡಿದ್ದರು . . ಹೀಗಿದ್ದೂ. . ”

ಸುಲಭಾಳ ಮಾತು ಕೇಳುತ್ತಿತ್ತು . . ಆದರೆ ಸರೋಜಿನಿಯ ಕಣ್ಣ ಮುಂದಿದ್ದುದು ತೂಗಾಡುವ ಹಳೆಯ ಧೋತ್ರ. . ಮುದುಕರ ನಡುಕ ಸ್ವಲ್ಪ ಕಡಮೆಯಾದಂತೆ ತೋರಿದಾಗ, ಅಳುತ್ತಿದ್ದ ಸುಲಭಾಳೊಡನೆ “ಸ್ವಲ್ಪ ನೋಡಿಕೊಳ್ಳಿ. ಗಾಬರಿಯಾಗಬೇಕಿಲ್ಲವೆಂದು ತೋರುತ್ತದೆ. ಏನಿದ್ದರೂ ಡಾಕ್ಟರರನ್ನು ಕರೆಸುತ್ತೇನೆ. . ಅಡಿಗೆಯ ಮನೆಯ ಆ ಬಟ್ಟೆ ತೆಗೆದುಬಿಡಿ; ಇಲ್ಲವೆ ಬಾಗಿಲು ಮುಂದೆ ಮಾಡಿಕೊಳ್ಳಿ” ಎಂದು ಅವಸರದಿಂದ ಹೊರಟಾಗ ಸುಲಭಾ “ಸ್ವಲ್ಪ ನಮ್ಮ ಯಜಮಾನರಿಗೂ ಟೆಲಿಫೋನ್ ಮಾಡಿ ಕರೆಸಿ. ಕಾರ್ಪೊರೇಶನ್ ಟೌನ್ ಹಾಲಿನ ವಿಭಾಗದಲ್ಲಿದ್ದಾರೆ” ಎಂದರು.

ಸರೋಜ ಅಲ್ಲಿಂದ ಓಡಿದವಳು ತನ್ನ ಡಾಕ್ಟರರಿಗೂ ಸದಾನಂದ ರೇಗೆಯವರಿಗೂ ಟೆಲಿಫೋನ್ ಮಾಡಿ ಮರಳಿದಾಗ, ಬಾಲ್ಕನಿಯಲ್ಲಿದ್ದ ಮುದುಕ ನಿದ್ರಿಸಿದಂತಿತ್ತು.

ಸುಲಭಾಳ ಅಳು ಕಡಮೆಯಾಗಿತ್ತು. ಸರೋಜಳ ಕುತೂಹಲ ಕೆದರಿಸಿದ ಪ್ರಶ್ನೆ ಪ್ರಕಟವಾದದ್ದು ಆಗಲೇ “ಇವರು ಯಾರು ? ನಿಮ್ಮ ಮಾವನಲ್ಲವೇ ?”

“ರಕ್ತ ಸಂಬಂಧವೇನಿರದಿದ್ದರೂ ನಾವು ಕರೆಯುತ್ತಿರುವುದು ಮಾವನೆಂದೇ. . . ನನ್ನ ಗಂಡ ಪುಣೆಯಲ್ಲಿ ಕಲಿಯುತ್ತಿದ್ದಾಗ, ನಾಲ್ಕು ವರ್ಷಕಾಲ ಇದ್ದದ್ದು ಇವರಲ್ಲಿಯೇ. ಒಂದಾನೊಂದು ಕಾಲದಲ್ಲಿ ಸಾಕಷ್ಟು ಸಂಪತ್ತಿದ್ದ ಮನೆ. ಏನು ಕೆಟ್ಟಕಾಲ ಬಂತೊ . . . ಇಳಿವಯಸ್ಸಿನಲ್ಲಿ ಕುದುರೆಯ ಜೂಜಿನ ಹುಚ್ಚು ಗಂಟುಬಿದ್ದು ಇದ್ದದ್ದೆಲ್ಲ ಹೋಯಿತು. ಹೆಂಡತಿಯೂ ತೀರಿಕೊಂಡರು. ಮಗನೂ ಮನೆಯಿಂದ ಹೊರದೂಡಿದ . . . ಈಗ ನಾಲ್ಕು ವರ್ಷಗಳಿಂದ ನಮ್ಮಲ್ಲಿಯೇ ಇದ್ದಾರೆ, ನಮಗೆ ಮಾವನಾಗಿ; ಮಕ್ಕಳಿಗೆ ಅಜ್ಜನಾಗಿ...”

ಸರೋಜಿನಿಯ ಕಿವಿಗಳಲ್ಲಿ ಪ್ರತಿಧ್ವನಿಸುತ್ತಿದ್ದ ಮಾತೊಂದೇ. “ಮಗನೂ ಮನೆಯಿಂದ ಹೊರದೂಡಿದ. . . ಈಗ ನಾಲ್ಕು ವರ್ಷಗಳಿಂದ ನಮ್ಮಲ್ಲಿಯೇ ಇದ್ದಾರೆ. . ”

ಹದಿನೈದು ನಿಮಿಷಗಳಲ್ಲೇ ಸರೋಜಿನಿಯ ಪರಿಚಿತ ಡಾಕ್ಟರ್ ಬಂದು ಮಲಗಿದ್ದ ಮುದುಕರನ್ನು ಪರೀಕ್ಷಿಸಿ ಹೇಳಿದುದಿಷ್ಟೆ... "ಇಳಿ ವಯಸ್ಸು... ನರಗಳ ದೌರ್ಬಲ್ಯ... ಹೀಗಾಗುವುದಿದೆ. . . ಮನಸ್ಸಿಗೆ ಏನೋ ಚಿಂತೆ ಅಂಟಿಕೊಂಡಿರಬೇಕು. . . ಗಾಬರಿಯೇನಿಲ್ಲ... ಔಷಧಿ ಬರೆದುಕೊಡುತ್ತೇನೆ.''

ಡಾಕ್ಟರ್ ಹೊರಡುತ್ತಿದ್ದಾಗ, ಸದಾನಂದ ರೇಗೆಯವರೂ ಓಡಿಬಂದರು. ಅವಸರದಲ್ಲಿ ಓಡಿಬಂದ ಅವರಿಗೆ ಮಲಗಿದ್ದ 'ಮಾವ'ನನ್ನು ಮಾತನಾಡಿಸುವುದೇ, ಸರೋಜಿನಿ, ಡಾಕ್ಟರರಿಗೆ ಕೃತಜ್ಞತೆ ಸೂಚಿಸುವುದೇ, ಯಾವುದು ಮೊದಲು ಮಾಡಬೇಕಾದ ಕೆಲಸವೆಂಬುದೇ ತಿಳಿದಿರಲಿಲ್ಲ.

ಹೊರಗೆ ಹೊರಟ ಡಾಕ್ಟರ್ ಸರೋಜಿನಿಯೊಡನೆ "ನೀವು ಚೆನ್ನಾಗಿದ್ದೀರಲ್ಲಾ. . ರಜೆ ಪಡದೇ ಇದ್ದೀರಿ. ಬಹಳ ಒಳ್ಳೆಯದು. . . ಮನೋಹರ ಯಾವಾಗ ತಿರುಗಿಬರುತ್ತಾರೆ?'' ಎಂದರು.

"ಬರಬಹುದು ಇನ್ನೆಂಟು ದಿನಗಳಲ್ಲಿ" ಎಂದಳು ಸರೋಜ.

ರೇಗೆ ದಂಪತಿಗಳ ಕೃತಜ್ಞತೆಯ ಉಪಚಾರದಿಂದ ತಪ್ಪಿಸಿಕೊಂಡು ಮನೆಗೆ ಮರಳಿದ ಸರೋಜಿನಿಯ ಕಣ್ಣಮುಂದಿದ್ದುದು ಒಂದೇ ಚಿತ್ರ---ಸುಲಭಾ ರೇಗೆಯ ಅಡುಗೆಯ ಮನೆಯ ಕೊಂಡಿಗೆ ನೇತುಕೊಂಡಿದ್ದ ಹಳೆಯ ಧೋತ್ರವೊಂದು.

ಸುಲಭಾ ಐದು ನಿಮಿಷ ತಡವಾಗಿ ಬಂದಿದ್ದರೆ !

"ಮಗನೂ ಮನೆಯಿಂದ ಹೊರದೂಡಿದ. ಈಗ ನಾಲ್ಕು ವರ್ಷಗಳಿಂದ ನಮ್ಮಲ್ಲಿಯೇ ಇದ್ದಾರೆ" ಎಂದಿದ್ದರು ಸುಲಭಾ. . .ಆ ಮಾತು ಮರುದನಿ ಕೊಡುವಂತಿತ್ತು.

ಮತ್ತೆಂಟು ದಿನಗಳಲ್ಲಿ ಮ ನೋ ೕ ಹ ರ ಮರಳಿಬಂದ.

ಮನೋಹರ ತಿಳಿಸಿಯೇ ಬಂದಿದ್ದರೂ ಆತ ಬರುವ ದಿನ, ಗಾಡಿ ತಿಳಿದಿದ್ದರೂ ಸರೋಜ ದಾದರ್ ನಿಲ್ಮನೆಯ ತನಕ ಹೋಗಲಿಲ್ಲ.

ಬಾಲ್ಕನಿಯಲ್ಲಿ ನಿಂತು ದೂರದ ರಿಫ್ಯಾ-ನರಿಯ ಸಂಕೇತಜ್ವಾಲೆ ಬೆಳಗುತ್ತಿದ್ದುದನ್ನೆ ನೋಡುತ್ತಿದ್ದ ಸರೋಜ್ ಗಂಡ ಟ್ಯಾಕ್ಸಿಯಿಂದಿಳಿಯುವುದನ್ನು ನೋಡಿದಳು. . . ಕೆಳಗೆ ಅಂಗಳದಲ್ಲಿ ಆಡುತ್ತಿದ್ದ ಪಪ್ಪಿ ಓಡಿ ಹೋಗಿ ತಂದೆಯನ್ನು ತಬ್ಬಿಕೊಂಡ.

ಮಗುವನ್ನು ಎತ್ತಿಕೊಂಡೇ ಮನೆಗೆ ಮರಳಿದ ಮನೋಹರನಿಗೆ ಬಾಗಿಲು ತೆರೆದು ಸ್ವಾಗತಿಸಿದುದು ಕೆಲಸದಾಕೆ ಅಮ್ಮಣ್ಣಿಯೇ.

ಮಗುವಿನ ಕೈಗೆ ತಿಂಡಿಯ ಹೊರೆ ಕೊಟ್ಟು ಒಳಗೆ ಬಂದ ಮನೋಹರನನ್ನು ಸರೋಜಿನಿ ಮಾತನಾಡಿಸಲಿಲ್ಲ. ಡ್ರೆಸ್ಸಿಂಗ ಮೇಜಿನ ಬಳಿಯಿದ್ದ ಸ್ಟೂಲ್‌ನ ಮೇಲೆ ಕುಳಿತು ಶೂಸ್ ಕಳಚುತ್ತಿದ್ದ ಮನೋ-ಹರನೇ ಮೊದಲು ಮಾತನಾಡಿದ.

"ಅಪ್ಪನಿಗೆ ವಿಪರೀತ ಕಾಯಿಲೆಯೆಂದು ತಿಳಿದು ರಜೆ ಪಡೆದು ಹೋದೆ ರೋಜಾ. . . ನಿನಗೆ ತಿಳಿಸದೆಯೆ. . .ಅಪ್ಪ ತೀರಿಕೊಂಡರು. . ."

"ಕೊನೆಯ ದಿನಗಳಲ್ಲಿ ತುಂಬ ಕಷ್ಟಪಟ್ಟರಂತೆ. ಕಾಯಿಲೆಯಿಂದಾಗಿ. . .ಮನೆಯಲ್ಲಿ ಅಮ್ಮನಿಗೆ ವಾತದ ಉಪದ್ರ...ಇರುವ ತಂಗಿ ನಿತ್ಯರೋಗಿ. . .ನೋಡಿಕೊಂಡದ್ದು ನೆರೆಕರೆಯ ಪುಣ್ಯಾತ್ಮರು. . .ಆದರೂ ಕೊನೆಯ ಗಳಿಗೆಯಲ್ಲಿ ಮಗನನ್ನು ನೋಡಿದೆ ಎನ್ನುವ ಸಮಾಧಾನ ಅವರಿಗೆ. . .''

ಸರೋಜಿನಿ ಮಾತೇ ಆಡಲಿಲ್ಲ. ಗೋಡೆಯಲ್ಲಿ ಆಕೆಯ ತಾಯಿಯ ಭಾವಚಿತ್ರ ತೂಗಾಡುತ್ತಿತ್ತು.

''ಏನಾದರೊಂದು ವ್ಯವಸ್ಥೆ ಮಾಡಿ ಬರಬೇಕೆಂದು ಇಷ್ಟು ದಿನ ನಿಂತೆ. ಹಳೆಯ ಬಂಧನಗಳನ್ನೆಲ್ಲ ಮುರಿದು ಹೊಸ ಜಗತ್ತನ್ನೆ ರೂಪಿಸಿಕೊಳ್ಳುವಂಥ ನಿನ್ನ ಧೈರ್ಯ ನನಗಿರದೆ ಹೋಯಿತು. ."

ಈಗಲೂ ಸರೋಜಿನಿ ಮಾತನಾಡಲಿಲ್ಲ... ಕಣ್ಣುಗಳು ತುಂಬಿಕೊಳ್ಳುತ್ತಿದ್ದರೂ ಆಕೆ ಮಾತನಾಡಲಿಲ್ಲ...'' ದಮ್ಮಯ್ಯ ಅವರನ್ನು ಕರೆಸಿ ; ನಾನು ನೋಡಿಕೊಳ್ಳುತ್ತೇನೆ, ಕರೆಸಿ" ಎಂದು ಹೇಳಬೇಕೆಂದು ಬಯಸಿದ ಮಾತುಗಳೂ ಆಡದೆಯೇ ಉಳಿದವು.

"ನೀನು ಹೇಗಿದ್ದೀಯ ! ಡಾಕ್ಟರರನ್ನು ನೋಡಿದೆಯಾ ?" ಎಂದು ಮನೋಹರ ಕೇಳಿದ.

ಈಗ ಸರೋಜಿನಿ ಓಡಿಹೋಗಿ ಗಂಡನನ್ನು ತಬ್ಬಿಕೊಂಡಳು. ಆತನ ಎದೆಯ ಮೇಲೆ ತಲೆಯಿರಿಸಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.







# ರಾಷ್ಟ್ರೀಯ ಐಕ್ಯ

ಲೇಖಕರು:

**ಡಾ. ಎನ್. ಆರ್. ತಾವಡೆ,**
B.A., M.Sc. (Bom.) Ph.D., F. Inst. P., F. A. Sc., F. N. I.
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ರಾಷ್ಟ್ರದಲ್ಲಿ ಇಂದು ತೀವ್ರ ಭಾಷಾಭಿಮಾನ, ಪ್ರಾದೇಶಿಕ ಅಭಿಮಾನಗಳಿಂದ ಸಮಗ್ರತೆಯನ್ನು ಕಾಯ್ದುಕೊಂಡು ಹೋಗಲು ಅಡೆತಡೆಯಾಗುತ್ತಿರುವದನ್ನು ಎಲ್ಲರೂ ಅರಿತಿರುವರು. ಕೆಲಭಾಗಗಳಲ್ಲಿ ಗಲಭೆಗಳೂ ಸಂಭವಿಸಿವೆ. ಕೇಂದ್ರ-ರಾಜ್ಯ ಸರಕಾರಗಳಲ್ಲಿ ವಿವಾದಗಳು ಆಗಾಗ ತಲೆದೋರುತ್ತಲಿವೆ. ರಾಷ್ಟ್ರೀಯ ಭಾವೈಕ್ಯ ಅಗತ್ಯನೆಂಬುದಕ್ಕೆ ಇವೆಲ್ಲ ನಿದರ್ಶನಗಳು. "ದೇಶ ಬದುಕಿದರೆ ವ್ಯಕ್ತಿ ಬದುಕುತ್ತಾನೆ" ಎಂಬುದನ್ನು ಜನ ಸಾಮಾನ್ಯರು ಅರಿತುಕೊಳ್ಳಬೇಕಾಗಿದೆ. ಈ ದಿಸೆಯಲ್ಲಿ ಆಗಿರುವ ಆಗಬೇಕಾದ ಕಾರ್ಯಗಳೇನೆಂಬುದರ ವಿವೇಚನೆಯು ಇಲ್ಲಿದೆ.

ಇತ್ತೀಚೆಗೆ ಭಾರತದ ರಾಷ್ಟ್ರೀಯ ಐಕ್ಯ ಅಥವಾ ಭಾವೈಕ್ಯದ ಬಗೆಗೆ ಚರ್ಚೆ ನಡೆದು ಅನೇಕ ಅಭಿಪ್ರಾಯಗಳು ವ್ಯಕ್ತವಾಗಿವೆ. ದೇಶದ ಅನೈಕ್ಯಕ್ಕೆ ಕಾರಣಗಳು ಯಾವವು? ಮತ್ತು ಐಕ್ಯವನ್ನು ಸಾಧಿಸುವ ಉಪಾಯಗಳು ಯಾವವು—ಎಂಬ ಬಗ್ಗೆ ಮತಭೇದವಿದ್ದರೂ ರಾಷ್ಟ್ರದ ಐಕ್ಯದ ಆವಶ್ಯಕತೆಯ ಬಗೆಗೆ ಎರಡು ಅಭಿಪ್ರಾಯಗಳಿಲ್ಲ. ಇಂದಿನ ಅಂತಾರಾಷ್ಟ್ರೀಯ ಪರಿಸ್ಥಿತಿ ಮತ್ತು ದೇಶದ ಸರ್ವಾಂಗೀಣ ಪ್ರಗತಿ—ಇವುಗಳನ್ನು ಲಕ್ಷಿಸುವ ಪ್ರತಿಯೊಬ್ಬ ವಿಚಾರವಂತ ಭಾರತೀಯನಿಗೂ ನಮ್ಮ ದೇಶದಲ್ಲಿ—ಎಂದಿಗಿಂತ ಹೆಚ್ಚಾಗಿ ಇಂದು—ಐಕ್ಯದ ಆವಶ್ಯಕತೆ ಇದೆ ಎಂಬ ಮಾತು ಪುನಃ ಪುನಃ ಅನಿಸದೆ ಇರದು. ಈ ಸಮಸ್ಯೆಯನ್ನು ಕೆಲವು ಸಾರೆ ನಾವು ಭಾವನಾವಶರಾಗಿ ನೋಡುವುದುಂಟು; ಆದರೆ ಹಾಗೆ ಮಾಡದೆ ರಾಷ್ಟ್ರದ ಐಕ್ಯವೆಂದರೇನು? ಅನೈಕ್ಯಕ್ಕೆ ಕಾರಣಗಳು ಯಾವುವು?—ಮತ್ತು ಅವುಗಳ ನಿವಾರಣೋಪಾಯವೇನು?— ಎಂಬುದನ್ನು ಯಾವ ಪೂರ್ವಗ್ರಹವಿಲ್ಲದೆ, ವಿಚಾರಪೂರ್ವಕವಾಗಿ, ಕೂಲಂಕಷವಾಗಿ ಪರಿಶೀಲಿಸುವುದು ಆಗತ್ಯವಾಗಿದೆ.

ವಿದೇಶೀಯರ ಆಳಿಕೆಯಲ್ಲಿ—ಅದರಲ್ಲಿಯೂ ಬ್ರಿಟಿಶರ ಭೇದನೀತಿಯ ಪರಿಣಾಮವಾಗಿ—ಭಾರತವು ರಾಜಕೀಯವಾಗಿ ತುಂಡು ತುಂಡಾಯಿತು; ಮಾತ್ರವಲ್ಲ, ಆಸೇತು ಹಿಮಾಚಲ ಭಾರತವು ಒಂದೇ ದೇಶ ಎಂಬ ಭಾವನೆ ಕಡಿಮೆಯಾಯಿತು. "ಭಾರತವು ಒಂದು ರಾಷ್ಟ್ರವಲ್ಲ; ಭಾರತವು ಕೇವಲ ಒಂದು ಭೌಗೋಲಿಕ ಕಲ್ಪನೆ—ಭಾರತೀಯರು ಒಂದು ಜನಾಂಗವಲ್ಲ" ಎಂದು ಬ್ರಿಟಿಶರು ಹೇಳುತ್ತಿದ್ದರು. ಇಂಥ ದೊಡ್ಡ ದೇಶವನ್ನು ಆಳುವುದಕ್ಕಾಗಿ, ತಮ್ಮ ಭೇದನೀತಿಗೆ ಪುಷ್ಟಿ ಕೊಡುವುದಕ್ಕಾಗಿ, ಹೀಗೆ ಅವರು ಹೇಳುತ್ತಿದ್ದರೆಂಬುದು ಸ್ಪಷ್ಟವಾಗಿದೆ. ಏಕೆಂದರೆ, ಪ್ರಾಚೀನಕಾಲದಲ್ಲಿ ಕೂಡ ಭಾರತವು ಒಂದೇ ದೇಶ ಎಂಬ ಕಲ್ಪನೆ ಇತ್ತು. ಉದಾಹರಣೆಗೆ ಶ್ರೀ ಶಂಕರಾಚಾರ್ಯರು, ಬಸವೇಶ್ವರರು, ರಾಮಾನುಜರು ಮಧ್ವಾಚಾರ್ಯರು, ಮೊದಲಾದ ಮತಪ್ರಸ್ಥಾಪಕರು ಭಾರತವನ್ನೆಲ್ಲ ಸುತ್ತಿ, ತಮ್ಮ ತತ್ತ್ವಜ್ಞಾನವನ್ನು ಜನತೆಗೆ ಬೋಧಿಸಿ, ಭಾರತದ ದಿಕ್ಕು ದಿಕ್ಕುಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಇದರಿಂದ ಅವರ ಕಾಲದಲ್ಲಿಯೂ ಭಾರತವು ಒಂದೇ ನಾಡು ಆಗಿತ್ತು ಎಂಬ ಮಾತು ಸ್ಪಷ್ಟವಾಗುತ್ತದೆ—ಎಂದು ಶ್ರೀ ನೆಹರೂ ಅವರು ತಮ್ಮ "ಭಾರತದರ್ಶನ"ದಲ್ಲಿ ಹೇಳಿದ್ದಾರೆ. ಅಶೋಕನ ಕಾಲದಲ್ಲಿ ಭಾರತವು ಒಂದೇ ಆಗಿತ್ತು; ಮಹಮ್ಮದೀಯರ ಆಳಿಕೆಯಲ್ಲಿ ಕೂಡ ಭಾರತದ ದಕ್ಷಿಣ—ಉತ್ತರ ಭಾಗಗಳು ಸಮೀಪಬಂದಿದ್ದವು. ವಿಶೇಷವಾಗಿ ಬ್ರಿಟಿಶರ ಆಳಿಕೆಯಲ್ಲಿ ಮಾತ್ರ ವಿಭಜನೆ ಪ್ರಾರಂಭವಾಯಿತು; ಹಿಂದು-ಮುಸಲ್ಮಾನರೆಂಬ ಭೇದವನ್ನು ಅವರು ಮೇಲಿಂದ ಮೇಲೆ ಒತ್ತಿ ಹೇಳುತ್ತಿದ್ದರು.

ಬ್ರಿಟಿಶರು ನಮ್ಮ ದೇಶದಿಂದ ಕಾಲ್ದೆಗೆದರೂ ಅವರ ಭೇದನೀತಿಯ ವಿಷವು ಇನ್ನೂ ಹೋದಂತಿಲ್ಲ. ನಮ್ಮ ದೇಶವು ಸ್ವತಂತ್ರವಾದಾಗಿನಿಂದ ಪರೀಕ್ಷಿಸಿದರೆ, ಪ್ರಾಂತೀಯ, ಜಾತೀಯ ಹಾಗೂ ಭಾಷೆಯ ಅಭಿಮಾನ—ನಿಷ್ಠೆಗಳು ಹೆಚ್ಚಾಗಿ ಅವಶ್ಯವಾಗಿರುವ ಐಕ್ಯದ ಭಾವನೆ ಹೆಚ್ಚು ಹೆಚ್ಚು ಬೆಳೆಯುತ್ತಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ. ಹಿಂದೆ ಧರ್ಮವು ಭಾರತೀಯರನ್ನು ಒಂದುಗೂಡಿಸುವ ಒಂದು ಪ್ರಬಲಶಕ್ತಿಯಾಗಿತ್ತು; ಧರ್ಮದ ಬಗೆಗೆ ಹಿಂದೆ ಇದ್ದ ನಿಷ್ಠೆ ಈಗ ಇಲ್ಲ. ನೌಕರಿ ಅಥವಾ ಇತರ ಆರ್ಥಿಕ ರಂಗಗಳಲ್ಲಿ ಒಂದು ವಿಶಿಷ್ಟ ಸಮಾಜ, ಜಾತಿ-ಪಂಥದವರು ಇನ್ನೊಂದು ಪಂಥದವರಿಗಿಂತ ಹೆಚ್ಚು ಅವಕಾಶವನ್ನು ಪಡೆಯುತ್ತಾರೆ ಎಂಬ ಈರ್ಷೆ; ಸುಶಿಕ್ಷಿತರಾದವರು ಅಶಿಕ್ಷಿತ ಸಮಾಜದವರ ಅಜ್ಞಾನದ ಲಾಭವನ್ನು ಪಡೆಯುವುದು; ಭಾಷೆ, ಧರ್ಮ, ರೀತಿ-ನೀತಿಗಳು ಮೊದಲಾದವುಗಳಲ್ಲಿ ಭಿನ್ನತೆ— ಇವೇ ಮೊದಲಾದವುಗಳು ದೇಶದ ಅನೈಕ್ಯವನ್ನು ಬೆಳೆಸಲು ಕಾರಣವಾಗುತ್ತವೆ.

ಈ ಅನೈಕ್ಯವು ನಾನಾರೂಪಗಳಲ್ಲಿ ವ್ಯಕ್ತವಾಗುತ್ತದೆ:— ಆಸಾಮ, ಜಬಲಪುರ, ಅಲೀಗಡಗಳಲ್ಲಿ ಆದ ದಂಗೆಗಳು, ರಾಜ್ಯ ಸರಕಾರಗಳು ಕೇಂದ್ರ ಸರಕಾರದ ಧೋರಣೆಗೆ ವ್ಯತಿರಿಕ್ತವಾಗಿ— ವಿರುದ್ಧವಾಗಿ ನಡೆದುಕೊಳ್ಳುವುದು; ಇತ್ಯಾದಿ. ಮೂರು ಚುನಾವಣೆಗಳು ನಡೆದು ಹೋದನಂತರ ರಾಜ್ಯಸರಕಾರಗಳೆಲ್ಲ ತಾವು ಕೇಂದ್ರದಿಂದ ದೂರವಾಗಿದ್ದು ಪ್ರತ್ಯೇಕ ರಾಜ್ಯಗಳೇ ಎನ್ನುವ ಭಾವನೆಯನ್ನು ತಾಳಹತ್ತಿವೆ. ಆದ್ದರಿಂದ ಅವುಗಳಿಗೆ ಕೇಂದ್ರದ ಸಂಬಂಧವಾಗಲಿ,

ಅಖಿಲ ಭಾರತೀಯ ಕಲ್ಪನೆಯಾಗಲಿ—ಅಷ್ಟಾಗಿ ಬೇಕಾಗಿಲ್ಲ, ಆದರೆ ಇಂದು ಸಮಗ್ರ ಭಾರತವೇ ಸರ್ವಾಂಗೀಣವಾಗಿ ಬೆಳೆಯಬೇಕಾಗಿದೆ; ಇಂಥ ಸಂದರ್ಭದಲ್ಲಿ ಪ್ರತಿಯೊಂದು ರಾಜ್ಯಸರಕಾರವು ತನ್ನದೇ ಆದ ಹಕ್ಕು—ಬಾಧ್ಯತೆಗಳನ್ನು ಪ್ರತಿಷ್ಠಾಪಿಸಲು ಯತ್ನಿಸುತ್ತಲಿದೆ. ಉದಾಹರಣೆಗೆ, ಕೇಂದ್ರ ಸರಕಾರವು ಕಲ್ಲಿದ್ದಲು ವ್ಯವಹಾರವನ್ನು ರಾಷ್ಟ್ರೀಯ ಕಲ್ಲಿದ್ದಲು ಅಭಿವೃದ್ಧಿ ಸಂಸ್ಥೆಗೆ ( National Coal Development Corporation ) ಮೀಸಲಾಗಿಡಬೇಕೆಂದಾಗ ಬಂಗಾಲದ ಮುಖ್ಯಮಂತ್ರಿಗಳು ಇದನ್ನು ತುಂಬಾ ಉಗ್ರವಾಗಿ ಪ್ರತಿಭಟಿಸಿದರು. ಕೇಂದ್ರ ಮತ್ತು ರಾಜ್ಯಸರಕಾರಗಳ ನಡುವಿನ ಈ ವ್ಯಾಜ್ಯವು ಬರೀ ಮಾತುಕತೆ ಪ್ರತಿಭಟನೆಗಳಿಗೆ ಮಾತ್ರ ನಿಲ್ಲಲಿಲ್ಲ. ಬಂಗಾಲ ಸರಕಾರವು ಈ ಸಂಸ್ಥೆ ಇದರಲ್ಲಿ ಕಾರ್ಯಗತವಾಗದಂತೆ ಕೇಂದ್ರಸರಕಾರದ ವಿರುದ್ಧ ನ್ಯಾಯಾಲಯಕ್ಕೆ ವ್ಯಾಜ್ಯವನ್ನು ಒಯ್ದಿತು. ಬಂಗಾಲದ ಸ್ಥಿತಿ ಹೀಗಾದರೆ, ಆಸಾಮ ಸರಕಾರವು ಇದೇ ಮನೋಭಾವವನ್ನೇ ವ್ಯಕ್ತಪಡಿಸಿದೆ. ಕೇಂದ್ರ ಸರಕಾರದ ಸಂಸ್ಥೆಯಾದ "Oil India" ಎಂಬುದಕ್ಕೆ ಮಕ್ತೆಯನ್ನು ಕೇಂದ್ರವು ಒಪ್ಪಿಸಬೇಕೆಂದಾಗ ಬಾಧ್ಯತಾಧನದ ( royalty ) ಪ್ರಶ್ನೆಯು ಇತ್ಯರ್ಥವಾಗುವವರೆಗೆ ಈ ಯೋಜನೆಯನ್ನೇ ತೆಗೆದುಕೊಳ್ಳದ ಹಾಗೆ ಆಸಾಮ ಸರಕಾರವು ಪ್ರತಿಭಟಿಸಿತು. ತೈಲಶುದ್ಧೀಕರಣದ ಬಗ್ಗೆ ಕೇಂದ್ರದ ತಜ್ಞರ ಅಭಿಪ್ರಾಯವು ಏನೇ ಇದ್ದರೂ ಆಸಾಮ ಸರಕಾರವು ಆಸಾಂ ರಾಜ್ಯದಲ್ಲಿಯೇ ಈ ಯೋಜನೆಗಳು ಅಸ್ತಿತ್ವದಲ್ಲಿ ಬರಬೇಕೆಂದು ಒತ್ತಾಯಪಡಿಸುತ್ತಲಿದೆ. ಅಷ್ಟೇ ಅಲ್ಲದೆ, ಅನೇಕ ಕೇಂದ್ರ ಯೋಜನೆಗಳನ್ನು ಪ್ರತಿಯೊಂದು ರಾಜ್ಯಸರಕಾರವು ತನ್ನ ಪ್ರದೇಶದಲ್ಲಿ ಕಾರ್ಯಗತ ಮಾಡಬೇಕು ಎಂದು ಒತ್ತಾಯಪಡಿಸುತ್ತಲಿದೆ. ಹೀಗಾಗಿ, ರಾಜ್ಯ ರಾಜ್ಯಗಳಲ್ಲಿ ಸ್ಪಷ್ಟವಾದ ತಿಳಿವಳಿಕೆ ಇದ್ದಂತೆ ಕಂಡುಬರುವುದಿಲ್ಲ, ಕೇಂದ್ರವು ಕೆಲಮಟ್ಟಿಗೆ ದೂರವಾಗಹತ್ತಿದೆ. ವ್ಯಕ್ತಿಗಳಲ್ಲಿ ಸಾಮಾಜಿಕ ಸ್ವಾಸ್ಥ್ಯ ಇದ್ದ ಹಾಗೆ ಕಂಡುಬರುವುದಿಲ್ಲ. ದ್ವೇಷ, ಅಸೂಯೆ, ಅಪನಂಬಿಕೆಗಳು ಕರಿನೆರಳಿನ ಹಾಗೆ ವ್ಯಾಪಿಸಿವೆ. ಸ್ವಾತಂತ್ರ್ಯ ದೊರೆತು ೧೪ ವರ್ಷಗಳಾದರೂ ನಾವಿನ್ನೂ **ಒಂದು** ಎಂಬ ಕಲ್ಪನೆ ಬೇರೂರಿಲ್ಲ. ವೈಷಮ್ಯ ಭಗ್ನಮನೋರಥಭಾವನೆ, ತುಂಡು ತುಣುಕುಗಳಾಗಿ ಕಚ್ಚಾಡುವುದು, ತಮ್ಮ ತಮ್ಮ ಭಾಷೆಯ ಬಗ್ಗೆ ಉಗ್ರವಾದ ಅಭಿಮಾನ ತಾಳುವುದು — ಇವು ನಿತ್ಯದ ಜೀವನದಲ್ಲಿ ಕಂಡುಬರುತ್ತವೆ. ಮುಖಂಡರೆನ್ನಿಸಿಕೊಂಡವರು ಹಿಂಬಾಲಿಗರ ಶೋಷಣೆಮಾಡುವುದೂ ಕಂಡುಬರುತ್ತದೆ.

ದಿನಬಳಕೆಯ ವಸ್ತುಗಳ ಬೆಲೆಗಳೇನೋ ದಿನದಿನಕ್ಕೆ ಪುಟಿದೇಳುತ್ತಿವೆ; ಆದ್ದರಿಂದ ಸಾಮಾನ್ಯ ಮನುಷ್ಯನು ನಿತ್ರಾಣನಾಗಿದ್ದಾನೆ. ತತ್ಪರಿಣಾಮವಾಗಿ, ಕೇಂದ್ರ ಸರಕಾರವು ಎಷ್ಟೇ ಮಹತ್ವಾಕಾಂಕ್ಷಿ ಯೋಜನೆಗಳನ್ನು ಹಮ್ಮಿದ್ದರೂ ಅದರ ಬಗ್ಗೆ ಅದು ಎಷ್ಟೇ ಕಳಕಳಿಯನ್ನು ತಾಳಿದ್ದರೂ ಆ ಯೋಜನೆಗಳ ಬಗ್ಗೆ ಆಗಲಿ, ಆರ್ಥಿಕ ಪುನರ್ನಿರ್ಮಾಣದ ಬಗ್ಗೆ ಆಗಲಿ, ಸಾಮಾಜಿಕ-ಶೈಕ್ಷಣಿಕ ಸಾಂಸ್ಕೃತಿಕ ಪುನರುತ್ಥಾನದ ಕಾರ್ಯಕ್ರಮಗಳಿಗೆ ಆಗಲಿ,— ಜನತೆಯಲ್ಲಿ ಉತ್ಸಾಹ ಮೂಡಿಲ್ಲ. ಸುಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಪ್ರೊ. ಡಿ. ಆರ್. ಗಾಡಗೀಳ ಅವರು ಹೇಳುವಂತೆ— "ನಿರಾಶಾಜನಕ ಬಡತನ, ವಿಪರೀತ ವೈಷಮ್ಯ, ಸಾಮಾಜಿಕ ಅಭದ್ರತೆಗಳು ರಾಷ್ಟ್ರೀಯ ಆದರ್ಶದ ಬಗ್ಗೆ ಜನತೆಯು ಚೈತನ್ಯವನ್ನು ಕಳೆದುಕೊಳ್ಳುವಂತೆ ಮಾಡಿ, ವಿಭಜನೆ ಮತ್ತು ನಿಷ್ಠಾಹೀನತೆಗೆ ಮಾರ್ಗವನ್ನು ಮಾಡಿಕೊಡುತ್ತಿವೆ." ಇವೆಲ್ಲ ನಿಜವಾಗಿ ದುರ್ದೈವದ ಮಾತುಗಳಾಗಿವೆ.

ಹಾಗಾದರೆ ಈ ಸಮಸ್ಯೆಯ ಪರಿಹಾರ ಹೇಗೆ? ಎಂಬುದನ್ನು ವಿಚಾರಿಸೋಣ. ದೇಶದ ಯೋಜನೆಗಳಲ್ಲೆಲ್ಲ ಭೌತಿಕ ಬೆಳವಣಿಗೆಗೆ ಪ್ರಾಶಸ್ತ್ಯ ಕೊಡಲಾಗಿದೆಯೇ ವಿನಾ ಸರಕಾರವು ವ್ಯಕ್ತಿಯನ್ನು ತನ್ನ ದೃಷ್ಟಿಪಥದಲ್ಲಿ ಇಟ್ಟುಕೊಂಡಿಲ್ಲ. ಮನುಷ್ಯನಿಗೆ ಮೊದಲು ಬೇಕಾಗುವುದು– ಅನ್ನ, ವಸತಿ ಮತ್ತು ಬಟ್ಟೆ. ಈ ಮೂರು ಪ್ರಮುಖ ಆವಶ್ಯಕತೆಗಳು ಈಡೇರದೆ ಯಾವ ದೊಡ್ಡ ಮಾತನ್ನು ಆಡಿದರೂ ಜನತೆಗೆ ಅರ್ಥವಾಗುವುದಿಲ್ಲ. ಜನತೆಯ ಸಮಾಧಾನ ಮತ್ತು ಸ್ವಾಸ್ಥ್ಯಗಳಿಗಿಂತ ಭೌತಿಕ ಬೆಳವಣಿಗೆಗೆ ಬಹಳ ಪ್ರಾಶಸ್ತ್ಯ ಕೊಡಲಾಗಿದೆ. ಹೀಗಾಗಿ common man-ಜನಸಾಮಾನ್ಯ ಕಣ್ಣಿಗೆ ಕಾಣದಹಾಗೆ ಆಗಿ uncommon ಆಗಿದ್ದಾನೆ. ತನ್ನ ಸಾಮಾನ್ಯತೆಯನ್ನು ಕಳೆದುಕೊಂಡಿದ್ದಾನೆ. ಹೊರಗಿನಿಂದ ಆಮದುವಾಗಿ ತಂದ ಆರ್ಥಿಕ ಇಲ್ಲವೆ ಶೈಕ್ಷಣಿಕ ಪದ್ಧತಿಗಳು ನಮ್ಮ ಲೋಪ-ದೋಷಗಳೆಲ್ಲ ರಾಮಬಾಣವೆಂದು ನಾವು ಭಾವಿಸುತ್ತಿದ್ದೇವೆ. ಅಡವಿಗಳಿದ್ದಲ್ಲಿ ಅವುಗಳನ್ನು ಕಡಿದು ಅಲ್ಲಿ ಉಕ್ಕಿನ ಭಾರೀ ಯೋಜನೆಗಳನ್ನು ನಿರ್ಮಿಸುವಾಗ ಅಲ್ಲಿ ಕೆಲಸಮಾಡಬೇಕಾದ ಜನಸಾಮಾನ್ಯದ ಸ್ಥಿತಿ ಏನು? ಅವರ ಅನ್ನ-ವಸತಿಗಳ ಸಮಸ್ಯೆಗಳಿಗೆ ಪರಿಹಾರವೇನು? ಎಂಬ ಬಗ್ಗೆ ನಾವು ಸಾಕಷ್ಟು ಮಟ್ಟಿಗೆ ವಿಚಾರ ಮಾಡುತ್ತಿದ್ದೇವೆಯೇ? ಮನೆಯಿಲ್ಲದೆ ನಿರ್ಗತಿಕನಾಗಿ ಅಲೆದಾಡುವ ಕೂಲಿಕಾರನಿಗೆ— "ಯೋಜನೆಯ ಗುರಿಯು ಸಾಧಿತವಾಗಿದೆ" ಎಂದು ಹೇಳಿದರೆ ಅವನಿಗೆ ಯಾವ ಸಮಾಧಾನವಾಗಬಹುದು? ಅತೃಪ್ತರಾದ ಲಕ್ಷಾಂತರ ಜನರಕಿಂತಲೂ ಸಂತೃಪ್ತರಾದ ಕೆಲವೇ ಜನರಿಂದ ಹೆಚ್ಚಿನ ಕೆಲಸಗಳನ್ನು ಸಾಧಿಸಬಲ್ಲೆವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹೀಗಾಗಿ ಈ ಮೂರು ಯೋಜನೆಗಳಲ್ಲಿ ನಾವು ಕಳೆದುಕೊಂಡಿದ್ದ "ಸಾಮಾನ್ಯಮನುಷ್ಯ"ನನ್ನು ಹುಡುಕಬೇಕಾಗಿದೆ. ಪ್ರೊ. ಗಾಡಗೀಳರು ಹೇಳುವಂತೆ — "ಮಾನವನೇ ಎಲ್ಲ ಮೌಲ್ಯಗಳ ಮಾಪಕನಾಗಿದ್ದಾನೆ (Man is the measure of all Values)." ಅನ್ಯತ್ರ ಅವರೇ ಹೇಳಿದಂತೆ—"ನಾವು ನಮ್ಮ ರಾಜ್ಯ ದಾಡಳಿತೆಯಲ್ಲಿ, ಯೋಜನೆಗಳಲ್ಲಿ, ಸಂಪತ್ತಿನ ಉತ್ಪಾದನೆಯಲ್ಲಿ, ನಗರಗಳ ನಿರ್ಮಾಣದಲ್ಲಿ, ರಾಜ್ಯ ಮತ್ತು ಪ್ರದೇಶಗಳನ್ನು ನಿರ್ಮಿಸುವಲ್ಲಿ —ಮಾನವೀಯತೆಗೆ ಸಾಕಷ್ಟು ಲಕ್ಷ್ಯವನ್ನು ಪೂರೈಸಿದಲ್ಲಿ, ಮತ್ತು ಪ್ರಪಂಚದ ತುಂಬೆಲ್ಲ ಜನರು ಮೂಲಭೂತವಾಗಿ ಭಾವನೆ

ಗಳಲ್ಲಿ, ಅನಿಸಿಕೆಗಳಲ್ಲಿ, ಆಶೆ-ಆಕಾಂಕ್ಷೆಗಳಲ್ಲಿ, ಜೀವನದ ಶಾಶ್ವತ ಮೌಲ್ಯಗಳಲ್ಲಿ ವಿಭಿನ್ನರಾಗಿಲ್ಲ —ಎಂಬ ಮಾತನ್ನು ಅರಿತುಕೊಂಡಲ್ಲಿ ದೇಶವನ್ನು ಅನೈಕ್ಯದ ಮಾರ್ಗಕ್ಕೆ ಒಯ್ಯುವುದಿಲ್ಲ ಎಂಬುದು ಸುನಿಶ್ಚಿತ." ಅದರಂತೆಯೇ— "ಭಾರತವು ಒಂದೇ ದೇಶವಾಗಿದೆ ಎಂಬ ಕಲ್ಪನೆಯನ್ನು ಹೊರಗಿನಿಂದ ಹೇರದೆ ಭಾರತೀಯರ ಅಂತರಾಳದಿಂದ ಹೊರಹೊಮ್ಮುವಂತೆ ಮಾಡಬೇಕು" ಎಂದು ರಾಜಸ್ಥಾನ ಸರಕಾರದ ಪ್ರಮುಖ ಕಾರ್ಯದರ್ಶಿಗಳಾದ ಶ್ರೀ. ಮೆಹತಾ ಅವರು ಹೇಳಿದ ಮಾತು ತುಂಬಾ ಅರ್ಥಪೂರ್ಣವಾಗಿದೆ.

ವ್ಯಾವಹಾರಿಕ ದೃಷ್ಟಿಯಿಂದ ನೋಡುವುದಾದರೆ, ಈ ಕೆಳಗಿನ ಕೆಲವು ಪರಿಹಾರೋಪಾಯಗಳನ್ನುನಾವು ಕೈಕೊಳ್ಳಬಹುದಾಗಿದೆ.

ವಿಶಾಲವಾದ ದೇವನಿಷ್ಠೆ ಮತ್ತು ಧರ್ಮದೃಷ್ಟಿ ನಮ್ಮಲ್ಲಿ ಪುನಃ ನೆಲೆಗೊಳ್ಳಬೇಕು. ನಮ್ಮ ಯೋಜನೆಗಳ ಬಗ್ಗೆ ಜನಸಾಮಾನ್ಯದಲ್ಲಿ ಆಸ್ಥೆ ಕುದುರುವಂತೆ ವಿವರಗಳನ್ನು ಅವರ ಭಾಷೆಯಲ್ಲಿಯೇ ತಿಳಿಯುವಂತೆ ಅವರಿಗೆ ಹೇಳಬೇಕು. ಸಾಂಸ್ಕೃತಿಕ ಮತ್ತು ಆಟಪಾಟಗಳ ಅನೇಕ ಸಂದರ್ಭಗಳನ್ನು ಏರ್ಪಡಿಸಿ ಅವುಗಳಲ್ಲಿ ಜನತೆಯು ಒಂದುಗೂಡುವಿಕೆಯ ಭಾವನೆಯನ್ನು ಹೆಚ್ಚಿಸಿ, ಸ್ಪರ್ಧಾ-ಭಾವನೆಯನ್ನು ಕಡಿಮೆಮಾಡಬೇಕು. ವಿದೇಶೀಯ ಕ್ರೀಡಾಪಟುಗಳ ಜೊತೆಗೆ ನಮ್ಮ ಕ್ರೀಡಾಪಟುಗಳೂ ಭಾಗವಹಿಸುವಂತೆ ಅವಕಾಶಗಳನ್ನು ಕಲ್ಪಿಸಿಕೊಡಬೇಕು. ರಾಷ್ಟ್ರಭಾಷೆಯ ಬಗ್ಗೆ ಅನವಶ್ಯಕವಾದ ಆತುರವನ್ನು ತೋರದೆ, ಉಳಿದ ಭಾಷಿಕರು ತಾವಾಗಿಯೇ ಆದನ್ನು ಸ್ವಾಗತಿಸುವಂತೆ ವಾತಾವರಣವನ್ನು ನಿರ್ಮಿಸಬೇಕು. ಎಲ್ಲಕ್ಕೂ ಹೆಚ್ಚಾಗಿ ಇಂದಿನ ನಮ್ಮ ಸಮಾಜದಲ್ಲಿ ಉಂಟಾಗಿರುವ "ನಿದ್ರಾಭಾವನೆ" ಯನ್ನು ಹೊಡೆದೋಡಿಸಬೇಕು. ನಾವು ಇನ್ನೂ ಅ-ನೈಜವಾದ ವಾತಾವರಣದಲ್ಲಿ ಇದ್ದೇವೆ; ಹಾಸಿಗೆಗೇ ಬೆಂಕಿ ಹತ್ತಿದಾಗ, ಇನ್ನೂ ಕಾಲಿನವರೆಗೆ ಬಂದಿಲ್ಲ ಎಂದು ಹೇಳುವ ಸೋಮಾರಿಗಳಂತೆ ನಾವು ಸ್ವಯಂತೃಪ್ತಭಾವನೆಯಲ್ಲಿ ಇದ್ದೇವೆ. ಆದ್ದರಿಂದ ಇಂದು ನಾವು ಎದುರಿಸಬೇಕಾದ ಭಾವೈಕ್ಯದ ಸಮಸ್ಯೆಯು ಅ—ನೈಜವೆಂದಾಗಲಿ, ಸ್ವಕಪೋಲ ಕಲ್ಪಿತವೆಂದಾಗಲಿ, ಅತಿರಂಜಿತವೆಂದಾಗಲಿ ಜನರು ತಿಳಿದುಕೊಳ್ಳದ ಹಾಗೆ ಜಾಗ್ರತೆ ವಹಿಸಿ, ಈ ಸಮಸ್ಯೆಗಳು ನಿಜವಾದ ಮತ್ತು ಅತ್ಯಾಸನ್ನವಾದ ಸಮಸ್ಯೆಗಳೆಂಬ ಭಾವನೆ ಜನರಲ್ಲಿ ಮೂಡುವಂತೆ ಪರಿಶ್ರಮಪೂರ್ವಕವಾದ ಪ್ರಯತ್ನವನ್ನು ಮಾಡುವುದು ಅವಶ್ಯವಿದೆ. ದೇಶದ ಆಂತರಿಕ ಅಸ್ಥಿರತೆ ಮತ್ತು ವಿದೇಶೀಯ ವಿದ್ವೇಷಗಳ ಬಗ್ಗೆ ಸ್ಪಷ್ಟವಾದ ಮತ್ತು ಪರಿಪೂರ್ಣವಾದ ಕಲ್ಪನೆಯನ್ನು ಜನತೆಗೆ ಮಾಡಿಕೊಡಬೇಕು. ಭಾರತದ ಸುತ್ತಲೂ ಸುತ್ತುವರಿದ ಪಾಕಿಸ್ತಾನ, ಚೀನಾ — ಇವುಗಳ ಆಕ್ರಮಕವೃತ್ತಿಯನ್ನೂ ಅದರ ಗಂಡಾಂತರದ ಕಲ್ಪನೆಯನ್ನೂ ಜನಸಾಮಾನ್ಯಕ್ಕೆ ಸ್ಪಷ್ಟವಾದ ಮಾತಿನಲ್ಲಿ ಮಾಡಿಕೊಡಬೇಕು. "ದೇಶ ಬದುಕಿದರೆ ವ್ಯಕ್ತಿ ಬದುಕುತ್ತದೆ" ಎಂಬುದನ್ನು ಜನಸಾಮಾನ್ಯ ಅರಿತುಕೊಳ್ಳಬೇಕು. ಇದರಿಂದ ಭಾರತದಲ್ಲಿ ಭಾವೈಕ್ಯವುಂಟಾಗಿ ನಮ್ಮ ದೇಶವು ಸರ್ವಾಂಗೀಣ ಉನ್ನತಿಯನ್ನು ಹೊಂದಲೆಂದು ಆಶಿಸುತ್ತೇನೆ.

# "ನರಕಚತುರ್ದಶಿಯ ನಸುಕಿನಲ್ಲಿ"

( ಒಂದು ನಾಟ್ಯಛಟ )

ಲೇಖಕರು: —ಎನ್ಕೆ, ಬೆಂಗಳೂರ.

**ಹೊಸದಾಗಿ ಲಗ್ನವಾದ ಅಳಿಯದೇವರಿಗೆ ಮೊದಲ ದೀಪಾವಳಿ ತರುವ ಹರುಷ ಅವರ್ಣನೀಯು. ಮಾವನಿಂದ ಭಾರೀ ಉಡುಗರೆ ಪಡೆಯಲು ಅಂತಹ ಸದವಕಾಶ ಇದನ್ನು ಬಿಟ್ಟರೆ ಅವನಿಗೆ ದೊರೆಯುವದಿಲ್ಲ. ಅದಕ್ಕಾಗಿ ಅವನು ಹಟ್ಟುಹಿಡಿಯುವದೂ ಉಂಟು. ಅಂತಹ ಅಳಿಯನೊಬ್ಬ ಮನಸ್ಸಿನಲ್ಲಿಯೇ ಮಂಡಿಗೆ ತಿನ್ನುವ ಚಿತ್ರವೊಂದು ಈ ನಾಟ್ಯಛಟದಲ್ಲಿ ಹೃದಯಂಗಮವಾಗಿ ಮೂಡಿನಿಂತಿದೆ.**

[ ಅಳಿಯದೇವರು ಆಕಳಿಸುತ್ತ ಹಾಸುಗೆಯ ಮೇಲೆ ಎದ್ದು ಕೂಡ್ರುತ್ತಾರೆ. ]

ಆsss ಹಾ-ಹಾ-ಹಾ ! (ಮತ್ತೆ ಆಕಳಿಸಿ) ಏನಿದು ಇನ್ನೂ ಒಂದು ಮಗ್ಗಲ ನಿದ್ದಿ ಸುದ್ಧಾ ಪೂರಾ ಮುಗಿದಿಲ್ಲ ಆಗಾಗಲೇ... 'ಘನಶ್ಯಾಮಸುಂದರ' ಅಂತ ಸುರುವು ಮಾಡಿಬಿಟ್ಟೇರಲ್ಲಾ ರೆಕಾರ್ಡು !. . .ಅದೂ ಮರಾಠೀ ರೆಕಾರ್ಡ !. . .ಏನು ಕನ್ನಡದ್ದ ? . . .ಸರಿ. . .ಅದಿಲ್ಲ್ಯಾss. . .ಇಷ್ಟು ಲಗೂನ ಯಾಕ ಎಬ್ಬಿಸಿ ನನ್ನ ಜೀವಾ ತಿಂತಿ ?. . .ಏನು ?. . .ನಿಮ್ಮಪ್ಪ ಎಬ್ಬಿಸಲಿಕ್ಕೆ ಹೇಳಿದನ ? . . .ಹೇಳಿದರ ? ನೀನು ಎಬ್ಬಿಸೋ ಅಷ್ಟು ಧೈರ್ಯ ಮಾಡಿದೇನು ? . . . ನಾಯೇನು ನಿಮ್ಮಪ್ಪನ ಸಬಾರ್ಡಿನೇಟ್ ಆಗಿ ಇಲ್ಲಿ ಬಂದೀನೇನು ? . . . . . ನಾನೇಳೋದು 7 0' clock ಗೊತ್ತಿಲ್ಲೇನು ನಿನಗ ? 7 0'clolk ನಿಂದ ನಮ್ಮ ದಿನದ ಕಾರ್ಯಕ್ರಮ ಪ್ರಾರಂಭ ಅನ್ನೋದು ? ಸ್ವಿಚ್ ಆಫ್ ಮಾಡು. ಇನ್ನೂ ಮೂರು ತಾಸು ನಿದ್ದಿ ಆಗಬೇಕು ನನಗ.

[ ಅಳಿಯದೇವರು ಮುಸುಕು ಎಳೆದು ಗೊರಕೆಹೊಡೆಯುತೊಡಗುವರು. ಕೆಲಹೊತ್ತಿನ ಮೇಲೆ ಗಡಿಯಾರದ ಅಲಾರ್ಮ ಶಬ್ದಕ್ಕೆ ಅಳಿಯದೇವರು ಆರ್ಭಟಿಸಿ ಏಳುವರು.]

ಥೂ, ಥೂ, ಥೂ ಥೂ ! . . . ಅಳಿಯದೇವರಿಗಿಂತಾ ಅಲಾರ್ಮೇ ಜೋರಾತಲ್ಲ ಈ ಮನಿಯಾಗ ಅಂತೀನಿ. . .ಹಾಳು ಗಡಿಯಾರ ಯಾರು ಬಡದು ಹೋದರೊ ಏನೊ ಇಲ್ಲೆ . . . ಸ್ವಿಚ್ ಎಲ್ಯದ?. . . . . .ಏನss. . .ಸ್ವಿಚ್ ಎಲ್ಲ್ಯದ ? . . .ಈ ಅಲಾರ್ಮಿನೊಳಗ ಯಾರಿಗೆ ಕೇಳಿಸಬೇಕು ನನ್ನ ಮಾತು...ಅಲಾರ್ಮ ಬಂದ ಮಾಡಬೇಕೂ ಅಂದರ ಎಲ್ಲಿ ಬಡದು ಹೋಗ್ಯಾಳೊ ಏನೊ ಗಡಿಯಾರ !. . .

[ಹಾಸುಗೆಯಿಂದೆದ್ದು ಗೋಡೆ ಸವರಿಕೊಂಡು ನಡೆಯುವಾಗ ಗಡಿಯಾರವನ್ನೆ ಎಡವಿದ ಅಳಿಯದೇವರು—]

ಥೂ ! ಥೂ ! ಥೂ !. . .ಕಾಲಾಗ ಇಟ್ಟು ಹೋಗ್ಯಾಳ !. . . ಯಾಕ ನನಗ ತ್ರಾಸ ಕೊಡತಾರೊ ಏನೊ ಸುಮ್ಮನ. . .ಏನು ?. . . ಚಹಾ ಆಗೇದ ಈಗಾರ ಏಳಬೇಕ ?. . .ಏಳೋದು ಬಿಟ್ಟು ಪದಾ ಹೇಳಲಿಕ್ಕೆ ಹತ್ತೀನಿ. . . ಎಲ್ಲಿ ಹೋಗಿದ್ದಿ ನೀನು ?. . .ಸುರುವಾತ ಮತ್ತ'ಘನಶ್ಯಾಮಸುಂದರಾ...ಆ ಶಾಮ್ಯಸುಂದರಗೂನಿದ್ದಿಲ್ಲ!ನನಗೂ ನಿದ್ದಿಲ್ಲ. . .'ಏಳು ' ನಾರಾಯಣಾ ' ಏಳು ' ಲಕ್ಷ್ಮೀರಮಣ ' ಅಂತ ನೀನಾರsss ಹೇಳು. ನಾನೇನು ಕ್ರಾಂತಿಕಾರಿ ಕನ್ನಡಿಗ ಅಲ್ಲ ಖರೆ !...

ಏನು?. . .ರೆಕಾರ್ಡ ಅಲ್ಲ, ರೇಡಿಯೋನ ?. . .ಧಾರವಾಡ ಇಲ್ಲಾ ಬೆಂಗಳೂರು ಹಚ್ಚಲ್ಲ !. . .ಕನ್ನಡ ಹಾಡು ಹಚ್ಚೇ ಹಚ್ಚಿರತಾರ. . . ಅದನ್ನೆ ಹಚ್ಚೀದ್ಯಾ?. . .ಆಂ? ಕನ್ನಡದಾಗ ಘನಶ್ಯಾಮ ಸುಂದರಾನ ?. . .ಸssರಿ. . .ಆದರ, ಇಷ್ಟು ಲಗೂನ ಸುರುವಾಗತದೇನು ರೇಡಿಯೊ ?. . .ಓಹೊ ! ಇವೊತ್ತ ಸ್ಪೆಶಲ್ ಪ್ರಸಾರ ?. . . ಥೂ. ಥೂ. ಥೂ !. . .ಆ ನಾಗಸ್ವರ ಬ್ಯಾಡ !. . .ಶಹನಾಯಿನೇ ಇರ್ಲಿ !. . .ಶಹನಾಯಿಯೊಳಗ ಕನ್ನಡ ಎಲ್ಲೀದ ಬರಬೇಕ ?. . . ಆದರ ನಾಗಸ್ವರದ ನಾದ ಈ ನಾಜೂಕ ಕಿವಿಗೆ ಆಗೋದಿಲ್ಲ. . .



ಅದಿರ್ಲಿ ! ಏಳಬೇಕೂ ಅಂತಿದ್ದರ ಹಂಗಾರ ಹಜಾಮತಿಗೆ ನೀರು ತಗೊಂಡು ಬಾ ! . . . ಹೇಳಲಿಲ್ಲೇನು 7 0' clock ನಿಂದ ಪ್ರಾರಂಭ ನಮ್ಮ ಪ್ರಾತಃಕರ್ಮ ಅಂತ ! . . . ಏನು ? . . . ಹ್ಯಾಂಗ ತರಬೇಕ ? . . . ಏನಂತ ಹೇಳಿ ತರಬೇಕು ? . . . . ಅಳಿಯಂದಿರಿಗೆ ಹಜಾಮತಿಗೆ ನೀರು ಅಂತ ? . . . . . . . . .ಮತ್ತೇನು ಮಾವಂದಿರ ಹಜಾಮತಿಗೆ ಅಂತ ತಿಳಕೊಂಡೇನು ? . . .ಆಂ ? ಯಾಕ ನಗತೀರಿ ?. . .ಅಳಿಯತನದಾಗ ಅವರದು ತಾನೇ ಆಗತದ ?. . .ಇರ್ಲಿ ನೀರು ತಗೊಂಡು ಬಾ. . .ಬೈತಾರ ?. . . ಹಾಂಗಾರೇನು ಚಹಾದಾಗ ಸಾಬಾಣಾ ಎದ್ದು ಅಂತೀಯೊ ಏನು ? . . .ಮಾರಿ ತೊಳಕೋಳಿಕ್ಕೆ ಅಂತ ಹೇಳು !. . .ಅಪ್ಪ ಮ್ಯಾಲ ಬಂದರ

ಏನು ಮಾಡಬೇಕ ?. . .ಯಾಕ, ಅಳಿಯಂದಿರು ಹಜಾಮತಿ ಮಾಡಿ ಕೋತಿದ್ದರ ರಾಕ್ಷಸನ ಹಾಂಗೇನಾರ ಕಾಣತಾರೇನು ನಿಮ್ಮಪ್ಪಗ ? . . .ಥಣ್ಣೀರಾಗ ಮಾಡಿಕೋ ಬೇಕ ?. . .ನಿನ್ನದು ಒಳೆ ಹಟ !. . . ಥಣ್ಣೀರ ಹಜಾಮತಿ ನೋಡಿದರ ಅಡ್ಡಿಯಿಲ್ಲೇನು?. . .ಲಗೂನ ಎತ್ಲಾಗಾರ ಮುಗಿಸಿ ಏಳಬೇಕ ?. . .ಹೌದ, ಎತ್ಲಾಗಾರ ಅಂಬೂದರಾಗ ಬ್ಲೇಡ ಹತ್ತಿ ರಕ್ತಪಾತ ಆದರ ಆಗ ?. . .ನಿಮ್ಮಪ್ಪ ಪೋಲೀಸರಿಗೆ ವರದಿ ಕೊಟ್ಟಾನು ಎಲ್ಲ್ಯಾರ !. . .

[ ಯಾರೋ ಒಂದು ಕಪ್ಪಿನಲ್ಲಿಬಿ ಸಿನೀರು ಇಟ್ಟು ಹೋಗುವರು. ಅಳಿಯಂದಿರು ಎದುರಿಗೆ ಕನ್ನಡಿ ಇಟ್ಟುಕೊಂಡು ಆಯುಷ್ಕರ್ಮವನ್ನು ಆರಂಭಿಸುವರು. ತಮ್ಮ ಮುಖಬಿಟ್ಟು ಇನ್ನೊಬ್ಬರ ಮುಖ ಕಾಣದಿದ್ದಾಗ- ]

ಏನು ? . . . ಆರತಿ ? . . . ಥೂ-ಥೂ-ಥೂ ! ಈ ಆರತಿ, ಅಕ್ಷತಿ ಹಳೇ ಪದ್ಧತಿ ಇನ್ನೂ ಬಿಟ್ಟೀ ಇಲ್ಲೇನು ನೀವು ? ಆರತಿಯೊಳಗ ರೂಪಾಯಿ ? . . . ಎಲ್ಲೀದು ತರ್ಲಿ ರೂಪಾಯಿ ! . . .ಬರೇ ಚೆಕ್ ವ್ಯವಹಾರ ನನ್ನದು ! . . . .ಚೊಕ್ಕ ವ್ಯವಹಾರ ಅಲ್ಲs, ಚೆಕ್ ಅಂದೆ . . . ಚೊಕ್ಕು ಹೌದನ್ನು! . . . ಚೆಕ್ಕ ಬರೆದು ಹಾಕಬೇಕ ? . . . ಇಲ್ಲಾ ಪ್ರೊನೋಟು ಬರೆದು ಹಾಕತೀನಿ?! ಅಳಿಯತನಕ್ಕ ಚೆಕ್‌ಬುಕ್ ತಗೊಂಡು ಬಾ ಅಂದೇನು ? . . . . ಸಾಕು, ಒಂದೇ ದಿನದಾಗ ಅಳಿಯತನ ಎಲ್ಲಾ ಮುಗಿಯಬೇಕು ಅಂತ ಹೇಳು . . . ಅಕ್ಕನ ತದಗಿ, ಅಮ್ಮನ ಚೌತಿ, ಅಜ್ಜಿಯ ಪಂಚಮಿ ಅಂತ ನಿಲ್ಲಲಿಕ್ಕೆ ನನಗ ರಜಾ ಇಲ್ಲ. . .ನಾಳೆ ಮುಂಜಾನೆ ಹೊರಡಬೇಕು ನಾನು. . .ಅಮಾವಾಸ್ಯೆ? . . .ಆದರ ? . . .ಇನ್ನ ಅಮಾವಾಸ್ಯಾ ಅಂದಕೊಂಡು ಹುಣ್ಣಿವಿತನಕಾ ನಿಲ್ಲು ಅಂದೇನು--ಹನಿಮೂನ್ ಅಂತ !...ಅಲ್ಲಾ ತೌರುಮನಿಗೆ ಬಂದಿಅಂತ ನಿನ್ನ ವಿಧೇಯತಾ ಮಾಯವಾಗಿ ಹೋದ್ಹಾಂಗ ಕಾಣಿಸತದ...ಹೌದು ಮತ್ತ...ನಾ ಗ್ಯಾಜಿಟೆಡ್ ಆಫೀಸರ ಇದ್ದೀನಿ. . .ನಿಮ್ಮಪ್ಪ ಮುಂದಿನ ವರುಷ N. G. O. ಆಗೇ ರಿಟಾಯರ್ ಆಗುವವ. . .ಅಂಥಾದ್ದು ನನ್ನ ಮ್ಯಾಲೆ ಗುರ್ ಅಂತೀದಿ. . . ಹೋಗಲಿ, ಇವೊತ್ತಿನ ಮೆನೂ ಏನು ಅಂದೆ ! . . ಮತ್ತ ನಿಮ್ಮ ಹರಕ ಹೋಳಿಗಿ, ಖಮಟ ಜಿಲೇಬಿ ಆದರ ನಾನೂ ಊಟಾನ ಮಾಡೋದಿಲ್ಲ ನೋಡು . . . ಊಟಕ್ಕ ಬಿರ್ಯಾನಿ, ಉಪಹಾರಕ್ಕ ಆಮ್ಲೇಟು ! . . , ಬಿರ್ಯಾನಿ ಅಂದೆ ! . . . ಇಲ್ಲದಿದ್ದರ ಹೋಟೆಲ್‌ನ್ಯಾಗ ಊಟಾ ಮಾಡಿ ಬರತೀನಿ ಅಂದೆ ! . . . south end ದಾಗ ! . . . ಏನು ? ನನ್ನ ಕನ್ನಡ ಅಭಿಮಾನ ಎಲ್ಲಿ ಹೋಯಿತ ? ಯಾಕ ?. . . ಯೇ ಹುಚ್ಚಿ ಬಿರ್ಯಾನಿ ಅಂದರ ಬಟಾಟೆಭಾತು, ವಾಂಗೆಭಾತು ಇದ್ದಾಂಗ !. . . ಆಗಲಿ ಕನ್ನಡ ಹೆಸರು ಕೊಡೋಣಂತ ! . . . ಅದs ಶಹನಾಯಿ ಕನ್ನಡ ಹ್ಯಾಂಗ ಅಂತ ಕೇಳಿಧಾಂಗ ಆಯಿತು. . . ಹೌದು ಮತ್ತೆ ನಾಯೇನು illegal gratification ಲಂಚ ಕೇಳ್ತೀನಿ ಅಂತೇನು ತಿಳಕೋ ಬ್ಯಾಡಾ ಅಂತ ಹೇಳು ನಿಮ್ಮಪ್ಪಗ. . . ನಾನು government servant ಸರಕಾರಿ ನೋಕರ ಇದ್ದೀನಿ. . . ಕೇವಲ ಉಡುಗೊರೆ ಮಾತ್ರ ಸ್ವೀಕರಿಸಲಿಕ್ಕೆ ಬರತದ... ಆದ್ದರಿಂದ ಸ್ಕೂಟರ್ ಈಗ ಕೊಡಿಸಿಬಿಡು ಅಂತಹೇಳು . . . ಬಹಾಳ ನೋಡು ನಿನ್ನ ಕಾರಭಾರ . . . ಹೌದು ಆಫೀಸಿನೊಳಗ ಸ್ಕೂಟರಿಗೆ ಅಂತ ಲೋನ್ ಕೇಳಿದ್ದರ ಏನು ತಪ್ಪಾತು ? . . . ಮತ್ತ ಸಾಯಿಟ್ ತಗೋಬೇಕಂತೀಯಲ್ಲಾ ಅದಕ್ಕಿರಲಿ . . . ಓಹೊಹೋ ! . . . ಅವಲಕ್ಕಿ ಸರಾ ಮಾಡಿಸಿಗೋತಿಯಾ ? . . . ಅವಲಕ್ಕಿ ಸರಕ್ಕ ಯಾಕಷ್ಟು. . . ಇವತ್ತ ಮಾಡಿಸಿಗೋ . . . ಹುರಿದವಲಕ್ಕಿ ಸರಾನೊ, ಹಚ್ಚಿದವಲಕ್ಕಿ ಸರಾನೊ ? . . . ಆಂ ? ಸಾವಿರನ್ನಿಂದ ?. . . ಮೊದಲ ಸ್ಕೂಟರಂತ ವಸೂಲ ಮಾಡು ಆಮೇಲೆ ಮುಂದಿನ ಮಾತು . . . ಅದಕ್ಕ ಆರತ್ಯಾಗ ಹಾಕಬೇಕ ?. . . ಅಂದರ ನಿಮ್ಮಪ್ಪ ಖುಷಿ ಆಗಿ ನಿಮ್ಮಪ್ಪನ ಕಡಿಂದ ವಸೂಲ ಮಾಡಿಸತಾಳ ! . . . ಓಹೊಹೋ ! ನೀನೂ ಒಳೆ ಡಿಪ್ಲೊಮ್ಯಾಟಿಕ್ ನೋಡು ! . . . ಯಾವುದರ ಕೀಲಿಕೈ ಎಲ್ಲಿ ಅಂಬೂದೂ ಗೊತ್ತು ನಿನಗ. . . ಹಾಂಗಾರ ಎಷ್ಟು ಹಾಕಂದಿ ಆರತಿಯೊಳಗ ? . . . ಆಂ ? ಹತ್ತು ರೂಪಾಯಿ ? . . .ಅಲ್ಲs ಅದೇ ಹತ್ತುರೂಪಾಯಿ ಮುರಕೊಂಡೇ ಸ್ಕೂಟರದ ಹಣಾ ಕೊಡು ಅನ್ನು ನಾನೇ ಸ್ಕೂಟರ್ ತರಿಸಿಗೋತೇನಿ. . . ಅಧೆಂಗ ಆಗತದ ? . . .ನಾನೇನು ಕೊಟ್ಟ ಹಾಂಗ ಆಯಿತ ? . . . ಅಳಿಯದೇವರು ಅಂದರ ಕೈಯಾಗ ಕಲ್ಪವೃಕ್ಷದ ಟೊಂಗಿ ಹಿಡಿದುಕೊಂಡು ಬಂದಿರತೀನಿ ಅಂತ ತಿಳಿದಾರೇನು ? . . . ಒಳೆ ನ್ಯಾಯ ಅಂದರ ? . . . ಕೊಡದಿದ್ದರ ಬಿಡ್ಲಿ. . . ಇಂದೇ ಹೊರಟು ಬಿಡತೇನಿ ನಾನು ! . . . ಸಿಟ್ಟಿಗ್ಯಾಕ ಏಳತೀರಿ ಅಂದರ ? . . . ನೀನು ಎಬ್ಬಸತೀಯಾಕ ಸಿಟ್ಟಿಗೆ ? . . . ಹೂಂ. ಹಾಂಗ ಹೇಳು ! ... ಮತ್ತ ಇದೇನು ಅವ್ಯವಸ್ಥೆ, ಇದೇನು ಅಸಹ್ಯ ! . . . ಒಳ್ಳೇ ಒಂದು ಫರ್ನಿಚರ್ ಕೂಡಾ ಇಲ್ಲ ! . . . ಅದೆಲ್ಲೀದೊ ಸೋಡಾವಾಟರ್ ಅಂಗಡ್ಯಾಗ ಸೆಕೆಂಡ್‌ಹ್ಯಾಂಡಿಗೆ ಸಿಕ್ಕ ಎರಡು ತಗಡಿನ ಕುರ್ಚಿ ! . . . ಆಹಾಹಾ ! . . . ನಮ್ಮ ಫ್ರೆಂಡ್ಸು ಚಹಾಕ ಬಂದರ ಈ ಸೋಡಾ ವಾಟರ್ ಕುರ್ಚಿ ನೋಡಿ ನಿಮ್ಮಪ್ಪನ ಕಿಮ್ಮತ್ತಲ್ಲಾ ನನ್ನ ಕಿಮ್ಮತ್ತು ಕಟ್ಟತಾರ ! . . . ಬಾಡಗೀದರ ಒಂದು ಸೊಫಾಸೆಟ್ಟು ತರಿಸಿ ಹಾಕನ್ನು ನಿಮಪ್ಪಗ!. . . ಅಲ್ಲs, ಮನಿಗೆ ಒಂದು ಮಾರ್ನಿಂಗ್ ಪೇಪರು ಕೂಡಾ ತರಿಸೋದಿಲ್ಲೇನು ನಿಮ್ಮಪ್ಪ ? . . . ಏನು ರೇಡಿಯೋದಾಗ ಕೇಳಬೇಕ ಸುದ್ದಿ? . . . ಅಡ್ಡಿಯಿಲ್ಲ, ಮುನ್ಯಾಗ Car ಇದ್ದಮ್ಯಾಲೆ ಛತ್ರಿ ಯಾಕ ಇಡಬೇಕು ಅಂಧಾಂಗ ಆತು. . . ಹೋಗ್ಲಿ ನಮ್ಮ ಫ್ರೆಂಡ್ಸು ಬಂದಾಗ ತೋರಕಿಗಾರ ನಾಲ್ಕು ಪೇಪರು ಬಾಜೂದ ಮನೀಯಿಂದ ತಂದಿಡು ಅನ್ನು, ನಿನ್ನಿನವಲ್ಲ ಮತ್ತ! . . . ಮ್ಯಾಗಜಿನ್ ಯಾವುದಾದರೂ ಪರವಾಯಿಲ್ಲ. . . . ಕ್ರೋಕರಿ ಸೆಟ್ ಅದ ಇಲ್ಲೊ ಮತ್ತ ಮುನ್ಯಾಗ ? . . . ಕ್ರೋಕರಿ ಅಂದರೇನು ? . . . ತೀರಿಹೋತು... ಕಪ್ಪೂಬಸಿ ಸೆಟ್ಟs ! . . . ಹೌದು ಆ ರಿಂಗ್ ಇಲ್ಲದ ಕಪ್ಪಿಗೆ, ಆಲ್ಯೂಮಿನಮ್ ಪ್ಲೇಟು ಇಟ್ಟು ಕೊಡಬ್ಯಾಡ ಮತ್ತ ! . . . . ಯಾರು ಫ್ರೆಂಡ್ಸು ಅಂತೀಯಾ ? . . . ಯಾರು ಅಂದರ, ಗ್ಯಾಜಿಟೆಡ್ ಫ್ರೆಂಡ್ಸು! . . . ಹೌದು, ಲೇಡಿ ಫ್ರೆಂಡ್ಸ ಕೂಡಾ. . . . ಹೂಂ. ಅವರೂ ಗ್ಯಾಜಿಟೆಡ್ಡೇ !. . .ಅದು ಹ್ಯಾಂಗ, ಎಲ್ಲಾರೂ ಬ್ರಾಹ್ಮಣರೇ ಇರಬೇಕು, ವೈಷ್ಣವರೇ ಇರಬೇಕು, ರಾಯರಮಠದವರೇ ಇರಬೇಕು ಅಂದರ ಹ್ಯಾಂಗ ಸಾಧ್ಯ?...ಥೂ. ಥೂ. ಥೂ! ತಡೀ ಎದ್ದೆ...

[ಅಳಿಯದೇವರು ಹಜಾಮತಿ ಸಾಮಾನುಗಳನ್ನೆಲ್ಲಾ ಕಪ್ಪಿನೊಳಗೆ ಹಾಕಿ, ಸಿಗರೇಟು ಹೊತ್ತಿಸಿ ಹೊಗೆ ಬಿಡುತ್ತ—]

ಒಂದು ಆ್ಯಶ್ ಟ್ರೇ ಕೂಡಾ ಇಲ್ಲ ನಿಮ್ಮಪ್ಪನ ಮನೆಯೊಳಗ ! . . .ಹೌದು ಅವನು ಸೇದದಿದ್ದರ ಬಂದ ಅತಿಥಿಗಳಿಗೆ ಬ್ಯಾಡೇನು ? ಅದನ್ನೇನು ತಂದಿಯೆ ?. . .ಥೂ ಊದಿನಕಡ್ಡಿ ಹಚ್ಚಿಡೋದದು. ಅದು ಆ್ಯಶ್ ಟ್ರೇ ಏನು ? . . . ಏನು ತಪ್ಪಾತು ? . . . ಸರಿ, ಫ್ರೆಂಡ್ಸ ಬಂದಾಗ ಕಿಟ್ಲೆ ಇಲ್ಲಾಂತ ಸಾರಿನ ಕೊಳಗ ತಂದು ಇಡಬ್ಯಾಡ ಮತ್ತ ಚಹಾ ಹಾಕಿ ! . . . ಛಲೋ ಗೋಲ್ಡನ್ ಪಫ್ ಬಿಸ್ಕಿಟ್ ತರಸನ್ನು, ಸಾಠೆ, ಬಿರಡಿ ಬಿಸ್ಕೀಟ್ ಇಡಬ್ಯಾಡ ಮತ್ತ!. . .

[ಬಂದು ನಿಂತಿದ್ದ ವ್ಯಕ್ತಿ ಯಾರೆಂಬುದನ್ನು ನೋಡದೆ—]

ತಿಳೀತೇನ ?. . .ಏನು ?. . .ಮಾತಾಡದೆ ಹಾಂಗ ನಿಂತೆಲ್ಲ ? . . .ಯಾರು ?. . .ಆಂ ? . . . ಅತ್ತೆನರು ?. . . ಎಷ್ಟೊತ್ತಾತು ಬಂದು ನಿಂತು ?. . . . .

ಲೇಖಕರು :

ಡಾ. ಎನ್. ಎ. ಮುಜುಮುದಾರ
ಮುಂಬಯಿ.



# ಆರ್ಥಿಕ ಅಭಿವೃದ್ಧಿಯ ಅಂತಿಮ ಗುರಿ

**ಇತ್ತೀಚೆಗೆ ಏಸಿಯದ ಅನೇಕ ದೇಶಗಳಂತೆ ಭಾರತವೂ ಆರ್ಥಿಕ ಅಭಿವೃದ್ಧಿಯನ್ನು ಭರದಿಂದ ಸಾಧಿಸಲು ಹವಣಿಸುತಿದೆ. ಈ ರಾಷ್ಟ್ರಗಳಿಗೆಲ್ಲ ಪಾಶ್ಚಾತ್ಯ ರಾಷ್ಟ್ರಗಳ ಆರ್ಥಿಕ ಅಭಿವೃದ್ಧಿ ಮಟ್ಟವನ್ನು ಸಾಧಿಸುವದೇ ಗುರಿಯಾದಂತಿದೆ. ಆದರೆ ಈ ದೇಶಗಳಲ್ಲಿ ಈ ಅತಿರೇಕದ ಅಭಿವೃದ್ಧಿಯೊಂದಿಗೆ ಕೆಲ ಲೋಪದೋಷಗಳೂ ತಲೆಯೆತ್ತಿವೆ. ಈ ಎಲ್ಲ ಅಭಿವೃದ್ಧಿಯ ಗುರಿ ಜನತೆಗೆ ಸುಖ ದೊರಕಿಸಿಕೊಡುವುದೇ ಆಗಿದೆ. ಆದರೆ ಅದು ನಮ್ಮ ಸಂಪ್ರದಾಯಕ್ಕೆ ಅನುಗುಣ ಆಗಿಲ್ಲ. ಬರಿಯ ಸಂಪತ್ತನ್ನು ಸಂಗ್ರಹಿಸಿ ಮಾನವತೆಯನ್ನು ಕಳೆದುಕೊಳ್ಳುವ ಅಭಿವೃದ್ಧಿ ನಮಗೆ ಬೇಕಿಲ್ಲ. ಅದಕ್ಕಾಗಿ ಈ ದೇಶಗಳಲ್ಲಿಯ ಕುಂದುಕೊರತೆಗಳು ನಮ್ಮ ದೇಶದಲ್ಲಿ ತಲೆಯೆತ್ತದಂತೆ ನೋಡಿಕೊಂಡಲ್ಲಿ. ಹೊಸ ಪಂಥವನ್ನೇ ಭಾರತವು ಹಾಕಿಕೊಟ್ಟಂತಾಗುವುದೆಂದು ಲೇಖಕರು ಇಲ್ಲಿ ವಿವೇಚಿಸಿದ್ದಾರೆ.**

ಇತ್ತೀಚೆಗೆ ಏಶಿಯ ಹಾಗೂ ಆಫ್ರಿಕದ ಅನೇಕ ರಾಷ್ಟ್ರಗಳಲ್ಲಿ ತಮ್ಮ ದೇಶದ ಕಡು ದಾರಿದ್ರ್ಯವನ್ನು ನಿರ್ಮೂಲಮಾಡಿ ಪ್ರತಿಯೊಬ್ಬನಿಗೂ ಜೀವನಾವಶ್ಯಕ ವಸ್ತುಗಳಾದರೂ ಲಭಿಸುವಂತೆ ಮಾಡಬೇಕೆಂಬ ವಿಚಾರವು ಜಾಗೃತವಾಗಿದೆ. ಅಂತೆಯೇ ಈ ದೇಶಗಳಲ್ಲೆಲ್ಲ ಆರ್ಥಿಕ ಅಭಿವೃದ್ಧಿಯೋಜನೆಗಳು ರೂಪುಗೊಳ್ಳುತ್ತಿವೆ. ಪ್ರಾಮುಖ್ಯವಾಗಿ ಈ ಪ್ರವೃತ್ತಿಗೆ ಪುಟಕೊಟ್ಟುದು, ರಾಜಕೀಯ ಸ್ವಾತಂತ್ರ್ಯಪ್ರಾಪ್ತಿ. ಇವನ್ನನುಲಕ್ಷಿಸಿ ಈ ದಶಕವನ್ನು "ಸಂಯುಕ್ತರಾಷ್ಟ್ರ ಸಂಘದ ಅಭಿವೃದ್ಧಿ ದಶಕ"ವೆಂದು ಕರೆದುದು ಯಥೋಚಿತವಾಗಿದೆ. ಈ ರೀತಿ ಬಹಳಷ್ಟು ರಾಷ್ಟ್ರಗಳು ಯೋಜನೆಯ ಯುಗದ ಹೊಸತಿಲಲ್ಲಿ ಕಾಲಿರಿಸುತ್ತಿರುವಾಗ ಆರ್ಥಿಕ ಅಭಿವೃದ್ಧಿಯ ಅಂತಿಮ ಗುರಿಯನ್ನು ಕುರಿತು ಕೆಲ ಮೂಲಭೂತ ಪ್ರಶ್ನೆಗಳನ್ನು ವಿವೇಚಿಸುವದು ಅಪ್ರಸ್ತುತವಾಗಲಾರದಷ್ಟೇ ಅಲ್ಲ; ಒಂದು ದೃಷ್ಟಿಯಿಂದ ಅದು ಅತ್ಯಾವಶ್ಯಕವಾಗಿದೆ. ಏಕೆಂದರೆ, ಸಾಮಾನ್ಯವಾಗಿ, ಈ ದೇಶಗಳ ಜನರ ಜೀವನಮಟ್ಟವನ್ನು ಅಮೇರಿಕೆ ಅಥವಾ ಇಂಗ್ಲಂಡದ ಮಟ್ಟಕ್ಕೆ ಏರಿಸುವದೇ ಅಭಿವೃದ್ಧಿಯ ಅಂತಿಮ ಗುರಿಯೆಂದು ಬಗೆಯಲಾಗುತ್ತಿದೆ. ಹಿಂದುಳಿದ ದೇಶಗಳ ಈ ಧ್ಯೇಯ ಯುಕ್ತವಾದುದೇ?

### ಅಭಿವೃದ್ಧಿಯ ಅತಿರೇಕ

ಇಂದು ಪೂರ್ಣ ಅಭಿವೃದ್ಧಿ ಹೊಂದಿ ಸಮೃದ್ಧ ರಾಷ್ಟ್ರಗಳೆಂದೆನಿಸಿಕೊಳ್ಳುತ್ತಿದ್ದ ಕೆಲ ಪಾಶ್ಚಾತ್ಯ ದೇಶಗಳಲ್ಲಿ ಆರ್ಥಿಕ ಅಭಿವೃದ್ಧಿಯನ್ನು ಅತಿರೇಕಕ್ಕೊಯ್ದಿರುವದನ್ನು ನಾವು ಕಾಣುತ್ತೇವೆ. ಕೇವಲ ಆರ್ಥಿಕ ಅಭಿವೃದ್ಧಿಯ ನೊಗಕ್ಕೆ ಹೆಗಲುಕೊಟ್ಟು ಹೊರಟ ಈ ಜನರ ಜೀವನದಲ್ಲಿ ಸಂತೃಪ್ತಿಯೇ ಇಲ್ಲದಾಗುತ್ತಿದೆ. ಸ್ಪರ್ಧೆ, ಈರ್ಷೆ ಹಾಗೂ ಸಂಗ್ರಹದ ಹುಚ್ಚಿನಲ್ಲಿ ಜೀವನದ ಮೂಲಭೂತ ಮೌಲ್ಯಗಳೇ ಮರೆಯಾಗುತ್ತಿವೆ. ಪ್ರಚಂಡ ಪ್ರಚಾರ ಶಕ್ತಿಯೂ ಕುಂಠಿತವಾಗುತ್ತ ನಡೆದಿದೆ. ಇವೆಲ್ಲವುಗಳ ಪರಿಣಾಮವಾಗಿ ಜೀವನದಲ್ಲಿಯ ಶ್ರದ್ಧೆಯೇ ಅಸ್ತಂಗವಾಗುತ್ತಲಿದೆ. ಕೆಲವರಿಗಂತೂ ಜೀವನವು ಅರ್ಥಹೀನವಾಗಿ ತೋರುತ್ತಿದೆ.

ಕೆಲ ದೃಷ್ಟಾಂತಗಳನ್ನು ತೆಗೆದುಕೊಳ್ಳೋಣ. ಮಾರ್ಕ್ಸನು ಚಿಕ್ಕವನಿದ್ದಾಗ ಲಂಡನ್ನಿನ ಕೂಲಿಕಾರನು ವಾರಕ್ಕೆ, ೭೫ ಗಂಟೆಗಳಷ್ಟು ಕೆಲಸ ಮಾಡಬೇಕಾಗುತ್ತಿತ್ತು. ಮೇಲಾಗಿ, ಅಲ್ಪವೇತನವನ್ನು ಪಡೆದು ಕೂಲಿಕಾರರಿಗೆಂದೇ ತಲೆಯೆತ್ತಿದ "ಚಾಳಿ"ನಲ್ಲಿಯ ಚಿಕ್ಕಕೋಣೆಯೊಂದರಲ್ಲಿ ಜೀವನ ಸಾಗಿಸಬೇಕಾಗುತ್ತಿತ್ತು. ಆದರೆ ಇಂದು ಇಂಗ್ಲಂಡಿನಲ್ಲಿಯ ಕಾರ್ಮಿಕನು ವಾರಕ್ಕೆ ಬರಿಯ ೪೦–೪೫ ತಾಸುಗಳಷ್ಟೇ ಕೆಲಸ ಮಾಡುತ್ತಾನೆ. ಅವನಿಗೆ ಇರಲು ಪ್ರತ್ಯೇಕ ಚೊಕ್ಕಾದ ಮನೆಯಿದೆ; ಕೈತುಂಬ ಸಂಬಳವಿದೆ; ಬಟ್ಟೆ ಯೊಗೆಯುವ ಯಂತ್ರ, ರೇಡಿಯೋ, ಟೆಲಿವ್ಹಿಜನ್ ಮುಂತಾದ ಆಧುನಿಕ ಜೀವನದ ಸೌಕರ್ಯಗಳೂ ಅವನಿಗೆ ಸಿಕ್ಕುತ್ತಿವೆ. ಹಾಗಾದರೆ ಇಂದಿನ ಸಾಮಾನ್ಯ ಕೂಲಿಕಾರನು ನಿಜವಾಗಿಯೂ ಸುಸಂಸ್ಕೃತನಾಗಿ, ಹೆಚ್ಚು ಸುಖಿಯಾಗಿ ಬಾಳುತ್ತಿದ್ದಾನೆಯೇ?—ಎಂಬ ಪ್ರಶ್ನೆ ಸ್ವಾಭಾವಿಕವಾಗಿಯೇ ಉದ್ಭವಿಸುವದು.

ಕಾರ್ಮಿಕರಿಗೆ ತಮ್ಮ ವಿರಾಮ ವೇಳೆಯನ್ನು ಹೇಗೆ ಕಳೆಯಬೇಕೆಂಬುದೇ ಒಂದು ಸಮಸ್ಯೆಯಾಗಿ ಪರಿಣಮಿಸಿದೆ. ತನ್ನ ಎಲ್ಲ ಬಿಡುವನ್ನೂ ಕೆಲಸಗಾರನು ಟೆಲಿವ್ಹಿಜನ್ ನೋಡುತ್ತ ಕುಳಿತುಕೊಳ್ಳುವುದರಲ್ಲಿಯೇ ವಿನಿಯೋಗಿಸುವದರಿಂದ ಅನೇಕ ಸಮಸ್ಯೆಗಳು ತಲೆಯೆತ್ತಿವೆ. ಆದುದರಿಂದಲೆ ೧೯೬೪ರಲ್ಲಿ ನಡೆದ ಇಂಗ್ಲಂಡಿನ ಸಾರ್ವತ್ರಿಕ ಚುನಾವಣೆಗಳಲ್ಲಿ, ಕಾರ್ಮಿಕನು ತನ್ನ ವಿರಾಮವನ್ನು ಯೋಗ್ಯರೀತಿಯಲ್ಲಿ ಉಪಯೋಗ ಮಾಡಿಕೊಳ್ಳಲು ಹಚ್ಚಬೇಕೆಂಬ ವಿಷಯವನ್ನು ಕೂಲಿಕಾರ ಪಕ್ಷವು ತನ್ನ ಕಾರ್ಯಕ್ರಮದ ಒಂದು ಮುಖ್ಯ ಅಂಗವಾಗಿ ಇಟ್ಟುಕೊಂಡಿತ್ತು. ಶಿಕ್ಷಣದ ವಿಷಯವೂ ಹಾಗೆಯೇ. ಕೂಲಿಕಾರನು ಓದುಬರೆಯಲೇನೋ ಬಲ್ಲ; ದಿನಪತ್ರಿಕೆಯನ್ನೂ ಆತ ಕೊಂಡುಕೊಳ್ಳಬಹುದು. ಆದರೆ ಆ ಪತ್ರಿಕೆಯಲ್ಲಿ ಆತ ತಪ್ಪದೆ ಓದುವುದು "ಫುಟ್‌ಬಾಲ್ ಪೂಲ"ದ (ನಮ್ಮಲ್ಲಿಯ ಲಾಟರಿಯಂತಹದು) ಪರಿಣಾಮಗಳನ್ನು ಮಾತ್ರ! ಇವೆಲ್ಲ ಮಾತುಗಳ ಮುಖ್ಯ ತಾತ್ಪರ್ಯವೆಂದರೆ ಹೆಚ್ಚು ಆದಾಯ ಸಂಪತ್ತನ್ನು ಒದಗಿಸಿಕೊಟ್ಟ ಪಾಶ್ಚಾತ್ಯ

ದೇಶದ ಅಭಿವೃದ್ಧಿಯು ಅವನನ್ನು ಹೆಚ್ಚು ಸುಖಿಯಾಗಿ ಮಾಡಿದೆಯೆಂದು ಹೇಳಲು ಬರುವದಿಲ್ಲ. ಬರಿಯ ಓದುಬರಹದ ಶಿಕ್ಷಣ ಕೊಡಿಸುವುದರಿಂದ ಮಾನವನು ಸುಸಂಸ್ಕೃತನಾಗುವದಿಲ್ಲ.

ವಿಚಾರವಂತರು ಪಾಶ್ಚಾತ್ಯ ಸಮಾಜದಲ್ಲಿ ಕಾಣಬರುತ್ತಿದ್ದ ಇನ್ನೂ ಇಂತಹ ಅನೇಕ ಸಮಸ್ಯೆಗಳನ್ನು ಎತ್ತಿ ತೋರಿಸುತ್ತಿದ್ದಾರೆ. ತೀರ ಸ್ವತಂತ್ರ ಪ್ರವೃತ್ತಿಯಿಂದ ಕೌಟುಂಬಿಕ ಜೀವನವೂ ನಾಶವಾಗುತ್ತಿದೆ. ಮಕ್ಕಳು ದೊಡ್ಡವರಾದ ಬಳಿಕ ಸಂಸಾರ ಹೂಡಿ ಪ್ರತ್ಯೇಕ ಮನೆಗಳಲ್ಲಿ ವಾಸಿಸಹತ್ತುವದರಿಂದ ವೃದ್ಧ ತಂದೆ-ತಾಯಿಗಳ ಸಂರಕ್ಷಣೆಯ ಭಾರವನ್ನು ಯಾರು ಹೊರಬೇಕು? ಸರಕಾರವು ಇಂಥ ಅಶಕ್ತ ವೃದ್ಧರಿಗೆಂದೇ ಕೆಲವು ಸಂಸ್ಥೆಗಳನ್ನು ಸ್ಥಾಪಿಸಿದೆಯೇನೋ ನಿಜ. ಆದರೆ ಅಂಥ "ವೃದ್ಧರಮನೆ"ಗಳಲ್ಲಿ ಇರುವದಕ್ಕಿಂತ ಸಾಯುವದೇ ಮೇಲೆಂದು ಬಹಳಷ್ಟು ವೃದ್ಧರು ಉದ್ಗಾರ ತೆಗೆಯುತ್ತಾರೆ! ಈ ಮನೆಗಳಲ್ಲಿ ಉಳಿದೆಲ್ಲ ಸೌಕರ್ಯಗಳೇನೋ ಇರಬಹುದು; ಆದರೆ ತಂದೆ-ಮಕ್ಕಳ ವಾತ್ಸಲ್ಯವನ್ನು ಯಾವ ಇನ್ನಿತರ ಸೌಕರ್ಯ ತುಂಬಿಕೊಡಬಲ್ಲದು?

ಜೀವನಮಟ್ಟವನ್ನು ಹೆಚ್ಚಿಸುವದೆಂದರೆ ಹೆಚ್ಚು ಹೆಚ್ಚು ಯಂತ್ರಸಾಮಗ್ರಿ, ಸೌಕರ್ಯಗಳನ್ನು ಪಡೆಯುವದು, ಎಂದೇ ನಂಬಲಾಗುತ್ತಿದೆ. ಅಂತೆಯೇ ಇಂಥ ಸರಕುಗಳ ಬೇಡಿಕೆ ಅನಿಯಮಿತವಾಗಿ ವಿಸ್ತಾರವಾಗುತ್ತಲೇ ಇರುತ್ತದೆ. ಈ ರೀತಿ ಬೇಡಿಕೆಯ ಪರಿಮಿತಿಯನ್ನು ವಿಸ್ತರಿಸುವಲ್ಲಿ ಆಧುನಿಕ ಉದ್ದಿಮೆದಾರರು ತಮ್ಮ ಪ್ರಚಂಡ ಪ್ರಚಾರ ಸಾಧನೆಗಳನ್ನು ಚಾಣಾಕ್ಷರೀತಿಯಿಂದ ಉಪಯೋಗಿಸುತ್ತಿದ್ದಾರೆ, ದಿನೇ ದಿನೇ ಹೊಸ ಹೊಸ ಸರಕುಗಳನ್ನು ಉತ್ಪಾದಿಸಿ, ಜನರು ಅವುಗಳನ್ನು ಕೊಳ್ಳುವಂತೆ ಮಾಡುವದೂ ಒಂದು "ಶಾಸ್ತ್ರ"ವಾಗಿಯೇ ಪರಿಣಮಿಸಿದೆ. ಅಮೇರಿಕೆಯಂಥ ಸಮಾಜದಲ್ಲಿ ಇಂಥ ಹೊಸ ಹೊಸ ಅನವಶ್ಯಕವಾದ ಬೇಡಿಕೆಗಳನ್ನೂ ಹೇಗೆ ಉದ್ದಿಮೆದಾರರು ನಿರ್ಮಾಣಮಾಡುತ್ತಿದ್ದಾರೆಂಬವನ್ನು ವ್ಯಾನ್ಸ್ ಪೆಕಾರ್ಡ್‌ರು (Vance Packard) ಕೂಲಂಕಷವಾಗಿ ವಿವೇಚಿಸಿದ್ದಾರೆ. ಹೀಗಾಗಿ ಹೆಚ್ಚು ಹೆಚ್ಚು ಸರಕು ಸೌಲಭ್ಯಗಳನ್ನು ದೊರಕಿಸುವ ಹೋರಾಟದಲ್ಲಿ, ನಂತರ ಅವುಗಳ ಉಪಭೋಗದಲ್ಲಿ, ಇಡಿಯ ಜೀವನವೆಲ್ಲ ಸವೆದುಹೋಗುತ್ತದೆ.

ಆರ್ಥಿಕ ಅಭಿವೃದ್ಧಿಯೇ ಜೀವನದ ಅಂತಿಮ ಗುರಿಯಲ್ಲ; ಅದು ತುಂಬುಜೀವನವನ್ನು ಸಾಗಿಸಲು ಬೇಕಾದ ಒಂದು ಸಾಧನ ಮಾತ್ರ—ಎಂಬ ಮಾತನ್ನು ಇಂಥ ದೇಶಗಳು ಮರೆತಂತೆ ಕಾಣುತ್ತದೆ.

**ಭಾರತೀಯ ಸಂಸ್ಕೃತಿಯ ಪರಂಪರೆ**

'ಸುಖ' ಅಂಗಡಿಯಲ್ಲಿ ದೊರಕುವ ಸರಕು ಅಲ್ಲ. ಜನರ ಆದಾಯ ಹೆಚ್ಚಿದರೆ, ಸುಖ ತಂತಾನೇ ಹೆಚ್ಚುವದಿಲ್ಲ. ಅನ್ನ, ಬಟ್ಟೆ, ವಸತಿ ಇವೇ ಮೊದಲಾದ ಕನಿಷ್ಠ ಅನುಕೂಲತೆಗಳನ್ನೇನೋ ಕಲ್ಪಿಸಿಕೊಡುವದು ಅತ್ಯಾವಶ್ಯಕವೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ಈ ಕನಿಷ್ಠ ಬೇಡಿಕೆಗಳ ಸಂತೃಪ್ತಿಯಾದ ನಂತರ ಎಲ್ಲರೂ ಸುಖಿಗಳಾಗಿರಬಲ್ಲರೇ? ಸುಖವು ಒಂದು ವಸ್ತುವೂ ಅಲ್ಲ; ಅದೊಂದು ಮನೋಭಾವ. ಈ ಮನೋಭಾವವನ್ನು, ಅದಕ್ಕೆ ಅನುಕೂಲವಾದ ವಾತಾವರಣವನ್ನು, ನಾವು ನಿರಂತರ ಪರಿಶ್ರಮದಿಂದ ನಿತ್ಯ ಸೃಷ್ಟಿಸುತ್ತಿರಬೇಕು.

ಪರಂಪರಾಗತವಾದ ಭಾರತೀಯ ಸಂಸ್ಕೃತಿಯು ಸುಖಸಂಪಾದನೆಗಾಗಿ ಒಂದು ಬಲವಾದ ಅಸ್ತಿವಾರವನ್ನು ಹಾಕಿಕೊಟ್ಟಿದೆಯೆಂದು ಹೇಳಬಹುದು. ಅರ್ಥಸಂಪಾದನೆಯು ಜೀವನದ ಸರ್ವಸ್ವವಲ್ಲ; ನಾಲ್ಕು ಪುರುಷಾರ್ಥಗಳಲ್ಲಿ "ಅರ್ಥ"ವೂ ಒಂದು—ಎಂಬ ಉದಾತ್ತ ವಿಚಾರವು ಬರಿಯ ಪಂಡಿತರ, ತತ್ತ್ವಜ್ಞಾನಿಗಳ ಸೊತ್ತಾಗಿಲ್ಲ. ಸಾಮಾನ್ಯರು ಕೂಡ—ಅವರು ಗ್ರಾಮನಿವಾಸಿಗಳೇ ಇರಲಿ, ನಿರಕ್ಷರಿಗಳೇ ಇರಲಿ–ತಮ್ಮ ನಿತ್ಯಜೀವನದಲ್ಲಿ ಈ ವಿಚಾರಪ್ರಣಾಲಿಯನ್ನು ಅಳವಡಿಸಿಕೊಂಡಿದ್ದನ್ನು ನಾವು ನಮ್ಮ ದೇಶದಲ್ಲಿ ಕಾಣುವದು ಹೆಮ್ಮೆಯ ಮಾತಾಗಿದೆ. ಹಳ್ಳಿಯ ಒಕ್ಕಲಿಗನು ಗೀತೆಯ—"ಯೋಗಃ ಕರ್ಮಸು ಕೌಶಲಂ" ಅಥವಾ "ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ" ಎಂಬ ಶ್ಲೋಕಗಳನ್ನು ಓದಿರಲಿಕ್ಕಿಲ್ಲ. ಆದರೂ ದೈನಂದಿನ ಜೀವನದಲ್ಲಿ ಅವನ ವರ್ತನೆ ಇದಕ್ಕನುಗುಣವಾಗಿಯೇ ಇದೆ. ಎಲ್ಲರಿಗೂ ತತ್ತ್ವಜ್ಞಾನಿಗಳಾಗಲು ಅವಶ್ಯವಿದ್ದ ಬುದ್ಧಿಮತ್ತೆ ಇರಲಿಕ್ಕಿಲ್ಲ. ಆದರೆ ಸಮಾಜಕ್ಕೆ ತತ್ತ್ವಜ್ಞಾನಿಗಳು ಅವಶ್ಯವಿದ್ದಷ್ಟೇ ಒಕ್ಕಲಿಗರು, ಕಾರಕೂನರು, ಕೂಲಿಕಾರರು ಇವರೆಲ್ಲ ಬೇಕಾಗಿದ್ದಾರೆ. ಇಂಥ ವಿಶಾಲದೃಷ್ಟಿ ನಮ್ಮಲ್ಲಿದ್ದರೇನೇ ನಮ್ಮ ನಮ್ಮ ಕಾರ್ಯಗಳನ್ನು ಮನಃಪೂರ್ವಕವಾಗಿ, ಕೌಶಲ್ಯದಿಂದ ಮಾಡಲಣಿಯಾಗಬಲ್ಲೆವು. ಅಲ್ಲದೆ, ನಮ್ಮ ಪಾಲಿಗೆ ಬಂದ ಕೆಲಸವನ್ನು ಕಾರ್ಯಕ್ಷಮತೆಯಿಂದ ಮಾಡುವದರಲ್ಲೇ ಒಂದು ತರಹದ ಆನಂದ, ತೃಪ್ತಿಯನ್ನು ಪಡೆಯಬಲ್ಲೆವು. ಈ ಗುಣಗಳು ನಮ್ಮ ಸಮಾಜದಲ್ಲಿ ಒಂದಲ್ಲ ಒಂದು ವಿಧದಿಂದ ಬೇರೂರಿವೆ ಎಂದು ಹೇಳಲಡ್ಡಿಯಿಲ್ಲ. ಪ್ರಾಮಾಣಿಕತೆ, ಕಾರ್ಯನಿಷ್ಠೆ ಲೋಕಸಂಗ್ರಹ—ಇವೇ ಮೊದಲಾದ ಸದ್ಗುಣಗಳು ನಮ್ಮಲ್ಲಿರಬೇಕೆಂದು ನಿತ್ಯಶ್ರವಣದಿಂದ ಎಲ್ಲರಿಗೂ ಮನವರಿಕೆಯಾದ ಮಾತು. ಈ ಪರಂಪರಾಗತ ಉಪದೇಶದ ಮೂಲಕವೇ ಸಮಾಜದ "ಚಾರಿತ್ರ್ಯ" ನಿರೂಪಣೆಯಾಗಿದೆ. ಆದುದರಿಂದ ಒಕ್ಕಲಿಗನನ್ನು "ನೇಗಿಲಯೋಗಿ" ಎಂದು ಕರೆಯುವದರಲ್ಲಿ ಬರಿ ಕಾವ್ಯದ ಕಾವು ಮಾತ್ರ ಇರದೆ ಬಹಳಷ್ಟು ತಥ್ಯಾಂಶವೂ ಇದೆ.

ಮಾನವನ ವ್ಯಕ್ತಿತ್ವವಿಕಸನವೂ ತುಂಬುಜೀವನದ ಇನ್ನೊಂದು ಮುಖ. ಆದುದರಿಂದಲೇ ಭಾರತದ ಪುರಾತನ ಸಾಹಿತ್ಯದಲ್ಲಿ ಜ್ಞಾನ ಹಾಗೂ ಕಲೆಗಳಿಗೆ ಬಹಳಷ್ಟು ಮಹತ್ವವಿತ್ತುದನ್ನು ನಾವು ಕಾಣುತ್ತಿದ್ದೇವೆ. ಕೆಲ ಕಲಾವಿದರಂತೂ ವಿಶೇಷತಃ ಸಂಗೀತಜ್ಞರು—ಸಾಧುಸಂತರಷ್ಟು ಪೂಜಾರ್ಹರಾಗಿದ್ದಾರೆ. ಔಪಚಾರಿಕ ದೃಷ್ಟಿಯಿಂದ ಓದುಬರಹ ಬಲ್ಲವರಿರದಿದ್ದರೂ ನಮ್ಮ ಬಹಳಷ್ಟು ಜನರು ಕಾವ್ಯ-ಕಲೆಗಳ ಶಬ್ದ-ಸೌಂದರ್ಯಕ್ಕೆ ತಲೆದೂಗುವ ರಸಿಕರು; "ಕುರಿತೋದದೆಯುಂ ಕಾವ್ಯ ಪ್ರಯೋಗಪರಿಣತಮತಿಗಳ್" ಕರ್ನಾಟಕದ ಬಗ್ಗೆಯಷ್ಟೇ ಹೇಳುವದಾದರೆ ದಾಸರ ಪದ, ಸರ್ವಜ್ಞನ ತ್ರಿಪದಿ, ಹಳ್ಳಿಯ ಹಾಡು–ಇವೆಲ್ಲವುಗಳನ್ನು ತನ್ಮಯತೆಯಿಂದ ಸವಿಯುವ ಹೃದಯವಂತಿಕೆ ಯಾವ ಬಡವನಿಗೂ ಅಂತಃಸತ್ವದ ಸೊತ್ತಾಗಿದೆ. ಕಲೆಯ ಹಲವಾರು ಮುಖಗಳು ವೈಯಕ್ತಿಕ ಹಾಗೂ ಸಾಮೂಹಿಕ ಹಬ್ಬ-ಹುಣ್ಣಿವೆ, ಸಮಾರಂಭಗಳೊಡನೆ ಹಾಸುಹೊಕ್ಕಾಗಿ ಹೊಂದಿಕೊಂಡೇ ಬಂದಿವೆ. ಈ ತರಹದ ಹೃದಯವಂತಿಕೆ, ರಸಿಕತೆಯನ್ನು ವಿಸ್ತಾರಗೊಳಿಸುವದು ಅವಶ್ಯವಾಗಿದೆ. ಕಲೆಯ ಆರಾಧನೆಯಲ್ಲಿ ಲಭಿಸುವ ಸುಖ ಬಹಳಷ್ಟು ಜನರಿಗೆ ಲಭ್ಯವಾಗಬೇಕು.

ಔದ್ಯೋಗೀಕರಣವೂ ತ್ವರಿತ ಗತಿಯಿಂದ ಸಾಗಿದ ಹಾಗೆ, ಈ ನಮ್ಮ ಪರಂಪರಾಗತವಾದ ಮೌಲ್ಯಗಳು ಕ್ರಮೇಣ ಮರೆತುಹೋಗುವ ಗಂಡಾಂತರವಿದೆ. ಅದ್ದರಿಂದಲೇ ಆರ್ಥಿಕ ಅಭಿವೃದ್ಧಿಯು ,ಸಮೃದ್ಧಿಜೀವನವನ್ನು ಸಾಗಿಸಲು ಬೇಕಾದ :ಒಂದು ಸಾಧನಮಾತ್ರ

ಎಂಬ ಮಾತನ್ನು ನಾವು ಪುನಃ ಪುನಃ ಸ್ಮರಿಸಿ ಕೊಳ್ಳಬೇಕಾಗಿದೆ. ಪರಂಪರಾಗತವಾದ ಸಂಸ್ಕಾರ ಹಾಗೂ ಸಂಸ್ಕೃತಿಗಳನ್ನು ಕಾಯ್ದು ಕೊಳ್ಳಲು ವಿಶೇಷ ಪ್ರಯತ್ನ ಮಾಡಬೇಕಾದೀತು. ಅಂದರೇನೇ ವೈಯಕ್ತಿಕ ಹಾಗೂ ರಾಷ್ಟ್ರೀಯ ಚಾರಿತ್ರ್ಯವನ್ನೂ ಈ ಪರಂಪರೆಯ ತಳಹದಿಯ ಮೇಲೆ ಕಟ್ಟಲು ಬಂದೀತು. ಹಾಗೆಯೇ ಆರ್ಥಿಕ ಯೋಜನೆಯಲ್ಲಿ ವಿವಿಧ ಕಲೆಗಳ ಪ್ರೋತ್ಸಾಹನಕ್ಕೂ ಅವಕಾಶವಿರಬೇಕೆಂಬುದಷ್ಟೇ ಅಲ್ಲ; ಜನರಲ್ಲಿ ರಸಿಕತೆಯ ಪ್ರಜ್ಞೆಯನ್ನೂ ವಿಸ್ತಾರಗೊಳಿಸುತ್ತಿರಬೇಕು.

**ಕೊನೆಯ ಮಾತು**

ಇವೆಲ್ಲ ಸಮಸ್ಯೆಗಳ ಅರಿವನ್ನು ತೋರಿಸುವದು ನಮ್ಮ ಯೋಜನೆಯ ವೈಶಿಷ್ಟ್ಯವೆಂದೇ ಹೇಳಬಹುದು. ಸ್ವತಃ ನೆಹರೂರವರಿಂದ ಬರೆಯಲಾಗಿದೆಯೆಂದು ಹೇಳಲಾದ ಮೂರನೆಯ ಯೋಜನೆಯ "ಪೀಠಿಕೆ"ಯಲ್ಲಿಯ ಕೆಲ ಮಾತುಗಳನ್ನು ಈ ಲೇಖನದ ಕೊನೆಗೆ ಉದಾಹರಿಸಬಹುದು. ಜನರು "ಒಳ್ಳೆಯ ಜೀವನ" ವನ್ನು ಸಾಗಿಸಲು ಬೇಕಾದ ಸೌಲಭ್ಯಗಳನ್ನೂ ವಾತಾವರಣವನ್ನೂ ಒದಗಿಸುವದು ಆರ್ಥಿಕ ಅಭಿವೃದ್ಧಿಯ ಗುರಿ ಎಂದು ಹೇಳಲಾಗಿದೆ. "ಒಳ್ಳೆಯ ಜೀವನ" ಎಂದರೇನು? ಎಂಬುದರ ಕಲ್ಪನೆ ಆಯಾ ದೇಶಗಳ ಪರಂಪರೆ, ಸಂಸ್ಕೃತಿ ಸಂಸ್ಕಾರಗಳನ್ನು ಅವಲಂಬಿಸಿದೆ. ಒಂದು ದೃಷ್ಟಿಯಿಂದ ಭಾರತವು ಹಳೆಯ ಹೊಸತಿನ ಸಮನ್ವಯಕ್ಕಾಗಿ ಯತ್ನಿಸುತ್ತಿದೆಯೆಂದು ಹೇಳಬಹುದು. ಅಂತೆಯೇ ಒಬ್ಬ ಗಾಂಧೀಜಿ ಅಥವಾ ಟಾಗೋರರಂಥ ವ್ಯಕ್ತಿಗಳು ಭಾರತದಲ್ಲಿ ಮಾತ್ರ ಹುಟ್ಟಲು ಸಾಧ್ಯ. ಟಾಗೋರರು ಎಷ್ಟೇ ಆಧುನಿಕರೆಂದೆನಿಸಿಕೊಂಡರೂ, ಅವರ ವಿಚಾರಗಳೆಲ್ಲ ಪರಂಪರೆಯಲ್ಲಿ ಬೇರೂರಿದ್ದವು. ನಮ್ಮ ದೇಶದ ದಾರಿದ್ರ್ಯವನ್ನು ಹೋಗಲಾಡಿಸಲು ನಮಗೆ ಔದ್ಯೋಗೀಕರಣ, ವಿಜ್ಞಾನ, ಯಂತ್ರ-ಸಾಮಗ್ರಿ, ಇವೆಲ್ಲ ಬೇಕೇಬೇಕು. ಆದರೆ ಔದ್ಯೋಗೀಕರಣವೆಂದರೆ ಪಾಶ್ಚಾತ್ಯ ದೇಶಗಳ ಅಂಧಾನುಕರಣೆಯಲ್ಲ. ಬರಿಯ ಸಂಪತ್ತನ್ನು ಸಂಗ್ರಹಿಸಿ ಮಾನವತೆಯನ್ನು ಕಳೆದುಕೊಳ್ಳುವ ಅಭಿವೃದ್ಧಿ ನಮಗೆ ಬೇಕಿಲ್ಲ. ಈ ರೀತಿ ಅಭಿವೃದ್ಧಿ ಹೊಂದಿದ ದೇಶಗಳಲ್ಲಿಯ ಕುಂದುಕೊರತೆಗಳು ನಮ್ಮ ದೇಶದಲ್ಲಿಯೂ ತಲೆದೋರದಂತೆ ನೋಡಿಕೊಂಡರೆ ಭಾರತವು ಆರ್ಥಿಕ ಅಭಿವೃದ್ಧಿಯಲ್ಲಿಯೂ ಹೊಸ ಪಂಥವನ್ನು ಹಾಕಿಕೊಟ್ಟಂತಾದೀತು.



ಲೇಖಕರು :
ಶ್ರೀ. ಗೋರೂರು ರಾಮಸ್ವಾಮಿ
ಅಯ್ಯಂಗಾರ, ಗೋರೂರು.



# ರಣದೇವರು ಒಣದೇವರು



ಆಂಜನೇಯನ ಪೂಜಾರಿ— ಮಾರಿಯಮ್ಮನ ಭಕ್ತ, ಇವರಲ್ಲಿ ದೇವರ ಸತ್ವದ ಬಗ್ಗೆ ವಿವಾದ ನಡೆದು ಪಂಥವನ್ನು ಕಟ್ಟಿದರು. ಈ ಭಕ್ತನ ಹೆಂಡತಿ ಆಂಜನೇಯನ ಭಕ್ತೆ. ಇದರಿಂದ ಅವಳಿಗೆ ತುಂಬ ನೋವಾಯಿತು. ಅವಳೂ ದೇವರಿಗೇ ಮೊರೆಹೊಕ್ಕಳು. ಪೂಜಾರಿ ತುಂಬಾ ಸಾತ್ವಿಕ. ತನ್ನ ದೇವರ ಕರ್ತೃತ್ವ ಶಕ್ತಿಯಲ್ಲಿ ಅಗಾಧ ವಿಶ್ವಾಸ ಅವನಿಗೆ. ಅವನ ಈ ವಿಶ್ವಾಸವೇ ಅವನನ್ನು ಈ ಪಂಥದಲ್ಲಿ ಗೆಲ್ಲುವಂತೆ ಮಾಡಿತು. ಇದೊಂದು ವಿಶ್ವಾಸದ ಸಂಘರ್ಷಣೆಯ ಕುತೂಹಲಕಾರಿಯಾದ ಕತೆ.

ಗರಡಿಪಾಳ್ಯದ ಶಿಡ್ಲುಮರಿ, ಹೆಸರಿಗೆ ತಕ್ಕಂತೆ ಬಹಳ ಜೋರಾದ ಆಸಾಮಿ. ಮೊದಲನೆಯದಾಗಿ ಅವನ ರೂಪವೇ ಜನರಿಗೆ ಭಯವನ್ನು ಹುಟ್ಟಿಸುತ್ತಿದ್ದಿತು. ಆಜಾನುಬಾಹುವಾಗಿ ಆರಡಿ ಎತ್ತರದ ಕಲಿಯುಗದ ಬಲಭೀಮ; ವಿಶಾಲವಾದ ಹಣೆ, ಉಬ್ಬಿದ ಎದೆ, ಸ್ವಭಾವದಿಂದ ಕೆಂಪಾಗಿದ್ದರೂ ಬಿಸಿಲಿನಲ್ಲಿ ಒಣಗಿ ಕಪ್ಪುತಿರುಗಿದ್ದ ಮೈಬಣ್ಣ, ಕೊಬ್ಬಿ, ಪುಷ್ಟವಾಗಿದ್ದ ಕೈಕಾಲುಗಳು ; ಅಡಕೆಮರದ ಬೊಡ್ಡೆಗಳಂತಿದ್ದ ತೊಡೆಗಳು, ತೀಕ್ಷ್ಣವಾಗಿದ್ದರೂ ದೌಷ್ಟ್ಯಪೂರ್ಣವಾಗಿದ್ದ ಕಣ್ಣುಗಳು. ಶಿಡ್ಲುಮರಿಯನ್ನು ನೋಡಿದರೆ, ಹುಡುಗರು ಹೆದರುವುದಿರಲಿ, ಧೈರ್ಯಶಾಲಿಗಳಿಗು ಸಹ ಎದೆಯಲ್ಲಿ ನಡುಕಬರುತ್ತಿದ್ದಿತು. ಅವನು ಕೆಮ್ಮಿದರೆ, ಹನ್ನೆರಡು ಪಟಾಸ್ ಏಕಕಾಲದಲ್ಲಿ ಸಿಡಿದ ಶಬ್ದವಾಗುತ್ತಿದ್ದಿತು. ದಾರಿಯಲ್ಲಿ ಹೋಗುವಾಗ ಅವನು ಮಾತನಾಡುತ್ತಿದ್ದರೆ, ಮರಗಳಲ್ಲಿದ್ದ ಹಕ್ಕಿಗಳು ಹೆದರಿ ಹಾರಿಹೋಗುತ್ತಿದ್ದವು. ಪೊದೆಗಳಲ್ಲಿ ಅಡಗಿದ್ದ ಮೊಲಗಳೂ ಹುಂಜಗಳೂ ಕಾಡುಕೋಳಿಗಳೂ ಬಿರುಗಾಳಿ ಬಂದಾಗ ಹಾರಿಹೋಗುವ ಒಣಎಲೆಗಳಂತೆ ಚದುರಿಹೋಗುತ್ತಿದ್ದವು. ಅವನು ಮಾತನ್ನು ನಿಲ್ಲಿಸಿದ ಬಹಳ ಹೊತ್ತಿನ ವರೆಗೆ ಅದರ ಪ್ರತಿಧ್ವನಿ, ಹಾರ್ಮೋನಿಯಂನ ದಪ್ಪಶ್ರುತಿಯಂತೆ ಕಿವಿಯಲ್ಲಿ ಭೋರ್ಗರೆಯುತ್ತಿದ್ದಿತು. ಹಿಂದಲ ಕಾಲದಲ್ಲಿ ಆಗಿದ್ದರೆ, ಶಿಡ್ಲುಮರಿ ಒಬ್ಬ ಪಾಳೆಯಗಾರನಾಗಿರುತ್ತಿದ್ದನು. ಅದಕ್ಕೆ ಬೇಕಾದ ಕ್ರೌರ್ಯವೂ ಮೋಸವೂ ತಂತ್ರವೂ ಅವನಲ್ಲಿ ಮನೆಮಾಡಿಕೊಂಡಿದ್ದುವು.

ಗರಡಿಪಾಳ್ಯದ ಊರ ಮುಂದಲ ಬಯಲಿನಲ್ಲಿ, ಒಂದರ ಮಗ್ಗುಲಲ್ಲಿ ಒಂದು, ಒಂದೇ ಆವರಣದಲ್ಲಿ ಎರಡು ದೇವಾಲಯಗಳಿದ್ದವು. ಆ ಎರಡು ದೇವಾಲಯಗಳೂ ಭಾವೈಕ್ಯದ ಕುರುಹುಗಳಿದ್ದಂತಿದ್ದವು. ಅಷ್ಟೇ ಅಲ್ಲ, ಅವು ಒಂದರ ಎದುರಿಗೆ ಒಂದು ಇದ್ದವು. ಒಂದು ಆಂಜನೇಯ ದೇವಸ್ಥಾನ ಮತ್ತೊಂದು ಮಾರಿಯಮ್ಮನ ದೇವಸ್ಥಾನ. ಒಂದು ಒಣದೇವರು ಮತ್ತೊಂದು ರಣದೇವರು. ಊರಿನ ಎಲ್ಲಾ ಜನರೂ ಸಾಮಾನ್ಯ ಕಾಲದಲ್ಲಿ, ಎರಡು ದೇವರಿಗೂ ಭಕ್ತರಾಗಿದ್ದರೂ ತುಂಬ ಕಷ್ಟ ಬಂದಾಗ, ಅಥವ ತಮ್ಮ ಯಾವುದಾದರೂ ದೊಡ್ಡ ಕೆಲಸವಾಗಬೇಕಾದಾಗ ತಮ್ಮ ಸ್ವಭಾವಕ್ಕನುಗುಣವಾಗಿ, ಆಂಜನೇಯನಿಗೋ ಮಾರಿಯಮ್ಮನಿಗೋ ವಿಶೇಷ ಪೂಜೆಯನ್ನು ಮಾಡಿಸುತ್ತಿದ್ದರು. ಹಣ್ಣು-ಕಾಯಿ, ಪಂಚಾಮೃತ, ಮೊಸರನ್ನ ಇವು ಆಂಜನೇಯನಿಗೆ, ಕೋಳಿ, ಕುರಿ, ಆಡು, ಮೊಸರನ್ನಪಳಿಗೆ ಇವು ಮಾರಿಯಮ್ಮನಿಗೆ. ವಿಶೇಷ ದಿನಗಳಲ್ಲಿ ಮಾರಿಯಮ್ಮನಿಗೆ "ಒತ್ತಲಿಸಿ ಬಂದೊ ಕುರಿಗೊಳು." ಮಾರಿಯಮ್ಮ ಆಂಜನೇಯನಿಗಿಂತ ಹೆಚ್ಚು ಪ್ರಜಾಪ್ರಭುತ್ವವಾದಿ ದೇವರು. ಅವಳಿಗೆ ಪೂಜಾರಿ ಇಲ್ಲ. ಕೋಳಿ, ಕುರಿ, ಆಡುಗಳನ್ನೂ ತಳಿಗೆಯನ್ನೂ ಭಕ್ತರೇ ಅರ್ಪಿಸುತ್ತಾರೆ. ಆದರೆ ಆಂಜನೇಯನಿಗೆ ಒಬ್ಬ ಪೂಜಾರಿ ಇದ್ದಾನೆ. ಅವನ ಆ ಕಸಬು, ವಂಶಪಾರಂಪರ್ಯವಾದ ಹಕ್ಕುದಾರಿಯೇ ಹೌದು. ಆದರೆ ಅವನೂ ಸಹ ತಾನು, ದೇವರಿಗೂ ಭಕ್ತರಿಗೂ ಮಧ್ಯದ ರಾಯಭಾರಿ ಯೆಂದು ಭಾವಿಸುವುದಿಲ್ಲ. "ಭಕ್ತರು ದೇವರಿಗೆ ಕಾಣಿಕೆಗಳನ್ನು ಅರ್ಪಿಸುತ್ತಾರೆ; ನಾನೂ ಒಂದು ಸೇವಾಪಾತ್ರದ ಉಪಕರಣ" ಎಂದು ಅವನು ಭಾವಿಸುತ್ತಾನೆ. ಅವನ ಹೆಂಡತಿ ಸಹ, ಮಾರಿಯಮ್ಮನಿಗೆ ಹರಕೆ ಹೊರುವುದುಂಟು. ದೇವರು ಬೇರೆ ಬೇರೆಯಾದರೂ

ಭಕ್ತರಲ್ಲಿ ಆ ಭಾವನೆ ಇಲ್ಲ. ಅವರಿಗೆ ಇಬ್ಬರು ದೇವರೂ ಬೇಕು. ಸಿಡುಬು ಪ್ಲೇಗು ಕಾಲರಾ ಟೈಫಾಯಿಡ್ ಬೀಳುವ ರೋಗ ಮುಂತಾದ ಪ್ರಬಲ ಕಾಹಿಲೆಗಳಲ್ಲಿ, ಆಂಜನೇಯನ ಭಕ್ತರೂ ಶೀಘ್ರಗುಣಕ್ಕಾಗಿ ಮಾರಿಯಮ್ಮನನ್ನು ಮರೆಹೋಗುತ್ತಾರೆ. ಅವರ ಅಭಿಪ್ರಾಯದಲ್ಲಿ, ಮಾರಿಯಮ್ಮ ಮಿಲಿಟರಿ ದೇವರು, ಅಲ್ಲಿ ಜೀವ ಅಥವ ಸಾವು ಶೀಘ್ರ ತೀರ್ಮಾನ. ಆದರೆ ಅವರೇ ಸಣ್ಣ ಸಣ್ಣ ರೋಗಗಳಿಗಾಗಿ ಆಂಜನೇಯ ದೇವರಲ್ಲಿ ಹೋಗುತ್ತಾರೆ. ಆಂಜನೇಯದೇವರ ಪ್ರತೀಕಾರ, ಸ್ವಲ್ಪ ಮೃದು ಮತ್ತು ಸಾವಧಾನ; ಪೋಲೀಸ್ ಕಾರ್ಯಾಚರಣೆಯಂತೆ. ಶಿಡ್ಲುಮರಿ ವಿನೋದವಾಗಿ "ಮಾರಿಯಮ್ಮ ಮಿಲಿಟರಿ, ಆಂಜನೇಯ ಪೋಲೀಸು" ಎಂದು ಹೇಳುವುದು ಪದ್ಧತಿ.

ಶಿಡ್ಲುಮರಿ ಮಟ್ಟಿಗೆ, ಸ್ವಲ್ಪ ಹೆಚ್ಚು ಕಡಿಮೆ, ಪೂರ್ಣ ಮಾರಿಯಮ್ಮನ ಭಕ್ತನೇ. ಅವನು ಪ್ರತಿ ಅಮವಾಸ್ಯೆಯ ದಿನವೂ ರಾತ್ರಿ ಹತ್ತುಗಂಟೆಗೆ ಎರಡು ಕೋಳಿಗಳನ್ನೋ ಒಂದು ಆಡನ್ನೋ ಅಥವ ಒಂದ ಕುರಿಯನ್ನೊ ತಪ್ಪದೆ ಮಾರಿಯಮ್ಮನಿಗೆ ಬಲಿ ಕೊಡುತ್ತಿದ್ದನು. ಬೆಳಗಾದ ಮೇಲೆ ಆ ದಾರಿಯಲ್ಲಿ ನಡೆದುಕೊಂಡೇ, ಆ ರಕ್ತದ ಕಲೆಯನ್ನು ದಾಟಿಕೊಂಡು ಭಕ್ತರು, ಆಂಜನೇಯನ ಗುಡಿಗೆ ಹೋಗಬೇಕಾಗುತ್ತಿದ್ದಿತು. ಕೆಲವು ವೇಳೆ, ಅವರಿಗೆ ಸ್ವಲ್ಪ ಬೇಸರವಾಗುತ್ತಿದ್ದಿತು. ಆದರೆ ಯಾರೊಬ್ಬರೂ ಸಹ, ಬಹಿರಂಗವಾಗಿ ಅಸಮಾಧಾನವನ್ನು ವ್ಯಕ್ತಪಡಿಸುತ್ತಿರಲಿಲ್ಲ. ಇದಕ್ಕೆ ಕಾರಣ, ಮಾರಿಯಮ್ಮನಲ್ಲಿ ಅವರಿಗಿದ್ದ ಭಕ್ತಿ ಮತ್ತು ಮತ್ತೊಬ್ಬರ ಆಚಾರವನ್ನು ನಾವು ವಿರೋಧಿಸಬಾರದು ಎಂಬ ಸಹನೆ. ಆದರೆ ಶಿಡ್ಲಮರಿ ಮಾತ್ರ, ಆಂಜನೇಯನ ಪೂಜಾರಿ ವಿಗ್ರಹಾಚಾರಿಯನ್ನು ಯಾವಾಗಲೂ ಹಾಸ್ಯ ಮಾಡುತ್ತಲೇ ಇರುತ್ತಿದ್ದನು. ಅವನ ಹಾಸ್ಯ, ಮುಖ್ಯವಾಗಿ ವಿಗ್ರಹಾಚಾರಿಯ ಒಣದೇವರು ಮತ್ತು ತನ್ನ ರಣದೇವರು ಇವರುಗಳನ್ನು ಕುರಿತುದೇ ಆಗಿರುತ್ತಿದ್ದಿತು. ದೇವರಿಗಿಂತ ಹೆಚ್ಚಾಗಿ ಪೂಜಾರಿಯನ್ನು ಹಾಸ್ಯ ಮಾಡುವುದೇ ಅವನ ಚೇಷ್ಟೆಯಾಗಿದ್ದಿತು. "ಏನು ಪೂಜಾರಿ ಅಯ್ಯನವರೇ, ಹೆಂಗವರೆ ನಿಮ್ಮ ಆಂಜನೇಯ, ಪಾಪ ಪಾಪ ನಿಮ್ಮನ್ನು ಕಂಡರೂ ಆ ದೇವರು ಹೆದರಿಕೊಳ್ಳುತ್ತಾರೆ. 'ಬಡದೇವರನ್ನು ಕಂಡರೆ ಬಿಲಪತ್ರೆ ಬುಸ್' ಎನ್ನುತ್ತದೆ ಎಂಬಂತೆ. ಆದರೆ ನಮ್ಮ ಮಾರಮ್ಮ, ರಣಚಂಡಿ, ಹಾಗಲ್ಲ, ಸ್ವಲ್ಪ ಹೆಚ್ಚು ಕಡಿಮೆಯಾದರೆ 'ಮಗನೇ ತಾ ನಿನ್ನ ತಲೆ' ಎನ್ನುತ್ತಾಳೆ ಎಂದೆಲ್ಲ ಹೇಳುತ್ತಿದ್ದನು. ಪೂಜಾರಿ ಸಾವಧಾನವಾಗಿ 'ದೇವರು ದಯಾಮಯ. ಆತನಿಗೆ ಭಕ್ತರ ಕಷ್ಟಗಳೆಲ್ಲ ಗೊತ್ತು. ಅವನು ಇರುವುದೇ ಭಕ್ತರನ್ನು ಕಾಪಾಡುವುದಕ್ಕಾಗಿ. ಅವನು ಎಲ್ಲರನ್ನೂ ಕಾಪಾಡುತ್ತಾನೆ' ಎಂದು ಹೇಳಿ ಹೆಚ್ಚುವಾದಕ್ಕೆ ನಿಲ್ಲದೆ ಹೊರಟುಹೋಗುತ್ತಿದ್ದನು. ಯಾವ ರೀತಿಯಲ್ಲಿಯಾದರೂ ವಾದಕ್ಕೆ ಎಳೆಯಬೇಕೆಂಬ ಶಿಡ್ಲಮರಿಯ ಪ್ರಯತ್ನ, ಪೂಜಾರಿ ವಿಗ್ರಹಾಚಾರಿಯ ವಿಷಯದಲ್ಲಿ ಫಲಿಸಲಿಲ್ಲ.

ವಾಸ್ತವವಾಗಿ, ವಿಗ್ರಹಾಚಾರಿ ಅಜಾತಶತ್ರು. ಗರಡಿಪಾಳ್ಯದ ಆಂಜನೇಯ ದೇವಸ್ಥಾನದ ಪೂಜೆ, ಅವನಿಗೆ, ತನ್ನ ತಂದೆ ಕಾಲವಾದ ಮುವ್ವತ್ತೈದು ವರುಷಗಳ ಹಿಂದೆಯೇ ಗಂಟುಬಿದ್ದಿದ್ದಿತು. ಆಗ ಅವನಿಗೆ ಇಪ್ಪತ್ತು ವಯಸ್ಸು ಮಾತ್ರವಾಗಿದ್ದಿತು. ಅವನಿಗೆ ಆಗಮಶಾಸ್ತ್ರವಾಗಲಿ ಮಂತ್ರಗಳಾಗಲಿ ಪೂಜಾಕ್ರಮಗಳಾಗಲಿ ತಿಳಿದಿರಲಿಲ್ಲ. ಪೂಜೆಯ ಉದ್ಯೋಗವನ್ನು ಕೈಕೊಳ್ಳಬೇಕೆಂದೂ ಅವನ ಉದ್ದೇಶವಾಗಿರಲಿಲ್ಲ. ಆದರೆ ಅವನ ತಾಯಿಯೂ ಊರಿನವರೂ ಎಲ್ಲರೂ ಅವನು ತನ್ನ ತಂದೆಯ ಕಸಬನ್ನೇ ಹಿಡಿದು ಊರಿನಲ್ಲಿಯೇ ನಿಲ್ಲಬೇಕೆಂದು ಒತ್ತಾಯಪಡಿಸಿದರು. ತಂದೆಗೆ ಒಬ್ಬನೇ ಮಗನಾಗಿದ್ದ ವಿಗ್ರಹಾಚಾರಿ, ತಾಯಿ ಮತ್ತು ಊರಿನವರ ಮಾತನ್ನು ಮೀರಲಾರದೆ, ಗರಡಿಪಾಳಯದಲ್ಲಿ ಪೂಜಾರಿಯಾಗಿ ನಿಂತನು. ಅವನ ಪೂರ್ವಜನ್ಮದ ಸುಕೃತವೋ ಎಂಬಂತೆ ಮೊದಲ ದಿನದಿಂದಲೂ ಅವನಿಗೆ ತಾನು ಪೂಜೆಮಾಡುತ್ತಿದ್ದ ಆಂಜನೇಯ ದೇವರಲ್ಲಿ ಅಚಲವಾದ ಭಕ್ತಿಯೂ ಪ್ರೇಮವೂ ಉಂಟಾದವು. ಆಂಜನೇಯನನ್ನು ನೋಡಿದ ಕೂಡಲೇ ಅವನಿಗೆ ಅನೇಕ ಜನ್ಮಗಳ ಕೆಳಗೆ ತಾನು ಕಳೆದುಕೊಂಡು ಹುಡುಕುತ್ತಾ ತೊಳಲುತ್ತಿದ್ದ ಹಿತವಾದ ಪ್ರಿಯವಸ್ತುವು ಸಿಕ್ಕಿದಂತೆ ಒಂದು ಅನಿರ್ವಚನೀಯವಾದ ತೃಪ್ತಿಯೂ ಪರಿಪೂರ್ಣಭಾವವೂ ಉಂಟಾದವು. ಅವನು, ಅನೇಕ ಜನ್ಮಗಳಲ್ಲಿ ಸಾಧಿಸಬೇಕಾಗಿದ್ದ ಸಂಸ್ಕಾರವನ್ನು ಪವಾಡದಿಂದಲೋ ಎಂಬಂತೆ ಒಂದು ಗಳಿಗೆಯಲ್ಲಿ ಸಾಧಿಸಿ ನಿಜವಾದ ಪೂಜಾರಿಯೇ ಆದನು. "ಗುರುವಿಗೆ ಗುಣವಿದ್ದರೆ ತೀರ್ಥ ರುಚಿ" ಎಂಬಂತೆ, ಪೂಜಾರಿಗೆ ಭಕ್ತಿಯಿದ್ದರೆ ದೇವರಿಗೂ ಮಹಿಮೆ. ವಿಗ್ರಹಾಚಾರಿಯನ್ನು ನೋಡಿದಕೂಡಲೇ, ಜನರಿಗೆ ಆಂಜನೇಯನಲ್ಲಿ ಭಕ್ತಿಯುಂಟಾಗುತ್ತಿದ್ದಿತು. ಅವನ ಭಕ್ತಿಯ ಮಹಿಮೆಯಿಂದಲೇ ಇರಬಹುದು; ಜನ, ಆಂಜನೇಯನಿಗೆ ಹರಕೆ ಮಾಡಿಕೊಂಡರೆ ಅದು ತಪ್ಪದೆ ಕೈಗೂಡುತ್ತಿದ್ದಿತು. ಹೀಗೆ ಗರಡಿಪಾಳ್ಯದ ಆಂಜನೇಯ, ತನ್ನ ಸುತ್ತಮುತ್ತಲ ನೂರಾರು ಹಳ್ಳಿಗಳಲ್ಲಿ ಈಗ ಮುವತ್ತೈದು ವರುಷಗಳಿಂದಲೂ "ಸತ್ಯದ ದೇವರು" ಎಂದು ಹೆಸರಾದನು. ಅದರ ಜತೆಯಲ್ಲಿಯೇ ವಿಗ್ರಹಾಚಾರಿಯ ಮಹಿಮೆಯೂ ಬೆಳೆಯುತ್ತಲೇ ನಡೆದಿದ್ದಿತು. ಗರಡಿಪಾಳ್ಯದಲ್ಲಿಯಂತೂ ಯಾವುದಾದರೂ ಹರಕೆ ಹೊತ್ತು ವಾರಕ್ಕೊಂದು ಸಲವಾದರೂ ಆಂಜನೇಯನ ದೇವಾಲಯಕ್ಕೆ ಹೋಗದ ಹೆಣ್ಣು ಗಂಡು ಯಾವುದೂ ಇರಲೇ ಇಲ್ಲ. ಪ್ರತಿ ಮಂಗಳವಾರವೂ ಗರಡಿ ಪಾಳ್ಯದ ಆಂಜನೇಯನ ದೇವಾಲಯದ ಸುತ್ತ ನೂರಾರು ಭಕ್ತರು, ಜಾತ್ರೆಯಂತೆ ಸೇರುತ್ತಿದ್ದರು. ಆದಿನ ಗರಡಿಪಾಳ್ಯದಲ್ಲಿ ಸಂತೆ ಸಹ. ಆದುದರಿಂದ ಆ ಆಂಜನೇಯನಿಗೆ "ಮಂಗಳವಾರದ ಆಂಜನೇಯ" ಎಂದೂ ಹೆಸರಾಗಿದ್ದಿತು. ಪೂಜಾರಿ ವಿಗ್ರಹಾಚಾರಿ, ತಾನು ಭಕ್ತರ ಪಾದಧೂಳಿ ಎಂದುಕೊಂಡು ಅತ್ಯಂತ ನಮ್ರನಾಗಿ ದೇವರ ಪೂಜೆಯನ್ನು ಮಾಡುತ್ತಿದ್ದನು. ಅವನ ಭಕ್ತಿಯ ನಿರ್ಮಲತೆಯನ್ನು ಕಂಡು ಪೂಜೆಗಾಗಿ ಬಂದವರು, ತಮ್ಮ ಅಂತರಂಗವನ್ನು ಪರೀಕ್ಷೆಮಾಡಿಕೊಂಡು ನಾಚಿಕೊಳ್ಳುತ್ತಿದ್ದರು. ಆ ಭಕ್ತರಲ್ಲಿ ಮಾರಿಯಮ್ಮನ ಭಕ್ತರೂ ಆಂಜನೇಯನ ಭಕ್ತರೂ ಇರುತ್ತಿದ್ದರು. ಆದರೆ ಅವರಾರೂ ಆಂಜನೇಯನ ದೇವಾಲಯಕ್ಕೆ ಕಾಯಿ ಹಣ್ಣು ಕೊಬ್ರಿ ಸಕ್ರೆ ರಸಾಯನ ಮೊಸರನ್ನ ಇವುಗಳ ಹೊರತು ಮತ್ತೇನನ್ನೂ ತರುತ್ತಿರಲಿಲ್ಲ.

ಒಂದು ಮಂಗಳವಾರ ಮಧ್ಯಾಹ್ನ, ಪೂಜೆ ಮುಗಿಯುವ ವೇಳೆಗೆ ಮೂರುವರೆ ಗಂಟೆಯಾಯಿತು. ಪೂಜೆಯನ್ನು ಮುಗಿಸಿಕೊಂಡು ವಿಗ್ರಹಾಚಾರಿ, ನಿಧಾನವಾಗಿ ತನ್ನ ಮನೆಯ ಕಡೆಗೆ ಹೊರಟಿದ್ದನು. ಅವನನ್ನು ಕಂಡ ಶಿಡ್ಲುಮರಿ "ಏನು ಪೂಜಾರಿ ಅಯ್ಯನವರೇ ಸಂಜೆ ಆಗಿಹೋಯಿತಲ್ಲ ? ನೀವು ಇನ್ನು ಊಟಮಾಡುವುದು ಯಾವಾಗ ?" ಎಂದನು. ವಿಗ್ರಹಾಚಾರಿಯು "ಇವತ್ತು ಮಂಗಳವಾರ ಅಲ್ಲವೆ ? ಭಕ್ತರ ಸಂಖ್ಯೆ ಹೆಚ್ಚು" ಎಂದನು. ಶಿಡ್ಲುಮರಿಯು "ಭಕ್ತರು ಹೇಳಿದ ಹಾಗೆಲ್ಲ ನೀವು ಕೇಳಿದರೆ, ಮಂಗಳವಾರ ನಿಮಗೆ ಉಪವಾಸನೇಯೆ" ಎಂದನು. ವಿಗ್ರಹಾಚಾರಿಯು "ಪೂಜಾರಿ, ಭಕ್ತರು ಹೇಳಿದಂತೆ ಕೇಳದಿದ್ದರೆ ಆಗುತ್ತದೆಯೆ ? ಪರಮಾತ್ಮನೇ ಭಕ್ತರು ಹೇಳಿದಂತೆ ಕೇಳುತ್ತಾನೆ" ಎಂದನು. ಶಿಡ್ಲುಮರಿಯು "ಹಾಗಾದರೆ, ನಾನು ಆಂಜನೇಯನ ಭಕ್ತನಲ್ಲವೆ?" ಎಂದು ಕೇಳಿದನು. ವಿಗ್ರಹಾಚಾ-

ರಿಯು "ಅಲ್ಲಾ ಅಂತ ಯಾರು ಹೇಳ್ತಾರೆ. ಎಲ್ಲರೂ ಆಂಜನೇಯನ ಭಕ್ತರೇ. ಎಲ್ಲರ ಹೃದಯವಲ್ಲಿಯೂ ಆಂಜನೇಯನು ಇದ್ದಾನೆ" ಎಂದನು. ಶಿಡ್ಲುಮರಿಯು "ಬಿಡಿ ಸ್ವಾಮಿ, ನಿಮಗೂ ಗೊತ್ತಿದೆ. ನಾನು ಆಂಜನೇಯನ ಭಕ್ತನಲ್ಲ ಅಂತ ಇನ್ನೂ ನನ್ನ ಹೆಂಡತಿ, ಆಂಜನೇಯನ ಭಕ್ತಳು. ನಾನು, ಆ ರಣದೇವತೆ ಚಂಡಿ-ಚಾಮುಂಡಿಯ ಭಕ್ತ" ಎಂದನು. ವಿಗ್ರಹಾಚಾರಿಯು "ಅದೇ ನಾನೂ ಹೇಳುತ್ತಿರುವುದು,. ಚಂಡಿ-ಚಾಮುಂಡಿಯ ಭಕ್ತನಾದುದರಿಂದಲೇ ನೀನು ಆಂಜನೇಯನಿಗೂ ಭಕ್ತ" ಎಂದನು. ಶಿಡ್ಲುಮರಿಯು "ಇದೆಲ್ಲ ನನಗೆ ಸುಮ್ಮನೆ ಹೇಳಬೇಡಿ ಸ್ವಾಮಿ. ನಾನು ಆಂಜನೇಯನ ಭಕ್ತನಲ್ಲ, ನಾನು ಒಂದುದಿನವೂ ಆಂಜನೇಯನ ದೇವಾಲಯಕ್ಕೆ ಬಂದವನಲ್ಲ. ನಾನು ನಿತ್ಯ ಆಂಜನೇಯನನ್ನೂ ನಿಮ್ಮನ್ನೂ ಹಾಸ್ಯಮಾಡುತ್ತಿರುವುದು ನಿಮಗೇ ಗೊತ್ತು" ಎಂದನು.

ವಿಗ್ರಹಾಚಾರಿಯು. "ನನಗೆ ಅದೂ ಗೊತ್ತು. ನೀನು ಆಂಜನೇಯನ ಭಕ್ತನೆಂಬುದೂ ಗೊತ್ತು" ಎಂದನು. ಶಿಡ್ಲುಮರಿಯು "ನೋಡಿದಿರಾ! ತಿರುಗಿ ಅದೇ ಮಾತು ನಾನು ಆಗಲಿ ಆಂಜನೇಯನ ಭಕ್ತನಾದರೆ, ನಾನು ಕೊಟ್ಟ ನೈವೇದ್ಯವನ್ನು ಸ್ವಾಮಿ, ಸ್ವೀಕರಿಸಬೇಕಲ್ಲ ಅಯ್ಯನೋರೆ!" ಎಂದನು. ವಿಗ್ರಹಾಚಾರಿಯು "ಅಡ್ಡಿಯೇನು? ನೀನು ಭಕ್ತಿಯಿಂದ ಕೊಟ್ಟರೆ, ಸ್ವಾಮಿ ಸ್ವೀಕರಿಸಿಯೇ ಸ್ವೀಕರಿಸುತ್ತಾನೆ" ಎಂದನು. ಶಿಡುಮರಿಯು ಕೋಪದಿಂದ "ನಾನು ಕೋಳಿ ಕುರಿ ಆಡುಗಳ ಮಾಂಸವನ್ನು ಅರ್ಪಿಸಿದರೂ ಸ್ವಾಮಿ ಸ್ವೀಕರಿಸುತ್ತಾನೆಯೆ?" ಎಂದು ಕೇಳಿದನು. ವಿಗ್ರಹಾಚಾರಿಯು ಒಂದು ಗಳಿಗೆ ಯೋಚಿಸಿ "ಸಂದೇಹವೇನು? ಆದರೆ ಸ್ವಾಮಿಯು ನೀನು ಏನು ಕೊಟ್ಟರೂ ಅದನ್ನು ತನಗೆ ಬೇಕಾದ ರೂಪಕ್ಕೆ ಬದಲಾಯಿಸುತ್ತಾನೆ. ನೀನು ತರುವುದೆಲ್ಲ, ಸ್ವಾಮಿಯ ಎದುರಿಗೆ ಬರುವುದರೊಳಗಾಗಿ ಸೊಗಸಾದ ಫಲಗಳಾಗುತ್ತವೆ" ಎಂದನು. ಶಿಡ್ಲುಮರಿಗೆ ಈಗ ನಿಜವಾಗಿಯೇ ಕೋಪಹತ್ತಿತು. ಅವನು "ಮಕ್ಕಳಿಗೆ ಹೇಳುವಂತೆ ಕಥೆ ಹೇಳುತ್ತಿದ್ದೀರಿ" ಎಂದನು. ವಿಗ್ರಹಾಚಾರಿಯು "ನನ್ನ ಮಾತು ಸುಳ್ಳಲ್ಲ. ಭಕ್ತನು ಏನು ತಂದರೂ ಭಗವಂತ, ಅದನ್ನು ತನ್ನ ನಿವೇದನಕ್ಕೆ ಅರ್ಹವಾಗಿ ಮಾರ್ಪಡಿಸಿಕೊಳ್ಳುತ್ತಾನೆ" ಎಂದನು. ಶಿಡ್ಲುಮರಿಯು "ಹಾಗಾದರೆ, ಇದನ್ನು ಪರೀಕ್ಷೆ ಮಾಡಿಯೇ ಬಿಡೋಣ ಸ್ವಾಮಿ"ಎಂದನು. ವಿ ಗ್ರ ಹಾ ಚಾ ರಿ ಯು "ದೇವರನ್ನು ಪರೀಕ್ಷಿಸಬಾರದು. ಇಷ್ಟರ ಮೇಲೆ ನಿನ್ನ ಇಷ್ಟ" ಎಂದನು.



"ದೇವರನ್ನು ಪರೀಕ್ಷಿಸಬಾರದು. ಇಷ್ಟರ ಮೇಲೆ ನಿನ್ನ ಇಷ್ಟ" ವಿಗ್ರಹಾಚಾರಿಯು ಶಿಡ್ಲುಮರಿಗೆ ಹೇಳಿದನು.

ಆ ವೇಳೆಗೆ ಶಿಡ್ಲುಮರಿಯ ಸ್ನೇಹಿತ ಮಾದಪ್ಪ, ಅಲ್ಲಿಗೆ ಬಂದನು. ಅವನು ಎಲ್ಲಾ ವಿಧದಲ್ಲಿಯೂ ಶಿಡ್ಲುಮರಿಯಂತೆಯೆ. ಶಿಡ್ಲುಮರಿ ಬಲಗೈಯಾದರೆ, ಇವನು ಎಡಗೈ; ಅವನು ದುರ್ಯೋಧನನಾದರೆ, ಇವನು ದುಶ್ಶಾಸನ. ಅವರಲ್ಲಿ ಯಾವಾಗಲೂ ಅಭಿಪ್ರಾಯ ಭೇದವುಂಟಾದುದೇ ಇಲ್ಲ. ವಿಷಯ ತಿಳಿದ ಕೂಡಲೇ ಮಾದಪ್ಪನೂ "ಹಾಗಾದರೆ ಪರೀಕ್ಷೆಯಾಗಿಯೇ ಬಿಡಲಿ ಸ್ವಾಮಿ" ಎಂದನು. ವಿಗ್ರಹಾಚಾರಿಯು "ಆಗಬಹುದು" ಎಂಬಂತೆ ತಲೆಯಲ್ಲಾಡಿಸಿದನು. ಈ ಪರೀಕ್ಷೆ ಯಾವ ದಿನ ನಡೆಯಬೇಕು? ಎಂಬುದಾಗಿ ಶಿಡ್ಲುಮರಿ ಮತ್ತು ಮಾದಪ್ಪ ಇವರೊಳಗೆ ಚರ್ಚೆ ನಡೆಯಿತು. ಶಿಡ್ಲುಮರಿಯು ತಾನು ಪ್ರತಿ ಅಮವಾಸ್ಯೆ ದಿನವೂ ಮಾರಮ್ಮನಿಗೆ ಆಡು ಕುರಿ ಕೋಳಿಗಳನ್ನು ಬಲಿಕೊಡುತ್ತಿದ್ದುದರಿಂದ ಆ ದಿನ ಪ್ರಶಸ್ತವಾಗುವುದೆಂದೂ ಜತೆಗೆ ಸಂತೆಯ ದಿನವೂ ಸೇರಿದರೆ ಉತ್ತಮವಾಗುವುದೆಂದೂ ಸೂಚಿಸಿದನು. ವಿಷಯವು ಸುತ್ತಮುತ್ತ ಪ್ರಕಟವಾಗಲು ಸಹ ಸ್ವಲ್ಪ ಕಾಲವನ್ನು ಕೊಡಬೇಕೆಂಬುದು ಅವನ ಇಚ್ಛೆಯಾಗಿದ್ದಿತು. ಅಂದಿನಿಂದ ಒಂದೂವರೆ ತಿಂಗಳ ಅಮಾವಾಸ್ಯೆ ಮಂಗಳವಾರ ಮಧ್ಯಾಹ್ನ ಈ ಪರೀಕ್ಷೆ ನಡೆಯಬೇಕೆಂದು ತೀರ್ಮಾನವಾಯಿತು. ಮಾದಪ್ಪ ಮತ್ತೊಂದು ಸಲ ವಿಗ್ರಹಾಚಾರಿಯ ನಿರ್ಧಾರವನ್ನು ಕದಲಿಸಲು ಪ್ರಯತ್ನಿಸಿದನು. ವಿಗ್ರಹಾಚಾರಿಯು "ಭಕ್ತ ಏನು ಕೊಟ್ಟರೂ ದೇವರು ಅದನ್ನು ತನಗೆ ಅರ್ಹವಾಗಿ ಮಾರ್ಪಡಿಸಿ ಸ್ವೀಕರಿಸುತ್ತಾನೆ" ಎಂದು ಮತ್ತೆ ಹೇಳಿದನು. ಶಿಡ್ಲುಮರಿಯು "ಸ್ವಾಮಿ ಇದರಲ್ಲಿ ನೀವು ಸೋತರೆ?" ಎಂದು ಕೇಳಿದನು. ವಿಗ್ರಹಾಚಾರಿಯು "ಸೋಲುವುದೂ ಗೆಲ್ಲುವುದೂ ಭಗವಂತನ ಇಚ್ಛೆ. ಇಲ್ಲಿ ಆಗುತ್ತಿರುವುದು ನನ್ನ ಪರೀಕ್ಷೆಯೂ ಅಲ್ಲ, ಭಗ

ವಂತನ ಪರೀಕ್ಷೆಯೂ ಅಲ್ಲ. ಇಲ್ಲಿ ಆಗುತ್ತಿರುವುದು ನನ್ನ ಪರೀಕ್ಷೆ. ನಾನು ಪರಿಶುದ್ಧನೂ ಭಕ್ತನೂ ಆದರೆ ದೇವರು ನನ್ನ ಮಾತನ್ನು ಸುಳ್ಳುಮಾಡುವುದಿಲ್ಲ. ನನ್ನ ಮಾತು ಸುಳ್ಳಾದರೆ ನಾನು ಈ ಊರಿನಲ್ಲಿ ಇನ್ನು ಮುಖ ತೋರಿಸುವುದಿಲ್ಲ" ಎಂದನು. ಮಾದಪ್ಪನು ಶಿಡ್ಲುಮರಿಯನ್ನು "ನೀನು ಸೋತರೋ ?" ಎಂದು ಕೇಳಿದನು. ಶಿಡ್ಲುಮರಿಯು "ನಾನು ಸೋಲುವುದೆಲ್ಲಿ ಬಂತು? ಆಗಲಿ. ಸೋತರೆ, ಪೂಜಾರಯ್ಯನವರ ಷರತ್ತೇ ನನಗೂ, ನಾನು ಸಹ..." ಅವನ ಮಾತನು ವಿಗ್ರಹಾಚಾರಿ ಮುಗಿಸಗೊಡದೆ "ನನ್ನ ತಪ್ಪಿಗಾಗಿ ನೀನು ಜೀವಮಾನವೆಲ್ಲ ದೇಶಭ್ರಷ್ಟನಾಗುವುದು ಬೇಡ. ನೀನು ಸೋತರೆ, ನೀನು ಹೋಗಿ ಗಂಗಾಸ್ನಾನ ಮಾಡಿಕೊಂಡು ಬಂದುಬಿಡು ಅಷ್ಟೇ ಸಾಕು" ಎಂದು ಹೇಳಿ ತನ್ನ ಮನೆಯ ಹಾದಿಹಿಡಿದನು. ಅವನ ಬೆನ್ನು ತಿರುಗುವುದರೊಳಗಾಗಿ ಶಿಡ್ಲುಮರಿಯು "ಗಂಗಾಸ್ನಾನವಂತೆ ಗಂಗಾಸ್ನಾನ!" ಎಂದು ಹಾಸ್ಯ ಮಾಡುತ್ತಿದ್ದುದು ಪೂಜಾರಿಯ ಕಿವಿಗೆ ಬಿದ್ದಿತು.

ಆ ಮುಂದಲ ಒಂದೂವರೆ ತಿಂಗಳು ಗರಡಿಪಾಳ್ಯದಲ್ಲಿ ಹಿಂದೆಂದೂ ಇಲ್ಲದಿದ್ದ ಕೋಲಾಹಲವೇ ಉಂಟಾಯಿತು. ದೇವಸ್ಥಾನದ ಮುಂದೆ ಜಗಲಿಗಳ ಮೇಲೆ ಚೌಕಗಳಲ್ಲಿ ನದಿಯ ಸ್ನಾನಘಟ್ಟದಲ್ಲಿ ಸಂತೆಯಲ್ಲಿ ಅಂಗಡಿಯಲ್ಲಿ ಬಸ್ ನಿಲ್ದಾಣದಲ್ಲಿ ಎಲ್ಲಿ ನೋಡಿದರೂ ವಿಗ್ರಹಾಚಾರಿಗೂ ಶಿಡ್ಲುಮರಿಗೂ ಬಿದ್ದ ಸ್ಪರ್ಧೆಯ ಮಾತೇಮಾತಾಗಿದ್ದಿತು. ಬಹುಜನರ ಸಹಾನುಭೂತಿ ವಿಗ್ರಹಾಚಾರಿಯ ಕಡೆಗೇ ಇದ್ದಿತು. "ಆ ಘಟಿಂಗ, ಈ ಬಡಪೂಜಾರಿಯನ್ನು ಗೋಳುಹುಯಿದುಕೊಳ್ಳಲು ಬಿಡಬಾರದು" ಎಂದು ಜನ ಹೇಳತೊಡಗಿದ್ದರು. ಈ ಪ್ರಶ್ನೆಯ ಮೇಲೆ ಅನೇಕ ಕಡೆಗಳಲ್ಲಿ ಒಬ್ಬರೊಂದಿಗೊಬ್ಬರಿಗೆ ಸಣ್ಣಸಣ್ಣ ಹೊಡೆದಾಟ ಸಹ ಆಯಿತು. ಕೆಲವರು ಗ್ರಾಮಪಂಚಾಯತಿ ಅಧ್ಯಕ್ಷರಲ್ಲಿ ಹೋಗಿ "ಸ್ವಾಮಿ, ಹೀಗೆ ಆಂಜನೇಯನ ಮುಂದೆ, ಮಾಂಸವನ್ನು ಇಡುವುದು ನ್ಯಾಯವಲ್ಲ. ಇದರಿಂದ ಊರಿನಲ್ಲಿ ಹೊಡೆದಾಟವಾಗುತ್ತೆ. ಊರಿನ ಶಾಂತಿಗೂ ಭಂಗ ಬರುತ್ತದೆ. ಈ ರೀತಿ ಮಾಡದಂತೆ, ಶಿಡ್ಲುಮರಿಗೆ ತಡೆಆಜ್ಞೆ ಹೊರಡಿಸಬೇಕು. ಗ್ರಾಮದ ಹಿತದೃಷ್ಟಿಯಿಂದ ಇದು ಆವಶ್ಯಕ'' ಎಂದು ಹೇಳಿದರು. ಪಂಚಾಯ್ತಿಯ ಅಧ್ಯಕ್ಷರು ''ಇದು ಪಂಚಾಯ್ತಿಗೆ ಸಂಬಂಧಪಟ್ಟ ವಿಷಯವಲ್ಲ. ಇದು ಇಬ್ಬರು ಮನುಷ್ಯರ ಸ್ಪರ್ಧೆ ಇರಬಹುದು, ಅಥವಾ ಇಬ್ಬರು ದೇವರುಗಳ ಸ್ಪರ್ಧೆಯೇ ಇರಬಹುದು. ಮನುಷ್ಯರು ಸೋತರೆ ದೇಶಾಂತರ ಹೋಗುತ್ತಾರೆ. ದೇವರು ಸೋತರೆ ಅವರಿಗೆ ಪೂಜೆಯೇ ನಿಂತುಹೋಗುತ್ತದೆ. ಅಲ್ಲದೆ ಈ ಕಾಲದಲ್ಲಿ ಇದನ್ನೆಲ್ಲ ಗಮನಿಸಲು ಯಾರಿಗೆ ಹೊತ್ತಿದೆ? ದೇವರು ಪೂಜೆ ಪುನಸ್ಕಾರ, ಪನಿವಾರ, ಮಾಂಸದ ನೈವೇದ್ಯ, ಹಣ್ಣು ಹಂಪಲುಗಳ ನೈವೇದ್ಯ ಇವುಗಳ ಚರ್ಚೆಯೆಲ್ಲ ಯಾರಿಗೆ ಬೇಕಾಗಿದೆ? ಈಗ ಹೋಗುತ್ತಿರುವುದು ಚಂದ್ರಲೋಕಕ್ಕೆ" ಎಂದರು. ಅವರಿಗೆ ಹೇಳಲು ಹೋಗಿದ್ದವರು "ನಿಜ ಸ್ವಾಮಿ. ಆದರೆ ವಿಗ್ರಹಾಚಾರಿ, ಒಳ್ಳೆಯವನು, ದೇವರಂತಹ ಮನುಷ್ಯ, ಈ ಠಕ್ಕ ಶಿಡ್ಲುಮರಿಯು ಒಡ್ಡಿದ ಬಲೆಗೆ, ಬಿದ್ದುಬಿಟ್ಟನಲ್ಲ. ಅಂತಹ ಒಳ್ಳೆಯವ, ಈ ಘಟಿಂಗನಿಗೆ ಹೆದರಿ, ಊರು ಬಿಟ್ಟು ಹೋದರೆ ಊರಿಗೇ ಕೆಟ್ಟದ್ದಲ್ಲವೆ?" ಎಂದರು. ಪಂಚಾಯ್ತಿಯ ಅಧ್ಯಕ್ಷರು "ನೀವು ಹೇಳುವುದು ಸರಿ. ಪೂಜಾರಿ ಹೊರಟು ಹೋದರೆ ನಿಜವಾಗಿ ನಮ್ಮೂರಿನ ದೇವರೇ ಹೊರಟುಹೋದಂತೆ ಆಗುತ್ತದೆ. ಆದರೆ ಇದರಲ್ಲಿ ಪಂಚಾಯ್ತಿ, ಏನನ್ನೂ ಮಾಡಲಿಕ್ಕಾಗುವದಿಲ್ಲವಲ್ಲ. ಇದು ದೇವರಿಗೂ ಭಕ್ತರಿಗೂ ಸೇರಿದ ವಿಷಯ. ಸತ್ಯಕ್ಕೆ ಜಯವಾಗಲಿ ಎಂದು ನಾವೆಲ್ಲ ಪ್ರಾರ್ಥಿಸೋಣ. ನಮ್ಮಿಂದ ಇನ್ನೇನೂ ಸಾಧ್ಯವಿಲ್ಲ" ಎಂದುಬಿಟ್ಟರು.

ದಿನಗಳು ಒಂದೊಂದಾಗಿ ಕಳೆಯತೊಡಗಿದವು. ಪ ರೀ ಕ್ಷೆ ಯ ದಿನ ಇನ್ನೂ ಮುಂದಕ್ಕೆ ಇದ್ದರೂ ಆಂಜನೇಯನ ಭಕ್ತರ ಸಂಖ್ಯೆ, ದಿನದಿನಕ್ಕೆ ಏರುತ್ತಲೇಹೋಯಿತು. ಪೂಜಾರಿ ವಿಗ್ರಹಾಚಾರಿಯಲ್ಲಿ ಯಾವ ಮಾರ್ಪಾಡೂ ಉಂಟಾಗಿರಲಿಲ್ಲ. ಆದರೆ ಅವನ ನಡೆನುಡಿ ಮುಖ ಮಾತುಗಳಲ್ಲಿ ಮೊದಲಿಗಿಂತಲೂ ಹೆಚ್ಚು ನಮ್ರತೆಯೂ ಭಕ್ತಿಯೂ ಗಾಂಭೀರ್ಯವೂ ಉಂಟಾಗಿದ್ದಿತು. ಅವನು ನಿದ್ರೆಯನ್ನೂ ಆಹಾರವನ್ನೂ ಮೊದಲಿಗಿಂತಲೂ ಇನ್ನೂ ಕಡಿಮೆ ಮಾಡಿ, ಬರಿಯ ಭಕ್ತಿ ಮತ್ತು ಗಾಳಿಯಿಂದಲೇ ಆತ್ಮದಿಂದಲೇ ಜೀವಿಸಿರುವವನಂತೆ ತೋರುತ್ತಾ ಮೊದಲಿಗಿಂತಲೂ ಹೆಚ್ಚು ಹೊತ್ತು, ಪೂಜೆ ಮತ್ತು ಧ್ಯಾನಗಳಲ್ಲಿ ಕಳೆಯುತ್ತಿದ್ದನು. ಹಿಂದೆ, ಬರಿಯ ಮಂಗಳವಾರ ಮಾತ್ರವೇ ಭಕ್ತರಿಂದ ತುಂಬಿರುತ್ತಿದ್ದ ದೇವಾಲಯದಲ್ಲಿ, ಈಗ ನಿತ್ಯ ಸದಾಕಾಲದಲ್ಲಿಯೂ ಜನರ ಗುಂಪು, ಭಜನೆ ಸಂಕೀರ್ತನೆ ಗಾಯನ ಹರಿಕಥೆ ಎಲ್ಲ ಪ್ರಾರಂಭವಾದವು. ಊರಿಗೆ ಒದಗಬಹುದಾದ ಯಾವುದೋ ಅಪಾಯವನ್ನು, ಅಷ್ಟಗ್ರಹಕೂಟ ಕಾಟವನ್ನು ತಪ್ಪಿಸಿಕೊಳ್ಳಲು, ಜನರೆಲ್ಲ ಎಂದೂ ಇಲ್ಲದ ಭಕ್ತಿಯಿಂದ ಒಂದು ಆಧ್ಯಾತ್ಮಿಕ ಶಕ್ತಿಯ ಕೋಟೆಯನ್ನು ಕಟ್ಟಿಸಿರುವಂತೆ ತೋರಿತು. ವಿಗ್ರಹಾಚಾರಿಯನ್ನು ರಕ್ಷಿಸಬೇಕೆಂದು ಊರಿನವರೆಲ್ಲ ಪಣ ತೊಟ್ಟಿದ್ದರು. ಆದರೆ ಆಳವಾಗಿ ಯೋಚಿಸಿದಾಗ ಅವರಿಗೆ, ಅವರು ಎದುರಿಸುತ್ತಿರುವ ಅಗ್ನಿಪರೀಕ್ಷೆಯಲ್ಲಿ, ಭಗವಂತನ ದಯೆಯೊಂದೇರಕ್ಷಣೆಯೆಂದು ನಂಬಿಕೆಯಾಗಿದ್ದಿತು.

ಯಾವುದಾದರೂ ಪವಾಡ ಸಂಭವಿಸಬಹುದೆಂಬ ನಿರೀಕ್ಷಣೆ ಯಾರಿಗೂ ಇರಲಿಲ್ಲ.

ಪೂಜಾರಿಯೊಂದಿಗೆ ಹೂಡಿದ ಪಂಥದಿಂದ ಶಿಡ್ಲುಮರಿಯಲ್ಲಿ, ಜನರಿಗೆ ಬಹಳ ಅಸಮಾಧಾನವಾಗಿದ್ದಿತು. ಆದರೆ ಪಂಥವನ್ನು ಅಷ್ಟೊಂದು ಪ್ರಾಮುಖ್ಯವಾಗಿ ಭಾವಿಸದೆ ಅದರಲ್ಲಿಯೂ ಕೆಲವರು ವಿನೋದವನ್ನೇ ಕಾಣುತ್ತಿದ್ದರು. ಆದರೆ ನಿಜವಾಗಿ ವ್ಯಥೆಗೊಂಡಿದ್ದವಳೆಂದರೆ, ಶಿಡ್ಲುಮರಿಯ ಧರ್ಮಪತ್ನಿ ಲಕ್ಷ್ಮಿ. ಲಕ್ಷ್ಮಿ, ಕೆಲವು ವಿಷಯಗಳಲ್ಲಿ ಗಂಡನಿಂದ ತೀರ ಭಿನ್ನಳಾಗಿದ್ದಳು. ಅವಳು ಸದಾ ಶಾಂತಚಿತ್ತಳಾದ ವಿವೇಕಿ ಸತೀಮಣಿಯಾಗಿದ್ದಳು. ಅವಳಿಂದ ಶಿಡ್ಲುಮರಿಯ ಬಾಳು ಹೆಚ್ಚು ಪೂರ್ಣವೂ ಸುಸಂಸ್ಕೃತವೂ ಮಧುರವೂ ಸುಗಂಧಯುಕ್ತವೂ ಆಗಿದ್ದಿತು. ಇದು ಶಿಡ್ಲುಮರಿಗೂ ಗೊತ್ತಿದ್ದಿತು. ಬುಸುಬುಸನೆ ಹಾವಿನಂತೆ ರೇಗುತ್ತಾ ಕೊಬ್ಬಿದ ಹಂದಿಯಂತೆ ಉಸಿರುಬಿಡುತ್ತಾ ಮನೆಸೇರಿದ ಶಿಡ್ಲುಮರಿ, ಹೆಂಡತಿಯನ್ನು ಕಂಡಕೂಡಲೇ, ಸಾನ್ನಿಧ್ಯಕ್ಕೆ ಬಂದವನಂತೆ ಶಾಂತನಾಗುತ್ತಿದ್ದನು. ಅವನಿಗೆ ಹೆಂಡತಿಯಲ್ಲಿ ಪ್ರೀತಿ, ಗೌರವ, ಭಯ ಮೂರೂ ಇದ್ದವು- ಲಕ್ಷ್ಮಿಗೆ ಸಹ ಗಂಡನಲ್ಲಿ ಪ್ರೀತಿಯೂ ಭಯವೂ ಇದ್ದಿತು. ಲಕ್ಷ್ಮಿ, ಆಂಜನೇಯನ ಭಕ್ತಳೂ ಹೌದು; ಮಾರಮ್ಮನ ಭಕ್ತಳೂ ಹೌದು. ದನಗಳ ರೋಗದ ವಿಷಯದಲ್ಲಿ, ಅವಳಿಗೆ ವಿಶೇಷವಾಗಿ ಆಂಜನೇ-ಯನಲ್ಲಿ ನಂಬಿಕೆ. ಒಂದು ಸಲ ಎಮ್ಮೆಗೆ ಮೆಟ್ರಿ ಕಟ್ಟುವ ರೋಗ ಬಂದಿತ್ತು. ಆಂಜನೇಯನಿಗೆ ಅವಳು ಎಣ್ಣೆಮಜ್ಜನ ಮಾಡಿಸಿದುದರಿಂದ ಅದು ಗುಣವಾಯಿತು. ಮತ್ತೊಂದು ಸಲ, ಇದ್ದಕ್ಕಿದ್ದಂತೆ, ಎಮ್ಮೆಯಲ್ಲಿ ಹಾಲು, ಸೀದುಹೋಯಿತು. ಆಂಜನೇಯನಿಗೆ ತುಪ್ಪದ ದೀಪವನ್ನು ಹತ್ತಿಸಿದುದರಿಂದ, ಹಾಲು ಮತ್ತೆ ಇಳಿಯಿತು. ಒಂದು ಛಳಿಗಾಲದಲ್ಲಿ ಏನು ಮಾಡಿದರೂ ಕಡೆದ ಮೊಸರಿನಲ್ಲಿ ಬೆಣ್ಣೆ ಮೇಲಕ್ಕೆ ಬರಲಿಲ್ಲ. ಲಕ್ಷ್ಮಿ, ಆಂಜನೇಯನಿಗೆ ಹರಿಕೆ ಮಾಡಿಕೊಂಡುದರಿಂದ ಬೆಣ್ಣೆ, ಮೇಲಕ್ಕೆ ಬಂದಿತು. ಹೀಗೆ ಒಂದಲ್ಲ ಒಂದು ರೀತಿ, ನೂರು ಸಲ, ಲಕ್ಷ್ಮಿಗೆ ಆಂಜನೇಯನ ಸತ್ಯ ಅನುಭವವಾಗಿದ್ದಿತು. ಲಕ್ಷ್ಮಿಯು, ಪೂಜಾರಿ ವಿಗ್ರಹಾಚಾರಿಯನ್ನು ಸಹ ಆಂಜನೇಯನ ಭಾಗವಾಗಿಯೇ ಭಾವಿಸಿದ್ದಳು.

ಪಂಥದ ವಿಷಯವನ್ನೆತ್ತಿ, ಲಕ್ಷ್ಮಿ, ಗಂಡನೊಂದಿಗೆ ‘ ಪೂಜಾರಿ ಅಯ್ಯನವರು ಬಹಳ ಒಳ್ಳೆಯವರು. ಅವರನ್ನು ನೀವು ಅನ್ಯಾಯವಾಗಿ ಊರು ಬಿಟ್ಟು ಓಡಿಸಿಬಿಡುತ್ತೀರಿ” ಎಂದು ಹೇಳಿದಳು. ಶಿಡ್ಲುಮರಿಯು “ ಛೇ ಛೆ ನಾನೆಲ್ಲಿ ಅವರನ್ನು ಓಡಿಸುತ್ತೇನೆ. ‘ ಈ ಪಂಥಕ್ಕೆ ಒಪ್ಪಬೇಡಿ. ಇದರಲ್ಲಿ ನಿಮಗೆ ಜಯವಾಗುವುದಿಲ್ಲ” ಎಂದು ನಾನೂ ಮಾದಪ್ಪನೂ ಅವನಿಗೆ ಎಷ್ಟೋ ಹೇಳಿದೆವು. ಆದರೆ ಅವನು ಒಪ್ಪಲಿಲ್ಲ. ಮಾಂಸವನ್ನು, ದೇವರು, ಹೂವು ಹಣ್ಣು ಮಾಡುತ್ತಾನೆಂದು ಆ ವಯ್ಯ ಹಠ ಹಿಡಿದಿದ್ದಾನೆ. ಬೇಕಾದರೆ ಈಗಲೂ ಅವನು ಹೇಳಿಬಿಡಲಿ. ಪರೀಕ್ಷೆಯನ್ನು ನಜಾಮಾಡಿಬಿಡುತ್ತೇನೆ” ಎಂದನು. ಲಕ್ಷ್ಮಿಯು “ಪಾಪ, ಅವರು ಭಕ್ತರು. ದೇವರ ಸತ್ಯವನ್ನು ತಾನು ರಕ್ಷಿಸುತ್ತೇನೆ” ಎಂದು ತಿಳಿದುಕೊಂಡಿದ್ದಾರೆ. ಊರಿಗೆ ಅವರು ಬೇಕು ಅವರನ್ನು ನಾವು ಉಳಿಸಿಕೊಳ್ಳಬೇಕು. ಈ ದೇವರಿಗೆ ಮಾಂಸದ ನೈವೇದ್ಯ, ಮಾಮೂಲಲ್ಲಾ. ಮಾಮೂಲು ಅಲ್ಲದುದನ್ನು ನಾವು ಯಾಕೆ ಮಾಡಬೇಕು ? ನೀವೂ ನಿಮ್ಮ ಪರೀಕ್ಷೆಯ ದಿವಸ, ಹೂವು ಹಣ್ಣುಗಳನ್ನೇ ತೆಗೆದುಕೊಂಡು ಹೋಗಿಬಿಡಿ” ಎಂದಳು.

ಶಿಡ್ಲುಮರಿಗೆ ರೇಗಿತು. ಅವನು “ ಏ ಲಕ್ಷ್ಮಿ, ಇಲ್ಲಿನೋಡು, ನೀನು ಏನು ಹೇಳಿದ್ರು, ನಾನು ಕೇಳತೇನೆ. ಆದರೆ ಇದರ ಮಾತಿಗೆ, ನೀನು ಬರಬೇಡ. ಸುತ್ತಾ ನೂರಾರು ಹಳ್ಳಿಗಳಲ್ಲಿ ಈಗಾಗಲೇ ಇದು ಡಂಗೂರ ಆಗಿಬಿಟ್ಟಿದೆ- ಈ ವಿಷಯದಲ್ಲಿ ನಾನು ಯಾರ ಮಾತನ್ನೂ ಕೇಳೋದಿಲ್ಲ. ಮಾರಮ್ಮನೇ ಸ್ವತಃ ಬಂದು ಹೇಳಿದರೂ ಅವಳ ಮಾತನ್ನೂ ಕೇಳೋಲ್ಲ. ಇದು ನನಗೂ ನನ್ನ ಮನಸ್ಸಿಗೂ ಸಂಬಂಧಪಟ್ಟ ಮಾತು. ಈಗ ನೀನು ಅಷ್ಟು ವರುಷಗಳಿಂದಲೂ ಆಂಜನೇಯನಿಗೇ ಹೂವು ಹಣ್ಣು ತೆಗೆದುಕೊಂಡು ಹೋಗುತ್ತಿದ್ದೀಯೆ. ನಾನೇನಾದರೂ ಅಡ್ಡಿ ಬಂದಿದ್ದೇನೆಯೆ ? ಈಗಲೂ ಪರೀಕ್ಷೆಯ ದಿನ, ನಿನ್ನ ನೇವೇದ್ಯ, ನೀನು ತೆಗೆದುಕೊಂಡು ಹೋಗು ; ಎಂದಿಗಿಂತಲೂ ಹೆಚ್ಚಾಗಿಯೇ ಹಣ್ಣುಗಳನ್ನು ತೆಗೆದುಕೊಂಡು ಹೋಗು. ಆದರೆ ನಾನು ಮಾತ್ರ ಮಾಂಸವನ್ನೇ ತೆಗೆದುಕೊಂಡು ಹೋಗುತ್ತೇನೆ. ಇದರ ಮಾತಿಗೆ ನೀನು ಬರಬೇಡ” ಎಂದನು. ಲಕ್ಷ್ಮಿಯು ನಮ್ರಳಾಗಿ “ ಹಾಗಾದರೆ ನಿಮ್ಮ ಇಷ್ಟ. ಮನುಷ್ಯರು ತಮ್ಮ ಅಹಂಕಾರದಲ್ಲಿ ದೈವವನ್ನು ಪರೀಕ್ಷಿಸಬಾರದು ಎಂದು ದೊಡ್ಡವರು ಹೇಳುತ್ತಾರೆ. ಆಂಜ-ನೇಯನ ಸತ್ಯಕ್ಕೆ ಎಂದಿಗೂ ಚ್ಯುತಿಯಿಲ್ಲ” ಎಂದಳು. ಶಿಡ್ಲುಮರಿಯು ಕೋಪದಿಂದ “ ಆಂಜನೇಯನ ಸತ್ಯಕ್ಕೆ ಚ್ಯುತಿ ಇಲ್ಲ, ನಿಜ. ಆದರೆ ವಿಗ್ರಹಾಚಾರಿ ಮಾತ್ರ ಈ ಊರಿನಿಂದ ಕಂಬಿ ಕೀಳುತ್ತಾನೆ” ಎಂದು ಹೇಳಿ ತನ್ನ ಮಾತನ್ನು ಮುಗಿಸಿದನು.

ಆಂಜನೇಯನ ಸಮ್ಮುಖದಲ್ಲಿ ಪರೀಕ್ಷೆಗಾಗಿ ಗೊತ್ತಾಗಿದ್ದ ಮಂಗಳವಾರದ ಹಿಂದಲ ಸೋಮವಾರ ಬೆಳಗ್ಗೆ, ಶಿಡ್ಲುಮರಿಯು ಹಾಸನಕ್ಕೆ ಹೋದವನು, ಸಂಜೆ ಊರಿಗೆ ಹಿಂದಿರುಗಿದನು. ಹೊಸದಾಗಿ ಬಿದರಿನಲ್ಲಿ ಮಾಡಿದ್ದ ಅಷ್ಟು ದೊಡ್ಡದೂ ಅಲ್ಲ, ಚಿಕ್ಕದೂ ಅಲ್ಲದ ಸೊಗಸಾದ ಎರಡು ಕುಕ್ಕೆಗಳು, ಅವುಗಳ ಮೇಲೆ ಮುಚ್ಚಲು ಎರಡು ಹೊಸ ವಸ್ತ್ರಗಳು, ಒಂದು ಕುಕ್ಕೆಯ ತುಂಬ, ಕೆಂಪು ಸೇಬಿನ ಹಣ್ಣು, ಕಿತ್ತಲೆ, ಸೊಗಸಾದ ಕಾಬೂಲು ದಾಳಿಂಬೆ, ಸೀಬೆಯ ಹಣ್ಣು ಮಾವಿನ ಹಣ್ಣು ಹೂವು ಇವುಗಳನ್ನೆಲ್ಲ ತಂದಿದ್ದನು. ಇನ್ನೊಂದು ಕುಕ್ಕೆ, ಬರಿದಾಗಿದ್ದಿತು. ಲಕ್ಷ್ಮಿಯು “ ಎರಡು ಕುಕ್ಕೆ ಯಾಕೆ ತಂದಿರಿ?” ಎಂದು ಕೇಳಿದಳು. ಶಿಡ್ಲುಮರಿಯು ಠೀವಿಯಿಂದ “ಇದು ನಮ್ಮನಮ್ಮ ದೇವರು ಮತ್ತು ಭಕ್ತಿಯ ವಿಷಯ ಈ ವಿಷಯದಲ್ಲಿ ನಾನು ಹೇಳಿದಂತೆ ನೀನು ಕೇಳಬೇಕಾದುದಿಲ್ಲ. ನೀನು ಹೇಳಿದಂತೆ ನಾನೂ ಕೇಳುವುದಿಲ್ಲ. ನಾಳೆ ನಿನ್ನ ಪದ್ಧತಿಯಂತೆ ಈ ಹಣ್ಣುಹಂಪಲುಗಳನ್ನು ಕೊಂಡುಹೋಗಿ ನಿವೇದಿಸು. ನನ್ನ ನಿವೇದನಗಳನ್ನು ನಾನು ಬೆಳಗ್ಗೆ ಸಿದ್ಧಗೊಳಿಸುತ್ತೇನೆ” ಎಂದನು. ಅಂತಹ ಸೊಗಸಾದ ಹಣ್ಣುಗಳನ್ನು ಲಕ್ಷ್ಮಿ, ತನ್ನ ಜೀವಮಾನದಲ್ಲಿಯೇ ನೋಡಿರಲಿಲ್ಲ. ಸೇಬಿನಹಣ್ಣು, ಮಾವಿನಹಣ್ಣು, ದಾಳಿಂಬೆಹಣ್ಣುಗಳು ತೆಂಗಿನ ಕಾಯಿಗಾತ್ರವಿದ್ದವು. ಗುಲಾಬಿ ಹೂವುಗಳು ರಕ್ತವರ್ಣವಾಗಿ ಬೊಗಸೆ ಅಗಲವಾಗಿದ್ದವು. ಗಂಡ, ಇಂತಹ ಶ್ರೇಷ್ಠವಸ್ತುಗಳನ್ನು ತಂದುದಕ್ಕಾಗಿ, ಲಕ್ಷ್ಮಿಗೆ, ಶಿಡ್ಲು-ಮರಿಯಲ್ಲಿ ತುಂಬ ಕೃತಜ್ಞತೆಯುಂಟಾಯಿತು. ಅವಳು ಗಂಡನೊಂದಿಗೆ ಆಸೆಯಿಂದ “ಎಷ್ಟು ಒಳ್ಳೆಯ ಪದಾರ್ಥಗಳನ್ನು ತಂದಿದ್ದೀರಿ ಅಂದರೆ; ಇದೊಂದು ಸಲಕ್ಕೆ, ನೀವೇ ಇದನ್ನು ನಾಳೆ ಆಂಜನೇಯನಿಗೆ ಕೊಟ್ಟುಬಿಡಿ. ಬೇರೆ ಸಿದ್ಧಗೊಳಿಸುವುದೂ ಬೇಡ, ಏನೂ ಬೇಡ” ಎಂದಳು. ಶಿಡ್ಲುಮರಿಯು ಸಿಡಿಲಿನ ಧ್ವನಿಯಲ್ಲಿಯೇ “ಮುಚ್ಚುಬಾಯಿ” ಎಂದು ಹೇಳಿ ಅಲ್ಲಿಂದ ಹೊರಟುಹೋದನು.

ಬೆಳಗಾಯಿತು. ಎರಡು ತಿಂಗಳುಗಳಿಂದ, ಗರಡಿಪಾಳ್ಯದ ಮತ್ತು ಸುತ್ತಮುತ್ತಲ ಹಳ್ಳಿಯ ಜನ, ಆತುರದಿಂದಲೂ ಕಾತರದಿಂದಲೂ ಕಾಯುತ್ತಿದ್ದ ದಿನ ಅದು. ಅಂದು ಮಂಗಳವಾರ ಅಮಾವಾಸ್ಯೆ. ಮಧ್ಯಾಹ್ನ ಒಂದು ಗಂಟೆಗೆ ಆಂಜನೇಯ ದೇವರಿಗೆ ಮಂಗಳಾರತಿ, ನಿವೇದನ. ಬೆಳಗಿನ ಎಂಟು ಗಂಟೆಯ ವೇಳೆಗೇ, ನದಿಯ ತೀರದಲ್ಲಿ ಸ್ನಾನಕ್ಕಾಗಿ ಸೇರಿದ ಜನಸಮೂಹದಿಂದ, ನದಿಯಪಾತ್ರ ತುಂಬಿಹೋಗಿದ್ದಿತು. ಗೋಸಾಯಿಗಳು, ಜಾಗಟೆ, ಶಂಖ,

ತುತ್ತೂರಿ ಭಾಂಕಿಗಳ ಶಬ್ದದಿಂದ, ಆಕಾಶವನ್ನೇ ಭೇದಿಸುತ್ತಿರುವ ದಾಸಯ್ಯಗಳು ಸಮೇರಾಯಗಳು, ಏಕನಾದವನ್ನು ಹಿಡಿದು ಹಾಡುತ್ತಿರುವ ದಾಸರು, ಪ್ರತಿಯೊಂದು ಊರಿನಿಂದಲೂ ಓಲಗ, ತಮಟೆ, ಕೊಂಬು, ಕಹಳೆ, ತಾಳ, ಕುಣಿಮಿಣಿ ಹರೆ ಮುಂತಾದ ವಾದ್ಯಗಳೊಂದಿಗೆ ಬರುತ್ತಿರುವ ಸ್ತ್ರೀ ಪುರುಷರ ಗುಂಪು. ಗರಡಿಪಾಳ್ಯದಂತಹ ಚಿಕ್ಕ ಹಳ್ಳಿಯಲ್ಲಿ, ಆ ದಿವಸ ಹತ್ತುಸಾವಿರಕ್ಕಿಂ. ತಲೂ ಹೆಚ್ಚು ಜನ ಸೇರಿದ್ದರು. ಕೊನೆಯ ಗಳಿಗೆಯಲ್ಲಿ, ಗ್ರಾಮಪಂಚಾಯಿತಿ ಅಧ್ಯಕ್ಷರು ಸಹ, ಜನ ಸೇರುವ ಸಂದರ್ಭದಲ್ಲಿ, ಪೋಲೀಸಿನವರೂ ಶಾಂತಿರಕ್ಷಣೆಗಾಗಿ ಇರಬೇಕೆಂದು ಯೋಚಿಸಿ, ಅವರಿಗೂ ಹೇಳಿಕಳುಹಿಸಿದ್ದರು.

ಶಿಡ್ಲುಮರಿಯು, ಸ್ನಾನಮಾಡಿ ಹಣೆಗೆ ನಾಮವಿಕ್ಕಿಕೊಂಡು (ನಿತ್ಯಾ ನಾಮ ಹಾಕಿಕೊಳ್ಳುವುದು ಅವನ ಪದ್ಧತಿಯಾಗಿರಲಿಲ್ಲ) ತ[illegible] ಕೋಣೆಗೆ ಬಂದು ಮಡಿವಸ್ತ್ರವನ್ನುಟ್ಟು ಕೊಂಡನು. ಅನಂತರ ಸಿದ್ಧವಾಗಿ ತಂದಿದ್ದ ಆಡು, ಕುರಿ, ಕೋಳಿ, ನವಿಲು, ಜಿಂಕೆ, ಪಾರಿವಾಳ ಮುಂತಾದವುಗಳ ಸೊಗಸಾದ ಮಾಂಸಗಳನ್ನೆಲ್ಲ, ತಾನು ಅದಕ್ಕಾಗಿಯೇ ತಂದುಇಟ್ಟಿದ್ದ ಹೊಸ ಕುಕ್ಕೆಯಲ್ಲಿ ಅಚ್ಚುಕಟ್ಟಾಗಿ ಓರಣವಾಗಿ ಜೋಡಿಸಿದನು. ಅದರ ಮೇಲೆ, ತಂದಿದ್ದ ಹೊಸವಸ್ತ್ರವನ್ನು ಮುಚ್ಚಿದನು. ಕುಕ್ಕಿ ಬಹಳ ಲಕ್ಷಣವಾಗಿ ತೋರುತ್ತಿದ್ದಿತು. ಕೊಠಡಿಯ ಮತ್ತೊಂದು ಮೂಲೆಯಲ್ಲಿ,ಮೊದಲ ರಾತ್ರಿ, ಲಕ್ಷ್ಮಿಗಾಗಿ ಅವನು ತಂದುಕೊಟ್ಟಿದ್ದ, ಹೊಸ ವಸ್ತ್ರ ಹೊದೆಸಿದ್ದ ಹಣ್ಣುಗಳ ಕುಕ್ಕೆಇದ್ದಿತು. ಈ ಎರಡೂ ಕುಕ್ಕೆಗಳೂ ಯಾವ ಮನೆಗೂ ಭೂಷಣ, ಯಾವ ದೇವರಿಗೂ ಭೂಷಣ ಎಂದು ಅವನಿಗೆ ತೋರಿತು. ಎರಡು ಕುಕ್ಕೆಗಳು, ಒಂದರಲ್ಲಿ ಸೊಗಸಾದ ಮಾಂಸ, ಮತ್ತೊಂದರಲ್ಲಿ ಸೊಗಸಾದ ಹಣ್ಣುಗಳು; ಒಂದು ಹೆಂಡತಿ ಅರ್ಪಿಸುವ ನೇವೇದ್ಯ, ಒಂದು ತಾನು ಅರ್ಪಿಸುವ ನೇವೇದ್ಯ, ಒಂದೇ ದೇವರು ಎರಡು ಬಗೆ; ತನ್ನ ಚಾಕಚಕ್ಯವನ್ನು ಕಂಡು ಶಿಡ್ಲುಮರಿಗೆ ತನ್ನಲ್ಲಿಯೇ ಮೆಚ್ಚಿಕೆಯುಂಟಾಯಿತು. ಅವನು ಎರಡು ಕುಕ್ಕೆಗಳನ್ನೂ ಒಂದರ ಮಗ್ಗುಲಲ್ಲಿ ಒಂದನ್ನು ಇಟ್ಟು ತೃಪ್ತಿಯಿಂದ ಅವುಗಳನ್ನು ಒಂದು ಗಳಿಗೆ ನೋಡಿ ಅನಂತರ ಲಕ್ಷ್ಮಿಯನ್ನು ಕರೆದು 'ಆಂಜನೇಯ, ಹುಟ್ಟಿದಂದಿನಿಂದ ಇಂತಹ ನೇವೇದ್ಯವನ್ನು ಕಂಡಿಲ್ಲ. ನನ್ನ ನೇವೇದ್ಯವನ್ನು ಅವನು ಮಾತ್ರ ಸ್ವೀಕರಿಸಿದರೆ, ಒಂದು ಬಡ ಸಮುದ್ರವನ್ನು ಹಾರಿದ್ದಿರಲಿ, ಏಳೂ ಸಮುದ್ರಗಳನ್ನೂ ಹಾರಬಲ್ಲ" ಎಂದು ಹೇಳಿದನು. ಲಕ್ಷ್ಮಿ ಮಾತನಾಡದೆ ಒಳಕ್ಕೆ ಹೋದಳು. ಅನಂತರ ಶಿಡ್ಲುಮರಿಯು ಎರಡು ಕುಕ್ಕೆಗಳಿಗೂ ಮತ್ತೆ ವಸ್ತ್ರಗಳನ್ನು ಮುಚ್ಚಿ, ಲಕ್ಷ್ಮಿಯ ಕುಕ್ಕೆಯನ್ನು ಮೊದಲಿದ್ದ ಸ್ಥಳದಲ್ಲಿಯೇ ಇಟ್ಟು ಮತ್ತೊಂದು ಕುಕ್ಕೆಯನ್ನು ತಾನು ತೆಗೆದುಕೊಂಡು ಹೋಗಲು ಸಿದ್ಧನಾದನು.

ಆ ವೇಳೆಗೆ ಸರಿಯಾಗಿ ಮಾದಪ್ಪ ಗಟ್ಟಿಯಾಗಿ ಕೂಗುತ್ತ ಒಳಕ್ಕೆ ಬಂದನು. "ಶಿಡ್ಲುಮರಿ, ಕುಕ್ಕೆ ಒಂದು ಗಳಿಗೆಯೂ ನಿನ್ನ ಕಣ್ಣಿನಿಂದ ಮರೆಯಾಗದಿರಲಿ. ನಡಿ, ಹೋಗೋಣ ಎಲ್ಲಿಯೂ ಇಲ್ಲದ ಗುಂಪು, ದೇವಸ್ಥಾನದ ಮುಂದೆ ಸೇರಿಬಿಟ್ಟಿದೆ. ನಾವು ಕಾಲಮೀರಿ ಹೋಗಬಾರದು" ಎಂದನು. ಶಿಡ್ಲುಮರಿಯು "ನೇವೇದ್ಯಗಳನ್ನೆಲ್ಲ ಈಗ ತಾನೇ ತಂದೆ. ನನ್ನ ಕಣ್ಣು ಬಿಟ್ಟು, ಒಂದು ಕ್ಷಣವೂ ಮರೆಯಾಗಿಲ್ಲ. ನಡಿ ಹೋಗೋಣ" ಎಂದು ಹೇಳಿ ಕುಕ್ಕೆಯನ್ನು ತೆಗೆದುಕೊಂಡು ಹೊರಟನು. ಬಾಗಿಲಿನಲ್ಲಿ ನಿಂತಿದ್ದ ಲಕ್ಷ್ಮಿ, "ನೀವು ಹೋಗಿ ನಾನು ನಿಧಾನವಾಗಿ ಬರುತ್ತೇನೆ" ಎಂದು ತಲೆಯಲ್ಲಾಡಿಸಿದಳು.

ದೇವಸ್ಥಾನದ ಮುಂದೆ, ಕುಕ್ಕೆ ಸಹಿತವಾಗಿ ಶಿಡ್ಲುಮರಿಯೂ ಬಂದು ನಿಂತನು. ಹನುಮಂತರಾಯನ ಗುಡಿ, ಚಿಕ್ಕದಾಗಿದ್ದುದರಿಂದ ಭಕ್ತರೆಲ್ಲ ಗುಡಿಯ ಮುಂದಲಬಯಲಿನಲ್ಲಿಯೇ ನಿಂತಿದ್ದರು. ನಿವೇದನಗಳನ್ನು ತಂದಿದ್ದವರು,ಮುಂದಲ ಸಾಲಿನಲ್ಲಿ ತಾವು ತಂದಿದ್ದ ನಿವೇದನವನ್ನು ನೆಲದ ಮೇಲೆ ಇಟ್ಟುಕೊಂಡು ನಿಂತಿದ್ದರು. ದೇವರಿಗೆ ಎಣ್ಣೆಮಜ್ಜನವಾಗಿ, ಅಲಂಕಾರವೆಲ್ಲ ಪೂರ್ತಿಯಾದ ಮೇಲೆ, ದೇವರ ಮುಂದೆ ಹಾಕಿದ್ದ ಪರದೆಯನ್ನು ಪೂಜಾರಿ ಹಿಂದಕ್ಕೆ ಸರಿಸಿ ಎಲ್ಲರಿಗೂ ದೇವರ ದರುಶನವನ್ನು ಮಾಡಿಸಿದನು. ಜನರು ಎತ್ತಿದ ಧ್ವನಿಯಲ್ಲಿ ಆಂಜನೇಯನ ಪಾದಕ್ಕೆ ಗೋವಿಂದೋ ಗೋವಿಂದ ಎಂದು ಜೈಕಾರ ಮಾಡಿದರು. ಕೊಂಬು, ಕಹಳೆ, ತುತ್ತೂರಿ, ಭಾಂಕೆ, ಶಂಖ, ಜಾಗಟೆ ಇವುಗಳ ಶಬ್ದ ಗಗನಕ್ಕೆ ಮುಟ್ಟಿತು. ಒಳಗೆ ಸ್ಥಳವಿಲ್ಲದುದರಿಂದ, ಹೊರಗಡೆಯೇ ನೇವೇದ್ಯಗಳಿಗೆಲ್ಲಾ ಪ್ರೋಕ್ಷಣೆ ಮಾಡಲು, ಪೂಜಾರಿ, ತೀರ್ಥದ ಬಟ್ಟಲು, ಉದ್ಧರಣೆ ಸಮೇತ ಪ್ರಾಕಾರಕ್ಕೆ ಬಂದನು. ಭಕ್ತರೆಲ್ಲ ತಾವು ತಂದಿದ್ದ ನಿವೇದನಕಟ್ಟಿಗಳಿಗೆ, ಒಂದೊಂದು ವಸ್ತ್ರವನ್ನು ಮುಚ್ಚಿದ್ದರು. ಪೂಜಾರಿ, ಯಾರ ಮುಖವನ್ನೂ ನೋಡದೆ ಗಂಭೀರವಾಗಿ ತಟ್ಟೆಗಳಿಗೆ ತೀರ್ಥವನ್ನು ಪ್ರೋಕ್ಷಿಸುತ್ತಾ ಮುಂದುವರಿಯುತ್ತಿದ್ದನು. ಬಹುಭಾಗದ ತಟ್ಟೆಗಳಲ್ಲಿ

ತೆಂಗಿನಕಾಯಿ ಬಾಳೆಯ ಹಣ್ಣುಗಳು ಇದ್ದವು. ಪರಸ್ಥಳದವರು ಕೊಬ್ಬರಿ, ಕಲ್ಲುಸಕ್ಕರೆ ದ್ರಾಕ್ಷಿ ಮುಂತಾದ ಸ್ವಲ್ಪಕಾಲ ನಿಲ್ಲುವ ಪದಾರ್ಥಗಳನ್ನು ತಂದಿದ್ದರು. ಜನರ ಸಾಲಿನಲ್ಲಿಯೇ ಎಲ್ಲರ ಮಧ್ಯದಲ್ಲಿಯೂ ಶಿಡ್ಲುಮರಿಯೂ ಮಾದನೂ ನಿಂತಿದ್ದರು. ಎಲ್ಲ ಜನರ ಲಕ್ಷ್ಯವೂ ಅವರ ಕಡೆಗೆ ಇದ್ದರೂ ಪೂಜಾರಿಯ ದೃಷ್ಟಿಗೆ ಆ ಗಳಿಗೆಯಲ್ಲಿ ಅದು ಅರಿವಿದ್ದಂತೆ ತೋರಲಿಲ್ಲ. ಪೂಜಾರಿ ಶಿಡ್ಲುಮರಿಯಮುಂದೆ ನಿಂತನು. ಶಿಡ್ಲುಮರಿಯು ತನ್ನ ಕುಕ್ಕೆಗೆ ಮುಚ್ಚಿದ್ದ ವಸ್ತ್ರವನ್ನು ತೆಗೆದನು.

**ಹಾ ! ಹಾ!! ಇದೇನು ! ಶಿಡ್ಲುಮರಿಯು ಹಾಸಿಗೆಯಲ್ಲಿ ಹಾವು ಕಂಡವನಂತೆ ಬೆಚ್ಚಿ ಬಿದ್ದನು. ಮಾದನೂ ಬೆಚ್ಚಿ ಬಿದ್ದನು. ಪೂಜಾರಿಯು ಉದ್ಧರಣೆಯಿಂದ ನೀರನ್ನು ಪ್ರೋಕ್ಷಿಸುತ್ತಿರುವಾಗ ಆ ಅಸಂಖ್ಯ ಜನಸ್ತೋಮವು ಗೋವಿಂದ ಗೋವಿಂದ ಗೋವಿಂದ ಗೋವಿಂದ ಎಂದು ಬೊಬ್ಬೆ ಹಾಕಿತು. ಆಗ ಇದೇನೆಂದು ಪೂಜಾರಿ, ತಲೆಯೆತ್ತಿ ನೋಡಿದಾಗ, ಶಿಡ್ಲುಮರಿಯು, ಎದುರಿಗೆ ನಿಂತಿದ್ದನು. ತಟ್ಟೆಯಲ್ಲಿ ಸೊಗಸಾದ ಮಾವಿನಹಣ್ಣುಗಳು ಕೆಂಪುಸೇಬು, ಸುಲಿದ ಕಾಬೂಲು ದಾಳಿಂಬೆ, ರಕ್ತವರ್ಣದ ಗುಲಾಬಿ ಹೂವು !**

ಪೂಜಾರಿ, ಸ್ಥಳದಲ್ಲಿ ಮೂರ್ಛೆ ಬಿದ್ದನು, ಶಿಡ್ಲುಮರಿ, ಆ ಗಳಿಗೆಯಲ್ಲಿ ಜಾಗ ಬಿಟ್ಟವನು, ಮನೆಯನ್ನು ಸೇರದೆ ಕಾಶೀಯಾತ್ರೆಗೆ ಹೋಗಿಬಿಟ್ಟನು.

ಲಕ್ಷ್ಮಿ, ದೇವಾಯಲಕ್ಕೆ ಹೋಗಲು ಮನಸ್ಸು ಬಾರದೆ, ಮನೆಯಲ್ಲಿಯೆ ಕುಳಿತಿದ್ದಳು. ದೇವಸ್ಥಾನದಲ್ಲಿ ನಡೆದ ಪವಾಡ, ಅವಳ ಕಿವಿಗೆ ಮುಟ್ಟುವ ವೇಳೆಗೆ ಸಾಯಂಕಾಲವಾಗಿದ್ದಿತು. ಮಾದಪ್ಪ ಬಂದು "ಶಿಡ್ಲುಮರಿ, ಮಧ್ಯಾನ್ಹವೇ ಕಣ್ಮರೆಯಾದ. ವಿಗ್ರಹಾಚಾರಿಗೆ ಈಗ ತಾನೇ ಮೂರ್ಛೆ ತಿಳಿಯುತ್ತಿದೆ" ಎಂದನು.

ಒಳಗಿದ್ದ ಹಣ್ಣಿನ ಕುಕ್ಕೆಯನ್ನು ತೆಗೆದುಕೊಂಡು ಆಂಜನೇಯನ ದೇವಸ್ಥಾನಕ್ಕೆ ಹೋಗಿ ಬರೋಣವೆಂದು ಲಕ್ಷ್ಮಿ ಒಳಕ್ಕೆ ಹೋದಳು. ಕುಕ್ಕೆಗೆ ಮುಚ್ಚಿದ್ದ ವಸ್ತ್ರವನ್ನು ಸರಿಯಾಗಿ ಮುಚ್ಚೋಣವೆಂದು ಅವಳು ಅದನ್ನು ತೆರೆದಾಗ ಅವಳೂ ಶಿಡ್ಲುಮರಿಯಂತೆಯೇ ದಿಗ್ಭ್ರಾಂತಳಾದಳು. ಅದು ಹಣ್ಣಿನ ಕುಕ್ಕೆಗೆ ಬದಲಾಗಿ ಶಿಡ್ಲಮರಿ, ಆಂಜನೆಯನ ದೇವಾಲಯಕ್ಕೆ ತಾನು ತೆಗೆದುಕೊಂಡು ಹೋಗಬೇಕೆಂದು ಸಿದ್ಧಮಾಡಿಟ್ಟುಕೊಂಡಿದ್ದ ಕುಕ್ಕೆಯಾಗಿದ್ದಿತು. ಒಂದು ಗಳಿಗೆ ಆಕೆಗೆ ಏನೂ ಹೊಳೆಯಲಿಲ್ಲ. ಮೊದಲು ಆಶ್ಚರ್ಯ, ಅನಂತರ ಸಂತೋಷ, ಸ್ವಲ್ಪ ಚಿಂತೆ ಮತ್ತೆ ಸಮಾಧಾನ ಈ ಭಾವನೆಗಳೆಲ್ಲ ಅವಳ ಮುಖದ ಮೇಲೆ ಹಾದು ಹೋದುವು. 'ಆಂಜನೇಯ, ಕಾಸೀಯಾತ್ರೆಯಿಂದ ಅವರು ಸುಖವಾಗಿ ಹಿಂದಿರುಗಲಿ" ಎಂದು ಕುಳಿತಲ್ಲಿಂದಲೇ ಆಂಜನೇಯನಿಗೆ ಕೈಮುಗಿದಳು.

ಅವಳ ಮುಖದಲ್ಲಿ ಒಂದು ಬಗೆಯ ಚೇಷ್ಟೆಯ ನಗೆಯೂ ಮೂಡಿತು.



ಹಾ ! ಹಾ ! ಇದೇನು. ಶಿಡ್ಲುಮರಿಯು ಹಾಸಿಗೆಯಲ್ಲಿ ಹಾವು ಕಂಡವನಂತೆ ಬೆಚ್ಚಿ ಬಿದ್ದನು.

## ವ್ಯಂಗ್ಯ ಲೇಖ



ಹಿಂದಿನ ಕಾಲಕ್ಕೆ ವೇದಾಂತಕ್ಕಿದ್ದ ಮಹತ್ವದ ಸ್ಥಾನ ಇಂದು ರಾಜಕೀಯಕ್ಕೆ ಪ್ರಾಪ್ತವಾಗಿದೆ. ಇವೆರಡರ ಗುರಿ ಸಾಮಾನ್ಯವಾಗಿ ಒಂದೇ ಆಗಿದ್ದರೂ ವೇದಾಂತವು ಚೇತನಾಚೇತನ ಜಗತ್ತಿನ ಬಗ್ಗೆ ಮೂಲತತ್ತ್ವವನ್ನು ಹುಡುಕಲು ಯತ್ನಿಸಿದರೆ ರಾಜಕೀಯವು ಚೇತನಾಚೇತನ ಜಗತ್ತಿನ ಬಗ್ಗೆ ಆ ಕೆಲಸವನ್ನು ಮಾಡುತ್ತಿದೆ. ಅಂತೆಯೇ ಇಂದಿನದು ರಾಜಕೀಯ ವೇದಾಂತ ಎಂದು ಲೇಖಕರು ಅಭಿಪ್ರಾಯ ಪಟ್ಟಿರುವರು.


ಲೇಖಕರು :

ಶ್ರೀರಂಗ


# ರಾಜಕೀಯ ವೇದಾಂತ

ಹಿಂದೀ ಮಹಾಸಾಗರವು ಉತ್ತರ ದಿಕ್ಕಿಗೆ ಸಾಗಬೇಕೆಂದರೆ ?

ಬಂಗಾಲ ಉಪಸಾಗರ ಮತ್ತು ಅರಬ್ಬೀ ಸಮುದ್ರ ಒಂದನ್ನೊಂದು ತೆರೆ ಕುಲುಕಲು ಬಯಸಿದರೆ ?

ಹಿಮಾಲಯ ಮಹಾಶಯನಿಗೆ ದಕ್ಷಿಣಕ್ಕೆ ವಾಕಿಂಗಿಗಾಗಿ ಹೋಗೋಣ ಎನ್ನಿಸಿದರೆ ?

ವಾಚಕರೆ, ಉತ್ತಿಷ್ಠತ, ಜಾಗ್ರತ, ಚನ್ನಾಗಿ ನಿಬೋಧತ! ಹೆದರುವ ಅಗತ್ಯವಿಲ್ಲ ಎಂದು ಸಾರಿ ಹೇಳುತ್ತಿದ್ದೇನೆ.

ಸಾಗರ-ಬೆಟ್ಟಗಳ ಈ ಸಂಚಾರ ಕಾರ್ಯಕ್ರಮವನ್ನು ನಮ್ಮ, ನಿಮ್ಮ, ಎಲ್ಲರ ಹಿತಕ್ಕಾಗಿಯೇ ಹೇಳುತ್ತಿದ್ದೇನೆ. ಈ ರೀತಿ ಕೆಳಗಿನಿಂದ, ಮೇಲಿನಿಂದ, ಬದಿಗಳಿಂದ ಒತ್ತಡ ಬಂದಲ್ಲಿ ಇದುವರೆಗೆ ಮಧ್ಯದಲ್ಲಿ ಪಸರಿಸಿದ ನಾವು ಅನಿವಾರ್ಯವಾಗಿ ಒಬ್ಬರೊಬ್ಬರ ನಿಕಟ ಸಾನ್ನಿಧ್ಯವನ್ನು ನೂಕು, ನುಗ್ಗಲಾಟದಿಂದ ಅಪೇಕ್ಷಿಸುತ್ತೇವೆ.

ಸಾಗರ-ಬೆಟ್ಟಗಳ ಈ ಸಂಚಾರದಿಂದ, ಜನ ಒಂದು, ದೇಶ ಒಂದು ಎಂಬ ಅನುಭವ ಬೇಗ ಬರಬಹುದೇನೋ ಎಂಬ ಆಶೆಯಿಂದ ಇದನ್ನೆಲ್ಲ ಕಲ್ಪಿಸುತ್ತಿದ್ದೇನೆ.

ಹಾಗೆ ನೋಡಿದರೆ ದೇಶ ಒಂದು ಎಂದು ನನ್ನಂತಹ ಅಲ್ಪಮತಿಯುವನ ಅನುಭವವಾಗಿದೆ. ಕಾಶಿಯಾಯಿತು, ರಾಮೇಶ್ವರ ಆಯಿತು, ಎಲ್ಲಿ ಹೋದರೂ ದಕ್ಷಿಣೆಯಿಂದಲ ದೇವರ ದರ್ಶನವನ್ನು ಪಡೆಯುತ್ತಿರುವ ನನಗೆ ಯಾವ ಅನುಭವದಿಂದಲೂ ದೇಶ ಒಂದಲ್ಲ ಎಂಬ ಸಂಶಯ ಕೂಡ ಬಂದಿಲ್ಲ. ಇಷ್ಟೇಕೆ ? ಮೂರನೆಯ ತರಗತಿಯಲ್ಲಿ ಪ್ರವಾಸ ಮಾಡುವ ನನಗೆ ಮಿಕ್ಕ ಎಲ್ಲರೊಡನಿದ್ದ ನಿಕಟ ಬಾಂಧವ್ಯವನ್ನು ನೆನೆದರೆ ದೇಶದಲ್ಲಿ ಅನೈಕ್ಯವಿದೆ, ಜನರಲ್ಲಿ ಸಾಮರಸ್ಯವಿಲ್ಲ ಎಂಬ ಮಾತುಗಳಲ್ಲಿ ಹುರುಳಿಲ್ಲ ಎಂದು ಧೈರ್ಯವಾಗಿ ಹೇಳಬಹುದು. ದೇಶ ಒಂದು, ರೀತಿ ರಿವಾಜು ಒಂದು; ಆಚಾರ ಒಂದೇ. ಅಂತಹ ಸಾಂಸ್ಕೃತಿಕ ಏಕರಾಗತೆ ಇಡಿಯ ದೇಶದ ಜನರಲ್ಲಿಲ್ಲದಿದ್ದರೆ ದಕ್ಷಿಣದಲ್ಲಿಯಂತೆ ಉತ್ತರದ ರೈಲಿನಲ್ಲಿಯೂ ಡಬ್ಬಿಯಲ್ಲಿಯೆ ಉಗುಳುವದು, ತಿಂದು ಎಂಜಲನ್ನು ಹರಡುವದು ಬೇರೆ ಬೇರೆ ಭಾಷೆಗಳ, ಬೇರೆ ಬೇರೆ ಪ್ರಾಂತಗಳ ಜನರಿಗೆ ಗೊತ್ತಿರುವುದು ಶಕ್ಯವಿದ್ದಿತೆ? ನಮ್ಮ ದೇಶ, ಒಂದು; ಅಖಂಡ ಒಂದು. ಇಲ್ಲವಾದರೆ ನಾಲ್ಕಾಣೆಯ ನಾಣ್ಯಕ್ಕೆ ಕೊಡುವಾಗ ಇಪ್ಪತ್ನಾಲ್ಕು, ಕೊಳ್ಳುವಾಗ ಇಪ್ಪತ್ತೈದು ನಯೇಪೈಸೇ ಎಂಬ ವ್ಯವಹಾರ ದೇಶದ ತುಂಬ ಪ್ರಚಲಿತವಿರಬಹುದಾಗಿತ್ತೆ?

ಜಾತಿಭೇದಕ್ಕಾಗಿ ದೇಶ ತುಂಡುತುಂಡಾಗಿದೆ ಎಂದು ಕೆಲವರು ಹೇಳುವರಲ್ಲವೆ? ಪಾಪ! ಅವರಿಗೆ ದೇವನ ಅಗಾಧ ಪಾಂಡಿತ್ಯದ, ಭಾರತೀಯ ಸಂಸ್ಕೃತಿಯ ಸುದೂರದೃಷ್ಟಿಯ ಕಲ್ಪನೆಯೆ ಇಲ್ಲ! ಇಂದು ನಾವು ಪಂಚವಾರ್ಷಿಕ ಯೋಜನೆಗಳನ್ನು ಕೈಕೊಳ್ಳುತ್ತಿದ್ದೇವೆ. ಯಾಕೆ? ಒಳ್ಳೆಯ ಕೆಲಸ, ಪ್ರಗತಿಯ ಕೆಲಸ ಕ್ರಮಬದ್ಧವಾಗಿ, ಹಂತಹಂತವಾಗಿ, ಸಂತತವಾಗಿ ನಡೆದು ಯಶಸ್ವಿಯಾಗಲಿ ಎಂಬುದಕ್ಕಾಗಿಯೆ ಅಲ್ಲವೆ? ಈ ಪ್ರಗತಿಪರ ವಿಚಾರವು ನಮ್ಮ ದೇವನಿಗೆ ಪ್ರಾರಂಭದಲ್ಲಿಯೆ ಇದ್ದಿತು. ಅಂದಿನಿಂದಲೂ ಅವನು ಯೋಜನೆಗಳನ್ನು ಕೈಕೊಂಡಿದ್ದಾನೆ. ಆ ಯೋಜನೆಯ ತಂತ್ರ ಹೇಗೆ ಸರ್ವಾಂಗಪರಿಪೂರ್ಣವಾಗಿದೆ! ಈಗಲಾದರೊ, ಒಂದು ಯೋಜನೆಯಲ್ಲಿ ಗಳಿಸುವುದು. ಒಂದು ಯೋಜನೆಯಲ್ಲಿ ತಿನ್ನುವುದು, ಮೂರನೆಯ ಯೋಜನೆಯಲ್ಲಿ ಬೆಳೆಯುವುದು ; ಮೂರೂ ಕೆಲಸಗಳನ್ನು ಕೂಡಿ ಮಾತ್ರ ಮಾಡುವಂತಿಲ್ಲ ! ಆದರೆ ದೇವನ ಯೋಜನೆ ಹಾಗಲ್ಲ. ಪ್ರತಿಯೊಂದು ಹಂತದಲ್ಲಿಯೂ ಮನುಷ್ಯನ ಸರ್ವಾಂಗ ಉನ್ನತಿಯಾಗಬೇಕು, ಇಂತಹ ಯೋಜನೆ ! ಅದಕ್ಕಾಗಿ ಮನುಷ್ಯರನ್ನು ನಾಲ್ಕು ಜಾತಿಗಳನ್ನಾಗಿ ಮಾಡಿದ. ಮೊದಲ ಯೋಜನೆಯಲ್ಲಿ ಶಿಕ್ಷಣ, ಪೋಷಣ, ಹಕ್ಕು-ಬಾಧ್ಯತೆ, ಅಧಿಕಾರ, ಐಶ್ವರ್ಯ ಮುಂತಾಗಿ ಜೀವನದ ಎಲ್ಲ ಅಂಗಗಳಲ್ಲಿ ಒಂದು ಜಾತಿಯವರ ತರಬೇತು ಮಾಡುವುದು. ಅದಾಯಿತೊ, ಇನ್ನು ಎರಡನೆಯ ಹಂತ. ಇನ್ನೊಂದು ಜಾತಿಯವರನ್ನು; ಮೂರನೆಯ ಹಂತ, ಮೂರನೆಯ ಜಾತಿಯವರನ್ನು ಹೀಗೆ ಕ್ರಮೇಣ ಕಲಿಯುಗ ಮುಗಿಯುವುದರಲ್ಲಿ ಎಲ್ಲ ಜಾತಿಯವರು, ಎಂದರೆ ಭಾರತದಲ್ಲಿ ಸಾಯಲು ಹುಟ್ಟಿದವರೆಲ್ಲರೂ ಸರ್ವಾಂಗೀಣ ಪ್ರಗತಿಯನ್ನು ಹೊಂದುವುದು ! ಎಂತಹ ಸುಭದ್ರವಾದ ತಳಹದಿಯ ಮೇಲೆ ನಿಂತಿದೆ ಈ ಯೋಜನೆ! ಹೀಗಿರುವಾಗ ಜಾತಿಭೇದದಿಂದ ದೇಶ ತುಂಡುತುಂಡಾಗುತ್ತಲಿದೆ ಎನ್ನಬಹುದೆ ? ಜಾತಿ ಭೇದದಿಂದ ಸಮಾಜ ನೀತಿ ಕೆಡುತ್ತಲಿದೆ ಎನ್ನಬಹುದೆ? ಕಲ್ಪನೆ ಇಲ್ಲದವರು ಹಾಗೆನ್ನಲಿ, ನಾವೂ ನೀವೂ ಇಂದಿನದಕ್ಕಾಗಿ ಹಿಂದಿನ ಸಂಪ್ರದಾಯವನ್ನು ಹೆಮ್ಮೆಯಿಂದ ನೆನೆಯೋಣ.

ಜಾತಿಭೇದಕ್ಕಾಗಿ ಜನರಲ್ಲಿ ಅನೈಕ್ಯ ಬೆಳೆಯುತ್ತಲಿದೆ ಎನ್ನುವ ಮೂರ್ಖರೂ (ವಿಶೇಷಣ ಕಟುವಾಯಿತು, ಅನಿವಾರ್ಯ, ಕ್ಷಮೆ ಇರಲಿ) ಇದ್ದಾರೆ! ಒಮ್ಮೊಮ್ಮೆ ಇಂತಹರಿಗೆ 'ಮೂರು' ಸಾಲದು, ನಾಲ್ಕು ಇಲ್ಲವೆ ಅಯ್ದು 'ಖ' ಎನ್ನಬೇಕು ಎನ್ನಿಸುವುದು. ಯಾಕೆನ್ನಿಸಬಾರದು ? ಯಾವುದರಿಂದ ಐಕ್ಯದ ಪಾಠವನ್ನು ಎಂದಿಗೂ ಮರೆಯದಂತೆ ಕಲಿಯಬಹುದೊ ಅದರಿಂದ ಅನೈಕ್ಯ ಹುಟ್ಟುವುದು ಎಂದರೆ ? ಸ್ವಂತಕ್ಕೆ ವಿಚಾರಶಕ್ತಿ ಇಲ್ಲದ ಜನರ ಹಣೆಬರೆಹವೆ ಅದು ! ನಮಗೂ ನಿಮಗೂ ಆ ತೊಂದರೆ ಇಲ್ಲದ್ದರಿಂದ ನಾವು ಸ್ವಂತ ವಿಚಾರವನ್ನು ಮಾಡೋಣ, ಇತ್ತ ಮರೆಗೆ ಬನ್ನಿರಿ.

ಮೊದಲು ನಾಲ್ಕು ಜಾತಿಗಳಿದ್ದುವು. ಈಗ ನಾಲ್ಕು ಸಾವಿರ ಆಗಿವೆ, ಹಾಗೆ— ಹೀಗೆ ಈ ತೊಡಕನ್ನು ಬಿಟ್ಟುಬಿಡೋಣ. ಗಣಿತಕ್ಕೆ ಸುಲಭವಾಗುವಂತಹ ದೃಷ್ಟಾಂತವೊಂದನ್ನು ಆಯ್ದುಕೊಳ್ಳೋಣ.

ದೇಶದಲ್ಲಿ ಒಟ್ಟು ಹತ್ತು ಜಾತಿಗಳಿವೆ ಎಂದು ತಿಳಿಯೋಣ. ಪ್ರಾರಂಭದಲ್ಲಿ ಪ್ರತಿಯೊಂದು ಜಾತಿಯವರು ತಮ್ಮದೊಂದು ಪ್ರತ್ಯೇಕ ಗುಂಪು ಎಂದು

ತಿಳಿಯುವರೆಂದೂ ಇಟ್ಟುಕೊಳ್ಳೋಣ (ಇಲ್ಲವಾದರೆ ಅನೈಕ್ಯವೆ ಇಲ್ಲದೆ ಐ ಕ್ಯ ಸಾ ಧ ನೆ ಬರುವುದು ಎಲ್ಲಿಂದ?). ಆಗ ಮೊದಲನೆಯ ಹೆಜ್ಜೆ. ಒಂದು ಜಾತಿಯನ್ನು ಮಿಕ್ಕ ಒಂಭತ್ತು ಜಾತಿಗಳು ಮೆಚ್ಚುವುದಿಲ್ಲ ಎಂಬ ಮೂಲತತ್ವವನ್ನು ಅರಿತ ಯುಗ-ಪುರುಷನೊಬ್ಬ ಹುಟ್ಟಿಬಂದು ಮಿಕ್ಕ ಜಾತಿಗಳನ್ನು ಒಂದುಗೂಡಿಸುವನು. ಆಗ ಗಣಿತದಲ್ಲಿ ಹೇಳುವುದಾದರೆ ಜಾತಿ ೧ಕ್ಕೆ ಇದಿರಾಗಿ ಜಾತಿ ೨ ರಿಂದ ೧೦. ಈ ೨ ರಿಂದ ೧೦ರವರಲ್ಲಿ ಪರಸ್ಪರ ಐಕ್ಯದ ಮೊಳಕೆ ಮೂಡುವುದು. ಆ ಮೇಲೆ ದ್ವಿತೀಯ ಜಾತೀಯ ಯೋಜನೆ. ಅದರಲ್ಲಿ ಜಾತಿ ೨ ನ್ನು ಮಿಕ್ಕ ಜಾತಿಗಳು ಮೆಚ್ಚುವುದಿಲ್ಲ ಎಂಬ ತತ್ತ್ವವನ್ನನುಸರಿಸಿ ನಮ್ಮ ಲೆಕ್ಕ ಜಾತಿ ೨ ಕ್ಕೆ ವಿರುದ್ಧ ಜಾತಿ ೧ ಮತ್ತು ೩ ರಿಂದ ೧೦ ಎಂದಾಗುವುದು. ಆ ಮೇಲೆ ತೃತೀಯ ಯೋಜನೆ ; ಜಾತಿ ೩ ಕ್ಕೆ ವಿರುದ್ಧ ಜಾತಿ ೧, ೨ ಮತ್ತು ೪ ರಿಂದ ೧೦. ಹೀಗೆಯೆ, ಕಲಿಯುಗದ ವಿಸ್ತಾರವೂ ದೊಡ್ಡದಿದ್ದುದರಿಂದ, ನೂರು ಇಲ್ಲವೆ ಸಾವಿರ (ಆ ಲೆಕ್ಕ ನಮ್ಮನ್ನು ಮೀರಿದೆ) ಯೋಜನೆಗಳ ತರುವಾಯ ಲಕ್ಷಾವಧಿ ವರ್ಷಗಳ ವರೆಗೆ ಹತ್ತು ಜಾತಿಗಳಲ್ಲಿ ಪ್ರತಿಯೊಂದು ಜಾತಿಯೊಡನೆಯೂ ಐಕ್ಯದಿಂದಿರುವ ಅನುಭವ ಬಂದು ಕೊನೆಗೆ ಎಲ್ಲರೂ ಸತ್ಯವಾದ, ಸುಂದರವಾದ ಶಿವೈಕ್ಯವನ್ನು-ತ್ರಮಿಸಿ-ಶಾಶ್ವತ ಐಕ್ಯವನ್ನು ಸಾಧಿಸಬಲ್ಲರು. ಸ್ವಂತದ ಸಾಧನೆಯಿಂದ ಗಳಿಸಬಲ್ಲ ಈ ಐಕ್ಯಭಾವನೆ ನಿಮಗೆ ಬೇಕೆ? ಇಲ್ಲವೆ ಕಾನೂನು ಒತ್ತಾಯದಿಂದ ಹೇರುವ ಐಕ್ಯ ಭಾವನೆ ಬೇಕೆ—ಎಂಬುದರ ಉತ್ತರ ಸ್ಪಷ್ಟವಿದೆ.

ಒಮ್ಮೊಮ್ಮೆ ಎನ್ನಿಸುವುದು. ನಮ್ಮ ಜನರ ಅಜ್ಞಾನಕ್ಕೆ ಮಿತಿಯೇ ಇಲ್ಲ ಎಂದು. ಯಾವ ದೇಶದಲ್ಲಿ ರಣಾಂಗಣದ ಸನ್ನಿವೇಶದಲ್ಲಿ ಪರಮಾತ್ಮನು ಪ್ರತ್ಯಕ್ಷವಾಗಿ ತನ್ನ ಬಾಯಿಯಿಂದಲೆ ಕರ್ಮಯೋಗವನ್ನು ಸಾರಿದನೊ ಆ ದೇಶದವರಾದ ನಮಗೇ ಕರ್ಮಯೋಗದ ತತ್ತ್ವ ತಿಳಿದಿಲ್ಲವಲ್ಲ ? ಈ ಜಗತ್ತು ನಡೆದದ್ದೆ ಕರ್ಮಯೋಗದಿಂದ ; ಅದಕ್ಕಾಗಿಯೆ ಕೆಲವರಿಗೆ ಕರ್ಮವನ್ನು ಭೋಗಿಸಬೇಕಾಗುವುದು, ಇನ್ನು ಕೆಲವರು ಯೋಗವನ್ನು ಉಪಭೋಗಿಸುವರು. ಇದಲ್ಲದೆ ಕರ್ಮ ತನಗೆ, ಫಲ ಇನ್ನೊಬ್ಬರಿಗೆ, ಹೀಗೆ ಫಲಾಶೆಯನ್ನು ಬಿಡುವುದೆ ಸರಿಯಾದ ದಾರಿ ಎಂದು ಭಗವದ್ಗೀತೆ ಮತ್ತೆ ಮತ್ತೆ ಸಾರಿ ಹೇಳುವುದಿಲ್ಲವೆ? ಹೀಗಿರು-ವಾಗಲೂ ದೇಶಕ್ಕೆ ಸ್ವಾತಂತ್ರ್ಯ ಬಂದಿತು, ಅದಕ್ಕೆ ನಮಗೆ (ಅಗ್ಗದಲ್ಲಿ) ಅನ್ನ ದೊರೆಯಬೇಕು, ಉಪಜೀವನಕ್ಕೆ ಸಾಲುವಷ್ಟು ಗಳಿಕೆಬೇಕು, ಯೋಗ್ಯತೆಗೆ ತಕ್ಕ ಮರ್ಯಾದೆ ಬೇಕು. ಎಲ್ಲರೊಡನೆ ಸಮಾನ ಅವಕಾಶಬೇಕು—ಎಂದು ಪ್ರತಿಯೊಬ್ಬನೂ ಕೂಗಿದರೆ ? ಮೊದಲಮಾತೆಂದರೆ, ಸ್ವಾತಂತ್ರ್ಯ ಪೇಟೆಯಲ್ಲಿ ಸಿಗುವ ಸರಕಲ್ಲ, ಸಾಹಸದಿಂದ ಗಳಿಸಬೇಕು ; ಅದಕ್ಕಾಗಿ ದುಡಿಯಬೇಕು; ಹಾಗೆ ದುಡಿದವರು ಅದನ್ನು ಗಳಿಸುವರು. ನೀವು ದುಡಿದಿದ್ದಿರಾ ? ಇಲ್ಲವಾದರೆ, ನಿಮಗೂ ಸ್ವಾತಂತ್ರ್ಯ ಎಂಬುದು ನಿಮ್ಮ ತಪ್ಪು ಕಲ್ಪನೆ. ದುಡಿದವರು ಅದನ್ನು ಗಳಿಸಿ ಉಪಭೋಗದಲ್ಲಿ ಕಾರ್ಯಗತ ಮಾಡುವಾಗ ಚಪ್ಪಾಳೆ ತಟ್ಟಿ ಮೊದಲು ಅವರಿಂದ ಪಾಠ ಕಲಿಯಿರಿ. ಆಮೇಲೆ ನೀವೂ ಗಳಿಸಬಹುದು, ಆಮೇಲೆ ಮಾತಾಡಿರಿ, ಮಹಾಶಯರೆ !

ಎರಡನೆಯ ಮಾತೆಂದರೆ, ಸ್ವಾತಂತ್ರ್ಯಕ್ಕೂ ನಿಮ್ಮ ಉಪಜೀವನಕ್ಕೂಯಾವ ಸಂಬಂಧ? ದೇಶಕ್ಕೆ ಸ್ವಾತಂತ್ರ್ಯ ಬರುವ ಮುಂಚೆ ನಿಮ್ಮ ಉಪಜೀವನ ನಡೆದಿರಲಿಲ್ಲವೆ ? ಎಂದಮೇಲೆ, ಈಗೂ ಹಾಗೇ ನಡೆಯಲಿ. ಅಷ್ಟೇಕೆ ? ಈಗ ಅದಕ್ಕಿಂತ ತುಸು ಬೇರೆಯಾಗಿ ನಡೆಯಬೇಕಾಗುವುದು; ಯಾಕೆಂ-ದರೆ, ಆಗ ಉಪಜೀವನ ನಡೆಯದ ಅನೇಕರು ಸ್ವಾತಂ-ತ್ರ್ಯವನ್ನು ಗಳಿಸುವ ಕೆಲಸದಲ್ಲಿ ಯಶಸ್ವಿಯಾದ್ದರಿಂದ ಅವರದೂ ಉಪಜೀವನ ನಡೆಯಬೇಕಲ್ಲವೆ ? ಅದಕ್ಕಾಗಿ ನಿಮ್ಮದು ಕುಂಟುತ್ತ ಹಿಂದೆ ಉಳಿಯುವುದೆ ಕರ್ಮಯೋಗದ ದೃಷ್ಟಿ-ಯಿಂದ ಸರಿಯಾದ ಮಾರ್ಗ. ವ್ಯಾಸ-ಮಹರ್ಷಿಗಳಂತೆ ಕೈಯೆತ್ತಿ ಕೂಗಿ ಕೂಗಿ (‘ಊರ್ಧ್ವ- ಬಾಹು ರ್ವಿರೋಮ್ಯಹಂ’) ಈ ಮಾತನ್ನು ಸಾರಬೇಕಾಗಿದೆ– ಸಾಮಾನ್ಯರ ಅಜ್ಞಾನವನ್ನು ಹೊಡೆದುಹಾಕಲು.

ಇನ್ನೊಂದು ಮಾತು, ಇಲ್ಲಿಂಯೆ ಹೇಳಿ ಬಿಡೋಣ (ಇಲ್ಲವಾದರೆ ಸಾಮಾನ್ಯರ ಅಜ್ಞಾನಕ್ಕಾಗಿ ಇದ್ದ ಸಿಟ್ಟಿನ ಆವೇಶದಲ್ಲಿ ಮುಂದೆ ಮರೆಯಲೂ ಬಹುದು ), ದೇಶದಲ್ಲಿ ಡೆಮಾಕ್ರಸಿ ಇದೆ. ಎಂದರೆ ಪ್ರಜಾಪ್ರಭುತ್ವವಿದೆ, ಅದಕ್ಕಾಗಿ ಎಲ್ಲರೂ ಸರಿ-ಸಮಾನರಾಗಿರಬೇಕು, ಸಿರಿಜನರು— ಬರಿಜನರು ಎಂದು ಹಕ್ಕುಗಳನ್ನು ಕಾದಿರಿಸಬಾರದು ಮುಂತಾಗಿ ಕೆಲವರು ಹೇಳುತ್ತಾರೆ. ಎಂತಹ ತರ್ಕದುಷ್ಟವಾದ ವಿಚಾರವಾದ ಇದು ! ಯಾರು ಏನೇ ಹೇಳಿದರೂ ನನ್ನಂತಹನು, ಪ್ರಾಮಾಣಿಕನೆನ್ನಿಸಬೇಕೆಂದರೆ, ಈ ಮಾತನ್ನು ಎಂದಿಗೂ ಒಪ್ಪಲಿಕ್ಕಿಲ್ಲ, ನೋಡಿರಿ. ನಾನು ಸಾಹಿತಿ, ಪುಸ್ತಕಗಳನ್ನು ಬರೆಯುತ್ತೇನೆ, ಬರೆಯುವದೊಂದೇ ತಡ, ನನ್ನ ಮೊದಲ ಕೆಲಸವೆಂದರೆ ಮೊದಲ ಪುಟದಲ್ಲಿಯೆ “ ಈ ಗ್ರಂಥದ ಎಲ್ಲ ಹಕ್ಕುಗಳನ್ನು ಕಾದಿರಿಸಲಾಗಿದೆ” ಎಂದು ಸಾರಿಬಿಡುತ್ತೇನೆ. ಇನ್ನು ಮಿಕ್ಕವ-ರಿಗೆ ಹಕ್ಕುಗಳನ್ನು ಕಾದಿರಿಸಕೂಡದು ಎಂದು ಯಾವ ನಾಲಗೆ— ಅಲ್ಲ— ಲೇ ಖ ನಿ ಯಿಂ ದ ಹೇಳಲಿ ? ಇದಲ್ಲದೆ ಹಕ್ಕುಗಳಲ್ಲಿ ಎರಡು ತರದ ಹಕ್ಕುಗಳಿವೆ ಎಂಬುದನ್ನೂ ಮರೆಯಲಾಗದು; ಒಂದು, ತನ್ನಹಕ್ಕು;ಎರಡು, ಇನ್ನೊಬ್ಬರ ಹಕ್ಕು; ಒಂದು ಕಾದಿರಿಸುವ ಹಕ್ಕು, ಇನ್ನೊಂದು ಬದಿಗಿರಿಸುವ ಹಕ್ಕು. ಎಲ್ಲರಿಗೂ ಸರಿಸಮಾನ ಹಕ್ಕು ಎನ್ನುವಾಗ ಅವರವರ ಹಕ್ಕಿಗೆ ಅವರವರ ಬಾಧ್ಯ-ಸ್ಥಿಕೆ ಸರಿಸಮಾನ ಎಂದು ಅರ್ಥ; ಎಂದರೆ ಕಾದಿರಿಸುವ ಹಕ್ಕಿಗೆ ನಾನು ಬಾಧ್ಯಸ್ಥ ಎಂದು ಇನ್ನೊ-ಬ್ಬನು ಒಪ್ಪಬೇಕು, ಬದಿಗಿರಿಸುವ ಹಕ್ಕಿಗೆ ಇನ್ನೊಬ್ಬನು ಬಾಧ್ಯಸ್ಥ ಎಂದು ನಾನು ಒಪ್ಪಬೇಕು; ಹೀಗೆ ಪರಸ್ಪರ ಒಪ್ಪುವುದರಲ್ಲಿ ಯಾವ ಭೇದವನ್ನೂ ತೋರಿಸಬಾರದು, ಆಗ ಇಬ್ಬರಿಗೂ ಸರಿಸಮಾನ ಹಕ್ಕು ಎಂದಂತಾಗುವುದು.

ಮೇಲಿನ ಮಾತನ್ನು ಒಮ್ಮೆ ಸರಿಯಾಗಿ ತಿಳಿದುಕೊಂಡವನು ‘ ಯೋಗ್ಯತೆಗೆ ತಕ್ಕ ಮರ್ಯಾದೆ ಇಲ್ಲವೆ ಪ್ರತಿಫಲ ’ ಎಂಬ ತಪ್ಪು ಸಿದ್ಧಾಂತವನ್ನು ಸುಲಭದಲ್ಲಿ ಮತ್ತು ತಾನಾಗಿಯೆ ಬಿಟ್ಟುಕೊಡಬಹುದು; ಯಾಕಂದರೆ, ‘ಯೋಗ್ಯತೆ’ ಎಂಬುದು ಬರೀ ಕಲ್ಪನೆ ಮಾತ್ರ, ಅದಕ್ಕೆ ವ್ಯಾವಹಾರಿಕ ಅರ್ಥವಿಲ್ಲ. ಯೋಗ್ಯತೆ ಎಂದರೇನು ? ಪ್ರಶ್ನೆಪತ್ರಿಕೆಗಳಲ್ಲಿಯ ಪ್ರಶ್ನಗಳು ಕಠಿಣವಾಗಿವೆ ಎಂದು ಮುಷ್ಕರವನ್ನು ಹೂಡುವ ವಿದ್ಯಾರ್ಥಿಗಳು ‘ಅಯೋಗ್ಯ’ರು ಎನ್ನಬಹುದೆ ? ( ಹಾಗೆ ಎಂದವರನ್ನು ದಂಡಿಸುವ ಯೋಗ್ಯತೆಯೂ ತಮ್ಮಲ್ಲಿದೆ ಎಂಬುದನ್ನು ವಿದ್ಯಾರ್ಥಿಗಳು ತೋರಿಸಿಕೊಟ್ಟಿದ್ದಾರೆ ). ಅದರಂತೆಯೆ ನೀವು ನಿಮ್ಮ ಪ್ರತಿಯೊಂದು ಕೆಲಸಕ್ಕೆ ವೇತನ ಇಲ್ಲವೆ ಪ್ರತಿಫಲವನ್ನು ಕೊಳ್ಳುವಾಗ ನಿಮಗಾಗಿ ಕೆಲಸ ಮಾಡುವುದಕ್ಕೆ ಸರಕಾರೀ ಅಧಿಕಾರಿಯು ಪ್ರತಿಫಲವನ್ನು ಬಯಸಿದರೆ ಅದು ಲಂಚ, ಅವನು ಅಯೋಗ್ಯ ಎನ್ನುವಿರಾ ? ಸರಕಾರವು ಅವನಿಗೆ ಸಂಬಳವನ್ನು ಕೊಡುವುದು ಆಡಳಿತದ ಹೊಣೆಯನ್ನು ನಿರ್ವಹಿಸುವುದಕ್ಕೆ, ನಿಮ್ಮ ಕೆಲಸವನ್ನು ಮಾಡಿಕೊಡುವುದಕ್ಕಲ್ಲ. ಒಂದೆಡೆ ಆ ಭಾರವಾದ ಹೊಣೆಯನ್ನು ಹೊತ್ತುಕೊಂಡಿರುವಾಗಲೂ ನಿಮ್ಮ ಕೆಲಸವನ್ನು ಮಾಡಿಕೊಡುವನಲ್ಲ ? ಆ ಅಧಿಕಾರಿಗಳ ಹತ್ತಿರದಲ್ಲಿಯೆ ಇರುವುದಕ್ಕಾಗಿ ಇದನ್ನು ಮಂತ್ರಿಗಳು ಬಲ್ಲರು, ಎಂದೇ ಯಾವಾಗಲೂ ಅವರು ಅಧಿಕಾರಿ

ಗಳ ವರ್ತನೆಯನ್ನು ಸಮರ್ಥಿಸುತ್ತಾರೆ. ಸಾಮಾಜಿಕ ಜೀವನವೆಂದರೇನೇ ಹಾಗೆ. ಯಾರಿಗೆ ವೇಳೆ ಹೇಗೆ ಬರುತ್ತಿದೆ ಯಾರು ಹೇಳಬಲ್ಲರು ?

ಏನೇನೊ ಬರೆಯುತ್ತ ಬಂದೆ, ಎಚ್ಚರಿಕೆಯನ್ನು ಕೊಡುವುದನ್ನೆ ಮರೆತೆ (ಓದುವಾಗ ನಿದ್ದೆ ಹೋದವರಿಗಲ್ಲ, ಓದಿ ತಿಳಿದುಕೊಂಡವರಿಗೆ). ಯಾಕೆಂದರೆ, ಎಚ್ಚರಿಕೆಯನ್ನು ಕೊಟ್ಟೇ ಪ್ರಾರಂಭಿಸಬೇಕೆಂದಾಗ ಅದನ್ನೆ ಮರೆತುಬಿಟ್ಟೆ ! ಆ ಎಚ್ಚರಿಕೆ ಹೀಗೆ: ''ನಾನು ರಾಜಕೀಯ ವೇದಾಂತ'' ಎಂಬ ಹೆಸರನ್ನು ಕೊಟ್ಟೆ. ಅದಕ್ಕೆ ಕಾರಣವಿಷ್ಟೆ, ಹಿಂದಿನಕಾಲದಲ್ಲಿ ವೇದಾಂತಕ್ಕೆ ಯಾವ ಮಹತ್ವದ ಸ್ಥಾನವಿದ್ದಿತೊ ಅದು ಇಂದು ರಾಜಕೀಯಕ್ಕೆ ಇದೆ ಎಂದು ಸೂಚಿಸುವುದು ನನ್ನ ಉದ್ದೇಶವಾಗಿತ್ತು. ಸೃಷ್ಟಿ, ಸ್ಥಿತಿ, ಪ್ರಲಯ ಇವುಗಳನ್ನು ಅರಿತುಕೊಳ್ಳುವುದು ವೇದಾಂತದ ಗುರಿ. ರಾಜಕೀಯಕ್ಕೂ ಅದೇ ಗುರಿಯಾಗಿದೆ. ವ್ಯತ್ಯಾಸವೆಂದರೆ ಇಷ್ಟೆ, ವೇದಾಂತವು ಚೇತನಾಚೇತನ ಜಗತ್ತಿನ ಬಗ್ಗೆ ಮೂಲತತ್ತ್ವವನ್ನು ಹುಡುಕಲೂ ಯತ್ನಿಸುವುದು; ರಾಜಕೀಯವು ಚೇತನಾಚೇತನ ಜಗತ್ತಿನ ಬಗ್ಗೆ ಆ ಕೆಲಸವನ್ನು ಮಾಡುತ್ತಿದೆ. ಯಾಕೆಂದರೆ, ಸೃಷ್ಟಿಗೆ ಚೇತನವೆಂಬುದೆ ಸ್ಥಿತಿ, ಅಚೇತನವೆ ಪ್ರಳಯ. ಮನುಷ್ಯಲೋಕದಲ್ಲಿಯಾದರೊ ಎರಡು ತರದ ಮನುಷ್ಯರಿದ್ದಾರೆ. ಚೇತನಮಾನವರು, ಅಚೇತನ ಮಾನವರು ; ಸುಲಭದಲ್ಲಿ ಹೇಳುವುದಾದರೆ, ಸರಕಾರವು ಮತ್ತು ಪ್ರಜೆಗಳು ಎಂದು. ಅಚೇತನವು ಹೇಗೆ, ಯಾವ ಕಾರಣಕ್ಕೆ ಚೇತನವಾಯಿತು ಎಂಬ ಪ್ರಶ್ನೆಕ್ಕೆ ವೇದಾಂತವು ಉತ್ತರ ಕೊಡಲು ಅಸಮರ್ಥವಾಗಿ ಅದು ''ದೇವನ ಲೀಲೆ'' ಎಂದು ಸಮಾಧಾನ ತಂದುಕೊಂಡಿತು. ರಾಜಕೀಯವಾದರೊ ಅದೇ ರೀತಿ ಅಚೇತನಮಾನವನು ಹೇಗೆ, ಯಾವ ಕಾರಣಕ್ಕೆ ಚೇತನಮಾನವನಾಗಿ ಪರಿವರ್ತಿತನಾಗುವನು ಎಂಬುದನ್ನು, ವೇದಾಂತದಂತೆ ಬುದ್ಧಿಯ ಅಸಮರ್ಥತೆಯಿಂದಲ್ಲ, ವ್ಯವಹಾರದಲ್ಲಿ ಪ್ರತ್ಯಕ್ಷವಾಗಿ ತೋರಿಸಿಕೊಡುತ್ತಿದೆ, ಅದು ''ಸರಕಾರದ ಲೀಲೆ'' ಎಂದು. ಲೋಕವತ್ತು ಲೀಲಾಕೈವಲ್ಯಂ ಎಂಬ ಸೂತ್ರದಲ್ಲಿ ಅಡಕವಾದ ಈ ಗಹನ ''ರಾಜಕೀಯಾಂತ ತತ್ತ್ವ''ವನ್ನರಿಯದ ಅಶಿಕ್ಷಿತ, ಅವೈದಿಕ (''ಅರಾಜಕೀಯ'' ಎನ್ನಿರಿ) ಜನರು ಸುಪ್ರೀಂ ಕೋರ್ಟಿಗೆ ಸವಾರಿ ಮಾಡುವುದನ್ನು ನೋಡಿದರೆ, ಕನಿಕರದಿಂದಾಗಲಿ ನಗೆಯಿಂದಾಗಲಿ ಕಣ್ಣಿಗೆ ನೀರು ಬಾರದಿರದು. ಸರಕಾರವೆ '' ಪರಮಂ ಧಾಮ '' ಎಂಬುದನ್ನರಿಯದವರು ತಾವೇ ಪರಂಧಾಮಕ್ಕೆ ತೆರಳಿದರೂ ಏನಾಗಬೇಕಾಗಿದೆ ?

''ಲೀಲೆ'' ಎಂದಮಾತ್ರಕ್ಕೆ ಅಲ್ಲಿ ನಿರಂಕುಶತ್ವಕ್ಕೆ ಅವಕಾಶವಿದೆ ಎಂದು ಮಾತ್ರ ತಪ್ಪು ತಿಳಿಯಬಾರದು. ''ದೇವನ ಲೀಲೆ'' ಎನ್ನುವಾಗಲೂ ಆ ದೇವನಿಗೆ ನಿರ್ಬಂಧವಿದೆ, ಅವನು ಸಾಂಕುಶ ಎಂದು ವೇದಾಂತ ಸಾರುತ್ತಿದೆ. ಆ ಸಮಾಧಾನ ''ರಾಜಕೀಯಾಂತ''ದಲ್ಲಿಯೂ ಇದೆ. ದೇವನ ಅಂಕುಶ ಯಾವುದು ? ಮನಬಂದಂತೆ ಮಾಡದ ಹಾಗೆ ಅವನನ್ನುತಡೆಯುವ ನಿರ್ಬಂಧ ಯಾವುದು? ಮಾಯೆ ಎಂದರೆ ಅಜ್ಞಾನ, ಎಂದು ಧೈರ್ಯವಾಗಿ ಸಾರುವುದು ವೇದಾಂತ. ಅದೇ ಮಾಯೆ ''ರಾಜಕೀಯಾಂತ''ದಲ್ಲೂ ಇದೆ. ಮಾಯೆ ಇಲ್ಲದೆ ಅಜ್ಞಾನ ಎಂದರೆ ಯಾರದು ? ಇದೆಂತಹ ಪ್ರಶ್ನೆ? ಮನುಷ್ಯನದು. ನಮ್ಮ-ನಿಮ್ಮದು, ಪ್ರಜೆಗಳದು. ದೇವ ಇಲ್ಲವೆ ಸರಕಾರ ನಿರಂಕುಶ ಎಂಬುದನ್ನು ತಿಳಿದುಕೊಳ್ಳಲಾರದ ಅಜ್ಞಾನ ನಮ್ಮಲ್ಲಿದ್ದರೆ, ದೇವನಿಗಾಗಲಿ ಸರಕಾರಕ್ಕಾಗಲಿ ನಿರಕುಂಶತ್ವ ಬರುವುದೆಲ್ಲಿಂದ ? ಸೂರ್ಯನು ಮೂಡುವ, ಮುಳುಗುವ ; ಋತುಗಳು ಒಂದರ ಹಿಂದೊಂದು ಬರುವುವು ; ಒಂದು ನಿಯಮ ಕಂಡುಬರುವುದಲ್ಲವೆ ದೇವನಸೃಷ್ಟಿಯಲ್ಲಿ ? ಸೂರ್ಯನು ತಪ್ಪದೆ ಮೂಡುವಾಗ ನಮಗೆ ತಪ್ಪದೆ ಊಟ ಸಿಕ್ಕದಿದ್ದರೆ, ಇಲ್ಲವೆ ಸೂರ್ಯನು ತಪ್ಪದೆ ಮುಳುಗುವಾಗಲೂ ತಪ್ಪದೆ ನಿದ್ರೆ ಬಾರದಂತೆ ನಮ್ಮ ಪರಿಸ್ಥಿತಿ ಇದ್ದರೆ, ತಪ್ಪು ಪೂರ್ತಿ ನಮ್ಮದು. ಹೊರತು ದೇವನ ನಿಯಮಕ್ಕೆ ಭಂಗ ಬಂದಂತಲ್ಲ. ಹಾಗೆಯೆ ಸರಕಾರೀ ಸೃಷ್ಟಿಯಲ್ಲಿಯು ನಿಯಮಗಳ ಮಾತು.

ನೀವು ಕತೆಯನ್ನು ಕೇಳಿರಬಹುದಲ್ಲ ? ಯಾವನೊ ಒಬ್ಬನ ಕೊಲೆಯಾಯಿತು. ಅವನು ಹೇಗೆ ಸತ್ತ ಎಂಬುದನ್ನು ಕಂಡುಹಿಡಿದು ವರದಿ ಮಾಡಲು ಒಂದು ಸಮಿತಿಯನ್ನು ಗೊತ್ತುಮಾಡಲಾಯಿತು. ಆ ಸಮಿತಿಯು ಸಾಕ್ಷಿದಾರರನ್ನು ಕರೆಯಿಸಿಕೊಂಡಿತು. ಸತ್ತವನ ಪರವಾಗಿ ಒಬ್ಬ, ಮಿಕ್ಕವರ ಪರವಾಗಿ ಅನೇಕ ವಕೀಲರು ಸಮಿತಿಯ ಎದುರು ವಾದಿಸಲು ನಿಯಮಿತರಾದರು, ವಿಚಾರಣೆ ತಿಂಗಳುಗಟ್ಟಲೆ ನಡೆಯಿತು. ಸಮಿತಿಯ ಸದಸ್ಯರಿಗೆ, ವಕೀಲರಿಗೆ, ಸಾಕ್ಷಿದಾರರಿಗೆ ವೇತನ, ವೆಚ್ಚ, ಭತ್ತೆ ಮುಂತಾಗಿ ಸಾಕಷ್ಟು ದೊರೆಯುತ್ತಿದ್ದಿತು. ಆರು ತಿಂಗಳ ಮೇಲೆ ವರದಿಯಾಯಿತು; '' ಮೃತ '' ನು ಕೊಲೆಗೆ ಆಹುತಿಯಾಗಲಿಲ್ಲ, ಹೃದಯಕ್ರಿಯೆ ನಿಂತು ಸತ್ತುಹೋದ, ಹೃದಯಕ್ರಿಯೆ ನಿಂತುದಕ್ಕೆ ಅವನ ಮರಣವೆ ಕಾರಣ ಎಂದು. ಕೊಲೆ ಮಾಡಿದವರು '' ಮೃತ '' ನ ಬಗ್ಗೆ ಇಷ್ಟೊಂದು ವಿಚಾರಣೆಯಾದುದಕ್ಕೆ ಅವನು ದೊಡ್ಡ ಮನುಷ್ಯನಾಗಿದ್ದನೆಂದು ಮಿಕ್ಕವರನ್ನು ಒಪ್ಪಿಸಿ ಅವನ ಸ್ಮಾರಕವನ್ನು ನಿಲ್ಲಿಸುವುದಕ್ಕೆ ನಿಧಿಯನ್ನು ಸಂಗ್ರಹಿಸಿದರಂತೆ.

ಅದಕಾಗಿಯೆ ವೇದಾಂತ ಹೇಳುತ್ತಿದೆ—

" ಏಕಂ ಸತ್ ವಿಪ್ರಾಬಹುಧಾವದಂತಿ "

ಎಂದರೆ, ಒಬ್ಬನು ಸತ್ತು ಬಹುಜನರು ಬದುಕಿದರು, ಎಂಬರ್ಥ. ವೇದಾಂತವೆಂದರಷ್ಟೆ, '' ರಾಜಕೀಯಾಂತ '' ವೆಂದರಷ್ಟೆ.

ಸಿದ್ಧಾಂತ ಒಂದೇ.

ಲೇಖಕರು :
ರಾ. ಯ. ಧಾರವಾಡಕರ,
ಜೆ. ಎಸ್. ಎಸ್. ಕಾಲೇಜ,
ಧಾರವಾಡ.

# ನಾಗಚಂದ್ರನು ಚಿತ್ರಿಸಿದ ಕೈಕಯಿ



**"ಪಸರಿಪ ಕನ್ನಡಕ್ಕೊಡೆಯನೆ ಸತ್ಕವಿ ಪಂಪನಾವಗಂ''**— ಎಂಬ ಘೋಷಣೆಯ ಸಮೀಪಕ್ಕೆ ಕೆಲಮಟ್ಟಿಗಾದರೂ ಬರಬೇಕೆಂದು ಬಯಸಿದ ಅಭಿನವಪಂಪನಾದ ನಾಗಚಂದ್ರನು ತನ್ನ ಅಮೋಘವಾದ 'ರಾಮಚಂದ್ರಚರಿತಪುರಾಣ'ವನ್ನು ರಚಿಸಿದ್ದಾನೆ. ಅವನೇ ಹೇಳಿದ ಹಾಗೆ, "ಪರಮ ಬ್ರಹ್ಮಶರೀರಪುಷ್ಟಿ, ಜನತಾಂತ-ರ್ದೃಷ್ಟಿ, ಕೈವಲ್ಯಬೋಧ ರಮಾಮೌಕ್ತಿಕ ಹಾರಯಷ್ಟಿ, ಕವಿತಾವಲ್ಲೀ ಸುಧಾವೃಷ್ಟಿ, ಸರ್ವರಸೋತ್ಪಾದ ನವೀನಸೃಷ್ಟಿ, ಬುಧ ಹರ್ಷಾಕೃಷ್ಟಿ, ಸರ್ವಾಂಗಸುಂದರಿ ವಿದ್ಯಾನಟಿ ಅವನ ಕಾವ್ಯಸ್ಥಲೀರಂಗದಲ್ಲಿ ನಾಟಕಂ ನಲಿದಿದ್ದಾಳೆ." ಅಮೋಘವಾದ ಪಾತ್ರನಿರೂಪಣೆ, ಸುಲಲಿತವಾದ ಶೈಲಿ, ಪ್ರಶಾಂತವಾದ ಧರ್ಮಬೋಧೆ, ಸುಂದರ ಸಮನ್ವಿತವಾದ ಜೈನ ವಾತಾವರಣ—ಮತ್ತು ಕಾವ್ಯಚ್ಛಲದಿಂದ ಉಪದೇಶಗೈದ ಲೋಕಬೋಧೆಗಳು ಅವನಿಗೆ ಕನ್ನಡಸಾಹಿತ್ಯದಲ್ಲಿ ತುಂಬಾ ಹೆಚ್ಚಿನ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ.

ಪಂಪ-ರನ್ನರ ದುರ್ಯೋಧನ, ನಾಗಚಂದ್ರನ ರಾವಣ, ಕುಮಾರವ್ಯಾಸನ ಕರ್ಣ—ಈ ಹಿರಿಯ ವ್ಯಕ್ತಿಗಳ ಬಗ್ಗೆ ಅನೇಕ ಪಂಡಿತರು-ಕವಿಗಳು ಹೃದಯಂಗಮವಾದ ವಿಮರ್ಶೆಯನ್ನಿತ್ತಿದ್ದಾರೆ. ಪ್ರಸ್ತುತಲೇಖನದಲ್ಲಿ ನಾಗಚಂದ್ರನ ಪಂಪರಾಮಾಯಣದಲ್ಲಿ ಕಂಡು ಬರುವ ಹಿರಿಯ ಪಾತ್ರಗಳಾದ ಶ್ರೀರಾಮಚಂದ್ರ, ಲಕ್ಷ್ಮಣ, ರಾವಣ, ಸೀತೆ—ಇವರ ಬಗ್ಗೆ ವಿಚಾರ ಮಾಡದೆ, ಕಾವ್ಯದ ಉದ್ದಕ್ಕೂ ಕಂಡುಬಾರದೆ ಹಲವು ಪ್ರಸಂಗಗಳಲ್ಲಿ ಮಾತ್ರ ಕಾಣಿಸಿಕೊಂಡು ರಾಮಾಯಣದ ದುರಂತ-ಸುಖಾಂತಗಳಿಗೆ ಕಾರಣಳಾದ ಕೈಕಯಿಯ ಬಗ್ಗೆ ವಿಚಾರ ಮಾಡೋಣ.

ಪಂಪರಾಮಾಯಣದಲ್ಲಿ ಕೈಕಯಿ ಸ್ವಲ್ಪದರಲ್ಲಿಯಾದರೂ ತುಂಬಾ ಪರಿಪೂರ್ಣವಾಗಿ ಚಿತ್ರಿತವಾದ ವ್ಯಕ್ತಿ. ಮದುವೆಯಾಗಬೇಕಾದ ಮುಗ್ಧಕನ್ಯೆಯ ಸೌಂದರ್ಯದಿಂದ ಮೊದಲ್ಗೊಂಡು, ತಾಯಿಯಾಗಿ, ಪುತ್ರಪ್ರೇಮಿಯಾಗಿ, ಮಾನಸದರಿದ್ರಳಾಗಿ, ಮೌಲ್ಯಹೀನಳಾಗಿ, ಲೋಪಪೂರ್ಣಳಾಗಿ, ಆ ಒಂದು ನಿಮಿಷದ ಚ್ಯುತಿಗಾಗಿ ಪಶ್ಚಾತ್ತಾಪವಹ್ನಿದಗ್ಧಳಾಗಿ, ಪುನಃ ಎತ್ತರಕ್ಕೆ ಎದ್ದು ನಿಲ್ಲುವ ಕೈಕಯಿಯ ಸುಂದರವಾದ ಚಿತ್ರವನ್ನು ನಾವು ಈ ಕಾವ್ಯದಲ್ಲಿ ಕಾಣುತ್ತೇವೆ.

**ಪುತ್ರವ್ಯಾಮೋಹದಿಂದ ಕೈಕಯಿ ಸುಖದಿಂದ ಸಾಗಿದ ಸಂಸಾರದಲ್ಲಿ ಹುಳಿ ಹಿಂಡಿ ಎಲ್ಲರಿಗೂ ದುಃಖವನ್ನು ತಂದೊಡ್ಡಿದಳಷ್ಟೇ! ನಾಗಚಂದ್ರನ ರಾಮಾಯಣದಲ್ಲಿ ಅವಳ ಈ ಮನಃಸ್ಥಿತಿಗೆ ಕಾರಣವನ್ನು ಇಷ್ಟೇ ಅಲ್ಲ, ಅವಳ ಸಮಗ್ರಚಿತ್ರಣವನ್ನು ಕಾಣುತ್ತೇವೆ. ನಾಗಚಂದ್ರನ ಕೈಕಯಿ ಮುಗ್ಧಚೆಲುವೆಯಾದ ಕನ್ಯೆ, ಸುಂದರಿಯಾಗಿ ಪರಾಕ್ರಮಿಯಾಗಿ ನಮ್ಮೆದುರು ಝಳಪಿಸಿ ಪುತ್ರಮೋಹಿಯಾಗಿ ಮಲಿನಾಂತರಂಗೆಯಾಗಿ ಕೆಳಗಿಳಿಯುವಳು. ಈ ಪಾತ್ರ ಚಿತ್ರಿಸಿದ ಬಗೆಯನ್ನು ಲೇಖಕರಿಲ್ಲಿ ಮನೋಜ್ಞವಾಗಿ ನಿರೂಪಿಸಿದ್ದಾರೆ.**

ವೈದಿಕಕಲ್ಪನೆಯಲ್ಲಿ ನಮ್ಮ ಕಣ್ಣೆದುರಿಗಿರುವ ಕೈಕಯಿ ವೃದ್ಧ ದಶರಥನ ಚಿಕ್ಕ ಹೆಂಡತಿಯಾಗಿ, ಅವಳು ಸುಂದರಳಿದ್ದಳೋ ಇಲ್ಲವೋ ಅವಳ ಮಹತ್ವಾಕಾಂಕ್ಷೆಯಂತೂ ಹೇಳತೀರದು. ಈ ಮಹತ್ವಾಕಾಂಕ್ಷೆಯೇ ವೃದ್ಧ ಗಂಡನಿಂದ ಅವಳು ವರವನ್ನು ಕೇಳುವಂತೆ ಮಾಡುತ್ತಿದೆ. ಅಲ್ಲಿ ಅವಳ ಬೇಡಿಕೆ ಬರಿ ಭರತನಿಗೆ ರಾಜ್ಯ ಬೇಕೆಂದಲ್ಲ, ರಾಮನಿಗೂ ವನವಾಸವು ಆಗಬೇಕೆಂದು, ಅಲ್ಲಿಯ ಕೈಕಯಿ ಸರ್ಪಿಣಿ. ಘೂತ್ಕರಿಸುವ ನಾಗರ ರಮಣಿ. ಆದರೆ, ಪಂಪರಾಮಾಯಣದಲ್ಲಿ ಹಾಗಿಲ್ಲ. ಇಲ್ಲಿ ಕಾಣುವ ಕೈಕಯಿ ನಿಸ್ಸೀಮ ಚೆಲುವೆ; ಅಷ್ಟೇ ವೀರಕನ್ಯೆ.

ಪ್ರಥಮ ಸಲ ನಾವು ಅವಳನ್ನು ಕಾಣುವುದು ಅವಳ ವಿವಾಹಸಂದರ್ಭದಲ್ಲಿ. ಜನಕ-ದಶರಥರು ತಲೆ ಮರೆಸಿಕೊಂಡು, ಅಲೆಯುತ್ತಿದ್ದಾಗ, ಹೇಗೆಯೋ ಕೈಕಯಿಯ ಸ್ವಯಂವರ ಮಂಟಪಕ್ಕೆ ಆಗಮಿಸುತ್ತಾರೆ. ನಯನಾಕರ್ಷಣ ವಿದ್ಯೆಯೇ ರೂಪವೆತ್ತಂತಿದ್ದ ದಶರಥ ಮಹಾರಾಜನೂ ಇತರ ರಾಜರ ಜೊತೆಗೇ ಪಟ್ಟಕಾಂಡನ ಮಂಚದಲ್ಲಿ ಆಸೀನನಾಗುತ್ತಾನೆ. ಎಲ್ಲಿ ನೋಡಿದಲ್ಲಿ ನಿಶ್ಶಬ್ದ. ರಾಜಮಹಾರಾಜರೆಲ್ಲರೂ ದೇಹವೆಲ್ಲ ಕಣ್ಣಾಗಿ ಕೈಕಯಿ ಬರುವ ದಾರಿಯನ್ನೇ ನೋಡುತ್ತಿರುತ್ತಾರೆ. ಬೀಸುವ ತಂಗಾಳಿ ಕೂಡ ಅವಳ ದೇಹದ ಸೌಂದರ್ಯವನ್ನೇ ಸಾರುವಂತಿದೆ. ಆಗ ಅಪ್ಸರಲ್ಲಿಯೇ, ಪಲ್ಲಕ್ಕಿಯನ್ನೇರಿದ ಕೈಕಯಿ ಮುಗಿಲ್ಮೊರೆಯ ಚಂದ್ರರೇಖೆಯ ಹಾಗೆ ನಯನಮನೋಹರವಾಗಿ ಕಾಣಿಸಿಕೊಳ್ಳುತ್ತಾಳೆ. ಏನು ಸೌಂದರ್ಯ ಈ ಯುವತಿಯದು! ನೋಡಲಿಕ್ಕೆ ಎರಡು ಕಣ್ಣು ಸಾಲವು. ಜಾಜ್ವಲ್ಯಮಾನವಾದ ಅವಳ ದೇಹದೀಪ್ತಿಯ ಪ್ರಭೆಗೆ ನೆರೆದ ರಾಜಸಂದೋಹವೆಲ್ಲ ಗರಹೊಡೆದಂತಾಗುತ್ತದೆ; ಮೂಕ ವಿಸ್ಮಿತವಾಗುತ್ತದೆ. ಹೊರಳಿ ಹೊರಳಿ ನೋಡುವ ಅವಳ ಆ ಲೋಲನೀಲನಯನ

ದೃಷ್ಟಿ ಕಪ್ಪು ಕಮಲಗಳ ಹಗ್ಗವನ್ನೇ ಹೀಯಾಳಿಸುವಂತಿದೆ. ಕವಿಗೂ ಅವಳ ಸೌಂದರ್ಯವನ್ನು ಹತ್ತಾರು ರೀತಿಯಲ್ಲಿ ವರ್ಣಿಸಿದರೂ ಸಮಾಧಾನವಿಲ್ಲ.

**ಎಳವೆಱ, ಪೊನ್ನ ಪುತ್ತಳಿಗೆ, ರನ್ನದ**
**ದೀವಿಗೆ, ತನ್ನ ಪುಷ್ಪಕೋ**
**ಮಳತನು ಬೀಱ ಬೀಱ ನಯನೋತ್ಪ-**
**ಳಮಂ, ನಿಜಲೋಚನಂಗಳು**
**-ತ್ಪಳ ದಳದಾಮಮಂ ಕೆದಱ, ಕಣ್ಗೆಸೆದಳ್,**
**ನವರತ್ನಮಾಲೆ ಕೇ-**
**ದಳದೊಳ್ ಅನಂಗಪಾಶಮೆನೆ ಕೈಕೆ**
**ಮನೋಜನಬಯ್ತುಬಯ್ಕೆವೋಲ್**

ಆಗ ಕಂಚುಕಿ ನೆರೆದ ಎಲ್ಲ ಅರಸರ ವಿವರವನ್ನೂ ಹೇಳುತ್ತಾಳೆ. ಆದರೆ, ಅವಳ "ತಟಿತ್ಸಂಚಲ ನಯನಯುಗ" ಉಳಿದ ಅರಸರನ್ನು ನೋಡದೆ, ದಶರಥನಲ್ಲಿ ಮಾತ್ರ ವಿಶ್ರಮಿಸುತ್ತದೆ. ಉಳಿದೆಡೆಗೆ ಅದು ನಿಲ್ಲಬೇಕಾದರೂ ಹೇಗೆ? "ಜಳಮ್ ಒಂದೆಡೆಯೊಳ್ ಏಂ ನಿಂದಪುದೇ?" ಹೀಗಾಗಿ, ಆ ಲೋಲ ನಯನೋತ್ಪಲಮಾಲೆ ದಶರಥನಿಗೇ ಮಾಲೆಯನ್ನು ಹಾಕುತ್ತಾಳೆ. ಕವಿ ಕೊಡುವ ಈ ಚಿತ್ರ, ಬಾಲೆ, ಮುಗ್ಧೆ, ಚೆಲುವೆಯಾದ ಕೈಕೆಯಿಯದು.

ಕೈಕಯಿ ಚೆಲುವೆಯಿದ್ದಷ್ಟೇ ಸಾಹಸಿಯೂ ಆಗಿದ್ದಾಳೆ. ಅವಳು ಅಷ್ಟೇ ಬಹುಪರಾಕ್ರಮಿ. ಇಲ್ಲಿಯ ಕೈಕಯಿ ಬರಿಯ ಬಣ್ಣದ ಬೊಂಬೆಯಲ್ಲ; ಕ್ಷಾತ್ರಕನ್ಯೆ—ತಾನು ದಶರಥನನ್ನು ವರಿಸಿದಳೆಂಬ ಸುದ್ದಿ ತಿಳಿದ ಕೂಡಲೇ, ನೆರೆದ ರಾಜಸಂದೋಹವೆಲ್ಲ ರಣಬಾಲಕರ ಹಾಗೆ ದಶರಥನ ಮೇಲೆ ದಾಳಿ ಮಾಡಲು ಮುನ್ನುಗ್ಗುತ್ತದೆ. ಪರಾಕ್ರಮಿಯಾದ ದಶರಥನು ಕೂಡ, ಹಿಂಜರಿಯದೆ "ಆನೆ ಕಲಂಕುವಂತೆ ಕೊಳನಂ, ಆನೆ ಕಲಂಕುವೆಂ" ಎಂದು ಸಿಂಹದ ಹಾಗೆ ಗರ್ಜಿಸಿ, ಅರಿನಿಕಾಯದ. ಮೇಲೆ ಎರಗುತ್ತಾನೆ. ಆದರೆ, ದುರ್ದೈವದಿಂದ ದಶರಥನ ಸಾರಥಿ ಮೂರ್ಛೆ ಹೋಗುತ್ತಾನೆ. ಹತ್ತಿರವೇ ಇದ್ದ ಪರಾಕ್ರಮಿ ಕೈಕಯಿ—ಎರಡು ನಿಮಿಷಗಳ ಹಿಂದೆ ಬಾಲಿಕೆ—ಮುಗ್ಧೆ—ತಕ್ಕುದರಿಯಳಾಗಿದ್ದವಳು—ಎರಡು ನಿಮಿಷಗಳ ಹಿಂದೆ ತನ್ನ ಕುಸುಮಸುಮಕರತಳದಲ್ಲಿ ಸ್ವಯಂವರ ಮಾಲೆಯನ್ನು ಹಿಡಿದಿದ್ದವಳು— ಮುನ್ನುಗ್ಗಿ ಸ್ವತಃ ತಾನೇ ಸಾರಥಿಯಾಗಿ ದಶರಥನ ರಥವನ್ನೂ ಮನೋರಥವನ್ನೂ ಕೂಡಿಯೇ ಚೋದಿಸುತ್ತಾಳೆ. ಇಂಥ ನವಯುವತಿಯನ್ನು ಹೆಂಡತಿಯಾಗಿ ಪಡೆದ ಆನಂದೋತ್ಸಾಹದಲ್ಲಿದ್ದ ದಶರಥನು ಅವಳ ಪರಾಕ್ರಮ ಗುಣವನ್ನು ಇನ್ನೂ ಮೆಚ್ಚಿ ರಭಸದಿಂದ ಹೋರಾಡುತ್ತಾನೆ. ಈಗ ದಶರಥನಿಗೆ ಯಾರ ಸಹಾಯವೂ ಬೇಕಿಲ್ಲ. ಯಾವ ಬಲವೂ ಬೇಡ, ಯಾವ ಜಯಡಿಂಡಿಮವೂ ಬೇಡ; ಯಾವ ರಥಧ್ವಜವೂ ಬೇಡ. ಈಗ ಅವನಿಗೆ ಇವೆಲ್ಲ ಕೈಕಯಿಯೇ ಆಗಿದ್ದಾಳೆ.

**ಅತಿಶಯುವಾಗೆ ಮುಖಚಂದ್ರಬಲಂ,**
**ಮಣಿಮೇಖಲಾರವಂ**
**ಶ್ರುತಿಪಥಮಂ ಪಳಂಚೆ ಜಯಡಿಂಡಿಮ-**
**ನಿಸ್ವನದಂತೆ, ಮೇಲುದು**
**ದ್ಗತ ಜಯಕೇತುವಂ ಪಿಂಗೆ, ಮನೋರಥ**
**ಸಾರಥಿ, ಕೈಕೆಬಂದು ಭೂ-**
**ಪತಿಯೊಡನೇಱದಳ್ ರಥಮಂ ಆ ರಘು-**
**ವೀರನ ವೀರಲಕ್ಷ್ಮಿವೊಲ್ ॥**

ಅವಳು ರಥವನ್ನು ನಡೆಸುವುದೂ ಅಷ್ಟೇ ಅದ್ಭುತವಾದದ್ದು, "ಮೀಱದೆ, ಕೀಱದೆ, ನೇಣಂ ತೋಹಿದ ದೆಸೆಗೆ ಆಕೆಗಂ ಹಯಸ್ಕಂ

ಚಿತ್ತಂ ಬೇಡೆಲ್ಲ" ಎನ್ನುವ ಹಾಗೆ ರಭಸದಿಂದ ರಥವನ್ನು ಸಾಗಿಸುತ್ತಾಳೆ. ಆ ವೇಗಕ್ಕೆ

**ತಾಗೆ ಸರಲ್**
**ಸಾವಿನ ಹಲ್**
**ತಾಗಿದ ವೋಲ್ ಸಾರಥಿ ರಥಮಂ**
**ಚೋದಿಸಿದಳ್**
**ವಧು ರಾಗರಸಂ**
**ದಶರಥಂಗೆ ನೆಲೆವೆರ್ಚುವವೋಲ್**

ಮದುವೆಯ ಅರಿಷಿಣವಾರುವ ಮೊದಲೇ ಗಂಡನ ಅಭಿಲಾಷೆಗೆ ಇಷ್ಟು ಅನುಗುಣವಾಗಿ, ಅವನ ಪ್ರತಿಬಿಂಬವೋ ಏನೋ ಎನ್ನುವಷ್ಟು ಈ ರೀತಿ ಸಹಾಯಕಳಾದ ಹೆಂಡತಿಯನ್ನು ಪಡೆದ ದಶರಥನೃಪನೇ ಧನ್ಯನಲ್ಲವೇ! ಅಂತಲೇ, "ಈಕೆ ಗೆಯ್ದ ಉಪಕೃತಿಗೆ ಆನ್ ಈಕೆಗೆ ಬೇಡಿದುದಂ ನಿರ್ವ್ಯಾಕುಳಂ ಈಯದೊಡೆ ಮೆಚ್ಚು ಪೊಳ್ಳಾಗಿರದೇ?" ಎಂದು ಭಾವಿಸಿ ದಶರಥನೃಪನು ಕೈಕಯಿಗೆ ಏನು ಬೇಕಾದ ವರವನ್ನು ಬೇಡೆಂದು ಕೇಳುತ್ತಾನೆ. ಆ ಅಜ್ಞಾನನೆಯು ಬಗೆ ಬೆದರಿ ಬೇಡಿದಾಗ ಕೊಡಿರೆಂದು ಕೇಳಿಕೊಳ್ಳುತ್ತಾಳೆ. ಈ ಕೃತಜ್ಞತೆಯ ವರವೇ ರಾಮಾಯಣ ಕಥೆಯ ವಿಷಬೀಜವಾಗಿ ಪರಿಣಮಿಸುತ್ತದೆ.

ಯಾಕಂದರೆ, ಕನ್ಯೆಯಾಗಿ ಉದಾತ್ತತೆಯನ್ನು ಪ್ರದರ್ಶಿಸಿದ ಕೈಕೆ ತಾಯಿಯಾಗಿ ಕೆಳಗಿಳಿಯುತ್ತಾಳೆ. ಪುತ್ರಮೋಹಾಂಧಳಾದ ಅವಳಿಗೆ ಸ್ವತಃ ತನ್ನ ಮಗನ ಮನಸ್ಸಿನ ರೀತಿಯೇ ಗೊತ್ತಾಗದಹಾಗೆ ಆಗುತ್ತದೆ. ಯಾಕಂದರೆ ಮಹೇಂದ್ರೋದ್ಯಾನವಲ್ಲಿ ನೆಲಸಿದ ಸರ್ವಭೂತಹಿತಭಟ್ಟಾರಕರಿಂದ ತನ್ನ ಭವಾವಳಿಯನ್ನು ಅರಿತ ದಶರಥಮಹಾರಾಜನು "ಸುಕೃತ ದುಷ್ಕೃತ ಕರ್ಮವಿಪಾಕ ಸೌಖ್ಯ ದುಃಸ್ಥಿತಿಗಳನುಂಡು ಆಟಳವ ಗುಂಡಿಗೆವೊಲ್ ಆದೆ"ನೆಂದು ಭಾವಿಸಿ ವೈರಾಗ್ಯಪರಾಯಣನಾಗಬಯಸುತ್ತಾನೆ.

"ಅಟಿವೆಣ್ದಾದೊಡಂ ಒಂದೆರಟು ದಿವಸಂ ಒಂದಾಗಿರ್ದವಂ ನೆಂಟನೆಂದು ಅನ್ಯರನಾಸೆಗೆಯಳ್; ಅವಳಿಂ ಈ ಧರಾರಮಣಿ ನಿರ್ವ್ಯಾಕುಳಂ ಪೊಲ್ಲಿವಳ್; ಪಟಿಗಂಜಳ್; ಭರತಾದಿಗಳ್ ಪಲವುಕಾಲಂ ತನ್ನೊಳ್ ಓತಿರ್ದವರ್ ಕಟಿದಂದು ಆ ಕ್ಷಣದೊಳೆ ಮತ್ತೊರ್ಗಂಗೆ ಪೊರ್ದಿಕ್ಕುವಳ್". ಇದನ್ನು ಬಗೆದ ದಶರಥ ತನ್ನ ಮಕ್ಕಳಿಗೆ ತನ್ನ ನಿಶ್ಚಯವನ್ನು ಹೇಳಿದಾಗ ಇದೇ ಸತ್ಯವನ್ನೇ ಅರಿತ ಭರತನು ಕೂಡ ತಾನೂ ರಾಜ್ಯಸುಖವನ್ನು ಬಿಟ್ಟು ಪರಮಾರ್ಥಸುಖವನ್ನೇ ಬಯಸುವುದಾಗಿ ಹೇಳಿ ತಪೋಗಮನಕ್ಕೆ ಸಿದ್ಧನಾಗುತ್ತಾನೆ.

ಆದರೆ, ಮಣ್ಣಿನ ಮುದ್ದೆಯಾದ ಕೈಕೆ ಭರತನ ಈ ನಿಶ್ಚಯವನ್ನೇ ತಪ್ಪಾಗಿ ಗ್ರಹಿಸಿ, ರಾಮನಿಗೆ ರಾಜ್ಯ ಸಂದಿತೆಂಬ ನಿರಾಶೆಯ ಭಾವನೆಯಿಂದ ಭರತನು ಹೀಗೆ ಸಂಕಲ್ಪಿಸಿರಬಹುದೆಂದು ಬಗೆದು, ದೈವ ಮಾಡಬೇಕಾದ್ದನ್ನು ತಾನು ಮಾಡಲು ಬಯಸುತ್ತಾಳೆ.

ಕೊಲೆಗಡಕನಿಗೆ ಹಿಂಸಾಕಾರ್ಯದಲ್ಲಿ ತನ್ನ ವಿದ್ಯೆಗಳೆಲ್ಲವೂ ನೆನಪಾಗುವಂತೆ, ಅದೇ ಸಮಯಕ್ಕೆ ತನ್ನ ಗಂಡನು ತನಗಿತ್ತ ಮೆಚ್ಚಿನ ನೆನಪಾಗುತ್ತದೆ. ಮಾನಸದರಿದ್ರಳಾದ ಕೈಕೆ "ಮಡಗಿಟ್ಟು ಮಱೆದ ಧನಮಂ ಬಡವಂ ನೆನೆವಂತೆ" ಆ ವರವನ್ನು ನೆನೆದು, ದೈವದ ಮಾರ್ಗವನ್ನು ಬದಲಿಸುವ ಹುಮ್ಮಸಿನಿಂದ,

ಗುಣಹಾನಿಗೆ ಬೆದರದೆ, ಧರ್ಮಹಾನಿಯನ್ನು ನೆನೆಯದೆ, ಪಾತ್ರಸೇವೆ ಹಾಳಾಯಿತೆಂಬದನು ಬಗೆಯದೆ, ಮಲಿನಾಂತರಂಗೆಯಾಗಿ ಟಕ್ಕಿನ ಸೊಡರಂತೆ ದಶರಥನಲ್ಲಿಗೆ ಬರುತ್ತಾಳೆ. ಇಲ್ಲಿಗೆ ಕೈಕೆಯ ಅಧೋಗತಿ ಸಂಪೂರ್ಣವಾಗುತ್ತದೆ.

ದಶರಥನ ಆಸ್ಥಾನವೆಲ್ಲ ರಾಜಾಧಿರಾಜರಿಂದಲೂ ಸೇವಕ ಸೇವಿಕೆಯರಿಂದಲೂ ಕಿಕ್ಕಿರಿದು ತುಂಬಿದೆ; ರಾಮ–ಲಕ್ಷ್ಮಣ-ಭರತ–ಶತ್ರುಘ್ನರು ನಾಲ್ಕು ಪುರುಷಾರ್ಥಗಳ ಹಾಗೆ ತಂದೆಯ ಜೀವಿತವೇ ಆಗಿ ಯಾವುದಕ್ಕೂ ಸಿದ್ಧವಾಗಿ ನಿಂತಿದ್ದಾರೆ. ಆ ಸಮಯದಲ್ಲಿ ಮೋಹಮೂರ್ಖಳಾದ ಕೈಕೆ ಹಿಂದುಮುಂದು ನೋಡದೆ ದಶರಥನಿಗೆ ವರವನ್ನು ಪೂರ್ಣಗೊಳಿಸು ಎಂದು ಕೇಳಿಕೊಳ್ಳುತ್ತಾಳೆ. ಇವಳ ಅಂತರಂಗವನ್ನು ಅರಿಯದ ದಶರಥನು ಕೂಡ "ಬೇಕಾದುದನ್ನು ಕೇಳಿಕೊಳ್ಳು **ಮೃಗಶ್ಯಾಬಲೋಚನೆ**" ಎಂದು ಹೇಳುತ್ತಾನೆ. ಈಗಿನ ಕೈಕೆಯ ಕಣ್ಣುಗಳು ಮುಗ್ಧ ಮೃಗಶಾಬದ ಲೋಚನಗಳಾಗಿರದೆ ವ್ಯಾಘ್ರಿಣಿಯ ಆರಕ್ತನೇತ್ರಗಳಾಗಿದ್ದುವೆಂಬುದು ದಶರಥನಿಗೆ ಹೇಗೆ ಗೊತ್ತು ಪಾಪ? ಕೈಕೆ ನಿ-ಧಾ-ನ-ವಾ-ಗಿ ಕೇಳಿಕೊಳ್ಳುತ್ತಾಳೆ. ಉದ್ದವಾಗಿ ಬೆಳೆದುಬಂದ ಅವಳ ಉಸಿರಿನ ಹಾಗೆಯೇ ಅವಳ ಬಾಯಿಂದ ಮಾತುಗಳು ಹೊರಬೀಳುತ್ತವೆ. ಈ ಚಿತ್ರವನ್ನು ನಾವು ಕವಿಯ ಬಾಯಿಂದಲೇ ಕೇಳಬೇಕು—

**ವದನಸುಧಾಂಶುಬಿಂಬದ ಕಳಂಕದ ಬಿತ್ತುಗಳಂತೆ, ವಕ್ತ್ರಪದ್ಮದಮಧುಪಾನಮಂ ಸವಿದು ಸೋರ್ಕಿದ ತುಂಬಿಗಳಂತೆ ನೀಳ್ದುವಾ**
**ಸುದತಿಸಮಗ್ರನಗ್ರಜನಿರಲ್ ಪಟಿಗಂಜದೆ ಪಾಪಭೀರುವಾಗದೆ ಭರತಂಗೆ ರಾಜ್ಯಭರಮಂ ಕುಡು ವೇಟ್ಟುಮಲೀಮಸೋಕ್ತಿಗಳ್**

ಆಗಬಾರದ್ದು ಆಗಿಹೋಯಿತು; ನಡೆಯಬಾರದ್ದು ನಡೆಯಿತು. ಅವಳ ಬಾಯಿಂದ ಈ ಮಾತು ಬರುವುದೊಂದೇ ತಡ ಸಭೆಯಲ್ಲಿಯೆಲ್ಲ ಕಾಳರಾತ್ರಿ ಪಸರಿಸಿತು. ಗುಡುಗಿನ ಸಪ್ಪಳವನ್ನು ಕೇಳಿದ ಹಂಸದ ಹಾಗೆ ದಶರಥ ಗಾಬರಿಯಾದನು. ಜನವೆಲ್ಲ ಮುಖವನ್ನು ಕೆಳಗೆ ಹಾಕಿದರು. ಎಲ್ಲರ ಕಣ್ಣುಗಳೂ ನೆಲಕ್ಕೇ ಕೀಲಿಸಿದವು. ಭರತನೂ ಲಜ್ಜಾನತನಾದನು. ಅವಳ ದುರ್ಯಶಃಪಟಹ ನಾದ ಹತ್ತೂ ದಿಕ್ಕಿನಲ್ಲಿ ಜೇವೊಡೆಯಿತು. ಏನು ಮಾಡಿದಳು ಈ ಕೈಕೆ? ಎಂಥ ಮಾತನ್ನಾಡಿದಳಲ್ಲಾ! ಏನು ಅನ್ಯಾಯ ಎಂದು ತಡೆದುಬಿಟ್ಟ ಸಮುದ್ರದ ಹಾಗೆ ಸಭೆ ಘೂರ್ಮಿಸತೊಡಗಿತು.

**ನುಡಿದಳನಿಷ್ಟಮಂ ನುಡಿದಳನ್ನೆಯಮಂ ಪತಿಗಂ ವಿರುದ್ಧಮಂ**
**ನುಡಿದಳಾ, ಸೇವ್ಯಮಂ ನುಡಿದಳ್ ಅನ್ವಯರಾಜ್ಯವಿನಾಶಹೇತುವಂ**
**ನುಡಿದಳ್, ಎನಿತ್ತುಂ ಅಳ್ಕದೆ ನರೇಂದ್ರ ಸಭಾಬನಮ್**

**ಅಂದು ಕೈಕೆಯುಂ ನುಡಿದುದು—**

ತುಂಬಿದ ಹಾಲಿನ ಕೊಡದಂತಿದ್ದ ದಶರಥನ ಸುಂದರಸಂಸಾರದಲ್ಲಿ ಈ ಒಂದು ಮಾತು ವಿಷದ ಹನಿಯಾಗಿ ಉದುರಿತು. ಇದರಿಂದ ಯಾರಿಗೂ ಸುಖವಿಲ್ಲ. ಈ ಮಲೀಮಸೋಕ್ತಿಗಳಿಂದ ಸಭಿಕರ ಮನಸ್ಸಿನಲ್ಲುಂಟಾದ ಭಾವನೆಗಳನ್ನು ಕವಿಯು ಚಲಚ್ಚಿತ್ರದಲ್ಲಿ ಚಿತ್ರಿಸಿದ ಹಾಗೆ ಯಥಾವತ್ತಾಗಿ ಚಿತ್ರಿಸಿದ್ದಾನೆ.

**ಭರತಂ ಲಜ್ಜಾನತಂ, ತಾಯ್ ವಿಕಳೆ, ದಶರಥಂ ವಿಹ್ವಲಂ, ಲಕ್ಷ್ಮಣಂ ಕೋಪರಸಾವೇಶಂ, ಸಭಾಮಂಡಲಂ ಅಸಕೃದ್ ಅಸದ್ವಾಕ್ಯಮುಕ್ತ್ರೋಷ್ಯಮ್**
**ಅಂತಃಪುರಮ್ ಅಂತಶ್ಶೂನ್ಯಮ್—**

ಈ ಸಮಯದಲ್ಲಿ ಭಗವಾನ್ ಶ್ರೀರಾಮಚಂದ್ರನು ಮಾತ್ರ "ಪಾರಿಜಾತಂ ಕಡಲ ನಡುವೆ ಕೈವಂದವೋಲ್ ಉಪಚಿತ ಕಾರುಣ್ಯ ದೃಷ್ಟಿಪ್ರಭಾ ನಿರ್ಭರಪೂರನಾಗಿ" ಕಂಗೊಳಿಸುತ್ತಾನೆ.

ಇಲ್ಲಿಗೆ ಕೈಕೆಯ ಕಥೆ ಮುಗಿಯುತ್ತದೆ. ರಾಮ ವನವಾಸಕ್ಕೆ ಹೋಗುತ್ತಾನೆ. ತನ್ನ ಪಾಪದ ಹೊರೆಯನ್ನೇ ತಾಳದ ಮುಗ್ಧೆ ಹೇಗಾದರೂ ಮಾಡಿ ರಾಮನನ್ನು ಕರೆದುಕೊಂಡು ಬಾ ಎಂದು ಭರತನನ್ನೇ ಪುನಃ ಕಾಡಿಗೆ ಕಳಿಸುತ್ತಾಳೆ. ಶ್ರೀರಾಮಚಂದ್ರನ ಮನಸ್ಸನ್ನು ಒಪ್ಪಿಸಲು ಅವನ ಜೊತೆಗೆ ತಾನೂ ಹೋಗುತ್ತಾಳೆ. ಆದರೆ, ರಾಮನಲ್ಲಿ ಒಂದು ಸಲ ತೊಟ್ಟ ಬಾಣ, ಆಡಿದ ಮಾತು ಹಾಗೆಯೇ ತಿರುಗಿ ಬಾರವು. ಸತ್ಯಸಂಧನಾದ ಶ್ರೀರಾಮನು ತಾಯಿ ಕೈಕೆಯನ್ನು ಸಂತೈಸಿ ಮರಳಿ ಕಳಿಸುತ್ತಾನೆ.

ಹೀಗಾಗಿ ನಾವು ನಾಗಚಂದ್ರ ರಾಮಾಯಣದಲ್ಲಿ ಕೈಕೆಯ ಪಾತ್ರದ ಸಮಗ್ರ ಬೆಳವಣಿಗೆಯನ್ನೂ ಅವನತಿಯನ್ನೂ ಸ್ಪಷ್ಟವಾಗಿ ಗುರುತಿಸುತ್ತೇವೆ. ಮುಗ್ಧ ಚೆಲುವೆಯಾದ ಕನ್ಯೆ ಸುಂದರಿಯಾಗಿ, ಪರಾಕ್ರಮಿಯಾಗಿ, ನಮ್ಮೆದುರು ಝಳಪಿಸಿ, ಪುತ್ರಮೋಹಿಯಾಗಿ ಮಲಿನಾಂತರಂಗೆಯಾಗಿ ಕೆಳ[illegible]ಯುವದನ್ನೂ ಪ್ರತ್ಯಕ್ಷವಾಗಿ ಕಾಣುತ್ತೇವೆ. ಅವಳ ಪಾತ್ರಪೋಷಣೆಯನ್ನು ಕಂಡಂತೆಲ್ಲ "ಕ್ಷೀಣೇ ಪುಣ್ಯೇ" ಜೀವಿಗಳು ಮರ್ತ್ಯಲೋಕವನ್ನು ಪ್ರವೇಶಿಸುವ ಭಾವನೆಯುಂಟಾಗುತ್ತದೆ.

---

ಮಾನವಕಲ್ಯಾಣವೇ ಇತಿಹಾಸದ ಉದ್ದೇಶವಾಗಿದೆ. ಬದುಕಿರುವ ಮಾನವನು ತನ್ನ ಸ್ಥಿತಿಗತಿಗಳನ್ನು ಚೆನ್ನಾಗಿ ಅರಿತುಕೊಂಡು ತನ್ನ ಆಗು-ಹೋಗುಗಳನ್ನು ಗುರುತಿಸಿಕೊಂಡು ತಾನು ತನ್ನವರೆಲ್ಲರೊಡನೆ ಸುಖವಾಗಿ ಬಾಳಲು ಕಲಿಸಿಕೊಡುವುದೇ ಇತಿಹಾಸದ ಕಾರ್ಯ. ಅದು ಕೇವಲ ಘಟನೆಗಳನ್ನು ಅವಲಂಬಿಸದೆ ಅವುಗಳಿಗೆ ಹಿನ್ನೆಲೆಯಾಗಿರುವ ವಿಚಾರಧಾರೆಯನ್ನು ವಿವೇಚಿಸಬೇಕು. ಈ ದೃಷ್ಟಿಯಿಂದ ಪುರಾಣಗಳು, ಆಖ್ಯಾನಗಳು ಎಲ್ಲವೂ ಉಚ್ಚತರಗತಿಯ ಇತಿಹಾಸವೆನಿಸಿಕೊಳ್ಳುವವು: ಈ ಹಿನ್ನೆಲೆಯಲ್ಲಿರುವ ಭಾರತೀಯ ಇತಿಹಾಸಪರಂಪರೆಯನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ.



# ಭಾರತೀಯ ಇತಿಹಾಸಪರಂಪರೆ

ಲೇಖಕರು :
**ಪ್ರೊ. ಚಿದಂಬರ ಕುಲಕರ್ಣಿ,**
**ಮುಂಬಯಿ**

ಭಾರತೀಯ ಸಂಸ್ಕೃತಿಯ ಪ್ರಾಚೀನತೆಯನ್ನೂ ಹಿರಿಮೆಯನ್ನೂ ಪಾಶ್ಚಿಮಾತ್ಯರು ಪರಿಚಯಮಾಡಿಕೊಂಡಿದ್ದು ಹದಿನೆಂಟನೆಯ ಶತಮಾನದ ಕೊನೆಯ ಭಾಗದಲ್ಲಿ. ಪುರಾಣಕಾಲದ ಸಾಹಿತ್ಯದ ಮೂಲಕ ಅವರು ನಮ್ಮ ಪೂರ್ವಜರು ಗಳಿಸಿಕೊಂಡ ವಿಶಾಲವಾದ ಜ್ಞಾನಕ್ಷೇತ್ರವನ್ನು ಕ್ರಮೇಣ ಅರಿತುಕೊಂಡರು. ಮೊದಮೊದಲು ನಮ್ಮ ಪೂರ್ವಕಾಲೀನ ಸಾಹಿತ್ಯ ಮತ್ತು ತತ್ತ್ವಜ್ಞಾನದ ಹಿರಿಮೆಯನ್ನು ಒಪ್ಪಿಕೊಂಡರು. ಆಗ ಅವರಿಗೆ ಭಾರತೀಯರು ಪಾರಲೌಕಿಕ ದೃಷ್ಟಿಯವರು, ಅವರಲ್ಲಿ ಇಹಲೋಕದ ವ್ಯವಹಾರಕ್ಕೆ ಅವಶ್ಯವಾದ ಶಾಸ್ತ್ರಗಳು ಬೆಳೆದುಬಂದಿಲ್ಲ ಎಂಬ ಕಲ್ಪನೆ ಮೂಡಿತ್ತು. ಆದರೆ ಇತ್ತೀಚಿನ ಸಂಶೋಧನಗಳ ಮೂಲಕ ಇಂತಹ ಕಲ್ಪನೆ ಮಾಯವಾಗಿದೆ. ಆಯುರ್ವೇದ, ಧನುರ್ವೇದ, ಶಿಲ್ಪ, ಜ್ಯೋತಿಷ, ಗಣಿತ, ಭೌತಶಾಸ್ತ್ರ, ರಸಾಯನಶಾಸ್ತ್ರ, ಪ್ರಾಣಿವಿಜ್ಞಾನ, ರಾಜನೀತಿ, ವಾರ್ತಾ, ಧರ್ಮಶಾಸ್ತ್ರ ಮುಂತಾದ ಅನೇಕ ಕ್ಷೇತ್ರಗಳಲ್ಲಿ ಪ್ರಾಚೀನ ಭಾರತೀಯರು ಗಳಿಸಿಕೊಂಡ ಜ್ಞಾನದ ಮಟ್ಟವು ಸಾಕಷ್ಟು ಎತ್ತರವಾದುದೆಂಬುದನ್ನು ಅನೇಕ ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಅಲ್ಲದೆ ಭಾರತೀಯರ ಜ್ಞಾನಭಾಂಡಾರದ ಫಲವು ಅನೇಕ ದೇಶಗಳಿಗೆ ಪ್ರಾಚೀನಕಾಲದಿಂದಲೂ ದೊರೆತಿದೆ ಎಂಬುದನ್ನು ಒಪ್ಪಿದ್ದಾರೆ. ವಿಲ್ ಡುರಂಟರು ಹೇಳುವ ಈ ಮಾತನ್ನು ಉದಾಹರಿಸಬಹುದು—

"ಭಾರತವು ನಮ್ಮ ಜನಾಂಗದ ತಾಯಿನಾಡು. ಸಂಸ್ಕೃತಭಾಷೆ ನಮ್ಮ ಭಾಷೆಗಳ ತಾಯಿಯು. ಅವಳೇ ನಮ್ಮ ತತ್ತ್ವಜ್ಞಾನದ ತಾಯಿ ; ಅರಬರ ಮೂಲಕ ಅವಳೇ ನಮ್ಮ ಗಣಿತದ ತಾಯಿ ; ಬುದ್ಧನ ಮೂಲಕ ನಮ್ಮ ಕ್ರಿಶ್ಚನ್‌ತತ್ತ್ವಗಳ ತಾಯಿಯೂ ಅವಳೇ ; ಗ್ರಾಮಸಮಾಜದ ಮೂಲಕ, ಭಾರತವೇ ಸ್ವರಾಜ್ಯ ಮತ್ತು ಪ್ರಜಾಪ್ರಭುತ್ವಗಳ ತಾಯಿ, ಹೀಗೆ ಭಾರತಮಾತೆಯು ಅನೇಕ ರೀತಿಯಲ್ಲಿ ನಮ್ಮೆಲ್ಲರ ತಾಯಿಯಾಗಿದ್ದಾಳೆ.''

ಇಷ್ಟೆಲ್ಲ ಒಪ್ಪಿಕೊಂಡರೂ ಆಧುನಿಕ ವಿದ್ವಾಂಸರು ಭಾರತೀಯ ಸಂಸ್ಕೃತಿಯಲ್ಲಿ ಒಂದು ಮಹತ್ವದ ಕೊರತೆಯನ್ನು ಕಂಡಿದ್ದಾರೆ. ಅದೆಂದರೆ— ಭಾರತೀಯರಲ್ಲಿ ವಿಶೇಷತಃ ಪ್ರಾಚೀನ ಭಾರತೀಯರಲ್ಲಿ ಇತಿಹಾಸದ ಕಲ್ಪನೆಯೇ ಇಲ್ಲ. ಗ್ರೀಕ, ರೋಮನ್ ಮತ್ತು ಅರಬ್ಬೀ ಜನಾಂಗಗಳಲ್ಲಿ ದೊರೆಯುವಂತಹ ಇತಿಹಾಸಗಳು ಭಾರತೀಯರಲ್ಲಿ ಇಲ್ಲವೇ ಇಲ್ಲ. ಅದಕ್ಕಾಗಿಯೇ ಪ್ರಾಚೀನಭಾರತದ ಇತಿಹಾಸವನ್ನು ಬರೆಯುವ ಕಾರ್ಯ ತುಂಬಾ ತೊಡಕಿನದಾಗಿದೆ. ಹೇಗಾದರೂ ಯತ್ನಿಸಿ ಬರೆದ ಚರಿತ್ರೆಯಲ್ಲಿ ವಾದ-ವಿವಾದಗಳೇ ಹೆಚ್ಚಾಗಿರುವದಕ್ಕೆ ಇದೇ ಕಾರಣ. ಪ್ರಾಚೀನ ಭಾರತೀಯರಲ್ಲಿ ಇತಿಹಾಸದ ತಿಳಿವಳಿಕೆಯೇ ಇದ್ದಿಲ್ಲ— ಈ ಮಾತುಗಳನ್ನು ಕೆಲ ಭಾರತೀಯ ವಿದ್ವಾಂಸರೂ ಒಪ್ಪಿಕೊಂಡರು. ಆದರೆ ಪಾಶ್ಚಿಮಾತ್ಯ ವಿದ್ವಾಂಸರಲ್ಲಿಯೇ ಈಗ 'ಇತಿಹಾಸ'ದ ಅರ್ಥ ಮತ್ತು ವ್ಯಾಪ್ತಿಯ ಬಗ್ಗೆ ಹೊಸ ವಿಚಾರಗಳು ಮೂಡಹತ್ತಿವೆ. ಈ ಹೊಸ ದೃಷ್ಟಿಯಿಂದ ಪರಿಶೀಲಿಸಿದರೆ ಪ್ರಾಚೀನ ಭಾರತೀಯರಲ್ಲಿ ಇತಿಹಾಸದ ಕಲ್ಪನೆ ಇದ್ದಿಲ್ಲವೆಂದು ಸಾರುವದು ಅಷ್ಟೊಂದು ಸರಿಯಾದುದಲ್ಲವೆಂದೂ ಅವರ ಇತಿಹಾಸದ ಕಲ್ಪನೆಯು ಹತ್ತೊಂಬತ್ತನೆಯ ಶತಮಾನದ ಪಾಶ್ಚಿಮಾತ್ಯ ವಿದ್ವಾಂಸರ ಕಲ್ಪನೆಗಿಂತ ಬೇರೆಯಾದುದಿತ್ತೆಂದೂ ಈಗ ಹೇಳಬೇಕಾಗಿದೆ. ಆದುದರಿಂದ ಪ್ರಾಚೀನ ಭಾರತೀಯರಲ್ಲಿ ಇತಿಹಾಸಕ್ಕೆ ಇದ್ದ ಅರ್ಥ—ವ್ಯಾಪ್ತಿಗಳನ್ನೂ ಸ್ವಲ್ಪದರಲ್ಲಿಯೇ ನೋಡಿ, ಇತ್ತೀಚಿನ ವಿಚಾರಗಳ ಬೆಳಕಿನಲ್ಲಿ ಅವುಗಳನ್ನು ಪರಿಶೀಲಿಸಬಹುದು.

ಇಡೀ ಜಗತ್ತಿನಲ್ಲಿಯೇ ಪ್ರಾಚೀನತಮವೆಂದೆನಿಸಿಕೊಳ್ಳುವ ವೈದಿಕಸಾಹಿತ್ಯದಲ್ಲಿಯೇ ಇತಿಹಾಸ ಪದವು ಬಳಸಲ್ಪಟ್ಟಿದೆ. ಅಲ್ಲದೆ, ನಾರಾಶಂಸಿ, ಗಾಥಾವಂಶ, ಗೋತ್ರ, ಪ್ರವರ, ಆಖ್ಯಾನ, ಪುರಾಣ ಕಾವ್ಯಗಳು ಅನೇಕ ಬಗೆಯ ಐತಿಹಾಸಿಕ ಸಂಗತಿಗಳನ್ನು ಒಳಗೊಂಡಿವೆ. ಇವುಗಳ ಮೂಲಕವೇ ಈ ಕಾಲದ ಇತಿಹಾಸವನ್ನು ಪುನಾರಚಿಸಲು ಆಧುನಿಕ ವಿದ್ವಾಂಸರು ಹೆಣಗುತ್ತಿದ್ದಾರೆ. ಅಲ್ಲದೆ ಭಾರತೀಯ ಸಂಸ್ಕೃತಿಯ ಒಂದು ಹಿರಿದಾದ ವೈಶಿಷ್ಟ್ಯವೆಂದರೆ, ಪ್ರಾಚೀನಕಾಲದಿಂದಲೂ ಇಲ್ಲಿಯ ವರೆಗೂ ಅದು ಅವಿಚ್ಛಿನ್ನವಾಗಿ ಹರಿದು ಬಂದದ್ದು. ಹೀಗೆ ಸಾವಿರಾರು ವರ್ಷಗಳ ವರೆಗೆ ಸಾಂಸ್ಕೃತಿಕ ಪರಂಪರೆಯನ್ನು ಜೀವಂತವಾಗಿ ಉಳಿಸಿಕೊಂಡ ಜನತೆಗೆ ಇತಿಹಾಸದ ಕಲ್ಪನೆಯೇ ಇಲ್ಲ ಎಂದು ಹೇಳುವದು ಅಚ್ಚರಿಯ ಮಾತಲ್ಲವೇ?

ಭಾರತೀಯರಲ್ಲಿ ಇತಿಹಾಸ—ಪರಂಪರೆಯಿಲ್ಲ ಎಂದು ಸಾರಿದ ಟೀಕಾಕಾರರ 'ಇತಿಹಾಸ'ದ ಕಲ್ಪನೆಯನ್ನು ಸ್ವಲ್ಪದರಲ್ಲಿಯೇ ನೋಡಬಹುದು. ಅವರ ದೃಷ್ಟಿಯಲ್ಲಿ ಇತಿಹಾಸವೆಂದರೆ, ಭೂತಕಾಲದಲ್ಲಿ ಜರುಗಿದ ಘಟನೆಗಳ ನಿಷ್ಪಕ್ಷಪಾತವಾದ ಕಥನ. ಅದು ಶಕ್ಯವಾದ ಮಟ್ಟಿಗೆ ಸರ್ವಗ್ರಾಹ್ಯವಾದ ಸತ್ಯಸಂಗತಿಗಳನ್ನೇ ಹೇಳಬೇಕು. ಅವುಗಳನ್ನು ನಿರ್ದುಷ್ಟವಾದ ಕಾಲಕ್ರಮದಲ್ಲಿಯೇ ಜೋಡಿಸಬೇಕು. ಘಟನೆಗಳನ್ನು ಅವುಗಳ ಭೌಗೋಲಿಕ ಚೌಕಟ್ಟಿನಲ್ಲಿಯೇ ಚಿತ್ರಿಸಬೇಕು. ಘಟನೆಗಳಲ್ಲಿ ಕಾಣಬಹುದಾದ ಕಾರ್ಯಕಾರಣ ಸಂಬಂಧವನ್ನು ಎತ್ತಿತೋರಿಸಬೇಕು. ಇವೆಲ್ಲವುಗಳನ್ನು, ಒಳಗೊಂಡ ಚರಿತ್ರೆಗೆ ಮಾತ್ರ ಇತಿಹಾಸವೆನ್ನಬಹುದು. ಈ ಮಾತನ್ನೇ ಇನ್ನೂ ನಂಬಿದವರು ಹಲವಾರು ಜನರಿದ್ದಾರೆ. ಈ ಆದರ್ಶವನ್ನು ಎದುರಿಗಿಟ್ಟುಕೊಂಡೇ ಇನ್ನೂ ಇತಿಹಾಸಕಾರರು ತಮ್ಮ ಕಾಯಕವನ್ನು ಮುಂದುವರಿಸಿದ್ದಾರೆ. ಈ ವ್ಯಾಖ್ಯೆಯಿಂದ ಅಳೆದರೆ ನಮ್ಮ ಪ್ರಾಚೀನರು ಬರೆದ ಮಹಾಕಾವ್ಯಗಳು, ಪುರಾಣಗಳು, ಮತ್ತು ಆಖ್ಯಾನಗಳು, ಐತಿಹಾಸಿಕ ಬರೆಹಗಳೆಂದೆನಿಸಿಕೊಳ್ಳಲಾರವು. ಆದರೆ ಈ ವ್ಯಾಖ್ಯೆಯಲ್ಲಿಯೇ : ಈಗ

ಹಲವಾರು ಕೊರತೆಗಳು ಕಂಡುಬಂದಿವೆ. ಇತಿಹಾಸವು ಬಳಸಬೇಕಾದ ಘಟನೆಗಳು ಯಾವ ರೀತಿಯವು ? ಭೂತಕಾಲದ ಎಲ್ಲ ಘಟನೆಗಳನ್ನು ಯಾವ ಇತಿಹಾಸಕಾರನೂ ಬಣ್ಣಿಸಲಾರ. ಪ್ರತಿಯೊಬ್ಬ ಇತಿಹಾಸಕಾರನು ತಾನು ಆಯ್ದ ಘಟನೆಗಳನ್ನೇ ವಿವರಿಸುತ್ತಾನೆ. ಮತ್ತು ಹೀಗೆ ತಾನು ಕೆಲ ಸಂಗತಿಗಳನ್ನು ಆಯ್ದುಕೊಂಡು ಕೆಲವನ್ನು ಬಿಡಬೇಕಾದಾಗ, ಯಾವುದೋ ಒಂದು ವಿಶಿಷ್ಟ ಉದ್ದೇಶಕ್ಕಾಗಿಯೇ ಹೀಗೆ ಅವನು ಮಾಡುತ್ತಾನೆಂಬುದನ್ನು ನಾವು ಮರೆಯುವಂತಿಲ್ಲ. ಅಲ್ಲದೆ ಯಾವ ಘಟನೆಯನ್ನೂ ಸಂಪೂರ್ಣ ಸತ್ಯವೆಂದು ಕರೆಯುವದು ಶಕ್ಯವಿಲ್ಲ. ಅಂದಮೇಲೆ ಇತಿಹಾಸವು ಅದನ್ನು ಬರೆಯುವವರ ಉದ್ದೇಶ-ಸಾಧನೆಗಾಗಿರುವ ಸಾಧನವಾಗುವದು ಅನಿವಾರ್ಯವು. ಆದುದರಿಂದ ಯಾವದೇ ಒಂದು ಬರೆಹವನ್ನೂ ಸತ್ಯವೆಂದೂ ಬೇರೊಂದನ್ನು ಸುಳ್ಳೆಂದೂ ಹೇಳುವದು ಸರಿಯಲ್ಲ. ಅದಕ್ಕಾಗಿಯೇ ಕೊಲಿಂಗವುಡ್‌ರು, ' ಐತಿಹಾಸಿಕ ಘಟನೆಗಳು ಕೇವಲ ಸಂಗತಿಗಳಲ್ಲ. ಅವು ವಿಶಿಷ್ಟವಾದ ಅರ್ಥವನ್ನು ಹೊತ್ತುಕೊಂಡ ವಿಚಾರದ ಪ್ರಕ್ರಿಯೆಗಳು; ಎಲ್ಲ ಇತಿಹಾಸವೂ ವಿಚಾರದ ಇತಿಹಾಸವೇ ಆಗಿದೆ ' ಎಂದು ಹೇಳುತ್ತಾರೆ. ಅರ್ಥಾತ್ ಇತಿಹಾಸವು ಸಂಸ್ಕೃತಿಯ ಚರಿತ್ರೆಯಾಗಿದೆ. ಯುಗಧರ್ಮದ ವಿವೇಚನೆಯಾಗಿದೆ.

ಈ ಬಗೆಯಲ್ಲಿ ವಿಚಾರಿಸಿದಾಗ, ಇತಿಹಾಸಕ್ಕೂ ಒಂದು ಉದ್ದೇಶವಿರಬೇಕೆಂಬ ಮಾತು ಮನದಟ್ಟಾಗುತ್ತದೆ. ಹಾಗಾದರೆ ಈ ಉದ್ದೇಶವು ಯಾವದು? ಎಲ್ಲ ಸಾಮಾಜಿಕ-ಶಾಸ್ತ್ರಗಳಂತೆಯೂ ಇತಿಹಾಸದ ಉದ್ದೇಶವೂ ಮಾನವಕಲ್ಯಾಣ, ಬದುಕಿರುವ ಮಾನವನು ತನ್ನ ಸ್ಥಿತಿ-ಗತಿಗಳನ್ನು ಚೆನ್ನಾಗಿ ಅರಿತುಕೊಂಡು ತನ್ನವರೆಲ್ಲರೊಡನೆ ಸುಖವಾಗಿ ಬಾಳಲು ಕಲಿಸಿಕೊಡುವದೇ ಇತಿಹಾಸದ ಕಾರ್ಯ. ಗತಕಾಲದ ಜೀವನದ ಅಭ್ಯಾಸವು ವರ್ತಮಾನ ಕಾಲದ ಜೀವನವನ್ನು ಸರಿಯಾಗಿ ತಿಳಿದುಕೊಳ್ಳಲು ಸಹಾಯಕವಾಗುವದೆಂಬದನ್ನು ಎಲ್ಲರೂ ಒಪ್ಪಿದ ಮಾತು. ಮನುಷ್ಯನಿಗೆ ತನ್ನ ಪರಿಸರವಾದ ಹಲವಾರು ಸಂಸ್ಥೆ-ಪರಂಪರೆ-ನಂಬಿಕೆಗಳು ಅರ್ಥವಾಗದಿದ್ದಾಗ, ಅಥವಾ ಅವು ತನ್ನ ಆಸೆ-ಆಕಾಂಕ್ಷೆಗಳನ್ನು ತಡೆಹಿಡಿಯುತ್ತವೆಂದೆನಿಸಿದಾಗ, ಅವನು ಗತಜೀವನವನ್ನು ಬಿಚ್ಚಿನೋಡುವ ಯತ್ನಮಾಡುತ್ತಾನೆ. ವರ್ತಮಾನಕಾಲದ ಸಮಸ್ಯೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಇತಿಹಾಸದಲ್ಲಿ ಹುಡುಕುತ್ತಾನೆ. ಈ ರೀತಿಯಲ್ಲಿ ಇತಿಹಾಸವೆಂದರೆ ಭೂತಕಾಲ ಮತ್ತು ವರ್ತಮಾನಕಾಲಗಳ ಸಂಭಾಷಣೆಯಂತಿದೆ. ಇತಿಹಾಸಕಾರನು ತಾನು ಬರೆಯುವಾಗ ತನ್ನ ಮುಂದಿನ ಕಾಲದ ಪೀಳಿಗೆಯ ಪ್ರಶ್ನೆಗಳನ್ನು ಎದುರಿಗಿಟ್ಟುಕೊಳ್ಳುವದು ಅನಿವಾರ್ಯವಾಗುತ್ತದೆ. ಅದಕ್ಕಾಗಿಯೇ ಜೀವನದ ಮೂಲಭೂತ ಗುರಿಗಳನ್ನು ನಿರ್ದಿಷ್ಟವಾಗಿ ನಿರ್ಧರಿಸಿ ಅವುಗಳನ್ನು ಅನುಲಕ್ಷಿಸಿಕೊಂಡು ಘಟನೆಗಳ ಹಾಗೂ ಅವುಗಳಲ್ಲಿ ಹುದುಗಿದ ವಿಚಾರಗಳ ವಿವೇಚನೆಯೇ ಸರಿಯಾದ ಇತಿಹಾಸವೆನಿಸಿಕೊಂಡೀತು. ಅಂತಹ ಇತಿಹಾಸವೇ ತನ್ನ ಶೈಕ್ಷಣಿಕ ಉದ್ದೇಶವನ್ನು ತೃಪ್ತಿಕರವಾಗಿ ಸಾಧಿಸಿಕೊಳ್ಳಬಲ್ಲದು.

ಈ ಉದ್ದೇಶದ ಸಾಧನೆಯ ದಾರಿಯಲ್ಲಿ ಕಾಲಕ್ರಮ ಮತ್ತು ಭೌಗೋಲಿಕ ನಿರ್ದೇಶನ ಸಹಾಯಕವಾಗಬಹುದಾದರೂ ಅವು ಗೌಣವೆಂದೇ ಹೇಳಬೇಕು. ಜೀವನದ ಮೌಲ್ಯಗಳನ್ನು ಮಾನವನ ಕರ್ತವ್ಯಗಳನ್ನು ಅಥವಾ ಅವನ ಮಾನಸಿಕ, ನೈತಿಕಮಟ್ಟವನ್ನು ಲಕ್ಷ್ಯದಲ್ಲಿಟ್ಟಾಗ, ದೇಶ-ಕಾಲಗಳು ಅನಿವಾರ್ಯವಾಗಬೇಕಿಲ್ಲ. ಒಂದು ಉದಾಹರಣೆಯನ್ನು ಹೇಳಬಹುದು. ಸಂಯುಕ್ತರಾಷ್ಟ್ರಸಂಘದ ಹಿಂದಿನ ಮುಖ್ಯ ಕಾರ್ಯದರ್ಶಿಗಳಾದ ಡಾಗ್ ಹ್ಯಾಮರಶೀಲ್ಡರು ತಾವು ತಮ್ಮ ಅಧಿಕಾರವನ್ನು ವಹಿಸುವಾಗ ಗೀತೆಯಲ್ಲಿಯ 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬ ವಾಕ್ಯವನ್ನು ಉದ್ಧರಿಸಿ, ತಾವು ಕೇವಲ ಅನಾಸಕ್ತ—ಕರ್ತವ್ಯಬುದ್ಧಿಯಿಂದಲೇ ಕಾರ್ಯಪ್ರವೃತ್ತರಾಗುವದಾಗಿ ಸಾರಿದರು. ಈ ಮಾತಿನಲ್ಲಿರುವ ಐತಿಹಾಸಿಕತೆಯನ್ನು ನಾವು ಲಕ್ಷಿಸಬೇಕು. ಅನಾಸಕ್ತಿಯೋಗವು ಭಾರತದಲ್ಲಿ, ಒಂದು ವಿಶಿಷ್ಟ ಸಂದರ್ಭದಲ್ಲಿ ಸಾರಲ್ಪಟ್ಟಿತ್ತು ಎಂಬ ದೇಶ ಕಾಲ ಮರ್ಯಾದೆಯನ್ನು ನಾವು ನೆನಪಿನಲ್ಲಿಟ್ಟರೆ, ಅದು ನಮ್ಮ ಅಭಿಮಾನಕ್ಕೆ ಯೋಗ್ಯ. ಆ ದೇಶ-ಕಾಲಗಳನ್ನು ಮರೆತರೂ ಆ ದಿವ್ಯತತ್ತ್ವದ ಬೆಲೆಯಾಗಲಿ ಅದರ ಪ್ರಭಾವವಾಗಲಿ ಕಡಿಮೆಯಾಗಬೇಕಿಲ್ಲ. ಆಗಲಾರದು. ಆದುದರಿಂದ ಇತಿಹಾಸವು ಕೇವಲ ಘಟನೆಗಳನ್ನೇ ಅವಲಂಬಿಸದೆ ಅವುಗಳಿಗೆ ಹಿನ್ನೆಲೆಯಾಗಿರುವ ವಿಚಾರಧಾರೆಯನ್ನು ವಿವೇಚಿಸಬೇಕು. ಈ ವಿವೇಚನೆಯ ಉದ್ದೇಶವು ಮಾನವನ ಕಲ್ಯಾಣದ ಸಾಧನೆಗೆ ಸಹಾಯಕವಾಗಬಹುದಾದ ಶಿಕ್ಷಣವನ್ನು ನೀಡುವದು. ಮಾನವನ ಗುರಿಗಳನ್ನು ಅವನೆದುರಿಗೆ ಸ್ಪಷ್ಟವಾಗಿಟ್ಟು, ಅವುಗಳ ಸಾಧನೆಗಾಗಿ ಪುರಾತನಕಾಲದಿಂದ ಸಾಗಿಬಂದ ಹೋರಾಟಗಳನ್ನು ಚಿತ್ರಿಸುವದೇ ಇತಿಹಾಸದ ಕಾರ್ಯವು.

ಪ್ರಾಚೀನ ಭಾರತೀಯರು ' ಇತಿಹಾಸ ' ಪದವನ್ನೂ ಇದೇ ಅರ್ಥದಲ್ಲಿ ಬಳಸುತ್ತಿದ್ದರು. ಅದರ ಶಬ್ದಾರ್ಥವು ' ಹೀಗೆ ನಡೆದುಬಂದದ್ದು ' ಎಂಬುದಾಗಿದೆ. ಕೇವಲ ಭೂತಕಾಲದಲ್ಲಿ ನಡೆದು ಹೋದ ಸಂಗತಿಗಳನ್ನು ವರದಿ ಮಾಡುವದು ಇತಿಹಾಸವಲ್ಲ. ಹೀಗೆ ನಡೆದುಬಂದ, ಇನ್ನು ನಡೆಯುತ್ತಿದ್ದ ಜೀವಂತಪರಂಪರೆಯನ್ನು ನೆನಪಿಗೆ ತಂದುಕೊಡುವದೇ ಇತಿಹಾಸವು. ಅದರ ವ್ಯಾಖ್ಯೆಯನ್ನು ಪ್ರಾಚೀನರು ಹೀಗೆ ಹೇಳಿದ್ದಾರೆ—

> ಧರ್ಮಾರ್ಥಕಾಮಮೋಕ್ಷಾಣಾಂ ಉಪದೇಶ-
> ಸಮನ್ವಿತಂ।
> ಪೂರ್ವವೃತ್ತಂ ಕಥಾಯುಕ್ತಂ ಇತಿಹಾಸಮ್
> ಪ್ರಚಕ್ಷ್ಯತೇ ।

ಧರ್ಮ, ಅರ್ಥ, ಕಾಮ, ಮೋಕ್ಷಗಳು ಪುರುಷಾರ್ಥ. ಅವನ್ನು ಪಡೆಯಲು ಸರಿಯಾದ ದಾರಿ ಇತಿಹಾಸದ ಕೆಲಸ, ಇಲ್ಲಿ ಮೋಕ್ಷವು ಕೇವಲ ಪಾರಮಾರ್ಥಿಕ ಮೋಕ್ಷವಲ್ಲ, ಜೀವನದಲ್ಲಿ ಪಡೆಯಬಹುದಾದ ಜೀವನ್ಮುಕ್ತಿ ಎಂಬುದನ್ನು, ಲಕ್ಷ್ಯದಲ್ಲಿಡಬೇಕು. ' ತಾನು, ತನ್ನದು ' ಎಂಬ ಭಾವನೆಯನ್ನು ಕಳಚಿ, ಮಾನವನು ತನ್ನವರೊಡನೆ ಸುಖದುಃಖಗಳಲ್ಲಿ ಒಂದಾಗುವದೇ ಮೋಕ್ಷ, ಈ ರೀತಿಯ ' ಒಂದು ಬಾಳ ' ನ್ನು ಸಮರ್ಥಿಸುವ, ಅದನ್ನು ತಿಳಿಸಿಹೇಳುವ, ಅದರಲ್ಲಿ ಮನಸ್ಸನ್ನು ತೊಡಗಿಸಬಲ್ಲ ಕತೆಗೇ ಇತಿಹಾಸವೆನ್ನಬಹುದು. ಅದು ಕಾಲ್ಪನಿಕವಿದ್ದರೆ ಹಾನಿಯೇನಲ್ಲ. ಅದರಿಂದ ಮಾನವನು ಪಾಠಕಲಿಯಬೇಕಾಗಿದೆಯಲ್ಲದೆ, ಅದು ಅವನಿಗೆ ಒಂದು ಬೌದ್ಧಿಕ ಭಾರವಾಗಬಾರದು. ಈ ಹೊಸದೆನಿಸಬಹುದಾದ ದೃಷ್ಟಿಯಿಂದ ನೋಡಿದರೆ, ನಮ್ಮ ಮಹಾಕಾವ್ಯಗಳು ಪುರಾಣಗಳು, ಆಖ್ಯಾನಗಳು ಎಲ್ಲವೂ ಉಚ್ಚತಂಗತಿಯ ಇತಿಹಾಸವೆನಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ.

ಪ್ರಾಚೀನಕಾಲದ ಪುರಾಣಗಳು, ಮಹಾಕಾವ್ಯಗಳು ಮತ್ತು ಆಖ್ಯಾನಗಳು ನಾಡಿನ ಎಲ್ಲರ ಸೊತ್ತಾದವು. ಅವುಗಳನ್ನೇ ಮತ್ತೆ ಮತ್ತೆ ನೂರು ತೆರನಾಗಿ ಬೇರೆ ಬೇರೆ ಭಾಷೆಗಳಲ್ಲಿ ಬರೆದರು. ಬಯಲಾಟ-ನಾಟಕಗಳನ್ನಾಡಿದರು. ಚಿತ್ರಬರೆದರು—ಮೂರ್ತಿಕಟೆದರು. ಗುಡಿ ಕಟ್ಟಿದರು. ಕಾವ್ಯಗಳನ್ನು ಹಾಡಿಕೊಂಡು ಸಮಾಜಧರ್ಮವನ್ನು ಕಲಿತರು. ಸಮಾಜದಲ್ಲಿ ನೆಮ್ಮದಿ ನೆಲೆಯಾಗಿ ನಿಂತಿತು. ತಾಳ್ಮೆ, ಹೃದಯವೈಶಾಲ್ಯ ಬೆಳೆದು ಬಂದವು. ಬಾಳು ಸುಖವಾಯಿತು.

ಈ ಸಂದರ್ಭದಲ್ಲಿ ಒಂದು ಎಚ್ಚರಿಕೆಯ ಮಾತನ್ನು ನೆನೆಯುವದು ಅವಶ್ಯವಾದದ್ದು. ಯಾವುದೋಒಂದು ಉದ್ದೇಶದ ಪ್ರಚಾರಕ್ಕೆ ಬರೆದ ಕಟ್ಟು-ಕತೆಗಳೆಲ್ಲ ಇತಿಹಾಸವಾಗಲಾರವು. ಈ ರೀತಿ ತಮ್ಮ ಉದ್ದೇಶಸಾಧನೆಗಾಗಿ ಕೆಲ ಇತಿಹಾಸಕಾರರು ತಮಗೆ ಅನುಕೂಲ ಕಂಡಂತೆ ಘಟನೆಗಳನ್ನು ತಿರುಗಿಸಿಕೊಳ್ಳುವ ಉದಾಹರಣೆಗಳೂ ಉಂಟು. ಆದುದರಿಂದಲೇ ಇತಿಹಾಸಕ್ಕೆ ಒಂದು ನೈತಿಕ ಉದ್ದೇಶದ ಕಟ್ಟಿದೆ ಎಂಬದನ್ನು ಒತ್ತಿ ಹೇಳಬೇಕಾಗಿದೆ. ಮಾನವನು ಬದುಕಬೇಕು, ಬೆಳೆಯಬೇಕು, ಅವನು ವಿಶ್ವಕುಟುಂಬಿಯಾಗಬೇಕು, ವಿಶ್ವಾತ್ಮನಾಗಬೇಕು ಎಂಬುದು ನಮ್ಮ ಪ್ರಾಚೀನರ ಹಂಬಲವಿತ್ತು, ಈಗಲೂ ನಾವೆಲ್ಲ ಬಯಸುವದೂ ಒಂದು-ಬಾಳನ್ನೇ, ಅದಕ್ಕೆ ಸಮನ್ವಯವಾಗಿ ಬರೆದ ಇತಿಹಾಸವೂ ಅಸತ್ಯವಾದದ್ದಾಗಲಿ ಅಶಾಸ್ತ್ರೀಯವೆಂದಾಗಲಿ ಹೇಳಲಿಕ್ಕಾಗದು.

ಲೇಖಕರು :
**ಶ್ರೀ. ವಿ. ಎನ್. ಕುಲಕರ್ಣಿ ಪಂಡಿತ,**
**ಗೋಕಾಕ.**



"ಸಾಯೋದ್ರಾಗೊಮ್ಮೆ ನೋಡಬೇಕು ಜೋಗದಗುಂಡಿ" ಎಂದು ನಮ್ಮ ಕವಿವರ್ಯರು ಜೋಗ ಜಲಪಾತದ ಹಿರಿಮೆಯನ್ನು ದರ್ಶನೀಯತೆಯನ್ನು ಬಣ್ಣಿಸಿರುವರು. ಅದೇ ರೀತಿ ಸ್ವೀಡನ್ನದ ಅಬಿಸ್ಕೋದಲ್ಲಿಯ ಮಧ್ಯರಾತ್ರಿಯ ಸೂರ್ಯನ ದಿವ್ಯದರ್ಶನವು ರಮಣೀಯವಾಗಿದೆ. ಸೃಷ್ಟಿ ಸೌಂದರ್ಯದ ಈ ಅದ್ಭುತ ದೃಶ್ಯ ಕಂಡ ಮಾನವಜೀವನವೇ ಧನ್ಯ ಎಂದು ಅಲ್ಲಿನ ಪ್ರವಾಸಿಕರು ಉದ್ಗರಿಸುತ್ತಿದ್ದರು. ಆ ಮಧ್ಯರಾತ್ರಿಯ ಸೂರ್ಯನು ಮಮತೆಯ ಮಿತ್ರನಂತೆ ಸ್ನೇಹಮಯಿ. ಆತನ ಮಧುರ-ಪ್ರಸನ್ನದರ್ಶನದಿಂದ ಹಿತವಾಗುತ್ತಿತ್ತು. ಅಲ್ಲಿ ಕಾವ್ಯ ಬರೆದಿತ್ತು. ಪ್ರೀತಿ ಪ್ರೇಮ ಮೂಡುತ್ತಲಿದ್ದಿತು. ಜೀವನ ಬೆಳಗುತ್ತಿದ್ದಿತು. ಈ ಅಮೋಘವಾದ ಅನುಭವವನ್ನು ಲೇಖಕರು ಇಲ್ಲಿ ಮನೋಜ್ಞವಾಗಿ ಚಿತ್ರಿಸಿರುವರು.

# ನಾನು  ಮಧ್ಯರಾತ್ರಿಯ ಸೂರ್ಯನನ್ನು ಕಂಡೆ!

**ಕಿ**ರೂನಾ ನಿಲ್ದಾಣದಲ್ಲಿ ಬಂಡಿ ಬರಿದಾಯಿತು. ಇದು ಉತ್ತರ ಧ್ರುವಪ್ರದೇಶದಲ್ಲಿಯ ಸ್ವೀಡನ್ನಿನ ತೀರ ದೊಡ್ಡ ಪಟ್ಟಣ. ಇಲ್ಲಿಯ ವರೆಗೆ ಮೋಟಾರುವಾಹನಗಳ ಓಡಾಟಕ್ಕೆ ರಾಜಮಾರ್ಗವಿದೆ. ಕಿರೂನಾ ( Kiruna ) ದಲ್ಲಿ ವಿಮಾನನಿಲ್ದಾಣ ಕೂಡ ಇದೆ. ಮಧ್ಯರಾತ್ರಿಯ ಸೂರ್ಯನನ್ನು ಕಾಣಲು ಕಿರೂನಾಕ್ಕೆ ಬರುತಿರುವರು ಜಗತ್ತಿನ ಮೂಲೆ ಮೂಲೆಗಳ ಪ್ರವಾಸಿಕರು.

ಆದರೆ ಇನ್ನೂ ಮೂರು ನಾಲ್ಕು ತಾಸಿನ ಮಾರ್ಗಕ್ರಮಿಸಿ ಉತ್ತರ ಧ್ರುವದ ತುಟ್ಟತುದಿಯಲ್ಲಿದ್ದ ಆಬಿಸ್ಕೊಕ್ಕೆ ( Abisko) ನಾನು ಹೋಗಬೇಕಿತ್ತು. ಮಧ್ಯರಾತ್ರಿಯ ಸೂರ್ಯ ದರ್ಶನಕ್ಕೆ ಜಗತ್ತಿನಲ್ಲಿ ಸರ್ವಶ್ರೇಷ್ಠ ಸುಂದರ ಸ್ಥಾನ ಎಂದು ಆಬಿಸ್ಕೊ ಖ್ಯಾತಿ ಪಡೆದಿದೆ.

ಕಿರೂನಾ ಬಿಟ್ಟನಂತರ ಅರ್ಧ ತಾಸಿಗೆ ನಮ್ಮ ಬಂಡಿ ಒಮ್ಮೆಲೇ ನಿಂತಿತು. ನಾನು ಕಿಟಕಿಯ ಹೊರಕ್ಕೆ ಹಣಿಕಿಕ್ಕಿದೆ. ರೇನಡಿಯರುಗಳ (ಉತ್ತರ ಧ್ರುವದಲ್ಲಿಯ ಜಿಂಕೆಗಳು) ದೊಡ್ಡ ಗುಂಪೊಂದು ರೈಲು ಹಳಿಗಳನ್ನು ದಾಟುತ್ತಲಿದ್ದಿತು. ಈ ಪ್ರಾಣಿಗಳನ್ನು ನಾನು ಇದೇ ಮೊದಲುಸಲ ನೋಡಿದ್ದು.

ನನ್ನ ಕಂಪಾರ್ಟಮೆಂಟಿನಲ್ಲಿ ಪ್ರವೇಶಿಸಿದ ಕಾಡಕ್ಟರ ಹೇಳಿದ. "ಇನ್ನೂ ಆಬಿಸ್ಕೊ

ಟೋರ್ನಟ್ರಿಸ್ಕ ಸರೋವರದ ಮೇಲಿನ ಮಧ್ಯರಾತ್ರಿಯ ಸೂರ್ಯನೋಟ.



ವರೆಗೆ ಎನಿಲ್ಲೆಂದರೂ ಬಂಡಿ ಎರಡುಮೂರು ಸಲ ನಿಲ್ಲುವದು ನೋಡಿ. ನಿಮ್ಮ ದೇಶದಲ್ಲಿ ದನಕರುಗಳು ಬೀದಿಯನ್ನು ಅಡ್ಡಗಟ್ಟುವಂತೆ ಈ ಲ್ಯಾಪಲ್ಯಾಂಡಿನಲ್ಲಿ ರೇನಡಿಯರ. ಆದರೆ ನಾವು ರೇನಡಿಯರಗಳಿಗೆ ಪ್ರಾಧಾನ್ಯವಿತ್ತು ಅವಕ್ಕೆ ಮೊದಲು ದಾಟಲು ದಾರಿಬಿಡುತ್ತೇವೆ."

"ನಾವು ಆಬಿಸ್ಕೊ ಎಷ್ಟು ಗಂಟೆಗೆ ಮುಟ್ಟಬಹುದು?"

"ಈಗ ಹದಿನಾಲ್ಕುವರೆ, ಹದಿನಾರುವರೆ ಹೊತ್ತಿಗೆ ಸೇರಬಹುದು. ನಾವು ಕಿರೂನಾ ಬಿಟ್ಟನಂತರ ನಮ್ಮ ಟಾಯಿಮುಟೇಬಲನ್ನು ಈ ರೇನಡಿಯರೇ ನಿರ್ಧರಿಸುವುದು. ಅನೇಕ ಗುಂಪುಗಳು ಬಂದರೆ ಹೆಚ್ಚುಕಾಲ ಹಿಡಿಯುವುದು "

ಮುಂದೆ ನಮ್ಮ ಬಂಡಿ ಒಂದೇ ಸಲ ನಿಂತಿತು. ಸ್ಟಾಕಹೋಮುದಿಂದ ಇಪ್ಪತ್ತೈದು ತಾಸುಗಳ ಸಂಸ್ಮರಣೀಯ ಮಾರ್ಗಕ್ರಮಣವನ್ನು ಮುಕ್ತಾಯಗೊಳಿಸಿ ನಾನು ಆಬಿಸ್ಕೊ ಸೇರಿದೆ. ಮತ್ತೆ ಐದಾರು ಪ್ರವಾಸಿಗಳು ಅಲ್ಲಿಳಿದರು. ಆಬಿಸ್ಕೊ ಒಂದು ನಗರವಲ್ಲ. ಅರಣ್ಯಪ್ರದೇಶದಲ್ಲಿದ್ದ ಸ್ವೀಡಿಶ್ ಟೂರಿಂಗ ಕ್ಲಬ್ಬು ತೆರೆದಿದ್ದ ಒಂದೇ ಒಂದು ಹಾಟೇಲ ಅಲ್ಲಿ ಇದೆ.

"ಇಲ್ಲಿ ಸ್ಥಳ ತೆರವಿಲ್ಲ. ಏನು ಮಾಡಲಿ ನನಗೆ ತುಂಬಾ ಕೆಡಕೆನಿಸುತ್ತದೆ. ಅಮೇರಿಕೆಯಂಥ ದೂರಿನ ದೇಶಗಳಿಂದ ಇಲ್ಲಿ ಆರಾರು ತಿಂಗಳು ಮುಂಚಿತವಾಗಿ ಸ್ಥಳ ರಿಝರ್ವ ಮಾಡಿರುತ್ತಾರೆ. ಆದರೆ ರಿಕ್ಸಗ್ರೆಂಝನ ( Riksgraensen ) ದಲ್ಲಿ ಒಂದು ಸ್ಥಳ ತೆರವಿದೆ. ಇಪ್ಪತ್ತು ಗಂಟೆಗೆ ಮತ್ತೊಂದು ಬಂಡಿಯಿದೆ. ಒಂದು ಒಂದೂವರೆ ತಾಸಿನಲ್ಲಿ ನೀವು ಅಲ್ಲಿ ಸೇರಬಹುದು. ಅಲ್ಲಿಯೂ ಮಧ್ಯರಾತ್ರಿಯ ಸೂರ್ಯನಿದಾನಲ್ಲವೇ..." ವ್ಯವಸ್ಥಾಪಿಕೆಯು ಹೇಳಿದಳು.

"ಸ್ಟಾಕಹೋಮುದಲ್ಲಿಯ ಇವರ ಮಿತ್ರರಿಂದ ಫೋನ ಕರೆಬಂದಿದ್ದಿತಲ್ಲವೇ? ಉಪ್ಸಾಲಾ ( Uppsala ) ನಿಲ್ದಾಣದಲ್ಲಿಯೇ ನಾನು ಈ ವಿಷಯ ತಿಳಿಸಿದೇನೆ. ದೊರೆತಿದೆಯಲ್ಲವೇ ನಿಮಗೆ" ಕೌಂಟರದ ಹಿಂಬದಿಯಲ್ಲಿ ಚಿತ್ರಕಾರ್ಡು, ಹೊತ್ತಿಗೆ, ಭೇಟಿಯ ವಸ್ತು ಇತ್ಯಾದಿ ಮಾರಲು ಕುಳಿತ ಓರ್ವ ಸುಂದರ ಸ್ವೀಡಿಶ್ ತರುಣಿ ಕೇಳಿದಳು.

"ಮುಟ್ಟಿದೆ ನಿಮ್ಮ ಸಂದೇಶ. ಆದರೆ... ಆದರೆ ಆಬಿಸ್ಕೊದಲ್ಲಿಯ ಸೂರ್ಯದರ್ಶನವು ಅಪ್ರತಿಮವೆಂದು ಬಹಳಷ್ಟು ಕೇಳಿದೇನೆ ನಾನು.... ಆ ಮೋಹಕ್ಕೆ ಬಲಿಬಿದ್ದು ಬಂದಿದೇನೆ. ನಿಮಗಿಷ್ಟು ತೊಂದರೆ ಕೊಟ್ಟಿದುದಕ್ಕೆ ಕ್ಷಮಿಸಿ. ರಿಕ್ಸಗ್ರೆಂಝನಕ್ಕೇ ನಾನು ತೆರಳುವೆ!"

"ಹಾಗೇನು ಭಾವಿಸಬೇಡಿ. ಆ ಕಡೆಯಲ್ಲಿ ರೆಸ್ಟೊರಾ ಇದೆ. ಒಂದಿಷ್ಟು ತಿಂಡಿ ಸೇವಿಸಿ ವಿಶ್ರಮಿಸಿಕೊಳ್ಳಿ. ಹತ್ತೊಂಬತ್ತು ಗಂಟೆಗೆ ಭೋಜನ ಸಿದ್ಧವಾಗುತ್ತೆ. ಭೋಜನ ತೀರಿಸಿಕೊಂಡು ಇಪ್ಪತ್ತರ ಗಾಡಿ ಹಿಡಿಯಬಹುದು." ಆಮೇಲೆ ವ್ಯವಸ್ಥಾಪಿಕೆಯು ಆ ಸ್ವೀಡಿಶ್ ತರುಣಿಯ ಕಡೆಗೆ ತಿರುಗಿ, "ಇವರಿಗೆ ಎಲ್ಲ ವಿವರಗಳನ್ನು ತಿಳಿಸು!" ಎಂದಳು

ಆ ತರುಣಿಯು ತೋರಿಸಿದ ಕುರ್ಚಿಯ ಮೇಲೆ ನಾನು ಕುಳಿತೆ. ಆಕೆ ಒಂದು ಭಾರೀ ಹೊತ್ತಿಗೆಯನ್ನು ನನ್ನ ಮುಂದಿಟ್ಟು ಹೇಳಿದಳು, "ಈ ಹೊತ್ತಿಗೆಯಲ್ಲಿ ನಿಮ್ಮ ಹೆಸರು ವಾಸಸ್ಥಳ ಇತ್ಯಾದಿ ಬರೆಯಿರಿ. ನಿಮ್ಮಂತೆ ಇಷ್ಟು ದೂರಿನಿಂದ— ವಿಶೇಷತಃ ಇಂಡಿಯಾದಿಂದ ಇಲ್ಲಿ ಬರುವ ಅತಿಥಿಗಳು ತೀರ ವಿರಳ!"

ನನ್ನ ಹೆಸರು, ಗ್ರಾಮ, ನಾಗರಿಕತೆ, ಉದ್ಯೋಗ ಇತ್ಯಾದಿ ಎಲ್ಲ ವಿವರಗಳನ್ನು ನಾನು ಬರೆಯುವ ಸಮಯದಲ್ಲಿ ೧೬-೧೭ ವರ್ಷದ ಇಬ್ಬರು ಸುಂದರ ತರುಣಿಯರು ಅಲ್ಲಿ ಬಂದು ಕೌಂಟರದ ಹತ್ತಿರ ನಿಂತರು. ಮರುದಿನ ಪ್ರಾತಃಕಾಲ ಯಾವುದೋ ಸರೋವರಪರ್ಯಟನದ ಬಗೆಗೆ ಕೇಳುತ್ತಿದ್ದರು. ನಾನು ಕೊಂಚ ದಿಟ್ಟಿಸಿ ನೋಡಿದೆ, ಅವರ ಕಡೆಗೆ. ಬೇಸಿಗೆಯಲ್ಲಿ ಒಪ್ಪುವಂಥ ಸಡಿಲಾದ ಬಣ್ಣಬಣ್ಣದ ಲಂಗ ಧರಿಸಿದ್ದರವರು. ವಕ್ಷಸ್ಥಳ ವರೆಗೆ ಬರಿದಾದ ಕೊರಳು, ವಸ್ತ್ರಾಚ್ಛಾದನವಿಲ್ಲದ ಕರಗಳು, ಮೊಣಕಾಲಿನ ವರೆಗೆ ವಿವಸ್ತ್ರವಾದ ಉದ್ದನ್ನ ಕಾಲುಗಳು. ತಾರುಣ್ಯದಲ್ಲಿ ಕಾಲಿಕ್ಕುತ್ತಿದ್ದ ಆ ರಮಣಿಯರು ನಿಃಸಂಶಯವಾಗಿ ರೂಪವತಿಯರಿದ್ದರು.

ನಾನು ತಿಂಡಿ-ತಿನಸು ಚಹಗಳನ್ನು ಸೇವಿಸಿದ ನಂತರ ಮೇಲಂತಸ್ತಿನ ಮೇಲಿದ್ದ "ಪುಷ್ಪಮಹಲಿ"ಗೆ ತೆರಳಿದೆ. ಮಧ್ಯರಾತ್ರಿಯಲ್ಲಿಯ ಸೂರ್ಯನ ದರ್ಶನ ಪಡೆಯಲು ಎಲ್ಲ ಟೂರಿಸ್ಟರು ಈ ದಿವಾಣಖಾನೆಯಲ್ಲೇ ಸೇರುವರು. ಆ ದಿವಾಣಖಾನೆಗೆ ಗಾಜಿನ ಗೋಡೆಗಳೇ ಇರುವವೆನ್ನಿ.

ಹೊರನೋಟವನ್ನು ನೋಡಿ ನಾನು ದಿಙ್ಮೂಢನಾದೆ.

ಎದುರಿನಲ್ಲಿ ಎಂಥವೋ ತೀರ ಎತ್ತರವಿಲ್ಲದ ವೃಕ್ಷಗಳ ಸಮೂಹ, ಅವುಗಳ ಹಿಂಬದಿಯಲ್ಲಿ ಪರ್ವತಶ್ರೇಣಿಯಲ್ಲಿ ಆ ವಿಸ್ತೀರ್ಣವಾದ ಟೋರ್ನಟ್ರೆಸ್ಕ ( Tornetraesk ) ಸರೋವರ, ಅದರ ಹಿನ್ನೆಲೆಯಾಗಿ ಬೆಟ್ಟಗಳ ಒಂದು ಸಾಲು. ಅವುಗಳ ಮೇಲೆ ಥಳಥಳಿಸುವ ಹಿಮಾಚ್ಛಾದನವು ನಿಚ್ಚಳವಾಗಿ ಕಾಣುತ್ತಿತು.

"ಆಬಿಸ್ಕೊ ವಿಷಯವಾಗಿದ್ದ ಈ ಸೂಚಿಪತ್ರಿಕೆಯು ನಿಮ್ಮ ಹತ್ತರಿರಲಿ, ಮಿ. ಪಂಡಿತ!" ಆ ತರುಣಿಯು ನನ್ನ ಕೈಯಲ್ಲಿ ಒಂದು ಭಾರವಾದ ಲಕ್ಕೋಟೆಯನ್ನಿತ್ತಳು.

"ಈ ಹೋಟೆಲ್‌ಗಾಗಿ ಇಂತಹ ರಮ್ಯಸ್ಥಾನ ಶೋಧಿಸಿದ ಮಹಾನುಭಾವ ನಿಜವಾಗಿ ಅಸಾಮಾನ್ಯ ರಸಿಕನಾಗಿರಲೇಬೇಕು!" ನಾನು ಆಕೆಗೆಂದೆ.

"ಅದರಲ್ಲೇನೂ ಸಂದೇಹವಿಲ್ಲ. ನಮಗೂ ಹಾಗೇ ಅನಿಸಿದೆ. ಮಾನವನಾಗಿ ಹುಟ್ಟಿದ ಮೇಲೆ ಒಂದು ಸಲವಾದರೂ ಆಬಿಸ್ಕೊದಲ್ಲಿ ಮಧ್ಯರಾತ್ರಿಯ ಸೂರ್ಯನನ್ನು ನೋಡಬೇಕು!" ಎನ್ನುತ್ತ ಆಕೆ ಆತ್ಮೀಯಭಾವದಿಂದ ನಕ್ಕು ಕೆಳಕ್ಕಿಳಿದು ಹೋದಳು.

ಕುರ್ಚಿಯಲ್ಲಿ ಕುಳಿತು ಆ ಲಕ್ಕೋಟೆಯಲ್ಲಿಯ ಒಂದು ವರ್ಣಮಯ ಪತ್ರಿಕೆಯನ್ನು ಹೊರಕ್ಕೆ ತೆಗೆದೆ. ಒಂದು ಗಜ ಅಗಲ ಹಾಗೂ ನಾಲ್ಕು ಗಜ ಉದ್ದನ್ನ ಒಂದು ಉದ್ದಾದ ತುಣುಕಿದ್ದಿತದು. ಜೂನ ತಿಂಗಳ ದಿ. ೨೬ರಂದು ಪ್ರಾತಃಕಾಲ ಎಂಟು ಗಂಟೆಯಿಂದ ಮರುದಿನ ಮುಂಜಾವಿನ ಎಂಟು ಗಂಟೆಯ ವರೆಗೆ ತಾಸು ತಾಸಿಗೆ ಆಬಿಸ್ಕೊದಲ್ಲಿ ತೆಗೆದುಕೊಂಡ ಸೂರ್ಯನ ನಿಸರ್ಗರಂಗದಲ್ಲಿಯ ಇಪ್ಪತ್ತುನಾಲ್ಕು ಅತಿ ರಮ್ಯ ಫೋಟೋಗಳಿದ್ದವು ಅದರಲ್ಲಿ.

ಈ ಸ್ಥಾನ ಪೃಥ್ವಿಯ ಮೇಲ್ತುದಿಯಲ್ಲಿದೆ. ಇಲ್ಲಿ ವಸಂತಋತುವಿನಲ್ಲಿಯ ಸೂರ್ಯ ಪೃಥ್ವಿಯ ನಡುಕಟ್ಟಿನಲ್ಲಿ ಪ್ರದಕ್ಷಿಣೆ ಹಾಕುತ್ತಾನೆ. ಭಾರತದಲ್ಲಿಯಂತೆ ಆತ ಪೂರ್ವಕ್ಕೆ ಉದಯಿಸಿ, ಮಧ್ಯಾಹ್ನ ನೆತ್ತಿಯ ಮೇಲೆ ಬಂದು, ಸಾಯಂಕಾಲ ಪಶ್ಚಿಮದಲ್ಲಿ ಅಸ್ತನಾಗುವುದಿಲ್ಲ ಇಲ್ಲಿ. ಆದರೆ ಒಮ್ಮೊಮ್ಮೆ ನಮ್ಮ ಹಿಂದೆ, ಒಮ್ಮೊಮ್ಮೆ ಎಡಬದಿಯಲ್ಲಿ, ಒಮ್ಮೊಮ್ಮೆ ಎದುರಿನಲ್ಲಿ, ಆ ಮೇಲೆ ಬಲಭಾಗದಲ್ಲಿ ಹೀಗೆ ಆತ ನಮ್ಮ ಸುತ್ತಲೂ ವರ್ತುಳಾಕಾರದಲ್ಲಿ ಸುತ್ತುತ್ತಾನೆ. ಆದುದರಿಂದಲೇ ಇಲ್ಲಿ ಜೂನ ಜುಲಾಯಿ ತಿಂಗಳಲ್ಲಿ ರಾತ್ರಿಯಾ

ಗುವುದಿಲ್ಲ! ಆದರೆ ಆತನ ಉಗ್ರತೆ ಮಾತ್ರ ಭಾರತದಲ್ಲಿಯಂತೆ ಇಲ್ಲಿ ಪ್ರಖರವಾಗಿರುವುದಿಲ್ಲ. ಆದುದರಿಂದಲೇ ಇಲ್ಲಿ ಆತನ ಫೋಟೋ ತೆಗೆದುಕೊಳ್ಳಲು ಸಾಧ್ಯ.

ಇಪ್ಪತ್ತುನಾಲ್ಕನೇ ಗಂಟೆಗೆ ಈ ಪುಷ್ಪ-ಮಹಲಿನಲ್ಲಿ ಕಂಡುಬರುವ ಸೂರ್ಯದರ್ಶನ ಆ ಚಿತ್ರದಲ್ಲಿ ಇದ್ದಿತು. ಆ ಚಿತ್ರ ನೋಡಿ ಹುಚ್ಚನಾದೆ ನಾನು. ಆ ಪತ್ರಿಕೆಯ ಆಧಾರದ ಮೇಲೆ ಎದುರಿನಲ್ಲಿಯ ಸರೋವರದತ್ತ ನೋಡುತ್ತ ಆ ಸುಂದರ ಸೂರ್ಯದರ್ಶನದ ರಮ್ಯಚಿತ್ರವನ್ನು ನನ್ನ ಮನಶ್ಚಕ್ಷುವಿನ ಮುಂದೆ ನಿಲ್ಲಿಸಿದೆ. ಮೋಹಿನೀಮಂತ್ರದಿಂದ ಮುಗ್ಧನಾದ ಮನುಷ್ಯನಂತೆ ನಾನು ಒಂದೇ ಸವನೆ ಎದುರಿನಲ್ಲಿ ನೋಡುತ್ತಲಿದ್ದೆ. ನಾನೊಂದು ನಿಟ್ಟುಸಿರು ಬಿಟ್ಟೆ. ಮುಂಗೈಗಿದ್ದ ಮಾಣಿಕವನ್ನು ಬಿಟ್ಟು ಬೇರೆಡೆಗೆ ತೆರಳುವ ಸಮಯ ಬಂದಿದ್ದಿತು.

"ಊಟದ ಸಿದ್ಧತೆಯಾಗುತಿದೆ ಎಂಟು ಹತ್ತು ನಿಮಿಷಗಳಲ್ಲಿ!" ಕೆಳಕ್ಕೆ ಚಿತ್ರ-ಕಾರ್ಡುಗಳನ್ನು ವಿಕ್ರಯಿಸುತ್ತಿದ್ದ ತರುಣಿ ನನ್ನ ಮನಃಸ್ಥಿತಿಯನ್ನು ನಿರೀಕ್ಷಿಸುತ್ತ ಅಲ್ಲಿ ಒಂದೆರಡು ನಿಮಿಷ ತಡೆದಿರಬಹುದು. "ನಿಮ್ಮ ಟೇಬಲ್ ಹತ್ತಿರವೇ ನಾನು ಭೋಜನಕ್ಕೆ ಕುಳಿತುಕೊಳ್ಳುತ್ತೇನೆ. ಒಮ್ಮೆಲೇ ಇಲ್ಲಿಯ ಆಹಾರ ನಿಮಗೆ ರುಚಿಸಲಿಕ್ಕಿಲ್ಲ. ಐದಾರು ನಿಮಿಷಗಳಲ್ಲಿ ನೀವು ಕೆಳಗಿದ್ದ ಭೋಜನ ಗೃಹಕ್ಕೆ ಬನ್ನಿ".

ನನ್ನ ಎದುರಿನ ಟೇಬಲಿನಲ್ಲಿಯೇ ನಾನು ಆಗಲೇ ಕಂಡ ಆ ಇಬ್ಬರು ಯುವತಿಯರು ಕುಳಿತಿದ್ದರು. ಅವರಲ್ಲಿಯ ದುಂಡಮುಖದ ಬಾಲಿಕೆಯು ನಡುನಡುವೆ ನನ್ನನ್ನು ಲಕ್ಷ್ಯ ಪೂರ್ವಕ ನಿರೀಕ್ಷಿಸುತ್ತಿದ್ದಳೆಂದು ನನ್ನ ಭಾವನೆ.

ಕಾರ್ಡುವಿಕ್ರಯಿಸುವ ತರುಣಿ ಇಂದಿನ ವಿಶೇಷ ಆಹಾರವನ್ನು ವರ್ಣಿಸುತ್ತಿದ್ದಳು. ಲ್ಯಾಪಲ್ಯಾಂಡಿನ ಕಾನನದಲ್ಲಿ ದೊರೆಯುವ ಮೆಂತೆಕಾಳಿನಂಥ ಧಾನ್ಯದ ಉಸಳಿ ಹಾಗೂ ರೇನಡಿಯರ ಮಾಂಸದ ಒಂದು ಪದಾರ್ಥ ಇವು ಅಂದಿನ ವಿಶೇಷ ಪಕ್ವಾನ್ನಗಳಾಗಿದ್ದವು. ಆಲೂಗಡ್ಡೆಪಲ್ಲೆ, ಟೊಮಾಟೊ ಸೂಪ ಇತ್ಯಾದಿ ಅನೇಕ ಇತರ ಪದಾರ್ಥಗಳಿದ್ದವು. ಹಾಲು, ಮೊಸರು ಮಜ್ಜಿಗೆ, ಬೆಣ್ಣೆ, ಚೀಜಗಳು ವಿಪುಲ ಈ ದೇಶದಲ್ಲಿ. ಹಿಂದೀ ಅತಿಥಿ ಅಂದು ಭೋಜನಕ್ಕೆ ಇದ್ದುದರಿಂದ ಅಕ್ಕಿಯ ಅನ್ನವನ್ನು ವಿಶೇಷವಾಗಿ ಮಾಡಿದ್ದರು. ಮಾವಿನಕಾಯಿಯ ಉಪ್ಪಿನಕಾಯಿ, ಮಸಾಲೆಪುಡಿ, ಮಾವಿನಕಾಯಿ ಚಟ್ನಿ ಲಭ್ಯವಿದ್ದವು.

ದಿವಾಣಖಾನೆಯಲ್ಲಿ ಮಂಡಿಸಲಾದ ಒಂದು ವಿಶಾಲವಾದ ಟೇಬಲ ಮೇಲೆ ಎಲ್ಲ ಭೋಜನ ವಸ್ತುಗಳನ್ನು ವ್ಯವಸ್ಥಿತವಾಗಿ ಇಟ್ಟಿದ್ದರು. ತನಗೆ ಪ್ರಿಯವಾದ ತಿಂಡಿತಿನಿಸುಗಳನ್ನು ಯಾರೊಬ್ಬರು ಬೇಕಾದಷ್ಟು ಸಲ ತೆಗೆದುಕೊಳ್ಳಬಹುದು! "ಸ್ವಯಂಸೇವೆ"ಯ (self-service) ಪದ್ಧತಿ ಅಲ್ಲಿತ್ತು. ( ಇಲ್ಲಿ ಭೋಜನದರ ಪ್ರತಿಯೊಬ್ಬನಿಗೆ ೭ ರೂಪಾಯಿ. ಇದಲ್ಲದೆ ಬೇರೇನಾದರೂ ಮಾದಕ ಪಾನೀಯಗಳನ್ನು ತೆಗೆದುಕೊಂಡರೆ, ಅದರ ಚಾರ್ಜು ಬೇರೆ. )

ಆ ಕಾರ್ಡ ಮಾರುವ ತರುಣಿಯ ಜತೆಯಲ್ಲಿ ಹೋಗಿ, ನಾನು ನನ್ನ ತಟ್ಟೆಯಲ್ಲಿ ಅನ್ನ, ಆಲೂಗಡ್ಡೆ ಹಾಗೂ ಆ ಲ್ಯಾಪಲ್ಯಾಂಡದಲ್ಲಿಯ ಉಸಳಿ ತೆಗೆದುಕೊಂಡೆ. ಥರಣಿಯಲ್ಲಿಯ



ಲ್ಯಾಂಪಲ್ಯಾಂಡದಲ್ಲಿಯ ರೇನಡೀಯರ ಹಿಂಡು ; ಆಯಾ ಹಿಂಡುಗಳಿಗೆ ಮಾಲಕನ ಗುರುತನ್ನು ಹಚ್ಚಲಾಗುವದು.

ಉಪ್ಪಿನಕಾಯಿ, ಮಸಾಲೆಪುಡಿ ಹಾಗೂ ಚಟ್ನಿಗಳನ್ನೂ ತೆಗೆದುಕೊಂಡೆ. ಈ ಎಲ್ಲ ಭರಣಿಗಳ ಮೇಲೆ Indian Pickles, Indian Curry Powder etc. ಹೀಗೆ ಬರೆದಿದ್ದರು. ಇವುಗಳನ್ನು ತಯಾರಿಸುವ ಸಂಸ್ಥೆ ಅಮೇರಿಕೆಯಲ್ಲಿಯದು! ಮತ್ತೊಂದು ತಟ್ಟೆಯಲ್ಲಿ ಮೊಸರಿನ ಸೀಸೆ, ಜೀಜು, ಬ್ರೆಡ್ ಇತ್ಯಾದಿ ಪದಾರ್ಥಗಳನ್ನು ತೆಗೆದುಕೊಂಡೆ. ರೇನಡಿಯರ ಮಾಂಸವೇ ಮುಖ್ಯ ಪಕ್ವಾನ್ನವಾಗಿದ್ದು ಅದರ ಮೇಲೆ ಎಲ್ಲರ ಪ್ರೇಮ ಹೆಚ್ಚು. ಆದರೆ ನಾನು ಅದನ್ನು ಮುಟ್ಟದಿದ್ದ ಬಗ್ಗೆ ಆ ತರುಣಿಗೆ ಕೆಡಕೆನಿಸಿದಂತೆ ತೋರಿತು.

ಎದುರಿಗಿನ ತರುಣಿಯರ ಕಡೆಗೆ ನಾನು ಸಹಜ ನೋಡಿದೆ. ದುಂಡುಮುಖದ ತರುಣಿಯನ್ನು ಆಕೆಯ ಗೆಳತಿ ಕೇಳುತ್ತಿದ್ದಳು, "ಏನು ಕರೀನ, ಈ ಮುಖ್ಯ ಪಕ್ವಾನ್ನವನ್ನೇ ನೀನು ತೆಗೆದುಕೊಳ್ಳಲಿಲ್ಲವಲ್ಲ?"

ಆ ದುಂಡುಮುಖದ ಕರೀನಳು ಕೂಡ ನನ್ನಂತೆ ಕೇವಲ ಅನ್ನ, ಉಪ್ಪಿನಕಾಯಿ, ಚಟ್ನಿ ಮುಂತಾದ ಪದಾರ್ಥಗಳನ್ನಷ್ಟೇ ತೆಗೆದುಕೊಂಡಿದ್ದಳು.

ನಾನು ಗಡಿಯಾರವನ್ನು ನೋಡುತ್ತ ಗಡಿಬಿಡಿಯಿಂದ ಊಟಮಾಡುತ್ತಿರುವುದನ್ನು ಕಂಡು, ವ್ಯವಸ್ಥಾಪಿಕೆಯು "ಬಂಡಿ ತಪ್ಪುವುದೆಂದು ಗಡಿಬಿಡಿ ಮಾಡಿಕೊಳ್ಳಬೇಡಿ! ತಪ್ಪಿದರೆ ತಪ್ಪಲಿ!"

"ಆಮೇಲೆ ಅಬಿಸ್ಕೊದಲ್ಲಿ ನಾನು ಉಳಿದುಕೊಳ್ಳುವ ವ್ಯವಸ್ಥೆಯನ್ನು ನೀವು ಮಾಡಬೇಕಾಗುವುದು!"

"ಮಾಡೋಣ! ಅಂಥದೇನು ಕಠಿಣ ಪ್ರಸಂಗ?" ಹಾಸ್ಯದಿಂದ ನನ್ನನ್ನು ಓರೆ ನೋಟದಿಂದ ನೋಡುತ್ತ ನುಡಿದಳು.

"ಹಾಗಾದರೆ, ಬಂಡಿಯನ್ನು ಬಿಟ್ಟು ನಾನು ಇಲ್ಲಿಯೇ ಉಳಿದುಕೊಳ್ಳುವೆ ನೋಡಿ!"

"ನಿಮ್ಮ ಸ್ಥಳದ ವ್ಯವಸ್ಥೆಯನ್ನು ಇಲ್ಲಿಯೇ ಮಾಡಿದೆ ನೋಡಿ!"

ಅಬಿಸ್ಕೊ ಬಗ್ಗೆ ನನ್ನ ಅಂತರಂಗದಲ್ಲಿದ್ದ ಜಿಜ್ಞಾಸೆಯನ್ನು ಕಂಡು ವ್ಯವಸ್ಥಾಪಿಕೆಯ ಅನುಮತಿಯಿಂದ ನಾನು ಅಲ್ಲಿ ಉಳಿದುಕೊಳ್ಳುವ ವಿಶೇಷ ಅನುಕೂಲತೆಯನ್ನು ಆಕೆ ನಿಜವಾಗಿ ಮಾಡಿದ್ದಳು.

ಎದುರಿನಲ್ಲಿ ಕುಳಿತಿದ್ದ ತರುಣಿ ಕರೀನಳಿಗೆ ಹೇಳಿದಳು—

"ನೋಡೇ, ಆ ಇಂಡಿಯನ್ ಇಲ್ಲಿ ಉಳಿದುಕೊಳ್ಳುವನಂತೆ, ಕೇಳಿದೆ ಏನು?"

ಕರೀನಳಿಗೆ ಸಮಾಧಾನವಾದಂತೆ ಕಂಡಿತು. ಆದರೆ ಒಮ್ಮೆಲೇ ಆಕೆಯ ಮುಖಚರ್ಯೆಯು ಮ್ಲಾನವಾಯಿತು. ಆಕೆ ಒಂದು ತುತ್ತು ಬಾಯಿಯಲ್ಲಿಟ್ಟಳು. ಆಕೆಯ ನೇತ್ರಗಳಲ್ಲಿ ನೀರು ತುಂಬಿಬಂದಂತೆ ಕಂಡಿತು. ಆಕೆಯ ಗಂಟಲಕ್ಕಡರಿತೋ— ಇಲ್ಲವೆ ಆಕೆ ಹಾಗೆ ನೆವ ಮಾಡಿದಳೋ ಯಾರಿಗೆ ಗೊತ್ತು? ಸ್ನಾನಗೃಹಕ್ಕೆ ಹೋಗಿ ಮೋರೆಯ ಮೇಲೆ ನೀರು ಸಿಂಪಡಿಸಿಕೊಂಡು ಮತ್ತೆ ತನ್ನ ಕುರ್ಚಿಯಲ್ಲಿ ಬಂದು ಕುಳಿತಳು.

ಆ ತರುಣಿಯರ ವರ್ತನೆಯು ಚಮತ್ಕಾರಿಕವಾಗಿ ಗೂಢ, ಹಾಗೂ ವಿಚಿತ್ರವಾಗಿ ಕಂಡು ಬಂದಿತು.

* * *

ಆ ಪುಷ್ಪಮಹಲಿನಲ್ಲಿ ಏನಿಲ್ಲೆಂದರೂ ನೂರು ಜನರಿದ್ದರು. ಅಂದು ಜೂನ ತಿಂಗಳ ೨೫ ನೇ ದಿನಾಂಕ. ಮಧ್ಯರಾತ್ರಿಯ ಸೂರ್ಯನನ್ನು ನೋಡಲು ಜೂನ ತಿಂಗಳ ೨೬ ನೇ ದಿನಾಂಕವು ಅತ್ಯುತ್ತಮವಿದ್ದರು ಕೂಡ ಅದರ ಹಿಂದುಮುಂದಿನ ಮೂರು ನಾಲ್ಕು ದಿನಗಳು ಕೂಡ ಅಷ್ಟೇ ಚನ್ನಾಗಿರುತ್ತವೆ. ಹಾಗೆ ವಿಚಾರ ಮಾಡುವದಾದರೆ ಈ ಉತ್ತರ ಧ್ರುವದ ಪರಿಸರದಲ್ಲಿ ಜೂನ ದಿ. ೧೩ ರಿಂದ ಜುಲಾಯಿ ೪ ರ ವರೆಗೆ ಮಧ್ಯರಾತ್ರಿಯ ಸೂರ್ಯದರ್ಶನದ ದಿನಗಳೆಂದು ಪರಿಗಣಿಸಲಾಗುತ್ತಿದೆ.

ವೇಳೆ ೨೩ ಗಂಟೆಯಾಗಿದ್ದಿತು. ಸಾಕಷ್ಟು ಜನ ಸೂರ್ಯದರ್ಶನಕ್ಕಾಗಿ ಸರೋವರ ತೀರಕ್ಕೆ ತೆರಳಿದ್ದರು. ಎರಡನೇ ಮೂರನೇ ಅಂತಸ್ತುದಲ್ಲಿನ ಜನ ತಮ್ಮ ತಮ್ಮ ಕೋಣೆಗಳಲ್ಲಿ ಕುಳಿತಿದ್ದರು.

ಇಲ್ಲಿ ಬರುವ ಪ್ರವಾಸಿಕರು ಕನಿಷ್ಠ ಪಕ್ಷ ಎರಡು ಮೂರು ರಾತ್ರಿಗಳನ್ನು ಇಲ್ಲಿ ಕಳೆಯಬೇಕೆಂಬ ನಿರ್ಧಾರದಿಂದಲೇ ಬರುವರು. ಏಕೆಂದರೆ ಈ ಇಪ್ಪತ್ತುನಾಲ್ಕನೇ ಗಂಟೆಯ ಸೂರ್ಯ ತೀರ ಸ್ವೇಚ್ಛಾಪರನಿರುತ್ತಾನೆ. ಒಂದೊಂದು ಸಲ ಆಯತಸಮಯಕ್ಕೆ ಮೋಡಗಳ ಮುಸುಕಿನಲ್ಲಿ ಮುನಿದು ಕುಳಿತಿರುತ್ತಾನೆ. ಆದರೆ ಮೂರು ರಾತ್ರಿಗಳನ್ನು ಇಲ್ಲಿ ಕಳೆದರೆ ಒಮ್ಮೆಯಾದರೂ ಅವನ ಅಂದವಾದ ದರ್ಶನಲಾಭವು ದೊರೆಯುವುದು ಖಂಡಿತ. ದಿ. ೨೬ ರ ಮಧ್ಯರಾತ್ರಿಯ ಸೂರ್ಯದರ್ಶನ ಕಂಡ ಮಹನೀಯರು ತಾವು ನಿಜವಾಗಿ ಅತಿ ಭಾಗ್ಯವಂತರೆಂದೇ ಭಾವಿಸುತ್ತಾರೆ.

ಇಲ್ಲಿ ಒಂದರಿಂದ ೨೪ ಗಂಟೆ ... ತ್ತದೆ. "ಮಧ್ಯಾಹ್ನದ ಮೂರು ಗಂಟೆ ಬಾರಿಸಿತು" ಎಂಬುದರ ಅರ್ಥಬೋಧವೇ ಇಲ್ಲಿ ಬೇಸಿಗೆಯಲ್ಲಾಗುವುದಿಲ್ಲ. ಏಕೆಂದರೆ ಬೆಳಗು ಮುಂಜಾವಿನ ಮೂರು ಗಂಟೆಯ ಸಮಯವೂ ಮಧ್ಯಾಹ್ನದ ಮೂರು ಗಂಟೆಯಂತಿದೆ. ಇಲ್ಲಿ ಇಪ್ಪತ್ತುನಾಲ್ಕುತಾಸುಗಳ ದಿನಗಳಿದ್ದುದರಿಂದ "ಹಗಲು, ರಾತ್ರಿ" ಎಂಬ ಶಬ್ದಪ್ರಯೋಗ ಬಿಟ್ಟು ಹದಿನೈದು ಗಂಟೆ, ಇಪತ್ಮೂರು ಗಂಟೆ ಎಂದು ಹೇಳಿದರೇ ಅರ್ಥವಾಗುತ್ತಿದೆ. ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಈ ದಿಕ್ಕುಗಳನ್ನೇ ಇಲ್ಲಿ ತೋರಿಸಲು ಬರುವುದಿಲ್ಲವೆನ್ನಿ. ಸೂರ್ಯ ಪೂರ್ವದಿಕ್ಕಿನಲ್ಲಿ ಉದಯಿಸಿ ಪಶ್ಚಿಮದಲ್ಲಿ ಅಸ್ತನಾಗುತ್ತಿದ್ದರೆ ಮಾತ್ರ ಈ ಮಾತು. ಗಾಣಿಗನ ಎತ್ತಿನಂತೆ ಇಲ್ಲಿಯ ಸೂರ್ಯ ಒಂದೇ ಸವನೆ ನಮ್ಮ ಸುತ್ತುಮುತ್ತು ತಿರುಗುವುದರಿಂದ ಇಲ್ಲಿ ಆತನು ಉದಯಿಸುವುದೂ ಇಲ್ಲ, ಅಸ್ತನಾಗುವುದೂ ಇಲ್ಲ!

ಇಂದು ನಮ್ಮ ಕುಂಡಲಿಯಲ್ಲಿ ಎಲ್ಲಿಯೋ ವಕ್ರಸ್ಥಾನದಲ್ಲಿ ರವಿಯು ಕುಳಿತಿರಬೇಕು. ನಡುನಡುವೆ ಆತ ಮೋಡಗಳ ಮರೆಯಲ್ಲಿ ಅಡಗುತ್ತಿದ್ದ. ಇಪ್ಪತ್ಮೂರೂವರೆ ಗಂಟೆಗೆ ಒಮ್ಮೆ ಆತ ಮೋಡಗಳ ಶುಭ್ರ ಡೇರೆಯಲ್ಲಿ ಹೋಗಿ ಕುಳಿತವನು ಇಪ್ಪತ್ತುನಾಲ್ಕು ಕಾಲಾದ ನಂತರ ಹೊರಬಂದ. ಆದರೂ ಆತನ ಆ ಗಗನಪ್ರವಾಸದ ಸೌಂದರ್ಯವು ವರ್ಣನಾತೀತವಾಗಿತ್ತೆಂಬುದು ಮಾತ್ರ ನಿಜ.

ಇಪ್ಪತ್ತುನಾಲ್ಕೂವರೆ ಗಂಟೆ ಸಮಯಕ್ಕೆ ಬಹುತರ ಎಲ್ಲ ಪ್ರವಾಸಿಕರು ತಮ್ಮ ತಮ್ಮ ಕೊಠಡಿ ಸೇರಿದರು. ಆ ಸ್ವೀಡಿಶ್ ತರುಣಿ ನನ್ನೆಡೆಗೆ ಬಂದು, "ಏಳಿ, ನಿಮಗೆ ನಿಮ್ಮ ಕೊಠಡಿ ತೋರಿಸುತಿದೇನೆ"ಎಂದಳು.

ಎಡಬದಿಯಲ್ಲಿದ್ದ ಒಂದಂತಸ್ತಿನ ಬಿಡಾರದಲ್ಲಿ ನಾನು ಹೋದೆ ಆಕೆಯ ಜತೆಯಲ್ಲಿ.

"ಇಲ್ಲಿ ಕೆಲಸ ಮಾಡುವ ಕೇವಲ ಸ್ತ್ರೀಯರಿಗಾಗಿ ಇರಲು ಈ ಕಟ್ಟಡವಿದೆ. ಇಲ್ಲಿ ಯಾವದೇ ಪುರುಷರಿಗೆ ಸ್ಥಳ ಕೊಡಲು ಬರುವುದಿಲ್ಲ. ನಿಮಗಾಗಿ ಈ ಕಟ್ಟಳೆಯನ್ನು ಏಕೆ ಸಡಲಿಸಬೇಕಾಯಿತೋ ನಾನರಿಯೆ. ಈ ನನ್ನ ಕೋಠಡಿಯಲ್ಲಿ ನೀವು ಉಳಿದುಕೊಳ್ಳಿ. ಆಚೆಗಿರುವ ನನ್ನ ಸ್ನೇಹಿತೆಯಲ್ಲಿ ನನ್ನ ವ್ಯವಸ್ಥೆ ಮಾಡಿಕೊಳ್ಳುತ್ತಿದ್ದೇನೆ. ಗುಡ್ ನಾಯಿಟ!"

ನನ್ನ ಕೃತಜ್ಞತೆಯ ಉದ್ಗಾರಗಳನ್ನು ಕೇಳಲು ಅವಳು ಅಲ್ಲಿರಲಿಲ್ಲ. ಕಿಟಿಕಿಯ

ಪರದೆಯನ್ನು ಕೆಳಗೆ ಜಗ್ಗಿ ಕೊಂಚ ಕತ್ತಲು ಮಾಡಿ ಕಾಟಿನ ಮೇಲೆ ಉರುಳಿದೆ. ಅರ್ಧ ತಾಸಿಗೆ ನಾನು ಒಮ್ಮೆಲೇ ಎಚ್ಚತ್ತು ಕಿಟಕಿಯ ಹೊರಕ್ಕೆ ಹಣಿಕಿಕ್ಕಿದೆ. ಹೊ, ಹೊ, ನಾನು ನಿಜವಾಗಿ ಉತ್ತರಧ್ರುವದ ಮೇಲಿದ್ದೆ. ಅಲ್ಲಿ ರಾತ್ರಿಯಿರಲಿಲ್ಲ. ಎದುರಿನಲ್ಲಿ "ದಿನಕರ"ನು ದೈದೀಪ್ಯಮಾನನಾಗಿರುವಾಗ ರಾತ್ರಿ ಎಲ್ಲಿ?

ನಾನು ಹೊರಕ್ಕೆ ಬಂದೆ. ಉತ್ತರಧ್ರುವದ ಮೇಲಿನ ಆ ಶಾಂತ ವಾತಾವರಣವು ಎಂಥದೋ ಒಂದು ಗೌಪ್ಯದಿಂದ ತುಂಬಿಕೊಂಡಂತೆ ಕಂಡಿತು. ಈಗ ಎರಡು ಗಂಟೆಯಾಗಿತ್ತು. ನಮ್ಮಲ್ಲಿ ಶ್ರಾವಣ ತಿಂಗಳಲ್ಲಿ ಮಧ್ಯಾಹ್ನ ಮೋಡಗಳಿಂದ ಮುಸುಕಿದ ಗಗನಮಂಡಲದಲ್ಲಿ ಕಾಣುವ ವಾತಾವರಣ ಅಲ್ಲಿ ಮುಸುಕಿದ್ದಿತು. ಹಾಟೇಲಿನ ಪ್ರಾಂಗಣದಲ್ಲಿ ಒಂದಿಷ್ಟು ಅಲೆದಾಡಿ ನಾನು ಸರೋವರದತ್ತ ಸಾಗಿದೆ. ತೀರ ಸನಿಯಕ್ಕೆ ಕಾಣುವ ಆ ಸರೋವರ ಅರ್ಧಮೈಲಿನಷ್ಟಾದರೂ ದೂರದಲ್ಲಿತ್ತು. ಕುರುಕಾದ ಗಿಡಗಳ ದಟ್ಟ ಕಾನನದಲ್ಲಿ ಒಂದು ಕಾಲು ದಾರಿ. ಉದ್ವೇಗದಲ್ಲಿ ನಾನು ಲಗುಬಗೆಯಿಂದ ನಡೆಯಲಾರಂಭಿಸಿದೆ. ಕಾಲುದಾರಿಯ ತುದಿಯಲ್ಲಿ ಹಲಿಗೆಗಳ ಒಂದು ಪ್ಲಾಟಫಾರ್ಮು. ಅದಕ್ಕೆ ಹೊಂದಿಕೊಂಡು ಒಂದು ತೀರ ದೊಡ್ಡದಾದ ಮೋಟರ ಬೋಟು ನಿಂತಿದ್ದಿತು.

ಆ ಹಲಿಗೆಗಳ ಉನ್ನತಾಸನದಿಂದ ನಾನು ಎದುರಿನಲ್ಲಿ ನೋಡಲಾರಂಭಿಸಿದೆ. ಮೇಲೆ ತಿಳಿಯಾದ ನೀಲವರ್ಣದ ಆಕಾಶ, ಎದುರಿನ ಜಲಾಶಯವು ಕೂಡ ಅಚ್ಚ ನೀಲವರ್ಣದ್ದು! ಸಾವಕಾಶವಾಗಿ ಸಾಗಿಬರುವ ತೆರೆಯ ತರಂಗಗಳು ತೀರದಲ್ಲಿ ಕೋಮಲವಾದ ಸ್ವರನಿನಾದವನ್ನೆಬ್ಬಿಸುತ್ತಿದ್ದವು. ಎಲ್ಲೆಡೆಯಲ್ಲಿಯೂ ಶಾಂತತೆ ತೀರ ಧೀರಗಂಭೀರ, ಪ್ರಸನ್ನ ಹಾಗೂ ಪರಾಕಾಷ್ಠೆಯ ಶಾಂತತೆ!

ಮಂತ್ರಮುಗ್ಧನಾದಂತಾಗಿ ನಾನು ಅಲ್ಲಿಯೇ ನಿಂತುಬಿಟ್ಟೆ.

ಎದುರಿನಲ್ಲಿದ್ದ ಪರ್ವತಶ್ರೇಣಿಗಳ ಮೇಲೆ ಬೆಳ್ಳಗಿನ ಶುಭ್ರ ತೇಜೋಮಂಡಲವು ನೇತು ಹಾಕಲ್ಪಟ್ಟಿದ್ದಿತೇನೊ! ಅಡಿಯಲ್ಲಿದ್ದ ಸರಸ್ಸಿನಲ್ಲಿ ಮುಸುಮುಸುಕಾದ ಹಸಿರು ನೀಲಿ ಬಣ್ಣಗಳಿಂದ ಸಮ್ಮಾರ್ಜನ ಮಾಡಿದಂತಾಗಿತ್ತು. ಮಧ್ಯದಲ್ಲಿ ಶುಭ್ರವಾದ ಬೆಳ್ಳಗಿನ ಪಟ್ಟೆ. ಅವು ಭಾಸ್ಕರನ ತೇಜದ ತಳಿರುಗಳು. ಕ್ಷಣಕ್ಷಣಕ್ಕೆ ಬೇರೆ ಬೇರೆ ಸೌಂದರ್ಯದಿಂದ ರಾರಾಜಿಸುವ ಸೂರ್ಯನ ಸೌಂದರ್ಯವನ್ನು ಇಲ್ಲಿ ಇಪ್ಪತ್ತು ನಾಲ್ಕು ತಾಸು ನೋಡಿದರೂ ತೃಪ್ತಿಯಾಗುತ್ತಿರಲಿಲ್ಲ ನನಗೆ!

ಇಂತಹ ಅಭೂತಪೂರ್ವ ಸೂರ್ಯದರ್ಶನ ಪಡೆಯಲು ಪೂರ್ವಪುಣ್ಯ ಬೇಕು. ಉನ್ನತಾಸನದಿಂದ ಕೆಳಕ್ಕಿಳಿದು ನಾನು ನೀರಿನಲ್ಲಿ ಕೈಹಾಕುವಷ್ಟರಲ್ಲಿಯೇ ತಟ್ಟನೆ ಹೊರಕ್ಕೆ ತೆಗೆದೆ! ತೀರ ಹಿಮಗಡ್ಡೆಯಂತೆ ತಣ್ಣಗಿತ್ತು ಆ ನೀರು. ಲಗುಬಗೆಯಿಂದ ಹೇಗೆ ಹೇಗೋ ಆ ರವಿರಾಜನಿಗೆ ಮೂರು ಅರ್ಘ್ಯಗಳನ್ನೂ ಬಿಟ್ಟೆ!

ವಿಶ್ರಾಮಧಾಮದತ್ತ ನಾನು ತಿರುಗಿದೆ. ಆ ಕಾಲುದಾರಿಯಲ್ಲಿ ಬೇರೆ ಬೇರೆ ಫಲಕಗಳಿದ್ದವು. ಅವುಗಳತ್ತ ಈಗ ನನ್ನ ಲಕ್ಷ್ಯ ಹೋಯಿತು. ಒಂದು ಹಲಿಗೆಯಮೇಲೆ ಬರೆದುದೇನಂದರೆ, "ಹೊರಕ್ಕೆ ವಾಯುಸೇವನೆಗಾಗಿ ಒಬ್ಬರೇ ದೂರದಲ್ಲಿ ತೆರಳುವುದು ಗಂಡಾಂತರಕಾರಿಯಿದೆ. ಗುಂಪಾಗಿ ಕೂಡ ಹೊರಡುವ ಪೂರ್ವದಲ್ಲಿ ವ್ಯವಸ್ಥಾಪಕ ಮಂಡಲದ ಸಲಹೆ ತೆಗೆದುಕೊಳ್ಳಿ!"

ಎಲ! ಬಂಡಿಯಲ್ಲಿ ಯಾರೋ ಹೇಳಿದ್ದರು ನಿಜ. ಲ್ಯಾಪ ಜನರ ಜಿಂಕೆಗಳನ್ನು-ರೇನಡಿಯರಗಳನ್ನು — ಇತ್ತಕಡೆಯ ಕರಡಿಗಳು ಆಗಾಗ್ಗೆ ಮುರಿದು ತಿನ್ನುತ್ತಿವೆಯೆಂದು! ಅಬ್ಬಾ! ಈಗ ನನ್ನ ಎದೆ ಡಬಡಬ ಹಾರಲಾರಂಭಿಸಿತು. ಆದರೆ ವಿಶ್ರಾಮಧಾಮದ ಕಟ್ಟಡವು ಎದುರಿನಲ್ಲಿಯೇ ಕಾಣುತ್ತಿದ್ದಿತು. ನಾನು ಪಲಾಯನ ಪ್ರಾರಂಭಿಸಿ ವಿಶ್ರಾಮಧಾಮದ ಮಹಾದ್ವಾರವನ್ನು ಪ್ರವೇಶಿಸಿ ಮೇಲಿನ ದಿವಾಣಖಾನೆಯಲ್ಲಿ ಬಂದೆ. ನಾನು ಅಲ್ಲಿ ಕುರ್ಚಿಯಲ್ಲಿ ಕುಳಿತಾಗ ಸಂಪೂರ್ಣ ಬೆವೆತುಬಿಟ್ಟಿದ್ದೆ. ಬಲಗಡೆಯಲ್ಲಿ ಒಂದು ಚಿಕ್ಕದಾದ ಶೆಲ್ಫಿನಲ್ಲಿ ಅಸಂಖ್ಯ ಪುಸ್ತಕಗಳಿದ್ದವು. "ಲ್ಯಾಪಜನರ ಜೀವನ", "ಉತ್ತರ

ಲ್ಯಾಪ್ ಮಹಿಳೆಯರು ಕಾಫಿ ಕುಡಿಯುತ್ತಿರುವರು.



ಧ್ರುವದಲ್ಲಿಯ ಎರಡು ತಿಂಗಳು", "ಅಬಿಸ್ಕೊ ಹತ್ತಿರ ಮಾಡಬೇಕಾದ ಪ್ರವಾಸದ ಮಾರ್ಗದರ್ಶಿಕೆ," ಆ ಪುಸ್ತಕಗಳಲ್ಲಿ ಮತ್ತೊಂದು ಹೆಬ್ಬೊತ್ತಿಗೆ ಇದ್ದಿತು. ಅದು "ಲ್ಯಾಪಲ್ಯಾಂಡದ ಭೂತಾಟಿಕೆಗಳ ರೋಮಾಂಚಕಾರಕ ಕಥೆ."

ಸಾಮಾನ್ಯವಾಗಿ ನಾನು ಭೂತಾಟಿಕೆಗಳನ್ನು ನಂಬುವ ಮನುಷ್ಯನಲ್ಲ. ಆದರೆ ಆ ವಾತಾವರಣದಲ್ಲಿ ಆ ಮನಃಸ್ಥಿತಿಯಲ್ಲಿ ನನಗೆ ಒಮ್ಮೆಲೆ ಹೇಗೆ ಹೇಗೋ ಎನಿಸಲಾರಂಭಿಸಿತು. ನನ್ನ ಎದೆ ತೀವ್ರ ಬಡಿದುಕೊಳ್ಳಲಾರಂಭಿಸಿತು.

ಕೊಠಡಿಯನ್ನು ಸೇರಿ ವಿಶ್ರಮಿಸಬೇಕೆಂಬ ವಿಚಾರದಿಂದ ನಾನು ಕೆಳಕ್ಕೆ ಬಂದೆ. ಎಡಬದಿಯಲ್ಲಿ ಕೊಠಡಿಗಳ ಸಾಲು.

''ಅಯ್ಯೋ! ಅವ್ವಾ!'' ಎತ್ತಲಿಂದಲೋ ದನಿ ಬಂದಿತು.

ನಾನು ಬೆಚ್ಚಿಬಿದ್ದೆ! ಇದು ಎಂತಹ ಸ್ವರ! ಶುದ್ಧ ನನ್ನ ಮಾತೃಭಾಷೆಯಲ್ಲಿ! ಈ ವಿಶ್ರಾಮಧಾಮದಲ್ಲಿ ಒಬ್ಬರೂ ಭಾರತೀಯರಿಲ್ಲ. ಅಖಿಲ ಏಶಿಯಾ ಖಂಡದ ಒಬ್ಬನೇ ಒಬ್ಬನಾದ ನಾನು ಇಲ್ಲಿ.......

"ಏನೇ, ಅವ್ವಾ!......."

ಮತ್ತೆ ಅದೇ ಶಬ್ದ. ಇದೇನು ಯಾವುದೊಂದು ಭೂತದ ಚೇಷ್ಟೆಯಾಗಿರಲಿಕ್ಕಿಲ್ಲವಲ್ಲ! ಅತ್ತಿತ್ತ ನೋಡಿದೆ ನಾನು. ಎಲ್ಲವೂ ನಿರ್ಮಾನುಷ, ನಿಃಶಬ್ದ. ನಾನು ಅಲ್ಲಿಂದ ಹೊರಬಿದ್ದು ಎಡಬದಿಯಲ್ಲಿದ್ದ ನನ್ನ ಕೊಠಡಿ ಸೇರಿದೆ.

* * *

ಮುಂಜಾವಿನಲ್ಲಿ ಸರಿಯಾಗಿ ಎಂಟುಗಂಟೆಗೆ ಟೋರ್ನಟ್ರೆಸ್ಕ ಸರೋವರದಲ್ಲಿಯ ನಮ್ಮ ಜಲಪರ್ಯಟನಕ್ಕಾರಂಭವಾಯಿತು. ಆ ಇಬ್ಬರು ತರುಣಿಯರು ಕೂಡ ಬಂದಿದ್ದರು.

ನಾನೇ ಮುಂದಾಗಿ ಅವರ ಪರಿಚಯ ಮಾಡಿಕೊಂಡೆ. ಕರೀನ ಹಾಗೂ ಆಕೆಯ ಗೆಳತಿ ಎಲಿಝಾ ಇವರೀರ್ವರೂ ಲಿನಕೋಪಿಂಗ ಪಟ್ಟಣದಲ್ಲಿ ಒಂದೇ ಹಾಸ್ಟೆಲ್ಲಿನಲ್ಲಿದ್ದು ಒಂದೇ ಶಾಲೆಯಲ್ಲಿ ಮ್ಯಾಟ್ರಿಕ್ ವರ್ಗದಲ್ಲಿ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿನಿಯರಿದ್ದರು.

"ನಿನ್ನ ತಾಯಿತಂದೆಗಳಿರುವುದೆಲ್ಲಿ ಕರೀನ?" ನಾನು ಸಹಜವಾಗಿ ಕೇಳಿದೆ.

ಆಕೆಯ ಮುಖವು ಒಮ್ಮೆಲೇ ತೀರ ಕೆಂಪಾಯಿತು. ಆಕೆ ನನಗೆ ಪ್ರತ್ಯುತ್ತರವನ್ನು ಕೊಡದೆ ದೂರಸರಿದು ಕರವಸ್ತ್ರದಿಂದ ಕಣ್ಣುಗಳನ್ನು ಒರಿಸಲಾರಂಭಿಸಿದಳು.

"ಆಕೆಯ ತಾಯಿ-ತಂದೆಗಳೆ? ಅವರು ಹಿಂದುಸ್ತಾನದಲ್ಲಿರುವರು" ಎಲಿಝಾ ಹೇಳಿದಳು. "ನಿಮ್ಮನ್ನು ನಿನ್ನೆ ನೋಡಿದಾಗಿನಿಂದ ಆಕೆಗೆ ಅವರ ನೆನಪಾಗಿದೆ ನೋಡಿ. ನಡುನಡುವೆ ಅಳುವಳು, ನಿನ್ನೆ ರಾತ್ರಿ ನಿದ್ರೆ ಕೂಡ ಮಾಡಲಿಲ್ಲ. ಒಂದೇ ಸವನೆ ನೆನಿಸುತ್ತಿದ್ದಳು ತಾಯಿಯನ್ನು!"

ಮುಂದೆ ಅರ್ಧ ತಾಸಿನಲ್ಲಿಯೇ ಕರೀನಳಿಂದ ಎಲ್ಲ ವಿವರಗಳು ತಿಳಿದವು. ಆಕೆಯ ತಾಯಿ-ತಂದೆಗಳು ಇಪ್ಪತ್ತು ಇಪ್ಪತ್ತೆರಡು ವರುಷಗಳ ಹಿಂದೆಯೇ ಮಿಶನರಿ ಎಂದು ಹಿಂದುಸ್ತಾನಕ್ಕೆ ತೆರಳಿದರು. ಕರೀನಳು ಜನಿಸಿದಾಗ ಅವರು ಮಹಾರಾಷ್ಟ್ರದ ಖಾನದೇಶದಲ್ಲಿದ್ದರು. ಅಲ್ಲಿಯೇ ಆಕೆಯ ಶಿಕ್ಷಣ ಮರಾಠಿ ಭಾಷೆಯಲ್ಲಿ ಆಯಿತು. ಮನೆಯಲ್ಲಿ ಮಾತ್ರ ಸ್ವೀಡಿಶ್; ಉಳಿದೆಲ್ಲ ಕಾಲ ಮೈತ್ರಿಣಿಯರ ಜತೆಯಲ್ಲಿ ಮರಾಠಿ ಮಾತನಾಡುವುದರಲ್ಲಿಯೇ ಕಳೆಯುವುದು. ಎರಡು ವರುಷಗಳ ಹಿಂದೆ ಮೊದಲು ಬಾರಿ ಆಕೆ ಸ್ವೀಡನಕ್ಕೆ ಶಿಕ್ಷಣಕ್ಕಾಗಿ ಬಂದಿದ್ದಳು. ಈವಾಗ ಆಕೆಯ ತಂದೆಯು ಮಿಶನರಿ ಕೆಲಸವನ್ನು ಬಿಟ್ಟು ಮದ್ರಾಸ ರಾಜ್ಯದಲ್ಲಿ ಸಮಾಜಸೇವೆಗೈಯುತ್ತಲಿದ್ದಾರೆ."

"ಹಾಗಾದರೆ ನಿನಗೆ ಮರಾಠಿ ಮಾತನಾಡಲು ಬರುತ್ತದೆ?" ಆನಂದದಿಂದ ನಾನು ಮರಾಠಿಯಲ್ಲಿಯೇ ಕೇಳಿದೆ.

"ನಿಮ್ಮ ಬರೆಹ, ಕತೆಗಳನ್ನೆಷ್ಟೋ ನಾನು ಓದಿದೇನೆ. ನನ್ನ ತಂದೆಯು ಒಮ್ಮೊಮ್ಮೆ ಮರಾಠಿ ಮಾಸಪತ್ರಿಕೆಗಳನ್ನು ಕಳಿಸುತ್ತಿದ್ದಾರೆ..." ಆಕೆ ಶುದ್ಧ ಮರಾಠಿಯಲ್ಲಿ ನುಡಿದಳು.

"ಆದರೆ ನಾನು ಕತೆಗಳನ್ನು ಬರೆಯುತಿದ್ದೇನೆಂಬುದು ನಿನಗೆ ಹೇಗೆ ಗೊತ್ತು?"

"ಅದೇನು ಮಹಾ? ವಿಶ್ರಾಮಧಾಮದಲ್ಲಿಯ ಬುಕ್ಕಿನಲ್ಲಿ ಬರೆದ ನಿಮ್ಮ ಹೆಸರು ನೋಡಿದೆ. 'ವ್ಯವಸಾಯ ಲೇಖಕ, ಪತ್ರಕಾರ' ಹೀಗೆ ನೀವೇ ಬರೆದಿರುವಿರಲ್ಲವೇ? ಪರಿಚಯ ಸಿಕ್ಕಿತು. ಈ ವ್ಹಿ. ಎನ್. ಕುಲಕರ್ಣಿ ಪಂಡಿತ ಎಂದರೆ ವ್ಯ. ನ. ಕುಲಕರ್ಣಿಯವರೇ ಇರಬೇಕು ಎಂದು."

ಎಲಿಝಾ ಅವಾಕ್ಕಾಗಿ ನಮ್ಮ ಕಡೆಗೆ ನೋಡುತ್ತಲೇ ಇದ್ದಳು. ಆಕೆಯನ್ನು ದೂರಿಡಬಾರದೆಂದು ನಾನು ಇಂಗ್ಲಿಷಿನಲ್ಲೇ ಮಾತನಾಡಲಾರಂಭಿಸಿದೆ.

ಅಲ್ಪಾವಕಾಶದಲ್ಲಿಯೇ ನಮ್ಮ ನೌಕೆಯು ದಡ ತಲುಪಿತು. ಗಾಯಿಡ ಹೇಳಿದ, "ನಾವು ಇಳಿಯುವಲ್ಲಿ ಲ್ಯಾಪಜನರು ನೋಡಲು ದೊರೆಯುವರು. ಅವರು ತೀರ ನಾಚುಬುರುಕರು. ಅವರ ರೇನಡಿಯರ ಜಾತಿಯ ಜಿಂಕೆಗಳು ಅವರಂತೆಯೇ. ಜನರನ್ನು ಕಂಡರೆ ಓಡಿಹೋಗುವರು. ಅರ್ಧ ತಾಸಿನಲ್ಲಿಯೇ ಮುಂದಿನ ಪ್ರಯಾಣಕ್ಕಾಗಿ ನಾವು ಹೊರಡಬೇಕು."

ನಾವು ಕೆಳಕ್ಕಿಳಿದೆವು. ಎದುರಿನಲ್ಲಿಯೇ ಕೆಲವಂತರದಲ್ಲಿ ದೊಡ್ಡ ದಿನ್ನೆಯಂತೆ ಕಾಣುವಂತಹ ಲ್ಯಾಪ್ ಜನರ ಒಂದು ಗುಡಿಸಿಲು ಇದ್ದಿತು. ಒಳಭಾಗದಲ್ಲಿಯ ಒಂದು ಮೂಲೆಯಲ್ಲಿ ಎಂಥದೋ ಹುಲ್ಲುಕಡ್ಡಿ ಹಾಸಲಾಗಿದ್ದಿತು. ಅದು ಲ್ಯಾಪ ಜನರ ಹಾಸಿಗೆ. ಎರಡನೇ ಮೂಲೆಯಲ್ಲಿ ಕಲ್ಲಿನ ಒಲೆಯಿದ್ದಿತು. ಒಂದು ಗೂಟಕ್ಕೆ ರೇನಡಿಯರ ಚರ್ಮಗಳನ್ನು ತೂಗುಬಿಟ್ಟಿದ್ದರು.

ವಿಚಿತ್ರ ವರ್ಣಗಳ ಪೋಷಾಕು ಧರಿಸಿದ ಓರ್ವ ಲ್ಯಾಪನು ದೂರದಲ್ಲಿ ಯಾವುದೋ ಕೆಲಸದಲ್ಲಿ ತೊಡಗಿದ್ದನು. ಆತ ನಮ್ಮ ಹತ್ತಿರ ಬಂದ. ಗುಡಿಸಲಿನ ಹೊರಬದಿಯಲ್ಲಿ ಆತನ ಪತ್ನಿ ತನ್ನ ಸರಕನ್ನು ಭೂಮಿಯ ಮೇಲೆ ಮಾರಾಟಕ್ಕಿಟ್ಟುಕೊಂಡು ಕುಳಿತಿದ್ದಳು. ಅವುಗಳಲ್ಲಿ ರೇನಡಿಯರ ಚರ್ಮ, ಕೋಡು, ಲ್ಯಾಪ ಜನರು ಧರಿಸುವಂತಹ ಟೊಪ್ಪಿಗೆ ಜಾಕೀಟು ಇತ್ಯಾದಿಗಳಿದ್ದವು. ಲ್ಯಾಪ ಜನರ ಉಡುಪು ಪ್ರಾಮುಖ್ಯವಾಗಿ ಕೆಂಪು, ನೀಲಿ, ಹಳದಿ ವರ್ಣದಲ್ಲಿ ಇರುತ್ತವೆ.

"ನಾವು ಲ್ಯಾಪಲ್ಯಾಂಡಿನಲ್ಲಿ ಲ್ಯಾಪ ಜನರನ್ನೇ ನೋಡಿದೆವಲ್ಲವೇ? ಆದರೆ ಎಲ್ಲವೂ ಒಂದಿಷ್ಟು ಕೃತ್ರಿಮವಾಗಿ ಕಂಡಿತು!" ನಾನು ಮಾರ್ಗದರ್ಶಕನಿಗೆ ಕೇಳಿದೆ.

"ನಿಮ್ಮ ಮಾತು ನಿಜ! ಈ ಗಂಡ ಹೆಂಡಿರನ್ನು ಅಣಿಗೊಳಿಸಬೇಕಾದರೆ ನಮಗೆ ಮಹಾ ಪ್ರಯಾಸವಾಯಿತು. ನಮ್ಮ ನೌಕೆ ಬಂದ ಕಾಲದಲ್ಲಿ ಎಂದರೆ ಇಲ್ಲಿ ದಿನದಲ್ಲಿ ಒಮ್ಮೆ ಯಾದರೂ ಹಾಜರಿರುವರೆಂಬುದು ನಮ್ಮ ಸುದೈವ! ಇಲ್ಲದಿದ್ದರೆ ನಿಮ್ಮಂತಹ ದೂರಿನಿಂದ ಬರುವ ಪ್ರಯಾಣಿಕರಿಗೆ ನಾವು ಲ್ಯಾಪ ಜನರನ್ನು ತೋರಿಸುವುದಾದರೂ ಎಂತು? ಆ ಜನ ಸುಧಾರಿಸಿದ ಸಮಾಜದಿಂದ ದೂರಿರುತ್ತಾರೆ. ಜೂನ-ಜುಲಾಯಿ ತಿಂಗಳಲ್ಲಿ ಇಲ್ಲಿ ರೇನಡಿಯರ ತಪ್ಪಿ ಕೂಡ ಕಾಣುವುದಿಲ್ಲ. ನೌಕೆಯಿಂದ ಜನ ಇಳಿದುದೇ ತಡ. ಅವು ದಿಕ್ಕಾಪಾಲಾಗುವವು! ಆದರೂ

ಕೂಡ ಮುಂದಿನ ತಾಣ್ಯದಲ್ಲಿ ನಿಮಗೆ ವಿಶೇಷ ಪೇನಾವರೂ ತೋರಿಸುತ್ತೇವೆ. ಆದರೆ ೫-೬ ಕಿಲೊಮೀಟರ ನಡೆಯಬೇಕಾದೀತು ! "

" ನಾವೂ ಕೂಡ ಬರುವೆವು ಚಾಚಾ ! " ಲ್ಯಾಪಲ್ಯಾಂಡಿನಲ್ಲಿ ಆ ಯುವತಿಯರಿಗೆ ನಾನು ಚಾಚಾ ಆದೆ !

ಹಿಮಗಡ್ಡೆಯಂತೆ ತೀರ ಶೀತಲವಾದ ನೀಲ ವರ್ಣದ ಜಲದಲ್ಲಿಯ ನಮ್ಮ ಜಲಪರ್ಯಟ ಣಕ್ಕೆ ಮತ್ತೆ ಪ್ರಾರಂಭವಾಯಿತು. ಮತ್ತೊಂದು ಗಳಿಗೆಯಲ್ಲಿ ಮತ್ತೊಂದು ತೀರ ವನ್ನು ನಾವು ಸೇರಿದೆವು. ಮಧ್ಯಾಹ್ನದ ಭೋಜನದ ಪ್ಯಾಕೆಟ್ಟುಗಳನ್ನು ಕೊಡಲಾಗಿ ದ್ದಿತು ನಮಗೆ. ಭೋಜನ ಮಾಡಿದೆವು ಒಂದು ಮರದಡಿಯಲ್ಲಿ ಕುಳಿತು. ಎರಡು ತಾಸುಗಳ ವರೆಗೆ ಮನಬಂದಲ್ಲಿ ಅಲೆದಾಡಲು ಎಲ್ಲರಿಗೂ ಅವಕಾಶವಿತ್ತು.

"ಹಂ, ಏಳಿ. ಲ್ಯಾಪಲ್ಯಾಂಡದ ಅಂತರ್ಭಾ-ಗವನ್ನು ನೋಡುವುದಿದೆಯಲ್ಲವೇ ನಿಮಗೆ ?" ಎನ್ನುತ್ತ ಮಾರ್ಗದರ್ಶಕ ನಮ್ಮ ಮುಂದೆ ಬಂದು ನಿಂತ. ನಾವು ಆತನನ್ನು ಹಿಂಬಾಲಿ ಸಿದೆವು. ಒಂದು ಪರ್ವತದಡಿಯಲ್ಲಿ ಬಂದು ನಿಂತೆವು. ಪರ್ವತವನ್ನೇರುತ್ತಿದ್ದಂತೆ ನಿಬಿಡ ಕಾನನನಕ್ಕಾರಂಭವಾಯಿತು. ಆದರೆ ಇಲ್ಲಿಯ ವೃಕ್ಷಗಳು ಕೂಡ ಕಿರಿದಾದುವು. ಹೆಚ್ಚೆಂದರೆ, ೮-೧೦ ಅಡಿ ಎತ್ತರ. ಆದರೆ ಸ್ವೀಡನದ ಜಗಪ್ರಸಿದ್ಧ ಫರ್ನಿಚರ ಹಾಗೂ ಕಟ್ಟಡಗಳ ಕಟ್ಟಿಗೆಯು ಲ್ಯಾಪಲ್ಯಾಂಡಿನಲ್ಲಿ ದುರ್ಲಭ.

ಅರ್ಧ ಮುಕ್ಕಾಲು ತಾಸು ನಾವು ಪರ್ವ-ತವನ್ನೇರಿದ ನಂತರ ರೇನಡಿಯರಗಳ ದೊಡ್ಡ ಗುಂಪನ್ನು ಕಂಡೆವು. ಆದರೆ ನಮ್ಮ ಕಾಲುಸಪ್ಪಳ ಕೇಳಿ ಅವು ಮಾಯವಾದವು. ಮಾರ್ಗದರ್ಶಕ ಹೇಳಿದ, " ಈ ಜಿಂಕೆಗಳು ಲ್ಯಾಪಜನರ ಸರ್ವಸ್ವ ಅವುಗಳ ಪಾಲನ ಪೋಷಣೆ ಮಾಡಿ ಅವನ್ನು ತಮ್ಮ ಜೀವನಾಧಾರ ವಾಗಿ ಮಾಡಿಕೊಂಡಿರುವರು. ಹಸಿವಾದಾಗ ಅವುಗಳಲ್ಲೊಂದನ್ನು ಭಕ್ಷಿಸುವರು. ಈವಾಗ ಮಾತ್ರ ಆಡಳಿತೆಯು ಅವರನ್ನು ಸುಧಾರಿ ಸಲು ಜೋರಾಗಿ ಪ್ರಯತ್ನ ನಡೆಸಿದೆ. ಆದರೆ ನಮ್ಮ ರಾಷ್ಟ್ರದ ಈ ವೈಶಿಷ್ಟ್ಯವನ್ನು ಕಾಯ್ದು ಕೊಳ್ಳುವದೇ ಶ್ರೇಯಸ್ಕರವೆಂದು ನನ್ನ ಭಾವನೆ. ಈ ಲ್ಯಾಪ ಜನರೂ ನಮ್ಮ ನಿಮ್ಮಂತೆ ಶಿಸ್ತಿನಿಂದ ಸೂಟುಬೂಟು ಧರಿಸಿ ಪಟ್ಟಣಗ ಳಲ್ಲಿ ಅಲೆದಾಡಲಾರಂಭಿಸಿದರೆ ಅವರನ್ನು ಮುದ್ದಾಂ ನೋಡಲು ಇಲ್ಲಿ ಶ್ರಮಪಟ್ಟು ಯಾರು ಬರುವರು ?''

ಮಾರ್ಗದರ್ಶಕನು ಮತ್ತೊಂದು ಎತ್ತರ ಶಿಖರವನ್ನೇರಿ ಸನ್ನೆಮಾಡಿ ನಮ್ಮನ್ನು ಕರೆದು "ಸದ್ದಿಲ್ಲದೆ ಸಾವಕಾಶವಾಗಿ ಬನ್ನಿ!" ಎಂದ.

ನಾವು ಮಂದಗತಿಯಿಂದ ಆತನ ಬದಿ ಯಲ್ಲಿ ಹೋಗಿ ಕುಳಿತೆವು.

ರೇನಡಿಯರಗಳ ಅತಿ ದೊಡ್ಡ ಗುಂಪು ಎದುರಿನಲ್ಲಿ ಸ್ತಬ್ಧವಾಗಿ ನಿಂತಿದ್ದಿತು. ಹಲ ಕೆಲವು ಹರಿಣಶಿಶುಗಳು ಮೊಲೆಯುಣ್ಣುತ್ತ ಲಿದ್ದವು. ಕೆಲಜಿಂಕೆಗಳು ಸುಮ್ಮನೆ ಮೆಲ ಕಾಡಿಸುತ್ತಿದ್ದವು. ಮತ್ತೆ ಕೆಲವು ಒಂದ ನ್ನೊಂದು ನೆಕ್ಕುತ್ತಲಿದ್ದವು. ಅವುಗಳ ನಾಯಕ ನಾಲ್ಕೂದಿಕ್ಕಿನಲ್ಲಿ ದೃಷ್ಟಿಯನ್ನು ತಿರುಗಿಸುತ್ತ ಕಾವಲು ಮಾಡುತ್ತಿದ್ದನು. ನಮ್ಮ ಮುಂದೊಂದು ಕಂಟಿಯು ಗುಂಪಿದ್ದ ದರಿಂದ ಅವುಗಳಿಗೆ ನಾವು ಕಾಣುತ್ತಿರಲಿಲ್ಲ.

ಆ ಅತೀವ ಸುಂದರ ದೃಶ್ಯ ನಮ್ಮ ಕಣ್ಣಿಗೆ ಹಬ್ಬವನ್ನುಂಟು ಮಾಡಿತು. ನಮ್ಮ ಸುಳಿವು ಹತ್ತಿತೇನೋ! ಎರಡು ಮೂರು ನಿಮಿಷಗಳ ಲ್ಲಿಯೇ ಆ ಗುಂಪಿನ ನಾಯಕನು ಒಂದು ಜಿಗಿತಕೊಟ್ಟ. ಎಲ್ಲ ಮೃಗಸಮೂಹವು ಆತನ ಹಿಂದೆಯೇ ಅಂತರ್ಧಾನವಾಯಿತು.

ಕಾನನದಿಂದಲೇ ದೂರದಲ್ಲಿ ಒಂದು ಲ್ಯಾಪ ಗುಡಿಸಲು ಕಂಡಿತು. ಆದರೆ ಮಾರ್ಗ ದರ್ಶಕ ಹೇಳಿದ, "ಈ ಭಾಗದ ಲ್ಯಾಪ ಜನರು ನಮ್ಮನ್ನು ಕಂಡು ಹೆದರುವರು."

ನಾವು ಮರಳಿದೆವು. "ಚಾಚಾ" ನ ಸಾನ್ನಿ ಧ್ಯದಲ್ಲಿ ಬಹಳಷ್ಟು ರೇನಡಿಯರ ನೋಡುವ ರೋಮಾಂಚಕ ಅನುಭವವನ್ನು ಕರೀನ ಹಾಗೂ ಎಲಿಝಾರು ಮೊದಲು ಸಲ ಪಡೆ ದರು. ಆನಂದಾತಿಶಯದಿಂದ ಅವರ ಮುಖ ಗಳು ರಕ್ತವರ್ಣವಾಗಿದ್ದವು !

ಪುಷ್ಪಮಹಲಿನಲ್ಲಿ ಮರುದಿನ ಇಪ್ಪತ್ತೆರಡು ಗಂಟೆಯಿಂದ ವಿಶೇಷ ದಟ್ಟಣೆಯಿದ್ದಿತು. ಅಂದು ಜೂನ ತಿಂಗಳ ೨೬ ನೇ ದಿನಾಂಕ ! ಹೆಚ್ಚಾಗಿ ಹೊಸ ಪ್ರವಾಸಿಕರು ಬಂದಂತೆ ಕಂಡಿತು. ಪಶ್ಚಿಮ ಜರ್ಮನಿ, ಅಮೇರಿಕ ಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಪ್ರವಾಸಿಗರು ಬಂದಿದ್ದರು. ಉಳಿದ ಐರೋಪ್ಯ ದೇಶಗಳ ನಾಗರಿಕರು ಕೂಡ ಬಂದಿದ್ದರು. ಅಖಂಡ ಏಶಿಯಾ ಖಂಡದ ಪ್ರತಿನಿಧಿತ್ವ ನನ್ನ ಕಡೆ ಗಿತ್ತು. ಏನಾದರೂ ವೈಶಿಷ್ಟ್ಯವನ್ನು ತೋರಿಸ ಬೇಕೆಂಬ ಅಭಿಮಾನ—ಬೇಡೆಂದರು ಕೂಡ —ಮನದಲ್ಲಿ ಹಣಿಕಿಕ್ಕುತ್ತಲಿತ್ತು.

೨೨|| ಗಂಟೆಯಾಗಿತ್ತು. ನಮ್ಮ ಎದುರಿನಲ್ಲಿ ಸ್ವಲ್ಪ ಎಡಮಗ್ಗಲಲ್ಲಿ ಒಂದು ದೈದೀಪ್ಯಮಾನ ತೇಜೋಗೋಲವು ವಿದುರಿನಲ್ಲಿಯ ಪರ್ವತ ಶಿಖರದಲ್ಲಿ ವಿರಾಜಮಾನವಾಗಿತ್ತು. ಅದರ ಮನೋಹಾರಿಯಾದ ಪ್ರತಿಬಿಂಬವು ಎದುರಿನಲ್ಲಿಯ ಟೋರ್ನಸ್ಟ್ರೇಕ್ ಜಲಾಶಯ ದಲ್ಲಿ ರಮಮಾಣವಾಗಿತ್ತು. ತೇಜಸ್ಸಿನ ಶುಭ್ರ ಸೆಳಕೊಂದು ಆ ತೇಜೋಗೋಲಿನಿಂದ ಹೊರ ಬಿದ್ದು ನೀರಿನಲ್ಲಿ ಈಜಾಡಲಾರಂಭಿಸಿದ್ದಿತು. ಪ್ರಾರಂಭದಲ್ಲಿ ಇಕ್ಕಟ್ಟಾಗಿ ಬರಬರುತ್ತ ಅಗ-ಲಗಲಾಗಿ ಪಸರಿಸಿತ್ತು. ಅದಕ್ಕೊಂದು ಸೂಕ್ಷ್ಮವಾದ ಕಿರು ಪರದೆ. ಆ ಕಿರು ಪರದೆಯ ರಂಗಸಂಗತಿಯನ್ನು ವರ್ಣಿಸುವುದಸಾಧ್ಯ. ರಕ್ತವರ್ಣದ ನೆರವಿನಲ್ಲಿ ಕೇಸರಿವರ್ಣ, ಅದಕ್ಕೆ ಹೊಂದಿಕೊಂಡ ನೀಲಿ ಹಾಗು ಬಿಳಿಬಣ್ಣ—ಆ ಮೇಲೆ ನೀರಿನ ನೀಲವರ್ಣದ ಸಮ್ಮಾರ್ಜನೆ ! ಕಿಂಚಿತ್ ಬಣ್ಣ ಬದಲಿಸಿದ ಇಂದ್ರಧನುಸ್ಸಿನ ಕಿರಿಪರದೆಯಾಗಿದ್ದಿತೇ ಅದು ?

ಪರ್ವತಗಳ ಆ ಶ್ರೇಣಿಯಿಂದ ತೇಜಃಪುಂಜ ವಾದ ಮಾಣಿಕವು ಸಾವಕಾಶವಾಗಿ ಬಲಬದಿ ಯಲ್ಲಿ ಭ್ರಮಿಸುತ್ತಲಿದ್ದಿತೋ ಏನೋ ? ಅದರ ಜತೆಯಲ್ಲಿ ಆ ತೇಜಸ್ವಿ ರೇಷೆಕೂಡ ! ಏನು, ಯಾವಳೊಬ್ಬ ಅಪ್ಸರೆಯು ತನ್ನ ಆಕಾಶದೀವಿಗೆಯನ್ನು ತೆಗೆದುಕೊಂಡು ಆ ಪ್ರಶಾಂತಪ್ರದೇಶದಲ್ಲಿ ಮೆಲ್ಲಮೆಲ್ಲನೆ ಮಾರ್ಗ ಕ್ರಮಿಸುತ್ತಿರುವಳೇ? ಇಲ್ಲವೆ ಪೌರ್ಣಿಮೆಯ ಚಂದ್ರನು ಸೂರ್ಯನಲ್ಲಿ ಕಳವುಮಾಡಿ ಆತನ ಒಂದಿಷ್ಟು ತೇಜವನ್ನು ತನ್ನ ಮುಖಕ್ಕೆ ಬಳಿ ದುಕೊಂಡು ಈಗ ಆ ಪರ್ವತಶಿಖರದಲ್ಲಿ ತಲೆಮರೆಸಲು ಸ್ಥಳ ಶೋಧಿಸುತ್ತಿರಬಹುದೆ?

ಬಹುಶಃ ಎಲ್ಲರೂ ದೂರದರ್ಶಕ ಯಂತ್ರ ಹಾಗೂ ಕ್ಯಾಮೆರಾಗಳನ್ನು ಸೂರ್ಯನತ್ತ ಹಿಡಿ ದಿದ್ದರು. ಪ್ರೇಕ್ಷಕರಲ್ಲಿ ಎಷ್ಟೊಂದು ಉತ್ಸು ಕತೆ ? ಮಧ್ಯದಲ್ಲಿಯೇ ಒಂದು ಬಿಳಿ ಮೋಡ ಬಂದು ಮೂರು ನಾಲ್ಕು ನಿಮಿಷಗಳಲ್ಲಿ ಮಗ್ನ ಲಾಯಿತು. ಸೂರ್ಯನು ಧವಲವಸ್ತ್ರದಿಂದ ತನ್ನ ಮುಖಮಣಿಯನ್ನು ಒರಿಸಿಕೊಂಡಿದ್ದ ನೇನೋ ! ಇಪ್ಪತ್ತನಾಲ್ಕು ಗಂಟೆಗೆ ಪೃಥ್ವಿಯ ನಾಟ್ಯರಂಗದಲ್ಲಿಯ ಆತನ ಆಗಮನವನ್ನು ನಿರೀಕ್ಷಿಸಲು ಲಕ್ಷಾವಧಿ ಮಾನವರು ಉತ್ಕಂಠೆ ಯಿಂದ ದಾರಿಕಾಯುವರಲ್ಲವೇ ?

ಇಪ್ಪತ್ತುನಾಲ್ಕು ಗಂಟೆಗೆ ಐದಾರು ನಿಮಿಷ ಗಳಿರುವಾಗ ಮತ್ತೊಮ್ಮೆ ಹಿಂಜಿದ ಅರಳೆ ಯಂತಿರುವ ಮೋಡದ ಒಂದು ತುಣುಕ ರವಿ ರಾಜನ ಎದುರಿನಲ್ಲಿ ಆಸನ ಚಲ್ಲಿತು. ಈವಾಗ ಮಾತ್ರ ನಮ್ಮ ಚಿತ್ತ ಚಂಚಲವಾಯಿತು. ಓರ್ವ ಅಮೇರಿಕನ್ ವೃದ್ಧೆ ಉದ್ಗಾರ ತೆಗೆದಳು

"ಲ್ಯಾಪಲ್ಯಾಂಡಿನದು ಇದು ನನ್ನ ಈ ಮೂರನೇ ಸಂದರ್ಶನ. ಹಿಂದಿನ ಎರಡು ಸಲ ಕೂಡ ಹೀಗೆಯೇ ಆಗಿದ್ದಿತು ನೋಡಿ! ಸರಿಯಾಗಿ ಇಪ್ಪತ್ತುನಾಲ್ಕು ಗಂಟೆಗೆ ಸೂರ್ಯನು ಮೇಘಾಚ್ಛಾದಿತನೇ! ನಾನು ಈವಾಗ ವೃದ್ಧೆಯಾದೆ. ಇನ್ನು ಮುಂದೆಂದು ಬರುವದಾಗುತ್ತೆ? ನನ್ನ ಜೀವನದಲ್ಲಿ ಈ ಚಮತ್ಕಾರವನ್ನು ನೋಡುವ ಯೋಗವೇ ಇಲ್ಲವೆನ್ನಿ!" ಆಕೆಗೆ ಅತೀವ ದುಃಖವಾಗಿದ್ದಿತು.

"ಇದಕ್ಕಿಂತಲೂ ಆ ಪರ್ವತಶಿಖರದಲ್ಲಿ ಒಂದು ಪ್ರಚಂಡ ವಾಯುಯಂತ್ರವನ್ನಿಟ್ಟರೆ ಹೇಗೆ? ಮೋಡ ಬಂದುದನ್ನು ನೋಡಿದಾಕ್ಷಣ ಇಲ್ಲಿಂದಲೇ ಬಟನ್ ಒತ್ತುವುದು, ಗಾಳಿಯ ಪ್ರಚಂಡ ಸೆಳಕುಗಳನ್ನು ಬಿಡುವುದು, ಹಾಗೂ ಮೋಡಗಳ ಸೈನ್ಯವನ್ನು ದಿಕಾಪಾಲಾಗಿ ಚದುರಿಸುವುದು!" ಈ ಯಾಂತ್ರಿಕ ತಾಂತ್ರಿಕ ಕಲ್ಪನೆಯನ್ನು ಮುಂದಿಟ್ಟ ಮಹಾನುಭಾವ ಓರ್ವ ದೊಡ್ಡ ಜರ್ಮನ್ ಕಾರಖಾನೆದಾರನಿದ್ದನೆಂಬುದನ್ನು ಬೇರೆ ಹೇಳಬೇಕಿಲ್ಲ.

ನಮ್ಮ ಈ ಆಕ್ಷೇಪಣೆಗಳನ್ನು ಆ ಕಿಡಿಗೇಡಿ ಮೇಘಗಳು ಕೇಳಿದವೇನೋ! ಅವು ಮೇಲೇರಿದವು. ದೇವಾಲಯದ ಅರ್ಚಕನು ಗರ್ಭಗುಡಿಯ ಬಾಗಿಲು ತೆರೆದಂತಾಯಿತು. ಸರಿಯಾಗಿ ಇಪ್ಪತ್ತುನಾಲ್ಕು ಗಂಟೆಗೆ ಆದಿತ್ಯಮಹಾರಾಜನು ಮೇರುಪರ್ವತದ ಸಿಂಹಾಸನವನ್ನೇರಿ ಕುಳಿತನು. ಮೇಲೆ ಮೇಘಮಂಡಲವು ಚಾಮರಗಳನ್ನು ಬೀಸುತ್ತಿದ್ದಿತು. ಆಕಾಶದಲ್ಲಿ ಸಿಂಧೂರ ಗುಲಾಲುಗಳ ಮಳೆಗರೆಯುತ್ತಿತ್ತು. ಎದುರಿನಲ್ಲಿದ್ದ ಸರಸ್ಸಿನಲ್ಲಿ ವಿವಿಧ ಬಣ್ಣಗಳ ರಂಗವಲ್ಲಿ ಹಾಕಿದಂತಿದ್ದಿತು. ಸ್ವರ್ಗದಲ್ಲಿಯ ದೇವದೇವತೆಗಳು ಭಾಸ್ಕರದೇವನ ಪೃಥ್ವಿಯ ಪರ್ಯಟನದ ದಣಿವನ್ನು ಕಡಿಮೆ ಮಾಡಲು ಅಮೃತಾಭಿಷೇಕ ಮಾಡುತ್ತಿದ್ದರು! ಆ ಅಭಿಷೇಕತೀರ್ಥದ ನವರಸಮಯ ನವರಂಗದ ಕುಂಡ ನಮ್ಮ ಮುಂದೆ ಪಸರಿಸಿತ್ತು!

ಉತ್ಕಂಠಿತ ನೇತ್ರಗಳಿಂದ ನಾವು ಒಂದೇ ಸವನೆ ಎದುರಿನಲ್ಲಿದ್ದ ದಿವ್ಯದೃಶ್ಯವನ್ನು ನೋಡುತ್ತಿದ್ದೆವು. ಎವೆಯಿಕ್ಕಿದರೆ ಕೂಡ ಏನಾದರೂ ಜಾರಿಹೋಗಬಹುದೆಂಬ ಅಂಜಿಕೆಯಿಂದ ನಾವು ಆ ಪ್ರಭಾಕರನ ಪ್ರಭೆಯನ್ನು ನೇತ್ರಗಳಲ್ಲಿ ಸಂಗ್ರಹಿಸುತ್ತಿದ್ದೆವು. ಸೂರ್ಯನಿಗೆ "ಮಿತ್ರ" ನೆಂಬ ಹೆಸರು ಹೇಗೆ ಬಂದಿತೆಂಬುದು ಈವಾಗ ನನ್ನ ಗಮನಕ್ಕೆ ಬಂದಿತು. ಮಮತೆಯ ಮಿತ್ರನಂತೆ ಸ್ನೇಹಮಯ ಮುದ್ರೆಯಿಂದ ಆತನು ಎದುರು ಕುಳಿತಿದ್ದನು. ಆತನ ದೃಷ್ಟಿಗೆ ದೃಷ್ಟಿಯನ್ನಿಟ್ಟರೂ ಕಣ್ಣು ಕುಕ್ಕುತ್ತಿರಲಿಲ್ಲ. ತಿರುಗಿ ಆ ಮಧುರ ಹಾಗೂ ಪ್ರಸನ್ನ ದರ್ಶನದಿಂದ ಹಿತವಾಗುತ್ತಲಿದ್ದಿತು. ಆತನ ಗುಲಾಬಿ ಮುಖದಲ್ಲಿ ಏನೂ ಕಾಣುತ್ತಿರಲಿಲ್ಲ? ಅಲ್ಲಿ ಕಾವ್ಯ ಬರೆದಿತ್ತು, ಪ್ರೀತಿ ಪ್ರೇಮಮೂಡುತ್ತಲಿದ್ದಿತು. ನೃತ್ಯವು ನಡೆದಿದ್ದಿತು, ಹಾಡು ಹಾಡುತ್ತಿದ್ದಿತು, ಜೀವನ ಬೆಳಗುತಿದ್ದಿತು!

ನಮ್ಮ ಪ್ರೇಕ್ಷಕರೆಲ್ಲರ ಹೃದಯಗಳು ಆ ದಿವಾಕರನ ದರ್ಶನದಿಂದ ಅರಳಿದ್ದುವು, ತುಂಬಿ ಬಂದಿದ್ದವು! ನಮ್ಮ ದೇಹದಲ್ಲಿ ಆಕಾಂಕ್ಷಾಪೂರ್ತತೆಯ, ಸಫಲತೆಯ ರೋಮಾಂಚಗಳೇಳುತ್ತಿದ್ದವು.

ದಂಪತಿಗಳು, ಪ್ರಿಯಾ-ಪ್ರಿಯಕರರು, ಆಪ್ತೇಷ್ಟರು ಪಾಶ್ಚಿಮಾತ್ಯ ಪದ್ಧತಿಯಿಂದ ಒಬ್ಬರನ್ನೊಬ್ಬರು ಚುಂಬಿಸಿದರು. ಆ ಅಮೇರಿಕನ್ ವೃದ್ಧೆಯ ನೇತ್ರಗಳಲ್ಲಿ ಆನಂದಾಶ್ರುಗಳು ಧಾರಾವಾಹಿಯಾಗಿ ಹರಿಯುತ್ತಿದ್ದವು. ಆಕೆಯೆನ್ನುತ್ತಿದ್ದಳು, "ಸೃಷ್ಟಿಸೌಂದರ್ಯದ ಈ ಅದ್ಭುತ ನೃತ್ಯವನ್ನು ಕಂಡ ಮಾನವ ಜೀವನವೇ ಧನ್ಯ 'Life is fun, life is worth living' ಎಂದೆನಿಸುತ್ತಿದೆ."

ನನ್ನ ಎಡಗೈಯಲ್ಲಿ ಯಾರೋ ತನ್ನ ಕೈ ಸಿಕ್ಕಿಸಿದಂತಾಯಿತು. ಆಕೆ ಕರೀನಳಾಗಿದ್ದಳು. ಬಲಗೈಯನ್ನು ಎಲಿಝಾ ಹಿಡಿದಿದ್ದಳು.

ಕರೀನ ಒಮ್ಮೆಲೇ ಎದುರುನೋಡಿದಳು. "ಈವಾಗ ಹಿಂದುಸ್ತಾನದಲ್ಲಿ ಪ್ರಾತಃಕಾಲವಿರಬಹುದಲ್ಲವೆ? ಈವಾಗ ನನ್ನ ಭಗಿನಿ ಅಲ್ಲಿ ಹಾಡುತ್ತಿರಬಹುದು, "ಘನಶ್ಯಾಮ ಸುಂದರಾ ಶ್ರೀಧರಾ . . . ." ಎಂದು."

ಆಕೆಯ ಕಂಠ ಬಿಗಿದುಬಂದಿತು. ನನ್ನದು ಕೂಡ.

ಮುಂದಿರುವ ಅವರ್ಣನೀಯ, ಸೌಂದರ್ಯಾತಿಶಯದ, ಸುಮನೋಹರ ದೃಶ್ಯವನ್ನು ನೋಡುತ್ತ ಹಾಗೆಯೇ ನಿಂತೆವು ನಾವು...

ನಮ್ಮ ಮಾತೃಭೂಮಿ, ಮನೆಯ ಜನರ ಸ್ಮರಣೆಯನ್ನು ತಂದುಕೊಡುತಿದ್ದಿತು!



# ಬೃಂದಾವನದಲ್ಲಿ

೧

ಕಾವೇರಿತೀರದಾವರಣದಲ್ಲಿ
  ಬೃಂದಾವನಾಂಗಣದಲಿ
ವಿಜ್ಞಾನಪ್ರಕೃತಿ ಕೈತಾಳವಿಕ್ಕೆ
  ಜಲ ಕುಣಿವರಂಗದಲ್ಲಿ
ಕೂಡಿತ್ತು ಅಖಿಲ ಭಾರತದ ಸಕಲ
  ಭಾಷೆಗಳ ಸ್ನೇಹಶಿಬಿರ
ಹೊಮ್ಮಿತ್ತು ಸರಸಬಾಂಧವ್ಯ, ಹೃದಯ
  ತೆರೆದಿರಲು ಮೈತ್ರಿಮಧುರ

೨

ಸಚ್ಚಿತ್-ಸುಹಾಸ ಸುಮನೋವಿಲಾಸ-
  ಮಯ ಸನ್ನಿವೇಶದಲ್ಲಿ
ಸಾಹಿತ್ಯಯಾತ್ರೆಗೈತಂದ ಬಾಂಧವರು
  ಮಿಂದು ತೋಷದಲ್ಲಿ
ನುಡಿ-ವೀಣೆ ನುಡಿಸೆ ಸ್ಪಂದಿಸಿದ ನಾದ-
  ನದಿಯಲ್ಲಿ ತೇಲಿ ತೇಲಿ
ಭಾರತಿಯ ಮೂರುತಿಯ ಮರಳಿ ಕಂಡ-
  ರನುಭವದ ಅಲೆಗಳಲ್ಲಿ

೩

ಪರಿಮಳವದೇನು ! ನಂದನದೊಳಲ್ಲಿ
  ಅರಳಿದೊಲು ಸುಮನ ಸುಮನ
ಅರುಹೆಂಬ ಅರುಣ ಕಿರಣಿಸಿರೆ ಹಿಗ್ಗಿ-
  ನುಲಿಯಲ್ಲಿ ಹಕ್ಕಿ ಮಗ್ನ
'ಇದೆ ಸುಪ್ರಭಾತ'! ಎಂದೆನಲು ದಿಕ್ಕು
  ದಿಕ್ಕಿನಲಿ ಹೊಳೆವ ತೇಜ
ಸಾಹಿತ್ಯ—ರಥಕೆ ಸ್ವಾಗತವ ಬಯಸಿ
  ತೆರೆದಿತ್ತು ಕ್ಷಿತಿಜಪಥವ

೪

ಸಲ್ಲೀಲೆಗೈವ ಆ ಸಲಿಲಶ್ರುತಿಗೆ
  ಸಂಜನಿಸೆ ಚಿತ್ತಯೋಗ
ಸುವಿಚಾರಬೆರೆದ ಸಂಕಿರಣಧಾರೆ
  ಮೇಳೈಸಿತೆಲ್ಲ ರಾಗ
ಚೆಲ್ವಾದುದೆಲ್ಲ ಚೇತನಕೆ ಸಂದು
  ಸೆಲೆಗೊಳುವ ನೈಜಸ್ಫೂರ್ತಿ
ಕಾಶ್ಮೀರದಿಂದ ಕನ್ಯಾಕುಮಾರಿ
  ದರುಶನಕೆ ಒಂದೆ ಮೂರ್ತಿ

೫

ರಂಜಿಸುವ ದೃಶ್ಯ ! ಕಾರಂಜಿಮುಗಿಲಿ-
  ಗೀಯುತಿದೆ ಜಲದ ಮುತ್ತು !
ನಗದೇನು ಇಡಿಯ ಈ ನಾಡಚೆಲುವು ನೆಲ
  ನೆಲದಿ ಬೆಳೆಯೆ ನಂಟು
ಮಳೆಬಿಲ್ಲು ಮನಕೆ ಸಿರಿ ಸುರಿವುದೆಂತು ?
  "ಹೊಂದಿಕೆಯ ಛಂದವರಿತು"
ಲೇಖನದ ಮಾಲೆ ಮೇಖಲೆಯ ಹಾಗೆ:
  ಸುಳಿದಿರಲಿ ಸ್ವರ್ಣತಂತು

೬

ನೆಯ್ಯುತಿದೆ ನೀಲವದೊ ಮುಗ್ಗದಲ್ಲಿ
  ಮೌಕ್ತಿಕದ ಝುಲ್ಲರಿಯೆನೆ
ಸೋಪಾನವಿಳಿವ ಜಲ ರೂಪಿಸಿಹುದು
  ಹೊಸ ಪಚ್ಚ ಪಸಲೆಗಳನೆ
ಕಂಗಳಿಗೆ ಮತ್ತೆ ರಂಗುಗಳಿಗಿಲ್ಲಿ
  ಸಾಗಿಹುದು ಸೊಬಗಿನಾಟ
ಸಾಹಿತ್ಯದಲ್ಲಿ ಚಿತ್ತಕ್ಕೆ ತೆರೆದು
  ನಿಲಲಣ್ಣ ಇಂಥ ನೋಟ !

೭

ಮೈಸೂರ ಪವನ ಪಯಣಿಸದೆ ಮೇಲೆ
  ಶ್ರೀನಗರ ಕಂಪಿನೆಡೆಗೆ ?
ಪ್ರಾಚೀನ ಸಿಂಧು—ತಟ ಗಂಧತೀಡೆ
  ಮಕರಂದಲಹರಿ ಕೃಷ್ಣೆ !
ನುಡಿನುಡಿಯ ಕುಡಿಯ ಕೊನರಿಸಿಹ ನಯವು
  ಅದೆ ಸುಪ್ರಸಾದ ಮತಿಗೆ
ರಸರಾಗಲಕ್ಷ್ಮಿ ಸದ್ಭಾವಶಕ್ತಿ
  ಸಾಹಿತ್ಯ ಸರಸವತಿಗೆ

೮

ಕಾವೇರಿತೀರದಾವಲಯದಲ್ಲಿ
ಜಲ ಉಲಿವ ರಂಗದಲ್ಲಿ
ವಿಜ್ಞಾನಪ್ರಕೃತಿ ಸಹಕರಿಸಿ ಬಾಳನೆಲಿ
  ಸುಳುಹಗೊಳಿಸುವಲ್ಲಿ
ಹೊಸ ಹೊಳಪ ಸೂಸೆ ಭಾರತದ ಭಾಷೆ
  ಭಾಷೆಗಳ ಸಹಜ ಮಿಲನ
ಬರಲಿಹ ವಿಶಾಲ ಬಗೆಬನದ ರೂಹ
  ರೇಖಿಸದೆ ನಯನ ನಯನ ?

—ಡಿ. ಎಸ್. ಕರ್ಕಿ.
ಹುಬ್ಬಳ್ಳಿ

# ಲೋಕವೇ ಸಾಕ್ಷಿ

[ಆತ್ಮವೆಂಬ ಕೋಗಿಲೆಗೆ "ದುರುಳ ಕಂತುವಿನೊಡನಿರೆ ಲೋಕದೊಳು ನಿನ್ನ ಪರಪುಟ್ಟನೆಂಬರು" ಎಂದು ನಿಜಗುಣ ಶಿವಯೋಗಿಗಳು ಎಚ್ಚರಿಕೆಯಿತ್ತಿರುವರು. ಆದರೂ ಕೋಗಿಲೆಗೆ 'ಪರಪುಟ್ಟ' ನಾಗದೆ ಗತಿಯಿಲ್ಲವೆಂದೆನಿಸುತ್ತದೆ. ಕೋಗಿಲೆಯ ಕಲಕಂಠಕ್ಕೆ ನಾವು ಮಾರುಹೋದರೂ ಕಾಮವನ್ನು ಲಘುವಾಗಿ ಕಾಣುವುದರಲ್ಲಿ ಅರ್ಥವಿಲ್ಲ. ಅದೂ ಒಂದು ಪುರುಷಾರ್ಥವಾಗಿದೆ; ಜೀವ-ಜೀವನದ ಚೇತನವಾಗಿದೆ.]

೧

ಕಾಗೆ ಕೂಗದ ಮುನ್ನ
ಈ ಇಲ್ಲಿ ಏನಿತ್ತಣ್ಣ?
ಬರೀ ಅಂಧಕಾರದ ಶೂನ್ಯಸಿಂಹಾಸನ !
ಕಾಗೆಕೂಗಿನ ಸುಖದ ಸೋಂಕಿನಿಂದಲೆ ಕಾಣ
ಪ್ರಕೃತಿಯ ಮೃದಂಗ ಚೇತರಿಸಿ ಹರಿಹರಿಸಿತ್ತು ಗಂಧರ್ವಗಾನ !
ಆ ಅದರ ಜಾಡನ್ನೆ ಹಿಡಿದು ಬಂದಿಹ ಬೆಳಕು
(ತಾನಸೇನನ ರಾಗ-ದೀಪಕದ ಸವಿ ಸೆಳಕು!)
ಜೀವಜಾತಕ್ಕೆಲ್ಲ ಆಯಿತ್ತು ಪ್ರಾಣಕೇತನ !
        ಚಿರಂತನವಹ ಚೇತನ!

೨

ಇಂಥ ಈ ಕಾಗೆ ಇರುವೀ ಮರದದಾವುದೊ ರೆಂಬೆಯಲ್ಲಿಹುದಂತೆ
ಒಂದು ಸಿರಿ ಕೋಕಿಲ!
ಕನ್ನಡಿ ಕಪಾಟಿನೊಳು ಕಾದಿಟ್ಟ ಹೆಣವನ್ನಿಳಿದು
ನಾನಂತು ಅದನಿಂದುವರೆ ಕಂಡುದಿಲ್ಲ.
(ಅದಕೂ ಮುಖ ತೋರಿಸಲಿಕಿಲ್ಲವೇನೋ ಮನೋಬಲ!)
ಅಂಥ ಆ ಕೋಗಿಲೆಯ ಆತ್ಮಗಾನವ ಹಾಡಿ ಹೊಗಳುವವರೇ ಎಲ್ಲ.
(ಜನ ಮರುಳೋ ಜಾತ್ರೆ ಮರುಳೋ ಎಂಬುದು ಸುಳ್ಳಲ್ಲ !)
ಆದರಾ ಕೋಗಿಲೆಗಾದರೂ ಇರಬೇಕಲ್ಲ—
ಕಾವು ಕೊಟ್ಟು, ಜೀವ ನೀಡಿ ಜೋಪಾನ ಗೆಯ್ದ
ಈ ಕರುಣಾಳು ಕಾಗೆಯ ಖ್ಯಾಲ?
ಹ್ನೂಂ, ಸರಿ; ಹೊಳೆ ದಾಟಿದ ಮೇಲೆ ಅಂಬಿಗನ ಮಿಂಡ
ಎನುವಂತೆ ನಡೆಯುತಿಹುದಾ ಕೋಗಿಲೆ-ತಾಯಿಗ್ಗಂಡ !

೩

ಆ ಪರಪುಟ್ಟ ಬಗೆದರು ಎರಡು
ನಮ-ನಿಮಗದೇತಕ್ಕೆ ಇಲ್ಲದ ಕುರುಡು ?
ಈ ಕಾಗೆಯಿಂದಲೆ ಅಲ್ತೆ ನಮ್ಮೆಲ್ಲರ ಬೆಳಗು-ಬೈಗು? ಆಗು ಹೋಗು?
ಅದಕೆಂದೆ ತೆರೆದೆಮ್ಮ ತಿಳಿಗಣ್ಣ
ಅರಿತುಕೊಳ್ಳುವುದು ಒಳಿತಣ್ಣ;
ಈ ಕಾಗೆ ಅಲ್ಲ— ಅಂಥಿಂಥ ಪಕ್ಷಿ;
ಇದು ಏಕಾಕ್ಷಿ !
ನಂ ನಿಮ್ಮ ಸತ್ ಅಕ್ಷಿ, ಚಿತ್ ಅಕ್ಷಿ, ಆನಂದದಕ್ಷಿ !
ಜೀವ-ಜೀವನ ರಕ್ಷಿ !
ಲೋಕವೇ ಸಾಕ್ಷಿ !

—ಎಂ. ಅಕಬರ ಅಲಿ
ಕಾರವಾರ



ಲೇಖಕರು :
ಡಾ|| ಅನುಪಮಾ ನಿರಂಜನ,
ಬೆಂಗಳೂರು

ವೈದ್ಯರು ಇಂದು ಎದುರಿಸುತ್ತಿರುವ ಸಮಸ್ಯೆಗಳು ಹಲವಾರು ಗ್ರಾಮಾಂತರ ಪ್ರದೇಶದಲ್ಲಿ ಅಜ್ಞಾನದಿಂದ ರೋಗರುಜಗಳಿಗೆ ತಕ್ಕ ಚಿಕಿತ್ಸೆ ಮಾಡಿಸಿಕೊಳ್ಳಲು ಮುಂದಾಗದಿದ್ದರೆ ಪಟ್ಟಣಿಗರು ಅರ್ಧಜ್ಞಾನದಿಂದಾಗಿ ಇದು ಅದಲ್ಲವೇ ಎಂದು ತಾವೇ ನಿರ್ಣಯಿಸಿಕೊಂಡು ಡಾಕ್ಟರರನ್ನು ವಿಚಾರಿಸುವುದು ಉಂಟು. ಮಹಿಳೆಯರಲ್ಲೂ ಕೆಲವು ತಪ್ಪು ಭಾವನೆಗಳು ಬೇರೂರಿರುವವು. ಇವನ್ನು ನಿವಾರಿಸುವ ಬಗೆ ಹೇಗೆ ಎಂಬುದನ್ನು ಲೇಖಿಕೆಯರು ಇಲ್ಲಿ ನಿರೂಪಿಸಿರುವರು.

# ನಮ್ಮ ವೈದ್ಯಕೀಯ ಸಮಸ್ಯೆಗಳು

ವೈದ್ಯಕೀಯ ಜಗತ್ತು ಬಲು ವಿಚಿತ್ರವಾದುದು. ಅದರಲ್ಲಿ ವಿಹರಿಸುವ ವೈದ್ಯ ಅತ್ಯಂತ ಸೂಕ್ಷ್ಮಜೀವಿಯಾಗಬೇಕು. ರೋಗಕ್ಕೆ ತಕ್ಕ ಔಷಧಿ, ಮಾತ್ರೆಗಳನ್ನು ಕೊಡುವುದಷ್ಟೇ ಆತನ ಕೆಲಸವಲ್ಲ. ರೋಗಿ ಒಬ್ಬ ವ್ಯಕ್ತಿ, ಅವನ ಹಿನ್ನೆಲೆಯಲ್ಲಿ ಸಮಾಜವಿದೆ— ಎಂಬ ಅರಿವು ವೈದ್ಯನಿಗಿರಬೇಕು. ಯಾಕೆಂದರೆ, ರೋಗ ದೈಹಿಕವೇ ಆಗಿರಬೇಕೆಂಬ ನಿಯಮವೇನೂ ಇಲ್ಲ. ಅದು ವ್ಯಕ್ತಿಯ ಮಾನಸಿಕ ಘರ್ಷಣೆಗಳಿಂದ ಉಂಟಾಗಿರಬಹುದು, ಸಂಸಾರದ ತೊಡಕು—ತಾಪತ್ರಯಗಳಿಂದ ಉಗಮವಾಗಿರಬಹುದು, ಇಲ್ಲವೆ ಸಮಾಜದ ರೂಪರೇಷೆಯೇ ಕಾಹಿಲೆಯ ಮೂಲವಾಗಿರಬಹುದು. ಆದುದರಿಂದ ವ್ಯಕ್ತಿಯ ಬದುಕಿನ ಹಿನ್ನೆಲೆಯನ್ನರಿತ ಹೊರತು, ಚಿಕಿತ್ಸೆ ಅನೇಕ ವೇಳೆ ಯಶಸ್ವಿಯಾಗಲಾರದು.

ದಿನನಿತ್ಯದ ಅಭ್ಯಾಸದಲ್ಲಿ ವೈದ್ಯ ವಿವಿಧ ಬಗೆಯ ಸಮಸ್ಯೆಗಳನ್ನೆದುರಿಸಬೇಕಾಗುತ್ತದೆ. ತೊಡಕುಗಳನ್ನು ಅರ್ಥಮಾಡಿಕೊಳ್ಳುವ ಸಹನೆ ಬೇಕು ಆತನಿಗೆ. ಅವನು ಅದನ್ನು ಬಿಡಿಸಬಲ್ಲ ಕುಶಾಗ್ರಮತಿಯಾಗಬೇಕು.

ವೈದ್ಯಕೀಯ ಸಮಸ್ಯೆಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು. ಹಳ್ಳಿಯಲ್ಲಿ ಕಾಣಬರುವ ಸಮಸ್ಯೆಗಳು ಒಂದು ಮುಖವಾದರೆ, ನಗರಗಳಲ್ಲಿ ತೋರಿಬರುವುವು ಇನ್ನೊಂದು ಮುಖ. ಈ ಸಮಸ್ಯೆಗಳು ಆಯಾಪ್ರದೇಶದ ಬದುಕು, ಜೀವನ ಹಾಗೂ ಸಂಸ್ಕೃತಿಗಳನ್ನು ಅವಲಂಬಿಸಿವೆ.

ಭಾರತದ ಹಳ್ಳಿಗಳಲ್ಲಿ ತಾಂಡವವಾಡುವುದು ಮುಖ್ಯವಾಗಿ ಬಡತನ. ಈ ಬಡತನದಿಂದಾಗಿ ಸಣ್ಣಕಾಹಿಲೆಗಳಿರಲಿ, ಜೀವಕ್ಕೆ ಮಾರಕವಾದಂಥ ಕಾಹಿಲೆ ಬಂದಾಗಲು ಕೂಡ ರೋಗಿಗೆ ಚಿಕಿತ್ಸೆ ಕೊಡಿಸಲು ಹಳ್ಳಿಗ ಅಸಮರ್ಥ. ಇವಕ್ಕಿಂತ ಹೆಚ್ಚಾಗಿ ಹಳ್ಳಿಗಳಲ್ಲಿ ಅಜ್ಞಾನ ಮತ್ತು ಮೂಢತನಗಳಿರುತ್ತವೆ. ಕುರುಡು ನಂಬಿಕೆಗಳು ಜನರಲ್ಲಿ ಆಳವಾಗಿ ಬೇರೂರಿರುತ್ತವೆ. ವ್ಯಕ್ತಿ ರೋಗಕ್ಕೆ ತುತ್ತಾದಾಗ, ಅದು ಕ್ರಿಮಿಗಳಿಂದ ಬಂದಿರಬೇಕೆಂಬ ವಾದವನ್ನು ಹಳ್ಳಿಗ ಒಪ್ಪುವುದಿಲ್ಲ. ಅದು ವ್ಯಕ್ತಿಯ ದುರದೃಷ್ಟ ಅಥವಾ ದೇವರ ಪ್ರಕೋಪದಿಂದ ಆಗಿರಬೇಕೆಂದು ಆತ ನಂಬುತ್ತಾನೆ. ಈ ನಂಬಿಕೆಯಿಂದಾಗಿ ಇಂಗ್ಲೀಷ್ ಔಷಧಿಗಳು ಅವರಿಗೆ ಅಪಥ್ಯವಾಗುತ್ತವೆ. ಅಂತಹ ಔಷಧಿಗಳನ್ನು ಸೇವಿಸಿದರೆ ದೇವತೆಗಳು ಮುನಿಯುತ್ತಾರೆ ಎಂಬ ಭಯವೂ ಇನ್ನೊಂದು ಕಾರಣ. ಪೂಜೆ-ಪುನಸ್ಕಾರಗಳಿಂದಲೇ ಕಾಹಿಲೆ ವಾಸಿಯಾಗಬಹುದೆಂದು ಅವರ ನಂಬಿಕೆ. ಹೀಗಾಗಿ ರೋಗಗಳು ವ್ಯಕ್ತಿಯ ಪ್ರತಿರೋಧ ಶಕ್ತಿಯ ನೆರವಿನಿಂದಲೇ ಗುಣವಾಗಬೇಕು ಅಷ್ಟೆ.

ಒಮ್ಮೊಮ್ಮೆ ಅಪರೂಪವಾಗಿ ದೈವವನ್ನು ಒಲಿಸುವ ಯತ್ನಗಳೆಲ್ಲ ಮುಗಿದ ಮೇಲೆ, ರೋಗಿ ಸಾವಿನ ಹೊಸತಿಲಲ್ಲಿರುವಾಗ ಕಡೆಯ ಪ್ರಯತ್ನವೆಂದು, ಜನರು ಆಸ್ಪತ್ರೆಗಳ ಮೊರೆಹೋಗುತ್ತಾರೆ. ಆದರೆ ರೋಗ ತೀರಾ ಉಲ್ಬಣವಾದಾಗ ರೋಗಿಯನ್ನು ಉಳಿಸಿಕೊಳ್ಳಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಹಾಗೆ ರೋಗಿ ಆಸ್ಪತ್ರೆಯಲ್ಲಿ ಸತ್ತಾಗ, ಆ ಆಸ್ಪತ್ರೆಗೆ ಹೋಗಿಯೇ ಹೀಗಾಯ್ತು; ಇಲ್ಲದಿದ್ದರೆ ಬದುಕುತ್ತಿದ್ದನೋ ಏನೊ!" ಎಂದೂ ಜನರು ಆಡಿಕೊಳ್ಳುತ್ತಾರೆ.

ಹೀಗೆ, ಹಳ್ಳಿಗಳಲ್ಲಿ ವೈದ್ಯ ಮೊದಲು ಎದುರಿಸಬೇಕಾದ ಸಮಸ್ಯೆ— ಜನರ ಅಜ್ಞಾನ. ಅವರಿಗೆ ತಿಳಿವಳಿಕೆ ಹೇಳುವಷ್ಟು ಅಪಾರ ತಾಳ್ಮೆ ವೈದ್ಯನಲ್ಲಿರಬೇಕು.

ಇಂತಹ ಸಹನಶಕ್ತಿ ಅನೇಕ ವೈದ್ಯರಲ್ಲಿ ಇರುವದಿಲ್ಲ. ಪದವೀಧರರಾದ ವೈದ್ಯರು ಹಳ್ಳಿಗಳಿಗೆ ಹೋಗಲು ಬಯಸದೇ ಇರುವುದಕ್ಕೆ ಇದೂ ಒಂದು ಕಾರಣ. ನಾಗರಿಕತೆಯಲ್ಲಿ ಮಿಂದುಬಂದ ಇವರಿಗೆ, ಬಡತನ—ಮೂಢತನಗಳು ಹೀನಾಯವಾಗಿ ಕಾಣುತ್ತವೆ. ಅಲ್ಲದೆ ಹಳ್ಳಿಗಳಲ್ಲಿ ವಾಸಿಸಲು ಸಾಕಷ್ಟು ಸೌಕರ್ಯಗಳಿಲ್ಲ. ಮನೋರಂಜನೆಗೂ ಅಲ್ಲಿ ಅವಕಾಶವಿಲ್ಲ. ತನ್ನ ಸ್ವಂತ ಸುಖದ ತ್ಯಾಗ ಮಾಡಬಲ್ಲ ವೈದ್ಯ ಮಾತ್ರ ಹಳ್ಳಿಗಳಿಗೆ ಹೋಗಿ ನೆಲಸಬಲ್ಲನು. ಹಾಗೆ ಯುವಜನಾಂಗದಲ್ಲಿ ಈ ಮನೋಭಾವ ಮೂಡಿಸುವುದೇ

ಒಂದು ಕಠಿಣತರ ಸಮಸ್ಯೆಯಾಗಿದೆ. ಬಲವಂತ ಮಾಘಸ್ನಾನದಿಂದ ಯಾವ ಪ್ರಯೋಜನವೂ ಇಲ್ಲ. ಮನವೊಲಿದು ಹೋದರೆ ಅವರಿಗೂ ಸೌಖ್ಯ; ಹಳ್ಳಿಗರಿಗೂ ಉಪಯೋಗ.

ಕೆಲ ಗ್ರಾಮಾಂತರ ಪ್ರದೇಶಗಳಲ್ಲಿ ಡಾಕ್ಟರುಗಳಿರುವರಷ್ಟೆ ? ಅಲ್ಲಿ ಕೆಲವೆಡೆ ಹೆಸರಿಗೆ ಒಂದು ಆಸ್ಪತ್ರೆಯೂ ಇರುತ್ತದೆ. ಆದರೆ ಆಸ್ಪತ್ರೆಯಲ್ಲಿ ಸಾಕಷ್ಟು ಅನುಕೂಲಗಳಿರುವುದಿಲ್ಲ. ಉದಾಹರಣೆಗೆ ರೋಗದ ಮೂಲವನ್ನು ಕಂಡುಹಿಡಿಯಲು ಕೆಲವು ಪರೀಕ್ಷೆಗಳನ್ನು ಮಾಡಬೇಕಾಗುತ್ತದೆ. ಎಕ್ಸರೇ-ಪರೀಕ್ಷೆ, ರಕ್ತ ಹಾಗೂ ಮಲ ಮತ್ತು ಮೂತ್ರಗಳ ಪರೀಕ್ಷೆ, ಕಾರ್ಡಿಯೋಗ್ರಾಮ್ ( ಹೃದಯದ ಕೆಲಸ ಸೂಚಿಸುವ ಚಿತ್ರ ), ಇತ್ಯಾದಿಗಳು ಹಳ್ಳಿಯ ಆಸ್ಪತ್ರೆಗಳಲ್ಲಿ ಲಭ್ಯವಿರುವುದಿಲ್ಲ. ಹೀಗಾಗಿ ಅಪರೂಪಕ್ಕೆ ಬರುವ ರೋಗಿಗಳೂ ವಿವರವಾದ ಪರೀಕ್ಷೆಗಾಗಿ, ನಗರದ ದೊಡ್ಡ ಆಸ್ಪತ್ರೆಗಳಿಗೆ ಹೋಗಬೇಕಾಗುತ್ತದೆ. ನಾಡಿನ ಆರ್ಥಿಕ ಸ್ಥಿತಿ ಉತ್ತಮಗೊಂಡು ಪ್ರತಿಆಸ್ಪತ್ರೆಗೂ ಎಲ್ಲ ಸೌಲಭ್ಯಗಳೂ ದೊರಕುವಂತಾದರೆ, ಈ ತೊಂದರೆ ಎಷ್ಟೋ ಮಟ್ಟಿಗೆ ಕಡಿಮೆಯಾಗುತ್ತದೆ.

ವೈದ್ಯರ ಅಭಾವದಿಂದಾಗಿ, ಹಳ್ಳಿಗಳಲ್ಲಿ ನೆಲಸಿದ ಕಂಪೌಂಡರುಗಳೋ ಅಥವಾ ಗಿಡಮೂಲಿಕೆಗಳು ಗೊತ್ತಿರುವ ಹಳ್ಳಿಯ ಪಂಡಿತರೋ, ಅಲ್ಲಿಗೆ ಮುಖ್ಯವೈದ್ಯರೆನಿಸಿಕೊಳ್ಳುತ್ತಾರೆ. ವೈದ್ಯಶಾಸ್ತ್ರ ಗೊತ್ತಿಲ್ಲದ ಅವರು ರೋಗವನ್ನು ಗುರುತಿಸಲಾರದೆ, ಅನುಭವದ ಆಧಾರದ ಮೇಲೆ ರೋಗ ಇಂಥದಿರಬೇಕೆಂದು ತರ್ಕಿಸಿ ಔಷಧ ಕೊಡುತ್ತಾರೆ. ರೋಗಿ ಗಟ್ಟಿಯಾಗಿದ್ದರೆ ಕಾಹಿಲೆ ವಾಸಿಯಾಗಬಹುದು. ಇಲ್ಲವಾದರೆ ವಾಸಿಯಾಗದೆಯೂ ಹೋಗಬಹುದು.

ಸಾಧಾರಣವಾಗಿ ಹಳ್ಳಿಗಳಲ್ಲಿ ಕಾಣಬರುವ ಕಾಹಿಲೆಗಳು ಅನಾರೋಗ್ಯಕರ ವಾತಾವರಣದಿಂದುಂಟಾದುವು. ಮನೆಯೊಳಗೆ ಮಾತ್ರವಲ್ಲ, ಮನೆಯ ಹೊರಗೂ ಸ್ವಚ್ಛವಾಗಿರಿಸಿಕೊಳ್ಳಬೇಕಾಗುದದು ಅಗತ್ಯ ಎಂಬುದನ್ನು ಹಳ್ಳಿಗರಿಗೆ ಮನದಟ್ಟು ಮಾಡುವುದು ಬಲು ಕಷ್ಟದ ಕೆಲಸ.

ಹಳ್ಳಿಗಳಲ್ಲಿ ಅತಿ ಹೆಚ್ಚಾಗಿ ಕಾಣಬರುವ ರೋಗಗಳೆಂದರೆ ಕ್ಷಯ, ಜೀವಸತ್ತ್ವ ಹಾಗೂ ಖನಿಜಗಳ ಅಭಾವದಿಂದುಂಟಾಗುವ ಕಾಹಿಲೆಗಳು. ಅಂಟು ಜಾಡ್ಯಗಳಾದ ಕಾಲರಾ, ಪ್ಲೇಗು, ಸಿಡುಬು ಇತ್ಯಾದಿ.

ಕ್ಷಯ ಮನೆಯಲ್ಲಿನ ಹಿರಿಯರಿಗೆ ಇದ್ದಿತೆಂದರೆ, ಅವರ ಸಹವರ್ತಿಗಳಾದ ಕಿರಿಯರಿಗೂ ಅದು ಬಲು ಬೇಗ ಹಬ್ಬುತ್ತದೆ. ರೋಗಿಯನ್ನು ಪ್ರತ್ಯೇಕವಾಗಿರಿಸುವ ವ್ಯವಸ್ಥೆಯಿಲ್ಲದೆ, ಔಷಧೋಪಚಾರವಿಲ್ಲದೆ ಕಾಯಿಲೆ ಗುಣವಾಗುವುದಾದರೂ ಹೇಗೆ? ಇದರ ಚಿಕಿತ್ಸೆ ಹಳ್ಳಿಗಳಲ್ಲಿ ದೊಡ್ಡ ಸಮಸ್ಯೆಯೇ ಸರಿ.

ಜೀವನಸತ್ವಗಳ, ಖನಿಜಗಳ ಅಭಾವ ಸಾಕಷ್ಟು ಪುಷ್ಟಿಯುತವಾದ ಆಹಾರವಿಲ್ಲದಿರುವುದರಿಂದ ಉಂಟಾಗುತ್ತದೆ. ಬಡತನ ನಿವಾರಣೆಯಾದಾಗಷ್ಟೇ ಈ ಕಾಯಿಲೆ ಮಾಯವಾದೀತು.

ಕುಡಿಯುವ ನೀರು ಶುಚಿಯಾಗಿಲ್ಲದಿರುವಿಕೆಯೇ ಹಳ್ಳಿಯಲ್ಲಿ ಅನೇಕ ಕಾಹಿಲೆಗಳಿಗೆ ಮೂಲ. ವಾಂತಿ, ಭೇದಿ, ಕಾಲರ, ಒಬ್ಬರಿಂದೊಬ್ಬರಿಗೆ ಹರಡಿ ನೂರಾರು ಜನರನ್ನು ಆಹುತಿ ತೆಗೆದುಕೊಳ್ಳುತ್ತದೆ. ಪ್ಲೇಗು ಕೂಡಾ ಇದೇ ಜಾತಿಯದು.

ಹಳ್ಳಿಯ ಮಕ್ಕಳಲ್ಲಿ ಕಾಣಬರುವ ಇನ್ನೊಂದು ಅಂಟು ಜಾಡ್ಯ ಸಿಡುಬು. ಸಿಡುಬು ಬಾರದಂತೆ ಮಕ್ಕಳಿಗೆ ದಾಕು ಹಾಕುವ ಅಭ್ಯಾಸ ಹಳ್ಳಿಗರಿಗೆ ರುಚಿಸದು. ಆದುದರಿಂದಲೇ ಸಿಡುಬಿನ ಪ್ರಮಾಣ ಹಳ್ಳಿಗಳಲ್ಲಿ ಹೆಚ್ಚಾಗಿದೆ.

ಹಳ್ಳಿಗಳಲ್ಲಿ ಗರ್ಭಿಣಿ ಸ್ತ್ರೀಯರ ಆರೈಕೆ ಸರಿಯಾಗಿರುವುದಿಲ್ಲ. ನಿಶ್ಯಕ್ತಿ ಹಾಗೂ ಖನಿಜಗಳ ಅಭಾವದಿಂದ ನರಳುವ ಈ ಸ್ತ್ರೀಯರಿಗೆ ಪ್ರಸವವೇದನೆ ಬಲು ಕಠಿಣತರವಾದದ್ದು. ಪ್ರಸವದ ತೊಂದರೆಗಳಿಂದ ಹಾಗೂ ಪ್ರಸವದ ಬಳಿಕ ಆಗುವ ರಕ್ತಸ್ರಾವಗಳಿಂದ [ಆ ಸಮಯದಲ್ಲಿ ವೈದ್ಯಕೀಯ ನೆರವು ಇಲ್ಲದಿರುವುದರಿಂದ] ಅನೇಕ ಜನ ಮಹಿಳೆಯರು ಸಾವನ್ನಪ್ಪುತ್ತಾರೆ. ಹಾಗೆಯೇ ಎಳೆಯ ಮಕ್ಕಳ ಸಾವಿನ ಸಂಖ್ಯೆಯೂ ಗ್ರಾಮ ಪ್ರದೇಶಗಳಲ್ಲಿ ಹೆಚ್ಚು. ಅನಾರೋಗ್ಯಕರ ವಾತಾವರಣದಲ್ಲಿ ವಾಂತಿ, ಭೇದಿ, ಜ್ವರ, ಎಳವು,



ಯಾವುದಾದರೂ ಸಣ್ಣ ಮಗುವಿಗೆ ಬಂದರೆ ಆದರ ಕತೆ ಮುಗಿದಂತೆಯೇ! ಹಳ್ಳಿಗಳಲ್ಲಿ ಬಹು ಮುಖ್ಯವಾದ ಈ ಸಮಸ್ಯೆಯನ್ನು ನಿವಾರಿಸಲು ಹೆಚ್ಚು ಜನ ಅನುಭವಿಕ ಸೂಲಗಿತ್ತಿಯರು ಅಗತ್ಯ.

ಭಾರತದ ನಗರಗಳಲ್ಲಿ ಇರುವ ವೈದ್ಯಕೀಯ ಸಮಸ್ಯೆಗಳೇ ಬೇರೆ.

ಇಲ್ಲಿ ಅವಿದ್ಯಾವಂತರಿದ್ದರೂ ವಿದ್ಯಾವಂತರ ಸಂಖ್ಯೆ ತುಸು ಹೆಚ್ಚು. ಜನ ವಿದ್ಯಾವಂತರಾದರೂ ರೋಗಗಳ ಬಗ್ಗೆ ತಿಳಿವಳಿಕೆ ಇವರಿಗಿರುವುದಿಲ್ಲ. ಇವರದು ಹಳೆಯ ಪದ್ಧತಿಗಳು ಹಾಗೂ ಹೊಸ ನಂಬಿಕೆಗಳ ಮಧ್ಯೆ ಜೋತಾಡುವ ತ್ರಿಶಂಕುಸ್ಥಾನ.

ನಗರಗಳಲ್ಲಿ ವೈದ್ಯ ಎದುರಿಸಬೇಕಾದ ಮುಖ್ಯ ಕಾಹಿಲೆಗಳೆಂದರೆ ಅತಿ ದಟ್ಟಣಿಯ ಜೀವನದಿಂದ ಉಗಮಿಸಿದ್ದು. ಆರೋಗ್ಯಕರ ವಾತಾವರಣದ ಬಗ್ಗೆ ಜನರಿಗೆ ತಿಳಿವಳಿಕೆಯಿದ್ದರೂ ಅನಿವಾರ್ಯವಾಗಿ ಅವರು ಜನದಟ್ಟಣಿಯ ಪ್ರದೇಶಗಳಲ್ಲಿ ವಾಸಿಸಬೇಕಾಗುತ್ತದೆ. ಎಲ್ಲ ಜನರಿಗೂ ಯಥೇಚ್ಛವಾದ ಗಾಳಿ ಮತ್ತು ಬೆಳಕುಗಳಿಲ್ಲದೆ, ಇಂಥ ಸ್ಥಳಗಳು ರೋಗಗಳ ಗೂಡಾಗುತ್ತವೆ.

ಸಾಮಾನ್ಯವಾಗಿ ಈ ಎಡೆಗಳಲ್ಲಿ ಕಾಣಬರುವುದು ಫ್ಲೂ, ಭೇದಿ, ವಾಂತಿ, ವಿಷಮಶೀತ ಜ್ವರ, ದಡ್ಡಾರ ಇತ್ಯಾದಿ. ಇವುಗಳ ವಿರುದ್ಧ ಈಗ ಚುಚ್ಚುಮದ್ದುಗಳಿದ್ದರೂ ಮಕ್ಕಳಿಗೆ ಅವನ್ನು ಕೊಡಿಸುವುದು ತಡವಾಗಿ ಅವರೂ ಅಂಟುಜಾಡ್ಯಗಳಿಂದ ನರಳುವುದನ್ನು ಕಾಣಬಹುದು.

ನಗರಗಳಲ್ಲೂ ಬಡತನ, ಅಜ್ಞಾನಗಳು ಇದ್ದೇ ಇವೆ. ಆಸ್ಪತ್ರೆ ಹಾಗೂ ತಜ್ಞವೈದ್ಯರು ಇದ್ದರೂ ಎಲ್ಲರೂ ಅವರ ಪ್ರಯೋಜನ ಪಡೆಯುವುದಿಲ್ಲ. ಕೈ ಮೀರಿದಾಗ ಬೇರೆ ದಾರಿಯಿಲ್ಲವೆಂದು ಆಸ್ಪತ್ರೆಗೆ ಬರುವ ಜನವೇ ಹೆಚ್ಚು.

ಮಧ್ಯಮವರ್ಗದ ಜನರಲ್ಲಿ ಕಾಹಿಲೆಯಾದೊಡನೆ ವೈದ್ಯರಲ್ಲಿ ಹೋಗುವ ಪದ್ಧತಿಯಿದೆ. ಕೆಲವು ಸಂಸಾರಗಳಲ್ಲಿ ಕಾಹಿಲೆಗಳ ಬಗ್ಗೆ ಅತಿ ಜಾಗರೂಕತೆಯನ್ನು ಕಾಣಬಹುದು. ನೆಗಡಿಯಾದರೆ ಸಾಕು, "ಡಿಫ್ತೀರಿಯಾ ಆಗಿದೆಯೇ ನೋಡಿ ಡಾಕ್ಟರೇ", ಎಂದು ಈ ಜನ ಕೇಳುತ್ತಾರೆ. ಕಾಹಿಲೆಗಳ ಬಗ್ಗೆ ಅರ್ಧಂಬರ್ಧ ತಿಳಿವಳಿಕೆ ಅಪಾಯಕಾರಿಯೇ ಸರಿ.

ನಗರಗಳಲ್ಲಿ ಹಳ್ಳಿಗಳಲ್ಲಿರುವ ಪ್ರಶಾಂತ ವಾತಾವರಣವಿಲ್ಲ. ಇಲ್ಲಿಯ ಜನ ಸದಾ ಅವಸರದಲ್ಲಿರುತ್ತಾರೆ. ಊಟಮಾಡುವಾಗಲೂ ಅವಸರವೇ. 'ಕೆಲಸಕ್ಕೆ ತಡವಾಯಿತು' ಎಂದು ಬಹು ಬಿಸಿ ಆಹಾರವನ್ನು ಅರ್ಧ ಹೊಟ್ಟೆ ಉಂಡು ಓಡುತ್ತಾರೆ. ತಡವಾದರೆ ಬಸ್ಸು ಹೊರಟುಹೋದೀತು ಎಂಬ ಕಾತರ, ಆಫೀಸು ಅಥವಾ ಕರ್ಮಾಗಾರಕ್ಕೆ ವಿಳಂಬವಾದೀತು ಎಂಬ ಅಳುಕು. ಸದಾ ಹೀಗೆ ವಿಕ್ಷುಬ್ಧತೆಯ ಮೇಲಿರುವುದು ನಗರವಾಸಿಯ ನರಗಳ ಮೇಲೆ ತುಂಬಾ ಪರಿಣಾಮವನ್ನುಂಟುಮಾಡುತ್ತದೆ. ಇದರಿಂದಾಗಿಯೇ ನಗರವಾಸಿಗಳಲ್ಲಿ ಜಠರದ ಅಥವಾ ಕರುಳಿನ ಹುಣ್ಣು, ಹೆಚ್ಚು ರಕ್ತದ ಒತ್ತಡ, ಹೃದಯದ ರೋಗಗಳು—ಇವನ್ನು ಬಹಳವಾಗಿ ಕಾಣಬಹುದಾಗಿದೆ. ನರಗಳನ್ನು ಸಾಂತ್ವನಗೊಳಿಸುವುದಕ್ಕೋಸ್ಕರ ಸೇವಿಸುವ ಧೂಮಪಾನ, ಮಾದಕ ಪಾನೀಯಗಳು— ಶ್ವಾಸಕೋಶ, ಗಂಟಲು ಹಾಗೂ ಜಠರದ ಕ್ಯಾನ್ಸರ್‌ಗಳಿಗೆ ಬಹುಮಟ್ಟಿಗೆ ಕಾರಣವಾಗುತ್ತದೆ. ಔದ್ಯೋಗೀಕರಣ ಹೆಚ್ಚುತ್ತ ಹೋದಹಾಗೆ, ಈ ಬಗೆಯ ಕಾಹಿಲೆಗಳೂ ಹೆಚ್ಚುತ್ತವೆಂದು ತಜ್ಞರ ಅಭಿಪ್ರಾಯ.

ನಗರಗಳಲ್ಲಿ ವೈದ್ಯರ ಮುಂದಿರುವ ಇನ್ನೊಂದು ಮುಖ್ಯ ಸಮಸ್ಯೆ ಕುಟುಂಬ ಯೋಜನೆಯದು. ಮಿತ ವರಮಾನವಿರುವ ನಗರವಾಸಿಗೆ ಹೆಚ್ಚು ಮಕ್ಕಳು ಹೊರೆಯಾಗುತ್ತಾರೆ. ಈ ಪ್ರಜ್ಞೆ ನಗರವಾಸಿಗೆ ಇರುವುದರಿಂದ ಆತ ಹೆಚ್ಚು ಮಕ್ಕಳನ್ನು ಬಯಸುವುದಿಲ್ಲ. ಆದರೆ ಈ ಯೋಜನೆಯನ್ನು ಕಾರ್ಯಗತ ಮಾಡುವ ವಿಚಾರದಲ್ಲಿ ಆತನಿಗೆ ಅಷ್ಟು ಶ್ರದ್ಧೆಯಿದ್ದಂತೆ ತೋರುವುದಿಲ್ಲ. ಮಹಿಳೆಯರ ವಿಷಯದಲ್ಲೂ ಅಷ್ಟೆ. ಕೃತಕ ಗರ್ಭನಿರೋಧಕ ಸಾಧನಗಳನ್ನು ಈಗ ಎಷ್ಟೋ ಜನ ಬಳಸುತ್ತಿದಾರೆ. ಆದರೆ ಅವುಗಳ ಬಗ್ಗೆ ತಿರಸ್ಕಾರವೇ ಹೊರತು ಆದರವಿಲ್ಲ. ಇದರಿಂದಾಗಿಯೂ ಅಜಾಗರೂಕತೆಯ ಫಲವಾಗಿಯೂ ಕೃತಕ ಸಾಧನಗಳು ಅನೇಕಸಾರೆ ಅಯಶಸ್ವಿಯಾಗುತ್ತವೆ.

ಕುಟುಂಬಯೋಜನೆಗಾಗಿ ಬಳಕೆಯಲ್ಲಿರುವ ಇನ್ನೊಂದು ಮಾರ್ಗವೆಂದರೆ ಶಸ್ತ್ರಕ್ರಿಯೆ. ಈ ಬಗ್ಗೆ ಅನವಶ್ಯಕವಾದ ಹೆದರಿಕೆ ಜನರಲ್ಲಿ ಬೇರೂರಿದೆ. ಎಷ್ಟೋಕಡೆ ಈ ಶಸ್ತ್ರಕ್ರಿಯೆಗೆ ಏರ್ಪಾಟಿದ್ದರೂ ಸರ್ಕಾರ ಈ ದಿಶೆಯಲ್ಲಿ ಪ್ರೋತ್ಸಾಹ ಕೊಟ್ಟರೂ ಜನರು ಆ ಬಗ್ಗೆ ಆಸಕ್ತಿ ತೋರುತ್ತಿಲ್ಲವೆಂದೇ ಹೇಳಬೇಕು. ಅದರಲ್ಲೂ ಗಂಡಸರು ಈ ಶಸ್ತ್ರಕ್ರಿಯೆ ಮಾಡಿಸಿಕೊಳ್ಳಲು ಬಹುವಾಗಿ ಅಂಜುತ್ತಾರೆ. ತಪ್ಪು ತಿಳಿವಳಿಕೆಗಳು ಈ ಅಂಜಿಕೆಗೆ ಕಾರಣ. ಶಸ್ತ್ರಕ್ರಿಯೆ ಮಾಡಿಸಿಕೊಂಡರೆ ನರಗಳು ದೌರ್ಬಲ್ಯಗೊಳ್ಳುತ್ತವೆ, ಹುಚ್ಚು ಹಿಡಿಯುತ್ತದೆ, ವಿವಿಧರೋಗಗಳು ಉತ್ಪತ್ತಿಯಾಗುತ್ತವೆ. ಎಂಬ ತಪ್ಪು ಕಲ್ಪನೆಗಳು ಜನಮನದಲ್ಲಿ ಆಳವಾಗಿ ಬೇರೂರಿವೆ. ಇದನ್ನು ನಿವಾರಿಸಲು ವೈದ್ಯಜಗತ್ತು ಬಹುವಾಗಿ ಶ್ರಮಿಸಬೇಕಾದ ಅಗತ್ಯವಿದೆ.

ಮಹಿಳೆಯರಲ್ಲೂ ಇವೇ ತಪ್ಪು ಭಾವನೆಗಳು ಮನೆಮಾಡಿವೆ. ತಾವು ಶಸ್ತ್ರಕ್ರಿಯೆ ಮಾಡಿಸಿಕೊಂಡ ಬಳಿಕ, ಸತತ ರೋಗಿಯಾಗಬಹುದೆಂಬ ಭೀತಿ ಅನೇಕರಲ್ಲಿ ಈಗಲೂ ಇದೆ. ಶಸ್ತ್ರಕ್ರಿಯೆಯಾದ ಬಳಿಕ ಯಾವ ಕಾಹಿಲೆ ಬಂದರೂ ಅದು ಶಸ್ತ್ರಕ್ರಿಯೆಯ ಪರಿಣಾಮವೇ ಎಂದು ತಿಳಿಯುವುದುಂಟು. ಈ ರೋಗಗಳೆಲ್ಲ ಮಾನಸಿಕ ಭೀತಿಯಿಂದ ಬರುತ್ತವೆಯೇ ಹೊರತು ದೈಹಿಕವಾಗಿ ಅಲ್ಲ.

ಕುಟುಂಬ ಯೋಜನೆಗೆ ಎಲ್ಲರೂ ಅಪೇಕ್ಷಿಸುವುದು ಬಹು ಸುಲಭವಾದ ಸಾಧನವನ್ನು. ಇತ್ತೀಚೆಗೆ ಹೊಟ್ಟೆಗೆ ಸೇವಿಸಬಹುದಾದಂತಹ ಮಾತ್ರೆಗಳಿಂದ ಗರ್ಭನಿರೋಧ ಸಾಧ್ಯವೆಂದು ತಿಳಿದುಬಂದಿದೆ. [ಕಲ್ಕತ್ತಾದ ಡಾ|| ಘೋಷ್ ಎಂಬುವರು ಈ ಬಗ್ಗೆ ಪ್ರಯೋಗಗಳನ್ನು ಮಾಡಿ ಸಾಕಷ್ಟು ಯಶಸ್ವಿಯಾಗಿದ್ದಾರೆ] ಆದರೆ ಈ ಔಷಧಿಗಳು ಜನಸಾಮಾನ್ಯ ಉಪಯೋಗಿಸಬೇಕಾದರೆ, ಇನ್ನೂ ತುಸು ಸಮಯ ಹಿಡಿದೀತು. ಆಗಲಾದರೂ ಕುಟುಂಬಯೋಜನೆಯ ಸಮಸ್ಯೆ ಸುಲಭವಾಗಿ ಬಗೆಹರಿಯಬಹುದು.

ಹೀಗೆ ನಿತ್ಯಜೀವನದ ಅಭ್ಯಾಸದಲ್ಲಿ ನೂರು ವಿಚಿತ್ರರೀತಿಯ ಸಮಸ್ಯೆಗಳನ್ನು ವೈದ್ಯ ಎದುರಿಸಬೇಕಾಗುತ್ತದೆ. ಮುಖ್ಯವಾಗಿ ಎಲ್ಲ ವೈದ್ಯಕೀಯ ಸಮಸ್ಯೆಗಳಿಗೂ ಮೂಲ ಜನರ ಬಡತನ ಹಾಗು ಜೀವನದಲ್ಲಿ ಹಾಸು-ಹೊಕ್ಕಾಗಿರುವ ಮೂಢನಂಬಿಕೆಗಳು. ದೇಶದ ಆರ್ಥಿಕಮಟ್ಟ ಸುಧಾರಿಸಿದಂತೆ, ಬಡತನದ ಬೇಗೆ ಕಡಮೆಯಾಗುತ್ತದೆ. ಜನ ಅಕ್ಷರಸ್ಥರಾದಂತೆ, ವಿದ್ಯಾವಂತರಾದಂತೆ, ಮೂಢನಂಬಿಕೆಗಳು ಅಳಿಯುತ್ತವೆ. ಅಂತಹ ಸಮಾಜದಲ್ಲಿ ವೈದ್ಯ ಎದುರಿಸಬೇಕಾದ ಸಾಮಾಜಿಕ ಸಮಸ್ಯೆಗಳು ಮಾಯವಾಗಿ, ಹೆಚ್ಚಿನ ಕಾಹಿಲೆಗಳು ಅಡಗಿ, ಆರೋಗ್ಯಭಾಗ್ಯ ಎಲ್ಲೆಲ್ಲೂ ನಲಿದಾಡುತ್ತದೆ.

---

## ಗೆಳೆಯ ಎತ್ತಿಗೆ

—ಪ್ರ. ರಂ. ಪಂಢರಿ

ಹೆಗಲ ಮೇಲೆ ನೊಗದ ಭಾರ
ಮೂಗೆಂಬುದು ಆರಪಾರ
ಅದರೊಳಗಿದೆ ಮೂಗುದಾರ
ಜಗ್ಗುತಿರುವ ಸೂತ್ರಧಾರ
॥ ೧ ॥

ಕೊರಳೊಳಗಿದೆ ಮಣಿಗಂಟೆಯ ಹಾರ
ನೋಡಲದೊ ಬಲು ಸುಂದರ ಸುಂದರ
ದಾರಿಹೋಕರು ನೋಡುವರಲೆ
ನಿಜ, ಅವಕಿಲ್ಲವೊ ಕಾಸಿನ ಬೆಲೆ
॥ ೨ ॥

ಓ, ಗೆಳೆಯ ನೀನಿನ್ನೂ ಎಳೆಯ
ಬೆನ್ನುಭಾಗಿದೆ ನಾನು ಹಳೆಯ
ನೀನರಿಯೆ ನಮ್ಮೀ ಅಪಾರ ವ್ಯಥೆ
ಎಷ್ಟೋ ಕನಸಿನ ಕಾದಂಬರಿಕಥೆ
॥ ೩ ॥

ಹೊತ್ತುಹೊತ್ತಿಗಿಲ್ಲ ಮೇವು ಕಾಳು
ತುತ್ತಿನ ಚೀಲದಿ ಬರಿ ಬೀದಿಯಧೂಳು
ಆದರೂನು ಓಡಬೇಕು ದಾಪುಗಾಲುಕಾಲು
ಇಲ್ಲದಿರೆ ಸವಿಯಬೇಕು ಬಾರುಕೋಲು
॥ ೪ ॥

ದಾರಿಯಲಿಹವನೇಕ ತಗ್ಗುದಿನ್ನೆ ಏರು
ಹಳ್ಳ ಹುದಲು ಮಳಲು ಇಳಿಜಾರು
ಸಾವಧಾನದಿ ನಡೆಯೋ ಎಲ್ಲ ತಿಳಿದು
ಇಲ್ಲದಿರೆ ಬಿದ್ದೀಯೆ ಇಲ್ಲೆ ಬಸವಳಿದು
॥ ೫ ॥

ಹತ್ತೇನು ಹನ್ನೆರಡು ತಾಸು ದುಡಿತ
ತಪ್ಪಿದೆಯೊ ಮೈಮುರಿ ಬಡಿತ
ನೆನಪಿರಲಿ ನೀ ಬಾಯಿಲ್ಲದೆತ್ತು
ದಿನವೂ ಎದುರಿಸಬೇಕು ಹತ್ತು ಕುತ್ತು
॥ ೬ ॥

ಹೆಗಲ ಮೇಲೆ ನೊಗದ ಭಾರ
ಮೂಗೆಂಬುದು ಆರಪಾರ
ಹೇಳಲಾರೆ—ನೋವು ಅಪಾರ
ಓ—ಹೊಯ್ದಾಡದಿರು ಅತ್ತಿತ್ತ ಸರದಾರ!
॥ ೭ ॥



## “ಹುಚ್ಚಿ” ಎಂದನು

ನನಗೆ ಆಗ ಹತ್ತು ವರುಷ
ಅವನಿಗಾಗ ಐದು ಹೆಚ್ಚು—
ಅಗಲ ಎದೆಯು, ವಜ್ರ-ಬಾಹು
ಕಂಡರೆನಗೆ ಅಚ್ಚು-ಮೆಚ್ಚು
ತುಟಿಯು ಮೇಲೆ ಕುಡಿಯುಮೀಸೆ
ಹೊಳೆವ ಕಣ್ಣಿನೊಳು ಪಿಪಾಸಿ-
ನಿಷ್ಕಳಂಕ ಗಲ್ಲದಂದ
ಹುಬ್ಬು-ಮೀಸೆ ಬಹಳ ಚೆಂದ
ಚಿತ್ರಕಾರ ಮದನ ಬಂದ
ಮೈಗೆ ಪುಳಕ ನವಿರು ತಂದ.
ಒಮ್ಮೆ ಅವಗೆ ಜ್ವರವು ಬರಲು
ನನ್ನ ಮನಕೆ ವಿರಹ ತರಲು,
ನಾನು ತಡೆಯುಲಾರದಾದೆ
ಹಗಲು-ಇರುಳು ಸೇವೆಗೈದೆ
ಕಣ್ಣಿನಿಂದ ನೀರು ಸುರಿದೆ
ಆಗ ನನ್ನ ಕಣ್ಣನೊರಸಿ
‘ ಹುಚ್ಚಿ ’, ಎಂದನು.

ೲ ೲ ೲ

ಅಂತು ಕಾಲ ಕಳೆಯುತಿತ್ತು
ನಮ್ಮ ಸ್ನೇಹ ಬೆಳೆಯುತಿತ್ತು
ಪ್ರೀತಿ-ಗೀತಿಯೆಂಬುದರಿಯೆ
ಅವನನೇಕೆ, ನಾನ ಮರೆಯೆ—
ಅವನ ಗೆಲುವಿನಲ್ಲಿ ನಲಿದೆ
ಅವನ ಒಲುಮೆಯಲ್ಲಿ ಕುಣಿದೆ.
ಒಮ್ಮೆ ನನ್ನ ಮುಖವ ಅವನು
ಬಿಟ್ಟು-ಬಿಡದೆ ನೋಡುತೆಂದ—
ನಿನ್ನ ನೋಡಿದಾಗಲೊಮ್ಮೆ
ಹೂವು ನೋಡಿದಷ್ಟೆ ಹಿಗ್ಗು
ನನ್ನ ಕಂಡಾಗ ನಿನಗೆ
ಯಾವ ಭಾವ ಬರುವ’ದೆನಲು—
ನಾನು ಉತ್ತರಿಸುತೆಂದೆ—
‘ನಿನ್ನ ಕಂಡಾಗ ನನಗೆ
ಹಿಗ್ಗಿನೊಡನೆ ಖೇದವಿಹುದು
ಹೂವು ಪ್ರೀತಿಸಿರುವ ದುಂಬಿ
ಗರಿಗೆದರುವ ಭಯವು ಇಹುದು—’
ಎನಲು ಹೊಟ್ಟೆತುಂಬ ನಕ್ಕು
‘ಹುಚ್ಚಿ’, ಎಂದನು.

ೲ ೲ ೲ

ಒಮ್ಮೆ ನಮ್ಮ ಮನೆಗೆ ಬಂದ
ಕುಡಿಯೆ ನೀರು ಬೇಡಿನಿಂದ
ಅವನು ಕಚ್ಚಿ ನೀರು ಕುಡಿದ
ನಾನು ಕೂಡ ಕುಡಿದುಬಿಟ್ಟೆ
“ಬೇಡ”—ಎಂದ “ಎಂಜಲು” !
—‘ಯಾರು ಇಹರು ಅಂಜಲು’ ?
ತುಂಟನಗೆಯು ಬೀರಿ ಅಂದ
“ಹೆಣ್ಣಿಗಿಲ್ಲ ನಾಚಿಕೆ.”—
ನಾನು ಅಂದೆ, ‘ಬಿರುನುಡಿಯಲು
ಗಂಡಿಗಿಲ್ಲ ಹೇಸಿಕೆ’—
“ನಾನು ಕಚ್ಚಿ ಕುಡಿದ ನೀರು
ನೀನು ಕುಡಿದುದೇತಕೆ ? ”—
ಎನಲು, ನಾನು ಉತ್ತರಿಸಿದೆ
ನಿಮಗದೆಲ್ಲ ಏತಕೆ ?’
‘ನಮ್ಮ ನೀರು ನಿಮಗೆ ಏಕೆ ?
ಬಾವಿ-ನೀರು ಬತ್ತಿತೇ ?
ನಿಮ್ಮ ಮನೆಯು ಮಠವು ಏನು
ನೀರೆ ಇಲ್ಲದಾಯಿತೇ ?’
“ ನಾ ಬಂದದು ನೀರಿಗಲ್ಲ
‘ **ನೀರೆ**ಗಾಗಿ,” ಎನ್ನಲು
ನಾನು ಕೋಪಗೊಂಡು ನುಡಿದೆ
‘ ಊರತುಂಬ ದೊರೆವರು ’—
ಹೂವಿಂದ ಕೆನ್ನೆಗ್ಹೊಡೆದು
“ ಹುಚ್ಚಿ ”, ಎಂದನು.

ೲ ೲ ೲ

ಬೆಕ್ಕು ಕಣ್ಣುಮುಚ್ಚಿ ಹಾಲು-
ಕುಡಿಯೆ, ಗೌಳಿ ನೋಡನೇ ?
ಗಂಡು ಹೆಣ್ಣು ಪ್ರೀತಿನಡೆಸೆ—
ಸುತ್ತು ಜನರು ಅರಿಯರೆ ?
ನಮ್ಮ ಪ್ರೀತಿ ಸುದ್ದಿಯಾಗಿ
ಕತೆಯಾಗುತ ನಡೆಯಿತು
ತಂದೆ ಅಂದ, ‘ ಮನೆಯ ಬೆಕ್ಕು
ಮನೆಯ ಹಾಲು ಬಯಸಿತು ’
ಅಂತು ದೈವ ತೆರೆದುಬರಲು
‘ ಅವನು ’, ‘ **ಅವರು** ’ ಆದರು
ಕಳವು ತುಡುಗು ಏನೂ ಇಲ್ಲ
ಎಲ್ಲ ಕೆಲಸ ಮರೆತರು.
ಅವರು ಏನೊ ಹರಟುತಿರಲು
‘ನಿನ್ನ ತಲೆ’—ಎಂದೆನು.
‘ಗಂಡ !’ ಎಂಬ ಭಾವಬರಲು
‘ನಿಮ್ಮ ತಲೆ’—ಎಂದೆನು
ಅದೂ ತಪ್ಪು ಎಂದು ಎನಿಸೆ
ಕೊನೆಗೆ, ‘ಕ್ಷಮಿಸಿ’ ಎಂದೆನು
ಆಗ, ನನ್ನ ಗಲ್ಲ ಹಿಂಡಿ
‘ಹುಚ್ಚಿ’ ಎಂದರು.

—ಜಿ. ವ್ಹಿ. ಕುಲಕರ್ಣಿ, ಮುಂಬಯಿ

## “ಬೇಡ ಜಂಬ; ಇರಲಿ ಹೆಮ್ಮೆ!”

ಕಂಬ ಕಂಬ ಆಧಾರಸ್ತಂಭನಾ ಎಂಬ ಜಂಬ ಬೇಡ !
ಆಕಾಶವೆಲ್ಲಿ ಅವಕಾಶ ಕಲ್ಪಿಸಿದೆ ತೋರು ಅಂಜಬೇಡ !
“ ಹಡಗ ನಡೆಸುವಾ ದಾರಿಕಾರನಿಗೆ ‘ದೀಪ-ಸ್ತಂಭ’ ನೋಡು !
‘ಧ್ವಜಸ್ತಂಭನಾ’ ರಾಷ್ಟ್ರಪಟಕೆ ನಮಸ್ಕಾರವನ್ನು ಮಾಡು !
ತುದಿಗೆ ಮೆರೆಯುತಿದೆ ನಿನ್ನ ನಾಡಗುಡಿ ನಾಡಗೀತೆ ಹಾಡು !
‘ಅಶೋಕ-ಸ್ತಂಭ’ದಾ ಮಹಿಮೆ ತಿಳಿದುಕೋ ಜಂಬವೇಕೆ ಬೇಡ ! ”
“ ದುಷ್ಟನಾದ ಆ ತಂದೆಗಾಗಿ ನೀ ಮೃತ್ಯುವಾಗಿ ಬಂದೆ !
ನಾರಸಿಂಹ ಅವತರಿಸಿ ಬಂದ ಹ್ಹಾ! ಅದಕೆ ಕಂಬದಿಂದೆ !
ಕೆಟ್ಟ ಜನಕೆ ನೀ ಶಿಕ್ಷೆಗೈಯುತಿರು ‘ವಧಸ್ತಂಭ’ದಿಂದೆ !
ಬೇಡ ಜಂಬ ಆ ! ಇರಲಿ ಹೆಮ್ಮೆ ಈ—ಮೃತ್ಯು ಅವರಿಗೆಂದು ! ”

— ಶ್ರೀ ಡಿ. ವ್ಹಿ. ಜೋಶಿ, ಪುಣೆ

# ಕಣ್ಣು

(೧)

ಕಣ್ಣಿನಲಿ ಏನಿಲ್ಲ !
ಕಣ್ಣಗೊಂಬೆಯುಲಡಿಯು ಜಗವೆ ಪ್ರತಿಬಿಂಬಿಸಿದೆ
ವಿಶ್ವದಾವಿರ್ಭಾವ ಕಣ್ಣನವಲಂಬಿಸಿದೆ.
ಕಣ್ಣಿಂದಲೇ ಜಗಕೆ ರಂಗು, ಕಣ್ಣಿಲೆ ರೂಪ,
ಘನತೆ, ಆಂತರ್ಯ, ಸಾಕಾರಗೊಂಡಿಹ ವ್ಯಾಪ.
ಆಳ ಎತ್ತರ, ಅಗಲ, ಸನಿಹ, ದೂರ
ಕಣ್ಣು ಹಿಡಿದಿದೆ ಜಗದ ಶಿಲ್ಪದಾಕಾರ.
ಕಣ್ಣಿಂದಲೇ ಕ್ಷಿತಿಜ
ಕಣ್ಣಿಂದಲೇ ಧರಾತಲದಿಂದಲೆದ್ದ ಆಕಾಶ ಶಿಖರ,
ಕಣ್ಣಿಂದೆ ಅಲ್ಲಿ ಮುಕುರುವ ಮೇಘಗಳ ಮಾಲೆ.
ದುಂಡುಸೂರ್ಯನ ಜ್ವಾಲೆ, ಚಂ
ಕಣ್ಣಿಂದೆ ಸಂಜೆಮುಂಜಾವು, ಹ
ಕಣ್ಣಿಂದೆ ಬೆಳಕು ಕತ್ತಲ ತಾರತ
ಕಣ್ಣಿಂದೆ ಗಿರಿಸಾನು, ಹೊಳೆ, ಕ

ಕಣ್ಣೊಮ್ಮೆ ಮುಚ್ಚಿ ನೋಡಯು
ಒರಸಿ ಅಳಿಸಿದ ಚಿತ್ರದಂತೆ ಜಗ
ಮುಸುಳಿ ಅಳಿವುದು - ಕಣ್ಗೆ ಕವಿ
ದಲ್ಲಿ ಹೊಲಬಳಿದು ತೊಳಲಾಡು
ಕುರುಡು ಮೈ, ಕುರುಡು ಕಿವಿ
ಕೈಚಾಚಿ ಬಳಚಿ ಎಡವುತ ಜೋ
ಮೈ, ಮೂಗು,
ಏಸೊಂದು ಬಡಪ
ಕಣ್ಣೊಂದು ಇಲ್ಲ
ಕಣ್ಣೊಂದು ಇಲ್ಲ
ಒಡೆದ ಬಿಂಬವನು ಅರ್ಧಾಂಗಪೀ
ಸೃಷ್ಟಿಗೋಲವನಳೆಯೆ
ಕೇಂದ್ರದಲಿ ಇದ ಹಿ
ಕಣ್ಣರಳಿದಾಗ ಅಹ ಸ
ತುಂಬ ಪ
ಕಣ್ಣ ಕದಿರಿಲೆ ಜಗದ

ಕಣ್ಣಿನಲಿ ಏನಿಲ್ಲ !
ಕಣ್ಣಿನಲಿ ಗುರಿಯುಂಟು,
ಗತಿಯುಂ
ಕಣ್ಣೆ ಚಿಗುರಿಸಿತು ನಂಟು.
ಕಣ್ಣೆ ತೆರೆಯಿತು ಮಾರ್ಗ.
ಕಣ್ಣಿಲ್ಲದಿಹ ಬದುಕು ಹಾದಿಕಳ
ಕಣ್ಣಿಲ್ಲದವ ತಡವಿ ಎಡವಿ ತಡಕ
ಮತಿಮೂಢ, ಗತಿಮೂಢ.
ಕಣ್ಣಿಂದೆ ಪ್ರಗತಿ ನೋಡ.
ಕಣ್ಣಿಂದೆ ಅಭಿವ್ಯಕ್ತಿ, ನಾ ವ್ಯಕ್ತಿ,
ಕಣ್ಣ ಪಡೆದಂದು ಅಹ ಜೀವಕೆಂ
ಕಣ್ಣೆರೆದು ಹರಿಯೆ ಮೊದಲಾಯ

ಅಂಧತನವೊಂದು ದಿಗ್ಬಂಧನದ ಭೂಭಾರ.
ಕಣ್ಣಿಂದೆ ಅಭಿಗಮನ, ಕಣ್ಣಿಂದೆ ಸ್ವಾಗತ
ಕಣ್ಣಿಂದೆ ಸಖಿ, ಸಖ, ಅತಿಥಿ, ಅಭ್ಯಾಗತ.
ಕಣ್ಣಿಂದೆ ವಿತರಣೆ, ಕಣ್ಣಿಂದೆ ವಿನಿಮಯ
ನಯ, ವಿನಯ, ಅನುನಯ.
ಕಣ್ಣಿಂದೆ ಭಾವವಾಹನೆ ಆಹಾ ಜೀವವಾಹನೆಯಯ್ಯ.
ಮಾತಾಪಿತರ ಆಜನ್ಮ ಪೋಷಕ ಕಣ್ಣು
ಬಂಧು ಬಾಂಧವರ ಅನುವಂಶ ತೋಷಕ ಕಣ್ಣು
ಪ್ರಿಯ ಪ್ರಿಯಾರಾಧನೆಯ ಮುಗ್ಧ ಮೋಹಕ ಕಣ್ಣು
ಅರ್ಭಕನು ಎಸೆವ ವಾತ್ಸಲ್ಯದೋಹಕ ಕಣ್ಣು
ಏಳು ಜನ್ಮಗಳ ವೈರಿಯ ಕಣ್ಣು ಉರಿಗಣ್ಣು,
ಗಣ್ಣು, ಕೇಡಿಗಣ್ಣು.
ಕಣ್ಣು.
ಣ್ಣು.
ಹ ಕಣ್ಣು.
ಯಾಡಿ
ಕೂಡಿ
ಕಣ್ಣು
ಕಣ್ಣು
ಕಣ್ಣು
ಂಡು
ಣ್ಣು.
ಂಡಲ.
ಡಲ !
ತದ ನೋಟ
ಂಕಬೂದಿ.
ಅಷ್ಟ ಹಾದಿ.

ವರಿಗೆ
ತ್ತಮ
ರ್ಥಾತ್
ಗಳನ್ನು
ಷ್ಟೊಂದು
ಯಾವ
ಪಘಾತ
ತ್ತು ಆ
೧೭ ರ
ಕಷ್ಟ
ನದರಿಂದ
ವದರಿಂದ
ವೂ ಹಿತ
ಅಂಜಿಕೆ
ರ್ಭಾರಂಭ
ಸಾವಿರ
ಮತ್ತು
ತರ ಆವ
೭ ರ
ಬಹಳ
ನೆ ಗುರು
ಮನಸ್ಸಿನ
ಗುವವು.
ಬಹಳಷ್ಟು
ನುಕೂಲ.
ಸಪ್ಟೆಂಬರ

## ಮೇಷ

೧೨ ರಿಂದ ಅಕ್ಟೋಬರ ೬ ಮತ್ತು ನವಂಬರ ೧ ರಿಂದ ದೀಪಾವಳಿ ವರೆಗೆ ಅವಳಿಗೆ ಕಫ ಇಲ್ಲವೆ ವಾತದಿಂದ ಸ್ವಲ್ಪ ತೊಂದರೆಯಾಗುವ ಅಂಜಿಕೆ ಇದೆ. ಅವಳದು ನಿಮ್ಮದು ಅನೇಕ ವಿಷಯುಗಳಲ್ಲಿ ಏಕಮತ್ಯವುಳಿಯುವದು. ಆದರೆ ಬಂಧು ಇಲ್ಲವೆ ಭಗಿನಿಯ ಶಿಕ್ಷಣ ಅಥವಾ ವಿವಾಹದ ವಿಷಯದಲ್ಲಿ ಜುಲೈ ೧೮ ರಿಂದ ಸಪ್ಟೆಂಬರ ೨ ರ ಮಧ್ಯಂತರ ಅವಧಿಯಲ್ಲಿ ಇಬ್ಬರಲ್ಲಿಯೂ ಬಹಳ ಮತಭೇದವಾಗುವದು. ಮೂರು-ನಾಲ್ಕು ಸಲ ವಾಗ್ವಾದವೂ ನಡೆಯುವುದು. ಇನ್ನೂ ಮದುವೆಯಾಗದೆ ಈ ವರ್ಷ ಮಾಡಿಕೊಳ್ಳುವದಿದ್ದರೆ ಮಾರ್ಚ ೭ ರ ವರೆಗೆ ಮಾತ್ರ ಒಳ್ಳೆ ಬಾಶಿಂಗಬಲವಿದೆ; ಮುಂದೆ ಬಾಶಿಂಗಬಲ ಅಷ್ಟೊಂದಿಲ್ಲದ್ದರಿಂದ ಒಂದೊಮ್ಮೆ ಕೂಡಿದರೂ ಅನಂತ ಅಡಚಣಿಗಳು ಬರುವವು.

ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ಮಾರ್ಚ ೭ ರ ವರೆಗೆ ಅನುಕೂಲವೇ ಇದೆ. ಮೇ ೨೪ ರಿಂದ ಜುಲೈ ೧೮ ರ ವರೆಗೂ ಬಾಶಿಂಗಬಲ ಚನ್ನಾಗಿದೆ. ಆದರೆ ಆಗ ಕೂಡಿಬಂದರೆ ಅನಪೇಕ್ಷಿತ ಅಡಚಣಿಗಳನ್ನೆದುರಿಸಬೇಕಾಗುವದು. ನಿರರ್ಥಕ ವೆಚ್ಚವೂ ಹೆಚ್ಚುವದು. ಸೊಸೆ ಇಲ್ಲವೆ ಅಳಿಯನೂ ಅಷ್ಟೊಂದು ಒಪ್ಪುವವರಿರುವದಿಲ್ಲ. ಆದರೆ ಮಕ್ಕಳ ಉನ್ನತಿಗೆ ಮೇ ೧೮ ರಿಂದ ಮುಂದೆ ಬಹಳ ಅನುಕೂಲ. ಅವರಲ್ಲಿ ಒಬ್ಬರಂತೂ ವೈಭವ ಶಿಖರವನ್ನು ಮುಟ್ಟುವರು. ಮತ್ತು ಎಲ್ಲರಿಂದಲೂ ನಿಮಗೆ ವ್ಯವಸ್ಥಿತವಾಗಿ ಸುಖಸಿಕ್ಕುವದು.

ಧಂದೆ-ಕೂಲಿಕಾರರಿಗೆ ಮಾರ್ಚ ೭ ರ ವರೆಗೆ ೧೧ ನೇ ಗುರುವಿನಿಂದಾಗಿ ಒಳ್ಳೆ ಯೋಗವಿದೆ. ಅನಂತರ ೧೨ ನೇ ಗುರು ಬರುವದರಿಂದ ಹಾನಿಯಾಗುವದೆಂಬಅಂಜಿಕೆ ಸ್ವಲ್ಪೂ ಬೇಡ. ಏಕೆಂದರೆ ಬೇಗನೆ

ಅಂದರೆ ಮೇ ೧೮ ರಿಂದಲೆ ೩ನೇ
ಸ್ಥಾನದ ರಾಹುವಿನಿಂದಾಗಿ ನಿ
ಗಳನ್ನು ಮಾಡಹತ್ತುವಿರಿ.
ಯಶಸ್ಸು ಸಿಕ್ಕುವುದಲ್ಲದೆ
ಬೆಳೆದು ಹಣವನ್ನು ಸಂಪಾದಿ
ಧಂದೆ ಮಾಡುವವರಿಗೆ ಮಾ
೧೮ ರ ವರೆಗಿನ ಕಾಲ ಸ್ವ
ಮತ್ತು ವಿವಂಚನೆಯದೆಂ
ವ್ಯವಹಾರವೆಲ್ಲ ಅಂದಾಜು
ಮತ್ತು ಯಶಸ್ಸಿನದು ಎನಿಸ

ನೋಕರರಿಗೆ ಡಿಸೆಂಬರ
ವರೆಗೆ ವರಿಷ್ಠರಿಂದ ಬಹಳ ತೆ
ಬೇಕಾಗುವದು. ಆದರೆ ವ
ಸಂತುಷ್ಟವುಳಿಯುವರು. ಅ
ನಿಂದಾಗಿ ನೀವು ಸ್ಥಳಾಂತರ
ಅಂದರೆ ನಿಮಗೆ ವರ್ಗವಾಗು
ಜುಲೈ ೧೮ ರ ವರೆಗೆ ಹೀಗೆ
ವಾದವರಿಗೆ ಮೇಲಿನ ಗ್ರೇಡ
ಆ ಸ್ಥಳ ಮಾತ್ರ ಪ್ರಪಂಚಕೆ
ವೆನಿಸಬಹುದು. ೧೧ ನೆ ಗ
ಕೂಡಿಹಾಕುವಿರಿ. ಆದರೆ
ಅದನ್ನೆಲ್ಲ ಖರ್ಚ ಮಾಡಿಸಿ
ಯಾವದೊಂದು ಅರಿಷ್ಟ ಇಲ್ಲ
ಹಣ ವೆಚ್ಚವಾಗದೆ ಶುಭ
ಕೆಲಸಗಳಲ್ಲಿಯೇ ನಗುತ್ತ ನಿ
ವಿರಿ. ಮೇ ೧೮ ರ ವ
ಹರಿಮುರಿಯುವದರಿಂದ ಸ
ಮತ್ತು ಅಲ್ಲಿಯ ವರೆಗೆ ಅ
ಉಳಿದ ಆಪ್ತರು ಕೂಡ ನಿ
ಬಹಳ ತೊಂದರೆ ಕೊಡು
ದನ್ನು ಸುಳ್ಳೆಂದು ಸಾಧಿಸ
ಬರುವ ೩ ನೇ ರಾಹುವಿ
ದೈವೀಪ್ರಕೋಪದಿಂದ

ದಾರಿಯುದ್ದಕು ಕಣ್ಗೆ ಇವೆ ನೂರು ಆಪತ್ತು
ಒಳಗಿಂದ ಹೊರಗಿಂದ ಮುಸುಕಿ ಮುಸುಕಾಗಿಸುವ
ಮುಸಳ್ವ ದೋಷಗಳ ಕುತ್ತು.

ಕಣ್ಣಿರಿಸಿ ಕಾಯ್ದುಕೋ ಕಣ್ಣ ನಿಧಿ, ಸಂಪತ್ತು.
ಕಣ್ಬಿಟ್ಟು ನಡೆ. ನೋಡು ಕಣ್ಣಿಟ್ಟು ಕಣ್ಣಾರೆ.
ಕಣ್ಣು ತೆರೆ, ಕಣ್ಣು ತೆರೆ
ಕಣ್ಣು ತೆರೆದರೆ ಜಗವೆ ತನ್ನೆದೆಯ ತೆರೆದೀತು
ಹರಿದಂತೆ ಪರಿ ಜಗತ್ಪಥ ತೆರೆದು ಕರೆದೀತು.
ಕಣ್ಣಗೊಂದಲದಿಂದೆ ಇಳೆಯದಾಗಿಗೆ ಇಂದು
ಅಂಧರ ಜಗತ್ತು, ಅಂಧರ ಜಗತ್ತು !

ಮತಾಂಧ, ಮದಾಂಧ
ಸ್ವಾರ್ಥದಿಂದಂಧ ಪರಮಾರ್ಥದಿಂದಲು ಅಂಧ
ಅರ್ಥ ಕಂಡಿಹ ಅರ್ಥನರ್ಥ ಕಂಡಿಹ ಅಂಧ
ಕಾಲು ಕಂಡಿಹ ಅಂಧ, ಬಾಲ ಕಂಡಿಹ ಅಂಧ
ಬಾಳು ಬೇಡುವ ಕಣ್ಣಬಲವು ಸಾಲದ ಅಂಧ
ತನ್ನ ತಿಪ್ಪೆಯ ಮೇಲೆ ನಿಂತು ಬೆಳಗಾಯಿತೆಂದು
ಬರಿದೆ ಗುಲ್ಲುವ ಅಂಧ
ಇಳೆಯು ಹಸನಾಗಿಸಲು ತರಿದು ಕೊಲ್ಲುವ ಅಂಧ
ಮನೆಯ ನೆಮ್ಮದಿ ಕಾಯೆ, ನೆಲಮಾಳಿಗೆಯ ತುಂಬ
ಮದ್ದು ಹೇರುವ ಅಂಧ
ಅಗೆದರೇ ಸಿಕ್ಕೀತು, ಬಗಿದರೇ ಸಿಕ್ಕೀತು ಎಂದು ಬಗೆ ಬಗೆಯಾಗಿ
ರತ್ನಗರ್ಭೆಯನಗೆದು ರಾಶಿಯೊಟ್ಟಿ
ದಿಕ್ಕುಗಾಣದ ಅಂಧ.
ತನ್ನ ನೆಳಲನೆ ದಾರಿಯುದ್ದ ತೂರಿ
ಬೆಳಕಿನರಮನೆಯಲ್ಲೂ ಅಂಧಕಾರವ ತಂದ !
ಬೆಳೆದು ಬಂದೀತೆಂದು ಕಣ್ಣು ಸರ್ವಗ್ರಾಹಿ ಸರ್ವಾಂಗಗ್ರಾಹಿಯಾಗಿ,
ತಳ ತೋರ್ವ ನೀರಿನೊಲು ತಿಳಿಯಾಗಿ ತಿಳಿವಾಗಿ
ಪರಿತ್ರಾಣವಾಹಿಯಾಗಿ ?
ಕಣ್ಣು ತೆರೆದಾಗ ಬಾಳಿಗೆ ಆಯ್ತು ಆರಂಭ.
ಕಣ್ಣು ಮುಚ್ಚುವರೆ ಬಾಳಿಗು ಬಹುದು ಮುಗಿತಾಯ !

— ಗಂಗಾಧರ ಚಿತ್ತಾಲ






ಅವನ ಗೆಲುವಿನಲ್ಲಿ ನಲಿದೆ
ಅವನ ಒಲುಮೆಯಲ್ಲಿ ಕುಣಿದೆ.
ಒಮ್ಮೆ ನನ್ನ ಮುಖವ ಅವನು
ಬಿಟ್ಟು-ಬಿಡದೆ ನೋಡುತೆಂದ—
ನಿನ್ನ ನೋಡಿದಾಗಲೊಮ್ಮೆ
ಹೂವು ನೋಡಿದಷ್ಟೆ ಹಿಗ್ಗು
ನನ್ನ ಕಂಡಾಗ ನಿನಗೆ
ಯಾವ ಭಾವ ಬರುವ'ದೆನಲು—
ನಾನು ಉತ್ತರಿಸುತೆಂದೆ—
'ನಿನ್ನ ಕಂಡಾಗ ನನಗೆ
ಹಿಗ್ಗಿನೊಡನೆ ಖೇದವಿಹುದು
ಹೂವು ಪ್ರೀತಿಸಿರುವ ದುಂಬಿ
ಗರಿಗೆದರುವ ಭಯವು ಇಹುದು—'
ಎನಲು ಹೊಟ್ಟೆತುಂಬ ನಕ್ಕು
'ಹುಚ್ಚಿ', ಎಂದನು.

o o o

ಒಮ್ಮೆ ನಮ್ಮ ಮನೆಗೆ ಬಂದ
ಕುಡಿಯೆ ನೀರು ಬೇಡಿನಿಂದ
ಅವನು ಕಚ್ಚಿ ನೀರು ಕುಡಿದ
ನಾನು ಕೂಡ ಕುಡಿದುಬಿಟ್ಟೆ

ಬೆಕ್ಕು ಕಣ
ಕುಡಿಯೆ,
ಗಂಡು ಹೇ
ಸುತ್ತು ಜನ
ನಮ್ಮ ಪ್ರೀ
ಕತೆಯಾಗು
ತಂದೆ ಅಂದ
ಮನೆಯ ಹ
ಅಂ
'ಅ
ಕಳ
ಎಲ್ಲ
ಅವರು ಏನ
'ನಿನ್ನ ತಲೆ'-
'ಗಂಡ!' ಎ
'ನಿಮ್ಮ ತಲೆ
ಅದೂ ತಪ್ಪು
ಕೊನೆಗೆ, '
ಆಗ
'ಹು
—ಜಿ. ವ್ಹಿ




## ಬೇಡ ಜಂಬ; ಇರಲಿ ಹೆಮ್ಮೆ!"

ಕಂಬ ಕಂಬ ಆಧಾರಸ್ತಂಭನಾ ಎಂಬ ಜಂಬ ಬೇಡ !
ಆಕಾಶವೆಲ್ಲಿ ಅವಕಾಶ ಕಲ್ಪಿಸಿದೆ ತೋರು ಅಂಜಬೇಡ !
" ಹಡಗ ನಡೆಸುವಾ ದಾರಿಕಾರನಿಗೆ 'ದೀಪ-ಸ್ತಂಭ' ನೋಡು !
'ಧ್ವಜಸ್ತಂಭನಾ' ರಾಷ್ಟ್ರಪಟಕೆ ನಮಸ್ಕಾರವನ್ನು ಮಾಡು !
ತುದಿಗೆ ಮೆರೆಯುತಿದೆ ನಿನ್ನ ನಾಡಗುಡಿ ನಾಡಗೀತೆ ಹಾಡು !
'ಅಶೋಕ-ಸ್ತಂಭ'ದಾ ಮಹಿಮೆ ತಿಳಿದುಕೋ ಜಂಬವೇಕೆ ಬೇಡ ! "
" ದುಷ್ಟನಾದ ಆ ತಂದೆಗಾಗಿ ನೀ ಮೃತ್ಯುವಾಗಿ ಬಂದೆ !
ನಾರಸಿಂಹ ಅವತರಿಸಿ ಬಂದ ಹ್ಹಾ! ಅದಕೆ ಕಂಬದಿಂದೆ !
ಕೆಟ್ಟ ಜನಕೆ ನೀ ಶಿಕ್ಷೆಗೈಯುತಿರು 'ವಧಸ್ತಂಭ'ದಿಂದೆ !
ಬೇಡ ಜಂಬ ಆ ! ಇರಲಿ ಹೆಮ್ಮೆ ಈ—ಮೃತ್ಯು ಅವರಿಗೆಂದು ! "

— ಜೋಶಿ, ಪುಣೆ




ಜ್ಯೋತಿಷಿ :
ಶ್ರೀ ಕೃಷ್ಣಶಾಸ್ತ್ರಿ ಭಿಡೆ
ಭವಿಷ್ಯ ಕಥನ ಆಫೀಸ
ಮನೆ ನಂಬರ ೨೮೮೦,
( ಸಿಟಿ ಪೋಲೀಸ ಸ್ಟೇಶನ್ ಎದುರಿಗೆ )
ಖಡೇಬಾಜಾರ, ಬೆಳಗಾವಿ

ಶಕೆ ೧೮೮೪ ಕಾರ್ತಿಕ ಶುದ್ಧ ೧ ಸೋಮವಾರದಿಂದ ಶಕೆ ೧೮೮೫ ಆಶ್ವಿನ ಬಹುಳ ೩೦ ಶನಿವಾರ ವರೆಗೆ ಅಂದರೆ ೧೯೬೨ ಅಕ್ಟೋಬರ ೨೯ ರಿಂದ ೧೯೬೩ ನೆ ನವಂಬರ ೧೬ ರ ವರೆಗಿನ ಒಂದು ವರ್ಷದ ಭವಿಷ್ಯವು

( ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗೆ )

# ವರ್ಷ ಭವಿಷ್ಯ

**ಸೂಚನೆ :—** ಈ ವರ್ಷಭವಿಷ್ಯವು ಸ್ಥೂಲವಾನದ್ದು. ಅವರವರ ಜನ್ಮಕುಂಡಲಿಯ ಮೇಲಿಂಡ ಭವಿಷ್ಯವನ್ನು ಹೇಳಿದರೆ ಮಾತ್ರ ಅದು ಪೂರ್ಣವಾಗಿ ಸತ್ಯವಾಗಿ ಪರಿಣಮಿಸುವದು. ಆದರೂ ಈ ಭವಿಷ್ಯದಿಂಡ ಆಯಾ ರಾಶಿಯವರಿಗೆ ಆಗಬಹುದಾದ ದುಷ್ಟ-ಸತ್ಪರಿಣಾಮಗಳ ಕಲ್ಪನೆ ಮಾತ್ರ ನಿಶ್ಚಿತವಾಗಿ ಬರುವುದು. ಜನ್ಮರಾಶಿಯಂತೆ ಜನ್ಮಲಗ್ನದಿಂದಲೂ ಭವಿಷ್ಯವನ್ನು ಹೇಳಿದರೆ ಅದು ಹೆಚ್ಚು ನಿಜವಾಗಿ ಪರಿಣಮಿಸಿದ್ದು ಕಂಡುಬರುವದು.

## ಮೇಷ

ಒಟ್ಟಾರೆ ಈ ವರ್ಷ ಈ ರಾಶಿಯವರಿಗೆ ಎಲ್ಲ ವಿಷಯಗಳಲ್ಲಿಯೂ ಕೆಲಕಾಲ ಉತ್ತಮವಿದ್ದರೆ ಕೆಲಕಾಲ ಕಷ್ಟದ್ದೆನಿಸುವದು. ಅರ್ಥಾತ್ ಸಮಸಮಾನವಾಗಿ ನೀವು ಕಷ್ಟ ಸುಖಗಳನ್ನು ಅನುಭವಿಸುವಿರಿ.

ಈ ರಾಶಿಯ ಜನರ ಆರೋಗ್ಯ ಅಷ್ಟೊಂದು ಅನುಕೂಲವಿರುವದಿಲ್ಲ. ವಿಶೇಷವಾಗಿ ಯಾವದೊಂದು ರೋಗ ಇಲ್ಲವೆ ಸಣ್ಣದೊಡ್ಡ ಅಪಘಾತದಿಂದ ಕಷ್ಟವಾಗುವ ಅಂಜಿಕೆ ಇದೆ ಮತ್ತು ಆ ಅಂಜಿಕೆ ಡಿಸೆಂಬರ ೨೬ ರಿಂದ ಮಾರ್ಚ ೧೭ ರ ವರೆಗೆ ಹೆಚ್ಚಿಗಿದೆ. ಆದರೆ ಎಷ್ಟೊಂದು ಕಷ್ಟ ಬಂದರೂ ರಾಶಿಸ್ವಾಮಿ ಮಂಗಳನಿರುವದರಿಂದ ಅವನು ಇಡಿ ಅವಧಿ ಬಲಿಷ್ಠನಾಗಿರುವದರಿಂದ ಮತ್ತು ಆಯುಷ್ಯದ ದೃಷ್ಟಿಯಿಂದ ಗುರುವೂ ಹಿತಕರನಾಗಿರುವದರಿಂದ ಗಂಡಾಂತರದ ಅಂಜಿಕೆ ಸ್ವಲ್ಪೂ ಇಲ್ಲ. ನಿಮಗೆ ಬೇಕಾದರೆ ವರ್ಷಾರಂಭದಲ್ಲಿಯೇ ಮಹಾಮೃತ್ಯುಂಜಯ ಜಪ ೧೧ ಸಾವಿರ ಮಾಡಬೇಕು ಮತ್ತು ಯಥಾಶಕ್ತಿ ಬೆಲ್ಲ ಮತ್ತು ಕಡ್ಲಿಬೇಳೆ ದಾನ ಮಾಡಬೇಕು. ಅವಾಂತರ ಆವಶ್ಯಕ ವಿಷಯಗಳಲ್ಲಿ ದೇಹಸುಖ ಮಾರ್ಚ ೭ ರ ವರೆಗೆ ಇರುವ ೧೧ ನೆ ಗುರುವಿನಿಂದಾಗಿ ಬಹಳ ಉತ್ತಮ ದೊರೆಯುವುದು. ಅನಂತರ ೧೨ನೆ ಗುರು ಬರುವದರಿಂದ ದಗದಗಿಯೆನಿಸಿದರೂ ಮನಸ್ಸಿನಲ್ಲಿಯ ಉದ್ದೇಶಗಳು ಬಹಳಷ್ಟು ಸಫಲವಾಗುವವು. ಆದುದರಿಂದ ಮಾನಸಿಕ ಸಮಾಧಾನ ಬಹಳಷ್ಟು ಕಡಿಮೆಯಾಗುವದಿಲ್ಲ.

ಹೆಂಡತಿಯ ಆರೋಗ್ಯವೂ ಒಟ್ಟಾರೆ ಅನುಕೂಲ. ಆದರೆ ೧೭ ಎಪ್ರಿಲದಿಂದ ಮೇ ೧೨, ಸಪ್ಟೆಂಬರ ೧೨ ರಿಂದ ಅಕ್ಟೋಬರ ೬ ಮತ್ತು ನವಂಬರ ೧ ರಿಂದ ದೀಪಾವಳಿ ವರೆಗೆ ಅವಳಿಗೆ ಕಫ ಇಲ್ಲವೆ ವಾತದಿಂದ ಸ್ವಲ್ಪ ತೊಂದರೆಯಾಗುವ ಅಂಜಿಕೆ ಇದೆ. ಅವಳದು ನಿಮ್ಮದು ಅನೇಕ ವಿಷಯಗಳಲ್ಲಿ ಐಕಮತ್ಯವುಳಿಯುವದು. ಆದರೆ ಬಂಧು ಇಲ್ಲವೆ ಭಗಿನಿಯ ಶಿಕ್ಷಣ ಅಥವಾ ವಿವಾಹದ ವಿಷಯದಲ್ಲಿ ಜುಲೈ ೧೮ ರಿಂದ ಸಪ್ಟೆಂಬರ ೨ ರ ಮಧ್ಯಂತರ ಅವಧಿಯಲ್ಲಿ ಇಬ್ಬರಲ್ಲಿಯೂ ಬಹಳ ಮತಭೇದವಾಗುವದು. ಮೂರು-ನಾಲ್ಕು ಸಲ ವಾಗ್ವಾದವೂ ನಡೆಯುವುದು. ಇನ್ನೂ ಮದುವೆಯಾಗದೆ ಈ ವರ್ಷ ಮಾಡಿಕೊಳ್ಳುವದಿದ್ದರೆ ಮಾರ್ಚ ೭ ರ ವರೆಗೆ ಮಾತ್ರ ಒಳ್ಳೆ ಬಾಶಿಂಗಬಲವಿದೆ; ಮುಂದೆ ಬಾಶಿಂಗಬಲ ಅಷ್ಟೊಂದಿಲ್ಲದ್ದರಿಂದ ಒಂದೊಮ್ಮೆ ಕೂಡಿದರೂ ಅನಂತ ಅಡಚಣಿಗಳು ಬರುವವು.

ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ಮಾರ್ಚ ೭ ರ ವರೆಗೆ ಅನುಕೂಲವೇ ಇದೆ. ಮೇ ೨೪ ರಿಂದ ಜುಲೈ ೧೮ ರ ವರೆಗೂ ಬಾಶಿಂಗಬಲ ಚನ್ನಾಗಿದೆ. ಆದರೆ ಆಗ ಕೂಡಿಬಂದರೆ ಅನಪೇಕ್ಷಿತ ಅಡಚಣಿಗಳನ್ನೆದುರಿಸಬೇಕಾಗುವದು. ನಿರರ್ಥಕ ವೆಚ್ಚವೂ ಹೆಚ್ಚುವದು. ಸೊಸೆ ಇಲ್ಲವೆ ಅಳಿಯನೂ ಅಷ್ಟೊಂದು ಒಪ್ಪುವವರಿರುವದಿಲ್ಲ. ಆದರೆ ಮಕ್ಕಳ ಉನ್ನತಿಗೆ ಮೇ ೧೮ ರಿಂದ ಮುಂದೆ ಬಹಳ ಅನುಕೂಲ. ಅವರಲ್ಲಿ ಒಬ್ಬರಂತೂ ವೈಭವ ಶಿಖರವನ್ನು ಮುಟ್ಟುವರು. ಮತ್ತು ಎಲ್ಲರಿಂದಲೂ ನಿಮಗೆ ವ್ಯವಸ್ಥಿತವಾಗಿ ಸುಖಸಿಕ್ಕುವದು.

ಧಂದೆ-ಕೂಲಿಕಾರರಿಗೆ ಮಾರ್ಚ ೭ ರ ವರೆಗೆ ೧೧ ನೇ ಗುರುವಿನಿಂದಾಗಿ ಒಳ್ಳೆ ಯೋಗವಿದೆ. ಅನಂತರ ೧೨ ನೇ ಗುರು ಬರುವದರಿಂದ ಹಾನಿಯಾಗುವದೆಂಬಅಂಜಿಕೆ ಸ್ವಲ್ಪೂ ಬೇಡ. ಏಕೆಂದರೆ ಬೇಗನೆ ಅಂದರೆ ಮೇ ೧೮ ರಿಂದಲೆ ೩ನೇ ಅಂದರೆ ಪರಾಕ್ರಮ ಸ್ಥಾನದ ರಾಹುವಿನಿಂದಾಗಿ ನೀವೊಳ್ಳೊಳ್ಳೆ ಕಾರ್ಯಗಳನ್ನು ಮಾಡಹತ್ತುವಿರಿ. ಅವುಗಳಲ್ಲಿ ಒಳ್ಳೆ ಯಶಸ್ಸು ಸಿಕ್ಕುವುದಲ್ಲದೆ ನಿಮ್ಮ ಲೌಕಿಕವೂ ಬೆಳೆದು ಹಣವನ್ನು ಸಂಪಾದಿಸುವಿರಿ. ಸ್ವತಂತ್ರ ಧಂದೆ ಮಾಡುವವರಿಗೆ ಮಾರ್ಚ ೭ ರಿಂದ ಮೇ ೧೮ ರ ವರೆಗಿನ ಕಾಲ ಸ್ವಲ್ಪ ತೊಂದರೆಯದು ಮತ್ತು ವಿವಂಚನೆಯದೆಂದೆನಿಸಿದರೂ ಮುಂದೆ ವ್ಯವಹಾರವೆಲ್ಲ ಅಂದಾಜು ಮಾಡಿದಷ್ಟು ಲಾಭದ್ದು ಮತ್ತು ಯಃಶಸ್ಸಿನದು ಎನಿಸುವದು.

ನೋಕರರಿಗೆ ಡಿಸೆಂಬರ ೨೬ ರಿಂದ ಮೇ ೧೮ ರ ವರೆಗೆ ವರಿಷ್ಠರಿಂದ ಬಹಳ ತೊಂದರೆ ಅನುಭೋಗಿಸಬೇಕಾಗುವದು. ಆದರೆ ಮುಂದೆ ಅವರು ಬಹಳ ಸಂತುಷ್ಟವುಳಿಯುವರು. ಆದರೆ ೧೨ ನೇ ಗುರುವಿನಿಂದಾಗಿ ನೀವು ಸ್ಥಳಾಂತರ ಮಾಡಬೇಕಾಗುವದು. ಅಂದರೆ ನಿಮಗೆ ವರ್ಗವಾಗುವದು. ಮೇ ೨೪ ರಿಂದ ಜುಲೈ ೧೮ ರ ವರೆಗೆ ಹೀಗೆ ಆಗುವದು. ವರ್ಗವಾದವರಿಗೆ ಮೇಲಿನ ಗ್ರೇಡ ಸಿಕ್ಕಬಹುದು. ಆದರೆ ಆ ಸ್ಥಳ ಮಾತ್ರ ಪ್ರಪಂಚಕ್ಕೆ ಸ್ವಲ್ಪ ಅನಾನುಕೂಲವೆನಿಸಬಹುದು. ೧೧ ನೆ ಗುರು ಇದ್ದಾಗ ಹಣ ಕೂಡಿಹಾಕುವಿರಿ. ಆದರೆ ೧೨ ನೆ ಗುರು ಮಾತ್ರ ಅದನ್ನೆಲ್ಲ ಖರ್ಚು ಮಾಡಿಸಿಬಿಡಬಹುದು. ಆದರೆ ಯಾವದೊಂದು ಅರಿಷ್ಟ ಇಲ್ಲವೆ ಅಶುಭ ಕಾರ್ಯಕ್ಕಾಗಿ ಹಣ ವೆಚ್ಚವಾಗದೆ ಶುಭ ಮತ್ತು ಕಲ್ಯಾಣಕರ ಕೆಲಸಗಳಲ್ಲಿಯೇ ನಗುತ್ತ ನೀವು ಹಣ ವೆಚ್ಚಮಾಡುವಿರಿ. ಮೇ ೧೮ ರ ವರೆಗೆ ಸ್ಥಾವರದಲ್ಲಿಯೂ ಹರಿಮುರಿಯುವದರಿಂದ ಸ್ವಲ್ಪ ಹಾನಿಯಾಗುವದು. ಮತ್ತು ಅಲ್ಲಿಯ ವರೆಗೆ ಅಣ್ಣತಮ್ಮಂದಿರು ಮತ್ತು ಉಳಿದ ಆಪ್ತರು ಕೂಡ ನಿಷ್ಕಾರಣವಾಗಿ ವೈರತಾಳಿ ಬಹಳ ತೊಂದರೆ ಕೊಡುವರು ಮತ್ತು ನಿಜವಿದ್ದುದನ್ನು ಸುಳ್ಳೆಂದು ಸಾಧಿಸುವರು. ಆದರೆ ಅನಂತರ ಬರುವ ೩ ನೇ ರಾಹುವಿನಿಂದಾಗಿ ಯಾವದೊಂದು ದೈವೀಪ್ರಕೋಪದಿಂದ ಎಲ್ಲವೂ ಮೈಮೇಲೆ ಬರು

ವದು. ವಾಹನ, ನೋಕರಚಾಕರರು ಮತ್ತು ಇತರ ಆಶ್ರಿತರಿಂದಲೂ ವಿಪರೀತ ತೊಂದರೆಯಾಗುವದು. ಆದರೆ ಅನಂತರ ಮಾತ್ರ ಎಲ್ಲರೂ ಸುಸೂತ್ರ ವರ್ತಿಸುವರು. ಅದರಂತೆ ಮೇ ೧೮ ರಿಂದ ಬರುವ ೯ ನೇ ಕೇತು ಉಚ್ಚನಿರುವದರಿಂದ ಯಾವದೊಂದು ಯಾತ್ರೆಯನ್ನು ಮಾಡುವಿರಿ. ೧೨ ನೆ ಗುರುವಿನಿಂದಾಗಿ ಅಧ್ಯಾತ್ಮವಾದಿಗಳ ಸಹವಾಸ ಇಲ್ಲವೆ ಅನುಗ್ರಹವಾಗುವದು ಮತ್ತು ಸುಖ ಸಾಕಷ್ಟು ದೊರೆಯದಿದ್ದರೂ ಅದರಲ್ಲಿಯೂ ಜುಲೈ ೧೮ ರಿಂದ ಸಪ್ಟಂಬರ ೨ ರ ವರೆಗೆ ಬಹಳ ಅನುಕೂಲ ಸುಖ ದೊರೆತ ಅನುಭವ ಬರುವದು.

ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಗಳಲ್ಲಿ ಈ ವರ್ಷ ನಿಮಗೆ ಕೆಲವದರಲ್ಲಿ ಯಶಸ್ಸು ದೊರೆತರೆ ಇನ್ನು ಕೆಲವದರಲ್ಲಿ ಶತ್ರುವಿಗೆ ಯಶಸ್ಸು ಸಿಕ್ಕುವದು. ಅದರಲ್ಲಿಯೂ ಮೇ ೨೪ ರಿಂದ ಸಪ್ಟಂಬರ ೨ ರ ವರೆಗೆ ಹೊರಬೀಳುವ ತೀರ್ಪು ನಿಮಗೇ ಅನುಕೂಲವಿರುವವು. ಈ ವರ್ಷ ವಿದ್ವಾನ್ ಇಲ್ಲವೆ ಬುದ್ಧಿಜೀವಿ ಮನುಷ್ಯನು ನಿಮ್ಮೊಡನೆ ವಿಶೇಷವಾಗಿ ಶತ್ರುತ್ವವನ್ನು ಸಾಧಿಸುವನು.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವರಿದ್ದರೆ ಅವರಿಗೆ ಮಾರ್ಚ ೭ ರಿಂದ ಜುಲೈ ೧೮ ರ ವರೆಗಿನ ಕಾಲ ಮಾತ್ರ ಅಲ್ಪಸ್ವಲ್ಪ ಕಷ್ಟದ್ದು; ಉಳಿದೆಲ್ಲ ಕಾಲದಲ್ಲಿ ಅತ್ಯಂತ ಸುಲಭವಾಗಿ ಹಡೆಯುವರು. ಆದರೆ ಮಾರ್ಚ ೭ ಕ್ಕಿಂತ ಮೊದಲು ಹಡೆದರೆ ಗಂಡು ಹುಟ್ಟುವದು, ಅನಂತರ ಕನ್ಯಾ ಹೀಗೆ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ ೭ ರ ವರೆಗೆ ಇಲ್ಲವೆ ಜುಲೈ ೧೮ ರಿಂದ ಸಪ್ಟಂಬರ ೨ ರ ವರೆಗಿನ ಅವಧಿಯಲ್ಲಿ ಆಗುತ್ತಿದ್ದರೆ ಅವರು ಖಾತ್ರಿಯಿಂದ ಯಶಸ್ವಿಗಳಾಗುವರು.

# ವೃಷಭ

ಒಟ್ಟಾರೆ ಈ ರಾಶಿಯವರಿಗೆ ಈ ವರ್ಷ ಬಹುತರ ಎಲ್ಲ ವಿಷಯಗಳಲ್ಲಿ ಸುಮಾರಾಗಿ ಹದಿನಾಲ್ಕು ಆಣೆಗಳಷ್ಟಾದರೂ ಯಶಸ್ಸು ದೊರೆತುಆನಂದ ಮತ್ತು ಭಾಗ್ಯವೃದ್ಧಿಯಾಗುವದು.

ಈ ರಾಶಿಯ ಜನರ ಆರೋಗ್ಯ ಈ ವರ್ಷ ಬಹಳ ಅನುಕೂಲ, ಯಾವಾಗಾದರೊಮ್ಮೆ ಏನಾದರೊಂದು ರೋಗವಾದರೆ ನಾಲ್ಕೆಂಟು ದಿನಗಳಲ್ಲಿಯೇ ಅದು ವಾಸಿಯಾಗುವದು. ಆದರೆ ಗ್ಯಾಸಾಗುವ ರೋಗ ಯಾರಿಗಾದರೂ ಇದ್ದರೆ ಅವರಿಗೆ ನವಂಬರ ೭ರಿಂದ ದಿಸೆಂಬರ ೨೯ ಮತ್ತು ಮೇ ೧೨ರಿಂದ ಜೂನ ೬ರ ವರೆಗೆ ಅಲ್ಪ ಸ್ವಲ್ಪ ತೊಂದರೆಯಾಗುವದು. ಉಳಿದ ಆವಶ್ಯಕ ವಿಷಯಗಳಿಂದ ದೇಹ ಸುಖ ಚೆನ್ನಾಗಿಯೇ ಸಿಕ್ಕುವದು. ಆದರೆ ಮನಸ್ಸಿನಲ್ಲಿ ಮಾತ್ರ ಹಾಗೆ ದೊರೆತಂತೆ ಎನಿಸುವದಿಲ್ಲ. ತದ್ವಿಪರೀತ ತಿಳಿವಳಿಕೆಯಾಗುವದು. ವಿಶೇಷವಾಗಿ ಮೇ ೩೪ರ ವರೆಗೆ ಸುಖದಾಯಕವಾದ ಅನೇಕ ಘಟನೆಗಳು ಸಂಭವಿಸುವ ಯೋಗವಿದೆ.

ಈ ವರ್ಷ ಹೆಂಡತಿಯ ಆರೋಗ್ಯವೂ ಸಪ್ಟಂಬರ ೨ರ ವರೆಗೆ ಅನುಕೂಲ. ಆದರೆ ಅನಂತರ ಅಕ್ಟೋಬರ ೧೬ರ ವರೆಗೆ ಅವಳಿಗೆ ಕಪಾಳನೋವು ಇಲ್ಲವೆ ಹೊಟ್ಟೆನೋವಿನಿಂದ ತೊಂದರೆಯೆನಿಸುವದು. ಅನಂತರ ಕ್ಷುಲ್ಲಕ ವಿಷಯಗಳಿಗಾಗಿ ಕೂಡ ಚಿರಡಿಗೆದ್ದು ಮನಸ್ಸಿಗೆ ಬಂದಂತೆ ಒದರಾಡುವ ದೋಷ ಅವಳಲ್ಲಿ ಬರುವ ಸಂಭವವಿದೆ. ಆದರೆಇನ್ನೂ ನಿಮ್ಮ ವಿವಾಹವಾಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಮಾರ್ಚ ೭ ರಿಂದ ಮೇ ೨೩ ರ ವರೆಗೆ ಒಳ್ಳೇ ಬಾಶಿಂಗಬಲವಿದೆ. ಕೂಡಿಬಂದ ಅಲ್ಪಾವಧಿಯಲ್ಲಿಯೇ ಲಗ್ನವಾಗಿ ಹೋಗುವದು. ಅನಂತರವೂ ಬಾಶಿಂಗಬಲವಿದ್ದೇ ಇದೆ. ಆದರೆ ಗೊತ್ತಾದ ದಿನ ಲಗ್ನವಾಗದೆ ಅನೇಕ ಅಡಚಣಿಗಳಿಗಾಗಿ ಅದನ್ನು ಬಹಳಷ್ಟು ಮುಂದೆ ಹಾಕುವ ಪ್ರಸಂಗ ಬರುವದು. ಆದರೆ ಪತಿಪತ್ನಿಯರು ಮಾತ್ರ ಪರಸ್ಪರ ಅನುರೂಪ ಇರುವರು.

ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ಅದಕ್ಕೆ ಮಾರ್ಚ ೭ ರಿಂದ ಬಾಶಿಂಗಬಲ ಬರಹತ್ತುವದು. ಅಲ್ಪಾಯಾಸದಿಂದ ಒಳ್ಳೇ ಸ್ಥಳ ಸಿಕ್ಕುವದು ಮತ್ತು ಗೊತ್ತಾದ ಮುಹೂರ್ತದಲ್ಲಿಯೇ ನಿರ್ವಿಘ್ನವಾಗಿ ಲಗ್ನವಾಗಿ ಹೋಗುವದು. ಸೊಸೆ ಅಥವಾ ಅಳಿಯ ರೂಪಕ್ಕಿಂತ ಗುಣದಿಂದ, ವಿದ್ವತ್ತೆಯಿಂದ ಇಲ್ಲವೆ ಬುದ್ಧಿಯಿಂದ ಬಹಳ ಶ್ರೇಷ್ಠರಿರುವರು. ಅದರಂತೆಯೆ ಮಗ ಇಲ್ಲವೆ ಮಗಳಿಂದ ನಿಮಗೆ ಒಳ್ಳೆ ಸುಖ ಲಭಿಸುವದು. ಅದರಲ್ಲಿ ಕೆಲವರು ಡಿಸೆಂಬರ ೨೮ ರಿಂದ ಜನವರಿ ೨೫, ಮಾರ್ಚ ೨೨ ರಿಂದ ಎಪ್ರಿಲ ೬, ಜೂನ ೨೫ ರಿಂದ ಅಗಸ್ಟ ೧, ಅಗಸ್ಟ ೨೦ ರಿಂದ ಸಪ್ಟಂಬರ ೧೩ ಇಲ್ಲವೆ ಅಕ್ಟೋಬರ ೩ ರಿಂದ ಅಕ್ಟೋಬರ ೨೬ರ ವರೆಗಿನ ಅವಧಿಯಲ್ಲಿ ಬಹಳ ಉತ್ಕರ್ಷಹೊಂದುವರು.

ಧಂದೆ ಕೂಲಿಯವರಿಗೆ ಈ ವರ್ಷ ಪರ್ವಣಿಯಂತೆ ಅಲಭ್ಯ ಲಾಭದ್ದಾಗಿ ಪರಿಣಮಿಸುವದು. ಏಕೆಂದರೆ ಕಳೆದ ವರ್ಷದಂತೆ ನವಮೇಶ ಮತ್ತು ದಶಮೇಶ ಶನಿ ಇವನು ಒಂಭತ್ತನವನೇ ಇದ್ದು ಮಾರ್ಚ ೭ ರಿಂದ ಬರುವ ೧೧ ನೇ ಗುರು ಲಾಭ ಸ್ಥಾನದ ಸ್ವಾಮಿಯೂ ಸ್ವಗೃಹದಲ್ಲಿಯೇ ಬರುವದರಿಂದ ಮತ್ತು ಅವನು ಅಷ್ಟಮ ಅರ್ಥಾತ್ ಗುಪ್ತ ಲಾಭ ಮಾಡಿಕೊಡುವ ಸ್ಥಾನದ ಸ್ವಾಮಿಯೂ ಆಗಿರುವದರಿಂದ ಅಂದಾಜಿಗಿಂತ ಹೆಚ್ಚು ಲಾಭ ಧಂದೆಯಲ್ಲಿ ಇಲ್ಲವೆ ನೌಕರಿಯಲ್ಲಿ ಸಿಕ್ಕುವದು. ಶ್ರಮದಿಂದ ಈ ಲಾಭ ದೊರೆವುದಲ್ಲದೆ ಲಾಟರಿ ಹತ್ತುವದು, ಸಟ್ಟಾದಲ್ಲಿ ಲಾಭ ದೊರೆಯುವುದು, ಭೂಗತ ದ್ರವ್ಯ ಸಿಕ್ಕುವದು ಇಲ್ಲವೆ ಇಂಥವೇ ಅಕಸ್ಮಾತ್ ಸಂಭವಿಸುವ ಘಟನೆಗಳಿಂದ ಬಹಳಷ್ಟು ಲಾಭವಾಗುವುದು. ಅಲ್ಲದೆ ಮೇ ೧೮ ರಿಂದ ೮ ನೇ ಅಂದರೆ ಧನುವಿನಲ್ಲಿ ಉಚ್ಚ ರಾಶಿಯಲ್ಲಿ ಬರುವ ಕೇತುವೂ ಇದೇ ಬಗೆಯಾಗಿ ಆಕಸ್ಮಿಕ ಧನಲಾಭ ಮಾಡಿಕೊಡುವನು. ಒಟ್ಟಾರೆ ಪುರುಷಾರ್ಥದ ಮುಖ್ಯ ಸ್ಥಾನಗಳಾದ ನವಮ, ದಶಮ, ಏಕಾದಶ ಅಂದರೆ ಭಾಗ್ಯ, ಕರ್ಮ ಮತ್ತು ಲಾಭ ಈ ರಾಶಿಯ ಸ್ವಾಮಿಗಳಾದ ಶನಿ ಮತ್ತು ಗುರು ಈ ಸ್ಥಾನಗಳಲ್ಲಿಯೇ ಇರುವದರಿಂದ ಆಯುಷ್ಯದಲ್ಲಿ ಹಿಂದೆಂದೂ ಸಂಭವಿಸದಿದ್ದ ಮತ್ತು ಮುಂದೆಂದೂ ಸಂಭವಿಸಲಾರದಂಥ ಮಹತ್ವದ ಘಟನೆಗಳು ಸಂಭವಿಸಿ ಪರಿಸ್ಥಿತಿ ಚೆನ್ನಾಗಿ ಸುಧಾರಿಸಿ ತುಂಬ ಲಾಭವಾಗುವದು. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಧಂದೆಯವರ ಪತ್ತು ಪ್ರತಿಷ್ಠೆ ಚೆನ್ನಾಗಿ ಹೆಚ್ಚುವವು ಮತ್ತು ಒಂದು ಸಾವಿರ ಸಿಕ್ಕುವಲ್ಲಿ ಕನಿಷ್ಠ ನಾಲ್ಕೈದು ಸಾವಿರವಾದರೂ ಸಿಕ್ಕುವದು. ನಿಮ್ಮ ಧಂದೆಯನ್ನು ಹೆಚ್ಚಿಸುವದಕ್ಕಾಗಿ ಕೆಲ ಕಡೆ ಶಾಖೆಗಳನ್ನು ತೆರೆಯುವಿರಿ.

ನೌಕರರಿಗೂ ಈ ವರ್ಷ ಒಳ್ಳೆ ಸುಖದ್ದಾಗಿದೆ. ವರಿಷ್ಠರ ಮರ್ಜಿಯೂ ಹೆಚ್ಚುವದು. ಸಣ್ಣದೊಡ್ಡ ವಿಷಯಗಳಲ್ಲಿ ಅವರು ನಿಮ್ಮ ಸಲಹೆ ಕೋರುವರು. ಮತ್ತು ಅಂತು ಮಾಡುವದನ್ನೂ ನಿರ್ಧರಿಸುವರು. ಬಹುತರ ಜನರಿಗೆ ಮಾರ್ಚ ೭ ರಿಂದ ಮೇ ೧೮ ರ ಅವಧಿಯಲ್ಲಿ ಮೇಲಿನ ಗ್ರೇಡು ಸಿಕ್ಕುವದು. ಕೈಕೆಳಗಿನ ಜನರು ಅಂಜಿಕೊಂಡು ಪ್ರೇಮದಿಂದ ವರ್ತಿಸುವರು. ಬದಲಿಯಾಗುವ ಖಾತೆಯಿದ್ದರೆ ಖಾತ್ರಿಯಿಂದ ಬದಲಿಯಾಗುವದು. ಮತ್ತು ಅದು ಒಳ್ಳೆ ಸ್ಥಳವಾಗಿರುವದು. ಯಾರ ಜನ್ಮಕಾಲದಲ್ಲಿ ಶನಿ ಮತ್ತು ಗುರು ನವಮ ದಶಮ ಇಲ್ಲವೆ ಏಕಾದಶ ಸ್ಥಾನಗಳಲ್ಲಿದ್ದರೆ ಇಲ್ಲವೆ ಇವುಗಳಲ್ಲಿ ಯಾವದೊಂದು ಸ್ಥಾನವನ್ನು ಅವನು ನೋಡುತಿದ್ದರೆ ಅವರಿಗೆ ಈ ವರ್ಷದಿಂದ ಭಾಗ್ಯದ್ದೆನಿಸುವದು. ಸ್ಥಾವರ ಸಂಗ್ರಹ ಬಹಳಷ್ಟು ಆಗುವದಿಲ್ಲ. ಆದರೆ ರೋಖ ಹಣ ಕೂಡುವದು ಮತ್ತು ಉಚ್ಚ ವಸ್ತ್ರಾಲಂಕಾರಗಳನ್ನು ಧರಿಸುವಿರಿ. ಹೊಸ ವಾಹನಗಳನ್ನು ಕೊಳ್ಳುವಿರಿ.

ಈ ವರ್ಷ ಆಪ್ತರಿಂದಲೂ ನಿಮಗೆ ಬಹಳ ಸುಖ ಸಿಕ್ಕುವದು. ಅಣ್ಣ ತಮ್ಮಂದಿರೂ ಸರಳ ರೀತಿಯಿಂದ ವರ್ತಿಸುವರು. ಆದರೆ ಮೇ ೧೮ರ ನಂತರ ಮಾತ್ರ ಮನೆಯವರೇ ಅಂಜಿಕೊಂಡವರಂತೆ ಆಗಿ ತೊಂದರೆ ಕೊಡಹತ್ತುವರು. ನೂರು ಇನ್ನೂರು ರೂಪಾಯಿಗಳ ಒಂದೆರಡು ವಸ್ತು ಮನೆಯವನೊಬ್ಬನೇ ಮಾಯಮಾಡಿಬಿಡುವನು. ಕಣ್ಣಿಗೆ ಇಲ್ಲವೆ ಹಲ್ಲಿಗೆ ನೋವಾಗುವದು. ಬೌದ್ಧಿಕ ಕಾರ್ಯಗಳಲ್ಲಿ ಪ್ರಶಂಸನೀಯ ಯಶಸ್ಸು ಸಿಕ್ಕುವದು. ಮಾರ್ಚ ೨೪ ರಿಂದ ಮೇ ೧೨ರ ವರೆಗಿನ ಕಾಲದಲ್ಲಿ ಯಾವದೊಂದು ಯಾತ್ರೆ, ಇಲ್ಲವೆ ತತ್ಸಮ ಧಾರ್ಮಿಕ ಕೃತ್ಯ ಘಟಿಸುವದು.

ದಾವೆ ಫಿರ್ಯಾದಿಯ ಪ್ರಸಂಗ ಬಹಳಷ್ಟು ಬರುವದಿಲ್ಲ. ಯದಾಕದಾಚಿತ್ ಒಂದೆರಡು ಬಂದರೂ ಕೊನೆಗೆ ಪ್ರತಿಪಕ್ಷಿಗಳೇ ಒಡಂಬಡಿಕೆ ಮಾಡಿಕೊಳ್ಳ ಬಯಸುವರು. ಇಲ್ಲವೆ ಪೂರ್ಣವಾಗಿ ಪರಾಜಯ ಹೊಂದುವರು. ಆದರೂ ಕಿರುಕಳ ಶತ್ರುಗಳ ಅಂಜಿಕೆ ಬಹಳ.

ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ಯಾವಾಗ ಹಡೆದರೂ ಕಷ್ಟವಿಲ್ಲದೆ ಹಡೆಯುವರು. ಆದರೆ ಮೇ ೧೮ರ ನಂತರ ಹುಟ್ಟಿದ ಮಕ್ಕಳು ಮುಂದೆ ಸುಮಾರು ೧॥ ವರ್ಷ ಅಶಕ್ತ ಉಳಿಯುವರು. ಅದರಂತೆ ಮಾರ್ಚ ೭ರ ವರೆಗೆ ಕನ್ಯಾ ಹುಟ್ಟುವದು ಮತ್ತು ಮುಂದೆ ಗಂಡು ಹುಟ್ಟುವ ಸಂಭವ ಹೆಚ್ಚಿಗೆ ಇದೆ.

ಮಾರ್ಚ ೭ಕ್ಕಿಂತ ಮೊದಲು ಪರೀಕ್ಷೆ ಕಟ್ಟಿದ ವಿದ್ಯಾರ್ಥಿಗಳು ಎಲ್ಲ ವಿಷಯಗಳ ಅಭ್ಯಾಸ ಚೆನ್ನಾಗಿ ಮಾಡಿದ್ದರೆ ಮಾತ್ರ ಯಶಸ್ಸನ್ನು ಅಪೇಕ್ಷಿಸಬೇಕು. ಅನಂತರ ಪರೀಕ್ಷೆ ಕಟ್ಟಿದವರು ಮಾತ್ರ ಕಚ್ಚಾ ವಿಷಯದಲ್ಲಿ ಕೂಡ ಪಾಸಾಗಿ ಯಶಸ್ವಿಯಾಗುವರು.

# ಮಿಥುನ

ಒಟ್ಟಾರೆ ಈ ವರ್ಷ ಬಹಳ ಉನ್ನತಿಯು ದಾಗಿರದಿದ್ದರೂ ಅಷ್ಟೊಂದು ಹೆಚ್ಚು ಅವನತಿ ಯದೂ ಇರುವದಿಲ್ಲ. ಆದುದರಿಂದ ನೀವು ಒಳ್ಳೆ ನಮ್ರತೆಯಿಂದ ಇದ್ದುಕೊಂಡರೆ ಆಚೆ ದಂಡೆಯನ್ನು ಸಹಜವಾಗಿ ಮುಟ್ಟುವಿರೆಂ-ಬುದು ನಿಶ್ಚಿತ.

ಕಳೆದ ವರ್ಷದಂತೆ ಈ ವರ್ಷವೂ ಈ ರಾಶಿಯು ವರಿಗೆ ಅಷ್ಟಮ ಶನಿ ಇರುವನು. ಅಲ್ಲದೆ ಅವನ ಜೊತೆಯಲ್ಲಿಯೇ ಮೇ ೧೮ ರ ವರೆಗೆ ಕೇತುವು ಇರುವನು ಮತ್ತು ಅಲ್ಲಿಯುವರೆಗಿರುವ ಆ ದ್ವಿತೀಯ ರಾಹುವಿನ ಜೊತೆಗೆ ಮಂಗಳನೂ ಇರುವನು ಅರ್ಥಾತ್ ಈ ಅವಧಿಯ ವರೆಗೆ ಈ ರಾಶಿಯು ವರು ವಿದ್ಯುತ್ತು ಮತ್ತು ಬೆಂಕಿ ಇವುಗಳ ಬಗ್ಗೆ ಮತ್ತು ಇವುಗಳಿಂದ ನಡೆಯುವ ಯಂತ್ರಗಳ ಬಗ್ಗೆ ಬಹಳ ಎಚ್ಚರದಿಂದ ಇರಬೇಕು. ನಿಮಗೆ ಗೊತ್ತಾಗದೆಯೆ ಅಪಘಾತವಾಗುವ ಸಂಭವವದೆ. ಅದರಂತೆಯೇ ಉಷ್ಣವಾತ ಪ್ರಕೃತಿಯಿದ್ದವರೊ ಉಣ್ಣುತಿನ್ನುವದರಲ್ಲಿ ಜಾಗರೂಕತೆಯಿಂದಿರ-ಬೇಕು. ಮತ್ತು ಆಯುಷ್ಯವೃದ್ಧಿಗಾಗಿ ವರ್ಷಾರಂ-ಭದಲ್ಲಿಯೇ ಮಹಾಮೃತ್ಯುಂಜಯ ಜಪವನ್ನು ಇಮ್ಮಡಿ ಅರ್ಥಾತ್ ೨೨ ಸಾವಿರ ಅವಶ್ಯ ಮಾಡ ಬೇಕು. ಅಂದರೆ ನಿಶ್ಚಯವಾಗಿ ಅರಿಷ್ಟ ನಿವಾರಣೆ ಯಾಗುವದು, ಇಲ್ಲವೆ ಅದು ಉದ್ಭವಿಸುವದೇ ಇಲ್ಲ.

ಉಳಿದ ವಿಷಯಗಳಲ್ಲಿ ಮಾತ್ರ ದೇಹಸುಖ ಬಹಳ ಉತ್ತಮ ಮತ್ತು ಮಾರ್ಚ ೭ ರ ವರೆಗೆ ಇರುವ ನವಮ ಗುರು ಮತ್ತು ಅನಂತರ ಬರುವ ದಶಮ ಗುರು ಪ್ರಾಪಂಚಿಕ ವಿಷಯಗಳಲ್ಲಿ ಬಹಳ ದಿನಗಳಿಂದ ಮನಸ್ಸಿನಲ್ಲಿದ್ದ ಸುಧಾರಣೆಗಳನ್ನುಂಟು ಮಾಡುವನು.

ಸ್ತ್ರೀಸುಖವೂ ಈ ವರ್ಷ ಚೆನ್ನಾಗಿ ದೊರೆಯು ವದು. ಮಾರ್ಚ ೭ ರ ವರೆಗೆ ಸಣ್ಣ ದೊಡ್ಡ ಕೆಲಸ ಗಳಲ್ಲೆಲ್ಲ ಪರಸ್ಪರರಲ್ಲಿ ಏಕವಾಕ್ಯತೆಯಾಗುವದು. ಅವಳ ಆರೋಗ್ಯವೂ ನಿರೋಗಿ ಉಳಿಯುವದು. ಆದರೆ ಡಿಸೆಂಬರ ೨೬ ರಿಂದ ಮಾರ್ಚ ೧೭ ರ ಅವ ಧಿಯಲ್ಲಿ ದವಡಿಶೂಲಿ ಇಲ್ಲವೆ ಕರ್ಣಶೂಲಿ ಇಲ್ಲವೆ ಮೂಲವ್ಯಾಧಿಯಂಥ ಯಾವದೊಂದು ವಿಕಾರದಿಂದ ಸ್ವಲ್ಪ ಕ್ಲೇಶವಾಗುವ ಸಂಭವವಿದೆ. ಆದರೆ ಯಾರ ಮದುವೆ ಇನ್ನೂ ಆಗಿಲ್ಲವೊ ಮತ್ತು ಈ ವರ್ಷ ಆಗು ವದಿದೆಯೋ ಅಂಥವರಿಗೆ ಇಡೀ ವರ್ಷ ಬಾಸಿಂಗಬಲ ಚೆನ್ನಾಗಿದೆ. ಅಂತೆಯೆ ಅನಾಯಾಸವಾಗಿ ಮತ್ತು ಸಮೀಪದ ಹಳ್ಳಿಯಲ್ಲಿ ಲಗ್ನ ಕೂಡಿಬರುವದು ಮತ್ತು ಕೂಡಲೆ ನಿರ್ವಿಘ್ನದಿಂದ ಸಮಾರಂಭ ಜರ ಗುವದು; ಮತ್ತು ವಧೂವರರು ಎಣಿಸಿದ್ದಕ್ಕಿಂತಲೂ ಒಂದು ಗುಂಜಿತೂಕ ಹೆಚ್ಚು ಗುಣವಂತರಿರುವದು ನಿದರ್ಶನಕ್ಕೆ ಬರುವದು.

ಅದರಂತೆಯೇ ಮಕ್ಕಳ ಮದುವೆಯಾಗುವು ದಿದ್ದರೆ ಮಾರ್ಚ ೭ ರೊಳಗಾಗಿಯೇ ಅದನ್ನು ಅವ ಸರದಿಂದ ಮುಗಿಸಿ ಬಿಡಬೇಕು. ಏಕೆಂದರೆ ಆಗಿನ ಬಲಿಷ್ಠಯೋಗ ಮುಂದೆ ಇರುವುದಿಲ್ಲ. ಮೊದಲು ಗೊತ್ತುಪಡಿಸಬೇಕೆಂದಿದ್ದ ಸ್ಥಳ ಪರಸ್ಪರ ಮನಸ್ಸಿ ನಲ್ಲಿದ್ದರೂ ಸ್ಥಳಾಂತರದಿಂದ ಬಹಳ ಮುಂದಕ್ಕೆ ಬೀಳುವುದು. ಇಲ್ಲವೆ ಅನಪೇಕ್ಷಿತ ಒಳಿತು-ಕೆಟ್ಟ ಕಾರಣಗಳಿಗಾಗಿ ಲಗ್ನ ಮಾಡುವ ವಿಚಾರವೇ ಕುಂಠಿತವಾಗಬಹುದು. ಇರಲಿ. ಲಗ್ನವಾದರೆ ಸೊಸೆ ಇಲ್ಲವೆ ಅಳಿಯ ಮಾತ್ರ ಎಲ್ಲರ ಮನಸ್ಸಿಗೂ ಬರುವಂತೆ ರೂಪಗುಣಸಂಪನ್ನರಿರುವರು. ಮಕ್ಕಳ ಉನ್ನತಿಗೆ ಈ ವರ್ಷ ಸಾಧಾರಣವಿರುವುದು. ಆದರೆ ದ್ರವ್ಯಕ್ಕಿಂತ ಶಿಕ್ಷಣವಿಷಯದಲ್ಲಿ ತುಂಬಾ ಯಶಸ್ಸನ್ನು ಬಯಸುವವರಿಗೆ ಮಾತ್ರ ಅದು ಖಾತ್ರಿಯಿಂದ ಸಿಕ್ಕುವುದು. ಎಲ್ಲ ಮಕ್ಕಳೂ ನಿಮ್ಮೊಡನೆ ಸೌಜನ್ಯದಿಂದ ವರ್ತಿಸುವುದಿಲ್ಲ ನಿಜ. ಆದರೆ ಅವಿನಯರಾಗಿಯೂ ನಡೆಯುವುದಿಲ್ಲ— ಒಬ್ಬರ ಅಂತರ್ಜಾತೀಯ ವಿವಾಹವೂ ಆಗುವ ಸಂಭವವಿದೆ— ಏಕೆಂದರೆ ದ್ವಿತೀಯ ಉರ್ಫ ಕುಟುಂಬ ಸ್ಥಾನದಲ್ಲಿ ಮೇ ಕೊನೆಯ ವರೆಗೆ ಇದ್ದ ರಾಹುಮಂಗಳರ ಜೊತೆ ಅನಪೇಕ್ಷಿತ ಕೆಲವು ಘಟನೆಗಳನ್ನು ಮಾಡಿಸಬಹುದು.

ಧಂದೆ ಕೂಲಿಯುವರಿಗೆ ಈ ವರ್ಷದ ಮೇ ೨೪ ರ ವರೆಗೆ ಬಹಳ ಏರಿಳಿಕೆಯ ಕಾಲವಾಗಿದೆ. ಇತ್ತ ದರಿ ಅತ್ತ ಕಂದರ ಅನ್ನುವ ವಿವಂಚನೆಯನ್ನುಂಟು ಮಾಡುವ ಕಾಲವು. ಆದರೂ ಕರ್ಮೇಶ ಗುರು ವರ್ಷವಿಡೀ ಬಲಿಷ್ಠನಿರುವುದರಿಂದ ದಿವಾಳಿ ತೆಗೆ-ಯುವ ಇಲ್ಲವೆ ಸಸ್ಪೆಂಡ ಆಗುವ ಅಂಜಿಕೆ ಸ್ವಲ್ಪೂ ಇಲ್ಲ. ಸ್ವಲ್ಪ ವಿನಮ್ರತೆಯಿಂದ ವರ್ತಿಸಿದರೆ ವಿವಂಚನೆ ಬಹಳ ಮಟ್ಟಿಗೆ ಕಡಿಮೆಯಾಗುವುದು. ಅನಂತರ ಅಂದರೆ ಮೇ ೨೪ ರಿಂದ ಮುಂದೆ ಅಕ್ಟೋಬರ ೧೬ರ ವರೆಗಿನ ಕಾಲವು ಮನಸ್ಸಿನಂತೆ ಯಶಸ್ಸು ಕೊಡುವ ಕಾಲವು. ನೋಕರಿ ಇದ್ದ ವರಿಗೆ ನವ್ಹಂಬರ ೨೬ರ ವರೆಗೆ, ಅನಂತರ ಮಾರ್ಚ, ೪ ರಿಂದ ೨೨, ಎಪ್ರೀಲ ೬ ರಿಂದ ಜೂನ ೫, ನಂತರ ಜೂನ ೨೫ ರಿಂದ ಜುಲೈ ೧೫ ಮತ್ತು ಅಗಸ್ಟ ೧ ರಿಂದ ಸಪ್ಟೆಂಬರ ೧೩ ಈಕಾಲವು ಬಹಳ ಸುಖ, ದ್ದಾಗಿ ಪರಿಣಮಿಸುವುದು. ಧಂದೆ ಇರಲಿ ನೋಕರಿ ಇರಲಿ ಮೇ ೨೪ ರ ನಂತರದ ಕಾಲವು ದ್ರವ್ಯ ಲಾಭಕ್ಕೆ ಬಹಳ ಅನುಕೂಲವಾಗಿದೆ. ಅಷ್ಟಮ ಶನಿ ಸ್ವಕ್ಷೇತ್ರದಲ್ಲಿಯೇ ಇರುವದರಿಂದ ಮೇ ೧೮ ರಿಂದ ಬರುವ ಪ್ರಥಮ ರಾಹು ತನ್ನ ಉಚ್ಚರಾಶಿ ಯಲ್ಲಿ ಅಂದರೆ ಮಿಥುನದಲ್ಲಿ ಬರುವುದರಿಂದ ಈ ಕಾಲಾನಂತರ ಅನೇಕರಿಗೆ ಗುಪ್ತ ಇಲ್ಲವೆ ಆಕಸ್ಮಿಕ ಲಾಭವೂ ಬಹಳ ಪ್ರಮಾಣದಲ್ಲಿ ಆಗುವುದು ಶಕ್ಯವಿದೆ. ಶಿಲ್ಲಕು ಬೀಳದಿದ್ದರೂ ಹಿಂದಿನ ಕೊಡ-ತಕ್ಕೊಳ್ಳುವದಾದರೂ ನೀಗುವುದು ಅಷ್ಟೊಂದು ಅನುಕೂಲವಾಗಿವೆ ಈ ಸಲದ ಗ್ರಹಗಳು. ಎರಡನೆಯವರ ವಾಹನಗಳನ್ನು ಮೇಲಿಂದ ಮೇಲೆ ಉಪಭೋಗಿಸುವ ಯೋಗವಿದೆ. ಅವಿಭಕ್ತ ಕುಟುಂಬನಿದ್ದರೆ ಮಾತ್ರ ಮೇ ೧೮ಕ್ಕಿಂತ ಮೊದಲು ಬಹುಶಃ ವಿಭಕ್ತವಾಗುವ ಯೋಗವಿದೆ. ಮುಂದೆ ಬರುವ ಬಲಿಷ್ಠ ಶನಿಯನ್ನು ನೋಡಿದರೆ ಹಾಗೆ ವಿಭಕ್ತವಾಗುವದು ಹಿತದಾಯಕವೆನಿಸು ವದು. ಮಾರ್ಚ ೭ಕ್ಕಿಂತ ಮೊದಲು ಯಾವದೊಂದು ಯಾತ್ರೆ ಸಂಭವಿಸುವದು ಇಲ್ಲವೆ ಬಹಳ ವೆಚ್ಚದ ಯಾವದೊಂದು ಧಾರ್ಮಿಕ ಕಾರ್ಯ ಮಾಡುವಿರಿ.

ಈ ವರ್ಷ ಮೇ ೨೩ ರ ವರೆಗೆ ಮಿತ್ರಸುಖ ಬಹಳ ತೊಂದರೆಯದು ಮತ್ತು ಖೇದಜನಕವಾ ದುದು. ಅವರೇ ಶತ್ರುಗಳಂತೆ ನಿಮ್ಮಲ್ಲಿಯ ಲೋಪ ದೋಷಗಳನ್ನೆಣಿಸುವರು. ಅನಂತರ ಮಾತ್ರ ಅವರೊಳ್ಳೆ ಸೌಜನ್ಯದಿಂದ ನಡೆದುಕೊಳ್ಳುವರು. ಬಹಳ ದೂರದ ಆಪ್ತರಿಂದ ಅಕಸ್ಮಾತ್ತಾಗಿ ಅನೇಕ ಒಳ್ಳೆ ಸಂಗತಿಗಳು ಸಂಭವಿಸುವವು. ಮತ್ತು ಅಡಚಣಿ ಬಂದಾಗ ನಿರಪೇಕ್ಷರೀತಿಯಿಂದ ಸಹಾ ಯ ಮಾಡುವ ಸಂಭವವಿದೆ. ಕೈಕೆಳಗಿನ ನೋ-ಕರ ಚಾಕರರು, ಉಳಿದ ಆಶ್ರಿತರು ಬಹಳ ನಿಷ್ಠೆ ಯಿಂದ ನಡೆದುಕೊಳ್ಳುವರು.

ದಾವೆ ಫಿರ್ಯಾದಿ ಇಲ್ಲವೆ ಸ್ಪರ್ಧೆಯ ಕೆಲಸಗಳಲ್ಲಿ ಮೊದಲಿನೆರಡು ತಿಂಗಳು ತೊಂದರೆ ಕೊಡುವಂಥ ಕೆಲವು ದುರ್ಧರ ಪ್ರಸಂಗ ಬರುವವು. ಆದರೆ ಅನಂತರ ಮತ್ತು ಬಹುತರ ಕೆಲಸಗಳಲ್ಲಿ ಅನು ಕೂಲ ವಾತಾವರಣವುಂಟಾಗಿ ಜೂನದಿಂದ ಮುಂದೆ ಹೇಳಲ್ಪಡುವ ತೀರ್ಪು ನಿಮಗೆ ಪೂರ್ಣ ವಾಗಿ ಅನುಕೂಲವಾಗುವದು.

ಮಾರ್ಚ ೭ ರೊಳಗೆ ಹಡೆಯುವ ಸ್ತ್ರೀಯರು ಅತ್ಯಂತ ಸುಲಭವಾಗಿ ಹಡೆದು ಗಂಡು ಹಡೆದ ಸಂತೋಷದಲ್ಲಿ ನಲಿದಾಡುವರು. ಅನಂತರ ಹಡೆ ದವರು ಅಲ್ಪಸ್ವಲ್ಪ ಕಷ್ಟವನ್ನನುಭೋಗಿಸಬೇಕಾ ಗುವದು. ಅಲ್ಲದೆ ಹೆಣ್ಣು ಹಡೆಯುವರು. ಆದರೆ ಪ್ರತಿಯೊಬ್ಬರ ಮಕ್ಕಳು ಮೇ ೧೮ ರ ವರೆಗೆ ಮಾತ್ರ ಅಶಕ್ತವುಳಿಯುವರು. ಅನಂತರ ಒಳ್ಳೆ ಪುಷ್ಟರಾಗುವರು.

ಯಾರ ಪರೀಕ್ಷೆ ಮಾರ್ಚ ೭ ಕ್ಕಿಂತ ಮೊದಲು ಮತ್ತು ಮೇ ೨೩ ರಿಂದ ಅಕ್ಟೋಬರ ೧೬ರ ವರೆಗೆ ಆಗುವದೋ ಅವರು ನಿಶ್ಚಯವಾಗಿ ಪಾಸಾಗುವರು ಎಂದು ಪದರಿಗೆ ಗಂಟು ಹಾಕಿಕೊಳ್ಳಬೇಕು. ಆದ ರೂ ಅಭ್ಯಾಸದಲ್ಲಿ ಮಾತ್ರ ಹಯಗಯ ಮಾಡ ಬಾರದು.

# ಕರ್ಕ

ಒಟ್ಟಾರೆ ಈ ವರ್ಷ ಈ ರಾಶಿಯವರಿಗೆ ನವಮಗುರು ಬಂದಂದಿನಿಂದ ಬಹಳ ಭಾಗ್ಯ ವೃದ್ಧಿಯಾಗುವದು ಮತ್ತು ಕೀರ್ತಿವಂತ ರಾಗುವರು.

ಈ ರಾಶಿಯ ಜನರ ಆರೋಗ್ಯ ಮಾರ್ಚ ೭ ರ ವರೆಗೆ ಬಹಳ ಕೆಡಬಹುದು. ಏಕೆಂದರೆ ಆ ವರೆಗೆ ಅಷ್ಟಮಗುರು ಇರುವನು ಅವನ ಜೊತೆಗೆ ಸಪ್ತಮಶನಿ ಮತ್ತು ೧ನೇ ರಾಹು ಹಾಗು ಮಂಗಳ ನೂ ಇರುವರು. ಅವರಲ್ಲಿ ಶನಿಯಂತೂ ವರ್ಷವಿಡಿ ಇರುವನು. ಆದರೆ ಮೇ ೧೮ ಕ್ಕೆ ರಾಹು ೧೨ ನೆ ಯವನು ಮತ್ತು ೨೪ ನೇ ತಾರೀಖಿಗೆ ಮಂಗಳನು ದ್ವಿತೀಯ ಸ್ಥಾನದವನು ಆಗುವದರಿಂದ ಎಲ್ಲವೂ ಕ್ರಮಶಃ ಸುಧಾರಿಸುತ್ತ ನಡೆಯುವದು. ಮುಂದೆ ಜೂನದಿಂದಂತೂ ಬಹಳ ತೀವ್ರ ಸುಧಾರಿಸುವದು. ಮಧುಮೇಹವಿದ್ದವರಿಗೆ ಬಹಳ ತೊಂದರೆಯೆನಿಸು

ವದು. ಯಾಂತ್ರಿಕ ವ್ಯವಸಾಯ ಮಾಡುವವರಿಗೆ ಜನೆವರಿ ಮತ್ತು ಫೆಬ್ರುಅರಿ ಈ ಎರಡು ತಿಂಗಳುಗಳಲ್ಲಿ ಅಪಘಾತದ ಸಂಭವವಿದೆ. ಆದುದರಿಂದ ೧೯೦೦೦ ಗುರುಜಪ ಮಾಡಬೇಕು. ಶನಿ ರಾಹುಗಳಿಗಾಗಿ ಎಳ್ಳೆಣ್ಣಿ ಮತ್ತು ಮಂಗಳನಿಗಾಗಿ ಬೆಲ್ಲ ದಾನ ಕೊಡಬೇಕು. ಇದರಿಂದ ಅರಿಷ್ಟ ನಾಶ ನಿಶ್ಚಯವಾಗಿ ಆಗುವದು.

ಉಳಿದ ವಿಷಯಗಳಲ್ಲಿ ದೇಹಸುಖ ಸಾಮಾನ್ಯವಾಗಿ ಮೂಲತಃ ಅನುಕೂಲವಿದೆ. ಮಾರ್ಚ ೭ ಕ್ಕೆ ನವಮಗುರು ಬಂದ ಬಳಿಕಂತೂ ಉತ್ತರೋತ್ತರ ದೇಹಸುಖ ಹೆಚ್ಚು ಚೆನ್ನಾಗಿ ದೊರೆಯುಹತ್ತುವದು ಮತ್ತು ಜೂನ ಆದ ನಂತರ ಮನಸ್ಸನ್ನು ಸಂತೋಷಗೊಳಿಸುವಂಥ ಉತ್ತಮ ಘಟನೆಗಳು ಸಂಭವಿಸುವವು.

ಹೆಂಡತಿಯ ಆರೋಗ್ಯಕ್ಕೂ ಮೇ ೧೮ ರ ವರೆಗೆ ಅಷ್ಟೊಂದು ಅನುಕೂಲವಿರುವದಿಲ್ಲ. ಮೇಲಿಂದಮೇಲೆ ಕಾಲುನೋಯುವದು, ಟೊಂಕ ಹಿಡಿಯುವದು, ಯಾವದೊಂದು ಮಾತಿನ ಬಗ್ಗೆ ಅಂಜಿಕೆಯೆನಿಸುವದು ಮೊದಲಾದ ಕಷ್ಟಗಳೆನಿಸುವವು. ಆದರೆ ನಿಮ್ಮಂತೆ ಅವಳ ಪ್ರಕೃತಿಯು ಜೂನದಿಂದ ಸುಧಾರಿಸುವದು. ಮೇಲಿನ ದಿನಾಂಕದ ವರೆಗೆ ಉಭಯತರಲ್ಲಿ ಮೇಲಿಂದ ಮೇಲೆ ತಿಕ್ಕಾಟ ನಡೆಯುವದು. ಆನಂತರ ಎಲ್ಲವೂ ಐಕಮತ್ಯದಿಂದ ನಡೆಯುವದು. ನಿಮ್ಮ ಮದುವೆ ಇನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ನವಮಗುರು ಬಂದ ಬಳಿಕವೇ ಆ ಪ್ರಯತ್ನಕ್ಕೆ ಹತ್ತಬೇಕು. ಅಂದರೆ ಮೇ ೧೮ ರ ವರೆಗೆ ಬಹಳ ಪ್ರಯತ್ನದಿಂದ ಮತ್ತು ಆನಂತರ ಅಲ್ಪಾಯಾಸದಿಂದ ಅದು ಒದಗಿ ಬರುವದು. ಮತ್ತು ಬೇಗನೆ ಸಮಾರಂಭ ಜರುಗಿಯೂ ಹೋಗುವದು. ವಧೂವರ ಮೊದಮೊದಲು ಪರಸ್ಪರ ಬಹಳಷ್ಟು ಪ್ರೀತಿಸುವದಿಲ್ಲ. ಆದರೆ ಮುಂದೆ ಮಾತ್ರ ಒಬ್ಬರೊಬ್ಬರ ದಾಸರಾಗುವ ಸಂಭವವಿದೆ.

ಅದರಂತೆಯೇ ನಿಮ್ಮ ಮಕ್ಕಳ ಮದುವೆ ಈ ವರ್ಷ ಮಾಡುವದಿದ್ದರೆ ನವಮಗುರು ಬಂದ ಬಳಿಕವೇ ಕೂಡಿಬರುವದು ಮತ್ತು ಗೊತ್ತಾದ ಮುಹೂರ್ತಕ್ಕೆ ಆಗಿಯೂ ಹೋಗುವದು. ಸೊಸೆ ಮತ್ತು ಅಳಿಯ ರೂಪ ಗುಣಗಳಿಂದ ಸಂಪನ್ನರಿರುವರು—ಉತ್ಸಾಹಿಗಳು ಮತ್ತು ಕದಾಚಿತ್ ವಾಹನಪಟುಗಳೂ ಆಗಿರುವರು ಮತ್ತು ಬಹಳ ಸುದೈವಿಗಳಿರುವರೆಂಬುದೂ ಬೇಗ ನಿದರ್ಶನಕ್ಕೆ ಬರುವದು. ಮಕ್ಕಳಲ್ಲಿ ಒಬ್ಬನು ನಿಮ್ಮ ಮನಸ್ಸಿನ ವಿರುದ್ಧ ವರ್ತಿಸುವನು. ಉಳಿದವರು ಮಾತ್ರ ನಿಮಗೆ ಅನುಕೂಲ. ಪ್ರತಿಯೊಬ್ಬರೂ ಭಾಗ್ಯವಂತರಾಗುವರು.

ಧಂದೆ ನೌಕರಿ ದೃಷ್ಟಿಯಿಂದಲೂ ಈ ವರ್ಷ ಮಾರ್ಚ ೭ ಕ್ಕೆ ಗುರು ೯ ನೆಯ ಅಂದರೆ ಭಾಗ್ಯಸ್ಥಾನವಾದ ಸ್ವಗೃಹಕ್ಕೇ ಬರುವದರಿಂದ ಉತ್ತರೋತ್ತರ ನಿಮ್ಮ ಭಾಗ್ಯವೃದ್ಧಿಯಾಗುತ್ತ ಹೋಗುವದು. ಕನಸುಮನಸಿನಲ್ಲಿಲ್ಲದ ಕಠಿಣವೆನಿಸಿದ ಸಂಗತಿಗಳೂ ಸುಲಭವಾಗಿ ಸಾಧ್ಯವಾಗುವವು. ಅನಂತರ ಇಮ್ಮಡಿ ಮುಮ್ಮಡಿ ಅಷ್ಟೇ ಏಕೆ ಹತ್ತಿಪ್ಪತ್ತು ಮಡಿಯಷ್ಟು ಲಾಭವಾಗುವದು ಇದು ನಿಶ್ಚಯ. ಧಂದೆ ಮಾಡುವವರಿಗೆ ಎಪ್ರಿಲ ೧೫ ರ ನಂತರದ ಕಾಲ ಬಹಳ ತೇಜಿ ಎನಿಸುವದು ಮತ್ತು ಎಪ್ರಿಲ ೧೭ ರಿಂದ ಜೂನ ೩೦, ಜುಲೈ ೨೫ ರಿಂದ ಸಪ್ಟಂಬರ ೧೨ ಮತ್ತು ಅಕ್ಟೋಬರ ೬ ರ ನಂತರದ ಕಾಲವು ಅತ್ಯಂತ ವೈಭವದ್ದಾಗಿ ಪರಿಣಮಿಸುವದು. ಅನೇಕರು ನೀವು ಕರೆಯದೆ ಸಹಾಯ ತೆಗೆದುಕೊಳ್ಳಿರೆಂದು ಆಗ್ರಹಪಡಿಸುವರು.

ನೋಕರರಿಗೆ ಕೂಡ ನವಮಗುರು ಬಂದಂದಿನಿಂದ ಅಷ್ಟೊಂದು ಕಾರಣಗಳಿಲ್ಲದೆಯೇ ವರಿಷ್ಠರು ನಿಮ್ಮ ಮೇಲೆ ಸಂತುಷ್ಟರಾಗಿದ್ದುದು ಕಂಡುಬರುವದು ಮತ್ತು ಜೂನ ೬ ರಿಂದ ೩೦, ಜುಲೈ ೨೫ ರಿಂದ ಸಪ್ಟಂಬರ ೧೨ ಇಲ್ಲವೆ ಅಕ್ಟೋಬರ ೩೦ ರಿಂದ ನವಂಬರ ೧೫ ಈ ಅವಧಿಯಲ್ಲಿ ಲಾಭ ಹೆಚ್ಚುವದು. ಮೇಲಿನ ಗ್ರೇಡು ಸಿಕ್ಕುವದಿದ್ದರೆ ಅವರಿಗೆ ಮೇ ೨೩ ರಿಂದ ಸಪ್ಟಂಬರ ೨ ರೊಳಗಾಗಿ ಖಾತ್ರಿಯಿಂದ ಸಿಕ್ಕುವದು. ಅದರಂತೆ ಬದಲಿಯಾಗುವ ನೋಕರಿಯಿದ್ದರೆ ಅದು ಪಗಾರ ಮತ್ತು ಬಡತಿ ಆಗುವ ವೇಳೆಗೇ ಆಗುವದು ಮತ್ತು ಒಳ್ಳೆ ಅನುಕೂಲ ಸ್ಥಳಕ್ಕೂ ಆಗುವದು. ಅಷ್ಟಮಗುರು ಇರುವ ವರೆಗೆ ಮಾತ್ರ ಪ್ರತಿಷ್ಠೆಗೆ ಬಗೆಬಗೆಯಿಂದ ಕುಂದು ಬರಬಹುದೆಂದು ತಿಳಿದುಕೊಂಡು ಸ್ವಲ್ಪ ಜಪ್ಪಿಸಿಕೊಂಡೆ ಇರಬೇಕು. ಆದರೆ ನವಮಗುರು ಬಂದ ಬಳಿಕ ಕೆಟ್ಟದ್ದಕ್ಕು ಒಳ್ಳೆಯದೆನ್ನುವ ಸರತಿ ಬರುವದು. ಮತ್ತು ದಿನದಿನಕ್ಕೆ ಅದು ಅಭಿವೃದ್ಧಿಯಾಗುತ್ತ ಹೋಗುವದು. ಅದರಂತೆ ಸ್ಥಾವರಕ್ಕಿಂತ ಜಂಗಮ ವಸ್ತುಗಳ ಸಂಗ್ರಹ ಹೆಚ್ಚಿಗೆ ಆಗುವದು ಬಹಳ ದೂರದ ಯಾತ್ರೆಯೊಂದು ಒಮ್ಮೆಲೇ ಸಂಭವಿಸಬಹುದು.

ಅಷ್ಟಮಗುರು ಇರುವವರೆಗೆ ಪ್ರೀತಿಯ ಮಿತ್ರರೂ ಬಹಳ ದೂರ ಸಿಡಿಯುವರು. ಆದರೆ ನವಮಸ್ಥಾನಕ್ಕೆ ಅವನು ಬಂದ ಬಳಿಕ ಹಳೆಯ ಮಿತ್ರರಲ್ಲದೆ ಅನೇಕ ಹೊಸಬರು ಬಂದು ಅವರ ಸಂಖ್ಯೆ ಹೆಚ್ಚುವದು ಮತ್ತು ಅನೇಕರು ತಾ ಮುಂದೆ ನಾ ಮುಂದೆ ಎಂದು ಸಹಾಯ ಮಾಡಲಿಕ್ಕೆ ಧಾವಿಸುವರು. ಕೈ ಕೆಳಗಿನ ನೋಕರ ಚಾಕರರೂ ನವಮಗುರುವಿನಿಂದಾಗಿ ಚೆನ್ನಾಗಿ ನಡೆಯುವರು. ಅಷ್ಟಮಗುರುವಿದ್ದಾಗ ಕೆಟ್ಟ ಮತ್ತು ನವಮಗುರು ಬಂದ ಬಳಿಕ ಒಳ್ಳೆ ಹಾಗೆ ಭಾವೀ ಸ್ವಪ್ನಗಳು ಬೀಳುವವು. ಅನೇಕರಿಗೆ ನವಮಗುರು ಬಂದ ಬಳಿಕ ವಿದ್ಯಾರ್ಜನಕ್ಕಾಗಿ ಇಲ್ಲವೆ ದ್ರವ್ಯ ಸಂಪಾದನೆಗಾಗಿ ಐಷ ಆರಾಮಕ್ಕಾಗಿಯೆಂದೂ ಪರದೇಶ ಪ್ರವಾಸದ ಯೋಗವಿದೆ.

ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ಅಷ್ಟಮಗುರು ಇರುವವರೆಗೆ ಬಹಳ ಪರಾಭವವೇ ಆಗುವದು. ಆದರೆ ನವಮಗುರು ಬಂದ ಬಳಿಕ ಮತ್ತು ಮಾರ್ಚ ೭ರಿಂದ ಮೇ ೧೮ರ ವರೆಗೆ ಅಂದರೆ ಸಪ್ತಮ ಕೇತು ಇರುವವರೆಗೆ ಉಭಯ ಪಕ್ಷಗಳಿಗೂ ಅನುಕೂಲ ಯಶಸ್ಸು ದೊರೆಯುವ ಬಗ್ಗೆ ತೀವ್ರ ಸ್ಪರ್ಧೆಯೆ ನಡೆಯುವದು. ಆದರೆ ಅನಂತರ ಮಾತ್ರ ಷಷ್ಠಸ್ಥಾನದಲ್ಲಿ ಕೇತು ಬಂದ ಬಳಿಕ ಶತ್ರುವು ಪೂರ್ಣ ಫಜೀತಿಹೊಂದುವಂತೆ ನಿಮಗೆ ವಿಜಯ ಲಭಿಸುವದು.

ಅಷ್ಟಮಗುರು ಇರುವಾಗ ಹಡೆಯುವ ಸ್ತ್ರೀಯರು ಸ್ವಲ್ಪ ತ್ರಾಸ ಸೋಸಬೇಕಾದರೂ ಪುತ್ರಲಾಭದ ಆನಂದವನ್ನು ಅನುಭೋಗಿಸುವರು. ನವಮಗುರುವಿರುವಾಗ ಪ್ರಸೂತಿಯೇನೊ ಸುಲಭವಾಗುವದು. ಆದರೆ ಹೆಣ್ಣು ಹುಟ್ಟುವ ಸಂಭವವೇ ಹೆಚ್ಚು.

ಅಷ್ಟಮಗುರು ಇರುವಾಗ ಪರೀಕ್ಷೆಯಾಗುವ ವಿದ್ಯಾರ್ಥಿಗಳಿಗೆ ಯಶಸ್ಸಿನ ಬಗ್ಗೆ ನಿಶ್ಚಿತವೇನೂ ಹೇಳಲಿಕ್ಕೆ ಬಾರದಿದ್ದರೂ ನವಮಗುರು ಬಂದಬಳಿಕ ಪರೀಕ್ಷೆಯಾಗುವವರು ನಿಶ್ಚಯವಾಗಿ ಪಾಸಾಗುವರು, ಅಲ್ಲದೆ ಬಹುತರ ವಿದ್ಯಾರ್ಥಿಗಳು ಮೇಲಿನ ವರ್ಗದಲ್ಲಿಯೂ ಬರುವರು.

## ಸಿಂಹ

ಈ ರಾಶಿಯವರಿಗೆ ಒಟ್ಟಿಗೆ ಈ ವರ್ಷ ಮಾರ್ಚ ೭ ರಿಂದ ಮೇ ೨೩ ರ ವರೆಗೆ ಅಲ್ಪ ಸ್ವಲ್ಪ ತೊಂದರೆಯದೆನಿಸಿದರೂ ಉಳಿದ ಅವಧಿಯಲ್ಲಿ ವಿಶೇಷವಾಗಿ ಉತ್ತರಾರ್ಧದಲ್ಲಿ ಒಳ್ಳೇ ಉತ್ಕರ್ಷದ ದಿನಗಳು ಇರುವವು. ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಈ ರಾಶಿಯವರ ಆರೋಗ್ಯ ಮಾರ್ಚ ೭ರ ವರೆಗಿರುವ ಸಪ್ತಮಗುರುವಿನಿಂದಾಗಿ ಉತ್ತಮ ಉಳಿಯುವದು. ಆದರೆ ಅನಂತರ ಬರುವ ಅಷ್ಟಮಗುರು ಸ್ವಗೃಹಕ್ಕೆ ಬರುವದರಿಂದ ಅವನು ಆರೋಗ್ಯವನ್ನು ಕೆಡಿಸಲಾರನು. ಆದರೂ ಬಹಳಷ್ಟು ಕಾಲ ಅಂದರೆ ಮೇ ೨೩ ರ ವರೆಗೆ ಇರುವ ದ್ವಾದಶ ಮಂಗಳನಿಂದಾಗಿ ಚಿಂತೆಯುಂಟಾಗುವ ಸಂಭವವಿದೆ. ಆ ಅವಧಿಯಲ್ಲಿ ಹಸಿವೆಯಾಗುವದಿಲ್ಲ, ನಿದ್ರೆಯೂ ಹೆಚ್ಚಿಗೆ ಹತ್ತುವದಿಲ್ಲ. ವರ್ಷವಿಡಿ ಇರುವ ಷಷ್ಠ ಶನಿ ಇವನೂ ನಿರೋಗಿಕಾರಕನಿರುವನು. ಉಳಿದ ವಿಷಯಗಳಲ್ಲಿಯೂ ದೇಹಸುಖ ಉತ್ತಮ ದೊರೆಯುವದು. ಈ ವರ್ಷದಲ್ಲಿ. ಮೇ ೨೩ ರಿಂದಂತೂ ಅದು ಎಲ್ಲ ವಿಷಯಗಳಲ್ಲಿ ಅನುಕೂಲವೆನಿಸುವದು. ಆಚಾರ ವಿಚಾರ ಬಹಳ ಉತ್ತಮ ಮತ್ತು ಉಚ್ಚತರದ್ದುಎನಿಸುವವು. ಆ ಬಗ್ಗೆ ಅನೇಕರ ಪ್ರಶಂಸೆಗೂ ಪಾತ್ರರಾಗುವಿರಿ.

ಆದರೆ ಹೆಂಡತಿಯ ಆರೋಗ್ಯ ಮಾತ್ರ ಮಾರ್ಚ ೭ ರ ವರೆಗೆ ಎಷ್ಟು ಉತ್ತಮ ಉಳಿಯುವದೋ ಅಷ್ಟು ಮುಂದೆ ಇರುವದಿಲ್ಲ. ಅದರಲ್ಲಿಯೂ ಮಾರ್ಚ ೭ ರಿಂದ ಜುಲೈ ೧೮ ರ ವರೆಗೆ ಪ್ರಕೃತಿ ಕೆಟ್ಟ ಬಗ್ಗೆ ಅವಳ ದೂರು ಮೇಲಿಂದ ಮೇಲೆ ಇದ್ದದ್ದೇ. ಅಲ್ಲದೆ ಮೇ ೨೩ರ ವರೆಗೆ ಕ್ಷುಲ್ಲಕ ಕಾರಣಗಳಿಗಾಗಿಯೂ ನಿಮ್ಮಿಬ್ಬರಲ್ಲಿ ಮೇಲಿಂದ ಮೇಲೆ ಐಕಮತ್ಯವುಳಿಯಲಾರದು. ಅನಂತರ ಮಾತ್ರ ಅನೇಕ ವಿಷಯಗಳಲ್ಲಿ ಐಕಮತ್ಯದಿಂದಿರುವಿರಿ. ಆದರೆ ನೀವಿನ್ನೂ ಅವಿವಾಹಿತರಾಗಿದ್ದು ಈ ವರ್ಷ ಲಗ್ನ ಮಾಡಿಕೊಳ್ಳುವವರಿದ್ದರೆ ಮಾರ್ಚ ೭ ರ ವರೆಗೆ ಉತ್ತಮ ಬಾಶಿಂಗಬಲವಿದೆ. ಮುಂದೆಯಾದರೂ ಸಾಮಾನ್ಯ ಬಾಶಿಂಗಬಲವಿದೆ. ಅಂದರೆ ಮಾರ್ಚ ೭ರ ನಂತರ ಕೂಡಿದ ವಿವಾಹಗಳನ್ನು ಮಾಡಬೇಕಾದರೆ ಹೆಚ್ಚು ಅಡಚಣಿಗಳನ್ನು ಎದುರಿಸಬೇಕಾಗಬಹುದು. ಸೊಸೆ ಇಲ್ಲವೆ ಅಳಿಯರು ಬುದ್ಧಿವಂತರಿದ್ದರೂ ಸ್ವಲ್ಪ ಗರ್ವಿಷ್ಠರಿರುವರು; ಆದರೆ ವರ್ಷವಿಡಿ ಮಕ್ಕಳ

ಉತ್ಕರ್ಷಕ್ಕೆ ಅನುಕೂಲವಿರುವದು. ಅದರಲ್ಲಿಯೂ ಮೇ ೨೩ ರ ನಂತರ ವಿಶೇಷ ಅನುಕೂಲ ಯೋಗವಿದೆ. ಆದರೆ ಮೇ ೧೮ ರಿಂದ ಬರುವ ಪಂಚಮ ಕೇತುವಿನಿಂದ ಮಕ್ಕಳಲ್ಲಿ ಒಬ್ಬರ ಆರೋಗ್ಯ ಸ್ವಲ್ಪ ಕುಂದುವದು ಮತ್ತು ಕೆಲವರ ವರ್ತನೆ ನಿಮ್ಮ ಮನಸ್ಸಿಗೆ ಬರುವದಿಲ್ಲ.

ಧಂದೆಗಾರರಿಗೆ ನೋಕರರಿಗೆ ಈ ವರ್ಷ ಅನುಕೂಲವಿದೆ. ಮೇ ೧೮ ರಿಂದ ಬರುವ ಏಕಾದಶ ರಾಹುಬಹಳ ಉನ್ನತಿಯನ್ನು ಸಾಧಿಸುವನು. ಮೇ ೨೩ ರಿಂದ ಬರುವ ಪ್ರಥಮ ಮಂಗಳನು ಬಹಳ ಭಾಗ್ಯವೃದ್ಧಿಕಾರಕನು. ಅದರಂತೆ ಅಷ್ಟಮ ಅಂದರೆ ಗುಪ್ತ ಲಾಭದರ್ಶಕ ಸ್ಥಾನಕ್ಕೆ ಬರುವ ಗುರು ಸ್ವಸ್ಥಾನದಲ್ಲಿಯೇ ಇರುವದರಿಂದ ನೂರಕ್ಕೆ ೬೦ ರಷ್ಟು ಜನಕ್ಕೆ ಮೂಲಗ್ರಹ ಬಲಕ್ಕನುಸಾರವಾಗಿ ಗುಪ್ತ ಇಲ್ಲವೆ ಅಕಸ್ಮಾತ್ ಧನಲಾಭ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಆಗುವದು. ಆದರೆ ಆಗುವದು ಮಾತ್ರ ನಿಶ್ಚಿತ. ಧಂದೆಯವರಿಗೆ ಏನಾದರೂ ಹಿಂದೇಟಿದ್ದರೆ ದ್ವಾದಶ ಮಂಗಳ ಹೋಗಿ ಪ್ರಥಮ ಮಂಗಳ ಬಂದ ೧೦-೧೫ ದಿನಗಳಲ್ಲಿಯೇ ಒಳ್ಳೆ ಲಾಭವಾಗಹತ್ತುವದು. ಮತ್ತು ವರ್ಷವಿಡಿ ಇರುವ ಷಷ್ಠ ಶನಿ ಎಂಥ ಸಂಕಷ್ಟಗಳನ್ನೂ ನಾಶ ಮಾಡುವನು ಶತ್ರುಗಳನ್ನು ಪರಾಜಿತಗೊಳಿಸುವನು. ಉದ್ಯೋಗದಲ್ಲಿಯ ಪತ್ತು ಮತ್ತು ಪ್ರತಿಷ್ಠೆ ಏಕಾದಶರಾಹುವಿದ್ದಾಗ ಬಹಳ ಬೆಳೆಯುವದು. ಅದರಂತೆ ನೋಕರರಿಗೆ ಕೂಡ ಮೇ ೨೩ ರ ನಂತರ ಒಳ್ಳೆ ಸುಖಕಾರಕ ದಿನಗಳು ಬರುವವು. ಒಟ್ಟು ಪ್ರತಿಯೊಂದು ಕೆಲಸದಲ್ಲಿ ನಿಮ್ಮಲ್ಲಿಯ ಸದ್ಗುಣಗಳಿಗಾಗಿ ವರಿಷ್ಠರು ಇಲ್ಲವೆ ಒಡೆಯರು ನಿಮ್ಮನ್ನು ಪ್ರಶಂಸಿಸುವರು. ಅನೇಕರಿಗೆ ಜುಲೈ ೧೮ ರಿಂದ ಅಕ್ಟೋಬರ ೧೬ ರ ಅವಧಿಯಲ್ಲಿ ಮೇಲಿನ ಗ್ರೇಡು ಸಿಕ್ಕುವದು ನಿಶ್ಚಯ, ಮೇ ೨೩ ರೊಳಗಾಗಿ ಬದಲಿಯಾದರೆ ಅದು ಅನನುಕೂಲ ಸ್ಥಳಕ್ಕಾಗುವದು. ಅನಂತರ ಬಹಳ ಅನುಕೂಲ ಸ್ಥಳಕ್ಕಾಗುವದು. ಮೇ ೨೩ ರ ವರೆಗೆ ಹೆಚ್ಚಿನ ವೆಚ್ಚವಾಗಿ ಸಂಪುಷ್ಟಕ್ಕೆ ಬರುವಿರಿ. ಅನಂತರ ಮಾತ್ರ ನಾಲ್ಕು ದುಡ್ಡು ಉಳಿಯುವಂತೆ ಪರಿಸ್ಥಿತಿ ಸುಧಾರಿಸುವದು. ಅನೇಕರು, ಸ್ಥಾವರ ಆಸ್ತಿಯನ್ನು ಮಾಡಿದರೆ ಇನ್ನು ಕೆಲವರು ಉಚ್ಚ ವಸ್ತುಗಳ ಸಂಗ್ರಹವನ್ನು ಮಾಡುವದು ನಿಶ್ಚಿತ. ಯಾತ್ರೆ ಹೋಗುವ ಇಲ್ಲವೆ ದೂರ ಪ್ರವಾಸ ಕೈಕೊಳ್ಳುವ ಯೋಗ ಕಡಿಮೆಯೇ, ಆದರೆ ಒಂದೆರಡು ದೊಡ್ಡ ಧಾರ್ಮಿಕ ಇಲ್ಲವೆ ಮಂಗಳ ಕಾರ್ಯಗಳನ್ನು ಮಾಡುವಿರಿ. ಅಲ್ಲದೆ ಮೇಲಿಂದ ಮೇಲೆ ಸಮೀಪದ ಪ್ರವಾಸ ಮಾಡುವಿರಿ. ಮಿತ್ರರಿಗಾಗಿ ಸ್ವಲ್ಪ ಹೆಚ್ಚು ವೆಚ್ಚವನ್ನೇ ಮಾಡುವಿರಿ. ಆದರೆ ಅವರಲ್ಲಿ ಅನೇಕರು ಮಹತ್ವದ ಕೆಲ ವಿಷಯಗಳಲ್ಲಿ ತಮ್ಮ ಜೀವವನ್ನು ಒತ್ತಿ ಇಟ್ಟು ನಿಮಗೆ ಸಹಾಯ ಮಾಡುವರು. ಮತ್ತು ಇದರ ಅನುಭವವು ನಿಮಗೆ ಜೂನ ೨೫ ರಿಂದ ಜುಲೈ ೧೫ ಮತ್ತು ಅಗಸ್ಟ ೨೦ ರಿಂದ ಸಪ್ಟೆಂಬರ ೧೩ ಈ ಅವಧಿಯಲ್ಲಿ ಆಯುಷ್ಯವಿರುವ ವರೆಗೆ ನೆನಪಿನಲ್ಲಿ ಉಳಿಯುವಂಥ ಸಹಾಯ ಮಿತ್ರರಿಂದ ಆದ ಅನುಭವ ಬರುವದು.

ಪ್ರಾಪಂಚಿಕ ವಿಷಯಗಳಲ್ಲಿ ಈ ವರ್ಷ ಹೆಚ್ಚು ವೆಚ್ಚವಾಗುವದು. ಆದರೂ ಪೂರ್ವನಿಯೋಜಿತ ರೀತಿಯಲ್ಲಿಯೇ ಆಗುವದು. ಹೊಸ ವಾಹನಗಳನ್ನು ಕೊಳ್ಳುವ ಯೋಗವಿದೆ. ಕೈಕೆಳಗಿನ ನೋಕರಚಾಕರರು ಚೆನ್ನಾಗಿ ವರ್ತಿಸುವರು. ಪರಸ್ತ್ರೀಯೊಬ್ಬಳು ಪ್ರೇಮಯಾಚನೆ ಮಾಡುವ ಯೋಗವೂ ಇದ್ದುದು ಕೆಲ ತರುಣರ ನಿದರ್ಶನಕ್ಕೆ ಬರಬಹುದು. ಮನೆಯಲ್ಲಿ ಇಲ್ಲವೆ ನೆರೆಹೊರೆಯಲ್ಲಿ ಮನೋರಂಜಕ ಕಾರ್ಯಕ್ರಮ ಜರಗುವವು. ಮೇ ೨೩ ರ ವರೆಗೆ ಆಪ್ತರಿಂದ ಸ್ವಲ್ಪ ತೊಂದರೆಯಾಗುವದು ನಿಜ. ಅನಂತರ ಮಾತ್ರ ಸುಖ ದೊರೆಯುವ ಯೋಗವಿದೆ. ಅಷ್ಟಮ ಗುರುವಿದ್ದಾಗ ಶುಭಸೂಚಕ ಸ್ವಪ್ನ ಬಹಳ. ಸಹಜವಾಗಿ ಮಾತಾಡಿದ್ದೂ ಮುಂದೆ ಸಂಭವಿಸಬಹುದೆಂಬ ಭವಿಷ್ಯ ಸೂಚಕ ಸ್ವಪ್ನಗಳು ಬೀಳುವವು. ವೇದಾಂತದ ಇಲ್ಲವೆ ಅಧ್ಯಾತ್ಮದ ಪ್ರೇಮ ಹೆಚ್ಚುವದು.

ಮೇ ೨೩ರಿಂದ ಜುಲೈ ೧೮ರಲ್ಲಿ ಹಡೆವ ಸ್ತ್ರೀಯರು ಬಹಳ ಕಷ್ಟ ಅನುಭವಿಸುವರು. ಹುಟ್ಟುವ ಮಗುವಿನ ಆಯುಷ್ಯದ ಬಗ್ಗೆಯೂ ಖಾತ್ರಿ ಉಳಿಯದು. ಉಳಿದ ಕಾಲದಲ್ಲಿ ಹಡೆದರೆ ಕಷ್ಟವಾಗುವದಿಲ್ಲ. ಹೆಣ್ಣು ಹುಟ್ಟಲಿ, ಗಂಡು ಹುಟ್ಟಲಿ ಸಶಕ್ತ ದೀರ್ಘಾಯು ಇರುವದು.

ಮಾರ್ಚ ೬ ಕ್ಕಿಂತ ಮೊದಲು ಮೇ ೨೩ ರಿಂದ ಮುಂದೆ ಯಾವ ವಿದ್ಯಾರ್ಥಿಗಳ ಪರೀಕ್ಷೆ ಆಗುವದೋ ಅವರು ಖಾತ್ರಿಯಿಂದ ಪಾಸಾಗುವರು. ಮತ್ತು ಅದರಲ್ಲಿಯೂ ಅಕ್ಟೋಬರ ೩೧ ರಿಂದ ನವಂಬರ ೧೯, ಡಿಸೆಂಬರ ೮ ರಿಂದ ೨೮, ಅಗಸ್ಟ ೨೦ ರಿಂದ ಸಪ್ಟಂಬರ ೧೩, ಅಕ್ಟೋಬರ ೨೩ ರಿಂದ ನವಂಬರ ೧೯ ರ ಅವಧಿಯಲ್ಲಿ ಪರೀಕ್ಷೆ ಕಟ್ಟಿದ ವಿದ್ಯಾರ್ಥಿಗಳು ೧ನೇ ವರ್ಗದಲ್ಲಿ ಕನಿಷ್ಠ ೨ನೇ ವರ್ಗದಲ್ಲಿ ಪಾಸಾಗಿಯೇ ತೀರುವರು.

# ಕನ್ಯಾ

ಒಟ್ಟಾರೆ ಈ ರಾಶಿಯವರಿಗೆ ಮೊದಲಿನ ಆರು ತಿಂಗಳು ಬಹಳ ಕಷ್ಟದ್ದು ಇದ್ದರೆ ಮುಂದಿನ ಆರು ತಿಂಗಳು ಒಳ್ಳೇ ಉತ್ಕರ್ಷದ, ಉತ್ಸಾಹದ ಮತ್ತು ಅಭಿವೃದ್ಧಿಯ ದಿನಗಳಾಗಿ ಪರಿಣಮಿಸುವವು. ಈ ಬಗೆಯ ಅನುಭವ ನಿಮಗೆ ಬರುವುದು.

ಈ ರಾಶಿಯವರ ಆರೋಗ್ಯದ ಬಗ್ಗೆ ಮಾರ್ಚ ೬ ರ ವರೆಗೆ ಕಿರುಕಳ ತಕರಾರು ಇರುವುದು. ಏಕೆಂದರೆ ಅಲ್ಲಿಯವರೆಗೆ ಇರುವ ಷಷ್ಠಗುರು ಅಪಚನ, ಆಮ್ಲಪಿತ್ತ ಇಲ್ಲವೆ ಗ್ಯಾಸದ ಉಪದ್ರವವನ್ನು ಕೊಡುವನು. ಆದರೆ ಮಾರ್ಚ ೮ ರಿಂದ ಬರುವ ಸಪ್ತಮ ಗುರು ಆರೋಗ್ಯವನ್ನು ಸುಧಾರಿಸುವವನಿದ್ದು ದೇಹಸುಖಕ್ಕೆ ಅವಶ್ಯವಾದ ಉಳಿದ ಸಂಗತಿಗಳೂ ಅನುಕೂಲವಾಗಿ ಪರಿಣಮಿಸುವವು. ಮತ್ತು ಉಚಿತ ವೇಳೆಯಲ್ಲಿ ಅವನ್ನು ಅನುಭೋಗಿಸುವ ಅನುಕೂಲತೆ ವರ್ಷವಿಡಿ ಇರುವ ಪಂಚಮ ಶನಿಯಿಂದ ಒದಗಿ ಬರುವುದು. ಆದರೂ ಸಪ್ತಮರಾಹುವಿನಿಂದಾಗಿ ಬಹಳ ಹೆಚ್ಚುವವು.

ಗುರು ಬಂದಬಳಿಕ ಅದು ಹೆಚ್ಚು ಎದ್ದು ಕಾಣಹತ್ತುವುದು.

ಹೆಂಡತಿಯ ಆರೋಗ್ಯವೂ ಸಪ್ತಮ ಗುರು ಬಂದ ಬಳಿಕವೇ ಮೊದಲಿಗಿಂತ ಹೆಚ್ಚು ಸುಧಾರಿಸುವುದು. ಮತ್ತು ಆ ಕಾಲದಿಂದ ಉಭಯತರಲ್ಲಿ ಪರಸ್ಪರರ ಬಗ್ಗೆ ಹೆಚ್ಚು ಆದರ ಮತ್ತು ಪ್ರೇಮವೆನಿಸಹತ್ತುವುದು. ಆದರೆ ಮೇ ೧೮ ರಿಂದ ಜುಲೈ ೧೮, ಮತ್ತು ಸಪ್ಟಂಬರ ೨ ರಿಂದ ೧೬ ಅಕ್ಟೋಬರ ವರೆಗಿನ ಅವಧಿಯಲ್ಲಿ ಯಾರೊಬ್ಬರು ಬೇರೆ ಊರಿಗೆ ಹೋಗುವುದರಿಂದ ಸಹವಾಸ ಸುಖಕ್ಕೆ ವ್ಯತ್ಯಯ ಬರಬಹುದು. ನಿಮ್ಮ ಮದುವೆಯೆ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಅಂಥವರಿಗೆ ಬಾಶಿಂಗಬಲ ಮಾರ್ಚ ೮ ರಿಂದಲೇ ಚೆನ್ನಾಗಿ ಬರುವುದು. ಅಲ್ಲಿಂದ ಮೇ ೨೩ ರ ವರೆಗೂ ಮತ್ತು ಅದು ಒದಗಿ ಬರುವುದು. ಅನೇಕರ ಲಗ್ನ ಜುಲೈ ೨೫ ರಿಂದ ಅಗಸ್ಟ ೧೮, ಇಲ್ಲವೆ ಸಪ್ಟಂಬರ ೧೨ ರಿಂದ ಅಕ್ಟೋಬರ ೬ ಈ ಅವಧಿಯಲ್ಲಿಯೂ ಆಗುವುದು. ಆದರೆ ವಧೂವರರು ಎಲ್ಲ ವಿಷಯಗಳಲ್ಲಿಯೂ ಅನುರೂಪ ಇರುವರು. ಜನರ ದೃಷ್ಟಿಯಿಂದ ಮಾತ್ರ ಸ್ವಲ್ಪ ಇಜ್ಜೋಡೆನಿಸಬಹುದು.

ಅದರಂತೆಯೇ ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಇಡೀ ವರ್ಷ ಬಾಶಿಂಗಬಲವಿದೆ. ವಿಶೇಷವಾಗಿ ನವ್ಹಂಬರ ೬ ರ ವರೆಗೆ ಇಲ್ಲವೆ ಡಿಸೆಂಬರ ೨೯ ರಿಂದ ಜನೆವರಿ ೩೧, ಫೆಬ್ರುಅರಿ ೧೬ ರಿಂದ ಮಾರ್ಚ ೨೪, ಎಪ್ರಿಲ್ ೧೭ ರಿಂದ ಮೇ ೧೨, ಜೂನ ೬ ರಿಂದ ಜುಲೈ ೧, ಜುಲೈ ೨೫ ರಿಂದ ಅಗಸ್ಟ ೧೨, ಸಪ್ಟಂಬರ ೧೨ ರಿಂದ ಅಕ್ಟೋಬರ ೬ ಮತ್ತು ಅನಂತರ ನವಂಬರ ೧ ರಿಂದ ಮುಂದೆ ಇಡೀ ವರ್ಷ ಮುಗಿಯುವ ವರೆಗೆ ಅದು ಒದಗಿಬರುವ ಅನುಕೂಲವಿದೆ. ಆದರೆ ಸೊಸೆ ಇಲ್ಲವೆ ಅಳಿಯ ಪರಸ್ಪರ ಪೂರ್ಣ ಅನುರೂಪ ಇರುವರು. ಆದರೆ ಸ್ವತಃ ನಿಮಗೆ ಮಾತ್ರ ಅಷ್ಟೊಂದು ಮೆಚ್ಚಿಗೆ ಇರುವದಿಲ್ಲ. ವಿವಾಹವೂ ಅಷ್ಟೊಂದು ಉತ್ಸಾಹದ ವಾತಾವರಣದಲ್ಲಿ ನಡೆಯುವದಿಲ್ಲ. ಮಕ್ಕಳಲ್ಲಿ ಒಬ್ಬಿಬ್ಬರಿಗೆ ಡಿಸೆಂಬರ ೨೬ ರಿಂದ ಮಾರ್ಚ ೧೭ ರ ವರೆಗೆ ಕಿರುಕಳ ಕಾಯಿಲೆಯಿಂದ ಇಲ್ಲವೆ ಸಣ್ಣ-ದೊಡ್ಡ ಅಪಘಾತದಿಂದ ಬಹಳ ಕ್ಲೇಶವಾಗಹತ್ತುವುದು. ಆದರೆ ಅವರು ನಿಮ್ಮೊಡನೆ ಚೆನ್ನಾಗಿ ನಡೆದುಕೊಳ್ಳುವರು. ಮತ್ತು ಒಬ್ಬರ ದೈವವು ಚೆನ್ನಾಗಿ ತೆರೆಯುವುದು.

ಸ್ವತಃ ಧಂದೆ ಮಾಡುವವರಿಗೆ ಇಲ್ಲವೆ ಕೂಲಿಕಾರರಿಗೆ ಈ ವರ್ಷ ಹೀಗೆ ಇದೆ: ಧಂದೆ ಇದ್ದವರಿಗೆ ಮಾರ್ಚ ೬ ರಿಂದ ಬಹಳ ಉತ್ತಮ ಲಾಭ ಸಿಕ್ಕಹತ್ತುವದು. ಅಂದಿನಿಂದ ಮೇ ೨೩ ರ ವರೆಗೆ ಮತ್ತು ಮುಂದೆ ಜುಲೈ ೧೮ ರಿಂದ ಸಪ್ಟೆಂಬರ ೨ ರ ವರೆಗೆ ಮತ್ತು ಅಕ್ಟೋಬರ ೧೬ ರಿಂದ ವರ್ಷ ಮುಗಿಯುವವರೆಗೆ ಬಹಳ ಲಾಭದ ಕಾಲವಾಗಿದೆ. ಇಷ್ಟೇ ಅಲ್ಲ, ಮಾರ್ಚ ೬ ರಿಂದ ಮೇ ೨೩ ರ ಅವಧಿಯಲ್ಲಿ ಅನೇಕರಿಗೆ ಸಟ್ಟಾಲಾಟರಿಯಂಥ ವ್ಯವಹಾರದಲ್ಲಿ ಬಹಳ ದೊಡ್ಡ ಪ್ರಮಾಣದಲ್ಲಿ ಲಾಭವಾಗಬಹುದು. ಧಂದೆಯನ್ನು ಮನಸ್ಸಿಗೆ ಬಂದಷ್ಟು ಬೆಳೆಸಬಹುದು. ಪತ್ತು ಮತ್ತು ಪ್ರತಿಷ್ಠೆ ಮೇ ೧೮ ರಿಂದ ಬರುವ ಉಚ್ಚ ದಶಮ

ನೋಕರರಿಗೂ ಈ ವರ್ಷ ಬಹಳ ಸುಖ ಸ್ವಪ್ನ ಬೀಳಹತ್ತುವವು. ಮತ್ತು ತೀವ್ರದಲ್ಲಿಯೇ ಅದರ ಅನುಭವ ಬರುವದು. ಅನೇಕರಿಗೆ ಮಾರ್ಚ ೭ ಕ್ಕಿಂತ ಮೊದಲು ಅಂದರೆ ಷಷ್ಠ ಗುರು ಇರುವಾಗ ತಾತ್ಪೂರ್ತಿಕವಾಗಿ ಸಿಕ್ಕುವ ಗ್ರೇಡು ಮೇ ೧೮ ಕ್ಕೆ ಬರುವ ದಶಮ ಉಚ್ಚ ರಾಹುವಿನಿಂದಾಗಿ ಕಾಯಂ ವೂ ಆಗಬಹುದು. ಮತ್ತು ಮೇಲಿನವರು ಮಹತ್ವದ ಪ್ರತಿಯೊಂದು ಕೆಲಸದಲ್ಲಿ ನಿಮ್ಮ ಶಿಫಾರಸು ಮಾಡಹತ್ತುವರು. ಅದರಂತೆಯೇ ಸಪ್ತಮ ಗುರು ಬಂದನಂತರ ಯಾವದೇ ಮಾರ್ಗದಿಂದಲಾದರೂ ಮನಸ್ವೀ ಲಾಭ ನಿಮಗೆ ದೊರೆಯುವದು. ಬದಲಿಯಾಗುವ ಶಾಖೆಯಿದ್ದರೆ, ಷಷ್ಠ ಗುರುವಿದ್ದಾಗ ಆದರೆ ಅನುಕೂಲ ಸ್ಥಳಕ್ಕೆ ಆಗುವದು. ಸಪ್ತಮ ಗುರುವು ಬಂದ ಬಳಿಕ ಆದರೆ ಪೂರ್ಣ ಅನುಕೂಲ ಸ್ಥಳಕ್ಕೆ ಆಗುವದು, ಆದರೆ ಯಾವಾಗ ವರ್ಗವಾದರೂ ಲಾಭದಲ್ಲಿಯಾಗಲಿ ಅಧಿಕಾರದದಲ್ಲಾಗಲಿ ಸ್ವಲ್ಪೂ ಕಡಿಮೆಯಾಗುವದಿಲ್ಲ. ಷಷ್ಠ ಗುರು ಇರುವವರೆಗೆ ಕೈಕೆಳಗಿನವರು ಸ್ವಲ್ಪ ಅಡ್ಡಾತಿಡ್ಡಾ ನಡೆಯುವರು. ಆದರೆ ವರಿಷ್ಠರು ಸರಳ ರೀತಿಯಿಂದಲೇ ಇರುವರು. ದಶಮ ರಾಹು ಬಂದನಂತರ ಅಂದರೆ ಮೇ ೧೮ ರಿಂದ ಮುಂದಿನ ಕಾಲದಲ್ಲಿ ಮೂಲಗ್ರಹದ ಮಗರೂರಿಯಂತೆ ಸ್ಥಾವರ ಜಂಗಮ ಸಂಗ್ರಹ ಅಲ್ಪ ಸ್ವಲ್ಪವಾದರೂ ಆಗುವದು. ಆದರೆ ಯಾರ ಜನ್ಮಕುಂಡಲಿಯಲ್ಲಿ ದತ್ತಕ ಹೋಗುವ ಯೋಗವಿರುವದೋ ಅವರು ಮೇ ೧೮ ರಿಂದ ಬರುವ ಚತುರ್ಥ ಕೇತು ಉಚ್ಚವಿರುವದರಿಂದ ಹಾಗೆ ದತ್ತಕ ಹೋಗಬಹುದು.

ಆದರೆ ಈ ಇಡಿ ವರ್ಷ ನೆರೆಯವರಿಂದ ಅದರಂತೆ ಸಮೀಪದಲ್ಲಿರುವ ಆಪ್ತರಿಂದ ಬಹಳಷ್ಟು ತೊಂದರೆಯಾಗುವದು. ಪ್ರತ್ಯಕ್ಷ ಹಾನಿಯಾಗದಿದ್ದರೂ ಅಸಹ್ಯ ನಿಂದೆಯನ್ನು ಕೇಳಬೇಕಾಗುವದು ವಾಹನದಲ್ಲಿ ಹರಿಮುರಿ ಬಹಳ ಸಲ ಆಗುವದು. ದನಕರುಗಳಿದ್ದರೆ ಕೆಲವು ಕಡಮೆಯಾಗುವವು. ನೀರಿನ ಪೂರೈಕೆ ಪ್ರತಿಸಲಕ್ಕಿಂತ ಬಹಳ ಕಡಿಮೆಯಾಗುವದು. ಪ್ರಿಯ ಮಿತ್ರರಲ್ಲಿ ಒಬ್ಬಬ್ಬರು ದಗಾ ಕೊಡುವರು ಇಲ್ಲವೆ ಕಟ್ಟಾ ವೈರಿಗಳಾಗುವ ಸಂಭವವಿದೆ. ಈ ಬಗೆಯ ಯೋಗ ಮೇ ೨೩ ಕ್ಕಿಂತ ಮೊದಲು ಇಲ್ಲವೆ ಸಪ್ಟಂಬರ ೨ ರಿಂದ ಅಕ್ಟೋಬರ ೧೬ ರ ಅವಧಿಯಲ್ಲಿ ಬರುವದು. ಆದರೆ ಮನೆಯವರೆಲ್ಲ ಐಕ್ಯದಿಂದ ಇರುವರು. ಮಾರ್ಚ ೭ ರಿಂದ ಮೇ ೨೩ ರ ಅವಧಿಯಲ್ಲಿ ಅಪೇಕ್ಷಿತ ಯಾತ್ರೆ ಘಟಿಸುವದು, ಇಲ್ಲವೆ ಅಂಥದೊಂದು ವಿಶಿಷ್ಟ ಧರ್ಮಕೃತ್ಯ ನಡೆಯುವದು.

ದಾವೆ ಫಿರ್ಯಾದಿ ಸ್ಪರ್ಧೆಯಲ್ಲಿ ಈ ವರ್ಷದಲ್ಲಿ ಮಾರ್ಚ ೭ರ ವರೆಗೆ ಯಶಸ್ವಿಯಾಗುವ ಆಸೆಯನ್ನು ಹಿಡಿಯಲೇಬೇಡಿರಿ. ಪ್ರತಿಪಕ್ಷಿಗಳು ನಿಮ್ಮಮರ್ಯಾದೆ ತೆಗೆದುಕೊಳ್ಳಲು ಬಹಳಷ್ಟು ಪ್ರಯತ್ನ ಮಾಡುವರು. ಆದರೆ ಅನಂತರ ಮಾತ್ರ ಬೇಗನೆ ಯಕ್ಷಿಣಿ ಕಡ್ಡಿಯನ್ನು ತಿರುವಿದಂತೆ ತಕ್ಕಡಿಯ ಪರಡಿ ಬದಲಾಗಿ ಪ್ರತಿಪಕ್ಷಿಗಳ ಸುಳಿವು ಅಡಗುವಂತೆ ಯಶಸ್ಸು ಸಿಕ್ಕುವದು.

ಮೇ ೧೮ ಕ್ಕಿಂತ ಮೊದಲು ಹಡೆದ ಸ್ತ್ರೀಗೆ ಮತ್ತು ಕೂಸಿಗೆ ಬಹಳ ಕಷ್ಟ. ಅದರಲ್ಲಿಯೂ ಗಂಡು ಹುಟ್ಟಿದರೆ ಹೆಚ್ಚು ಕಷ್ಟ. ಅನಂತರ ಮಾತ್ರ ಒಳ್ಳೇ ಸುಲಭವಾಗಿ ಹಡೆದರೂ ಹೆಣ್ಣು ಹುಟ್ಟುವುದರಿಂದ ಮೋರೆ ಒಣಗಿಸುವರು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ ೭ ಕ್ಕಿಂತ ಮೊದಲಾಗುವುದೊ ಅವರು ಬಹಳಷ್ಟು ಅಭ್ಯಾಸ ಮಾಡಿದ್ದರೆ ಮಾತ್ರಸಾಧಾರಣ ಪಾಸಾಗುವ ಆಸೆಹಿಡಿಯಬೇಕು. ಅನಂತರ ಯಾರ ಪರೀಕ್ಷೆ ಆಗುವದೋ ಅವರು ನಗುನಗುತ್ತ ಆಡುತ್ತ ಅಭ್ಯಾಸಮಾಡಿದರೂ ಪಾಸಾಗುವುದು ನಿಶ್ಚಿತವೆಂದು ತಿಳಿಯಬೇಕು.

## ತುಲಾ

ಈ ರಾಶಿಯವರಿಗೆ ಈ ವರ್ಷ ಬಹಳ ಮಟ್ಟಿಗೆ ಕಷ್ಟಸಾಧ್ಯ ಯಶಸ್ಸನ್ನು ಕೊಡುವದು ಎಂಬುದನ್ನು ಮನದಂದು ನಡೆದುಕೊಳ್ಳಬೇಕು.

ಈ ರಾಶಿಯವರಿಗೆ ಪಂಚಮ ಗುರು ಇರುವವರೆಗೆ ಅಂದರೆ ಮಾರ್ಚ ೭ರ ವರೆಗೆ ಆರೋಗ್ಯದ ಬಗೆಗೆ ಅಷ್ಟೊಂದು ತಕರಾರು ಉಳಿಯುವದಿಲ್ಲ. ಆದರೆ ಅನಂತರ ಷಷ್ಠಗುರು ಬಂದಬಳಿಕ ಮಾತ್ರ ಆರೋಗ್ಯದ ಬಗ್ಗೆ ಮೇಲಿಂದ ಮೇಲೆ ತಕರಾರು ಕೇಳಿಬರುವದು. ವಿಶೇಷವಾಗಿ ಅನೇಕರಿಗೆ ಗ್ಯಾಸಿನ ವಿಕಾರ ಮತ್ತು ಕಾಲಿಗೆ ಇಲ್ಲವೆ ಟೊಂಕಕ್ಕೆ ಬರುವ ತ್ವಚರೋಗದಿಂದ ಅಲ್ಪಸ್ವಲ್ಪ ತೊಂದರೆಯಾಗುವ ಸಂಭವವಿದೆ. ದ್ವಾದಶ ಮಂಗಳ ಇರುವ ವರೆಗೆ ಅಂದರೆ ಜುಲೈ ೧೮ ರಿಂದ ಸಪ್ಟಂಬರ ೨ರ ವರೆಗೆ ವಿಶೇಷ ತೊಂದರೆಯಾಗುವದು. ಉಳಿದ ವಿಷಯಗಳಲ್ಲಿ ಮೊದಲಿನ ೭ ತಿಂಗಳು ಅಂದರೆ ಚತುರ್ಥಸ್ಥಾನದಲ್ಲಿ ಶನಿ ಮತ್ತು ಕೇತು ಈ ಪಾಪಗ್ರಹಗಳು ಕೂಡುವದರಿಂದ ಅವಾಂತರ ವಿಷಯಗಳಲ್ಲಿ ದೇಹಸುಖ ಮನಸ್ಸಿನಂತೆ ಇರದಿದ್ದರೂ ಮೇ ೧೮ರಿಂದ ಕೇತು ತೃತೀಯ ಸ್ಥಾನಕ್ಕೆ ಬರುವದರಿಂದ ದೇಹಸುಖ ಚೆನ್ನಾಗಿ ಸಿಕ್ಕಹತ್ತುವದು. ಅದರಲ್ಲಿಯೂ ಮೇ ೧೮ರಿಂದ ಜೂನ ೬, ಜುಲೈ ೧ ರಿಂದ ಸಪ್ಟಂಬರ ೧೨ ಮತ್ತು ನವಂಬರ ೧ರಿಂದ ಮುಂದೆ ಉತ್ತಮ ದೇಹ ಸೌಖ್ಯ ಸಿಕ್ಕುವದು. ಈ ಅವಧಿಯಲ್ಲಿ ಆನಂದವನ್ನುಂಟು ಮಾಡುವ ಅನೇಕ ಸುದ್ದಿಗಳನ್ನು ಕೇಳುವಿರಿ.

ಸ್ತ್ರೀ ಸುಖಕ್ಕೆ ಈ ವರ್ಷ ದಿಸೆಂಬರ ೨೬ ರಿಂದ ಮಾರ್ಚ ೧೭ ರ ಮಧ್ಯಂತರ ಅವಧಿ ತೊಂದರೆಯದೇ ಇರುವದು. ಅನೇಕ ಜನರ ಹೆಂಡಂದಿರಿಗೆ ಅಪಘಾತದಿಂದ ಕೆಲವರ ಹೆಂಡಂದಿರಿಗೆ ಅನೇಮಿಯಾದಿಂದ ತೊಂದರೆಯಾಗುವ ಸಂಭವವಿದೆ. ಆದರೆ ಮೇ ೧೮ರ ನಂತರ ಅವಳ ಪ್ರಕೃತಿ ಬಹಳ ಸುಧಾರಿಸುತ್ತ ಹೋಗುವದು. ಆದರೆ ಪರಸ್ಪರರ ಬಗೆಗೆ ಅನಾದರದ ವಾತಾವರಣವಿದ್ದುದು ಸ್ಪಷ್ಟವಾಗಿ ಗೊತ್ತಾಗುವದು. ನಿಮ್ಮ ವಿವಾಹವಿನ್ನೂ ಆಗಿರದಿದ್ದರೆ ಮತ್ತು ಈ ವರ್ಷವೇ ಮಾಡಿಕೊಳ್ಳುವದಿದ್ದರೆ ಸಹಸಾ ಅದು ಒದಗಿ ಬರುವದಿಲ್ಲ. ಏಕೆಂದರೆ ವರ್ಷಾರಂಭದಿಂದ ಮೊದಲಿನ ಅನೇಕ ತಿಂಗಳು ಶನಿಯೊಡನೆ ಭಾಗ್ಯೇಶ ಮಂಗಳನ ಅನಿಷ್ಟ ಪ್ರತಿದೃಷ್ಟಿಯೋಗವಾಗುವದು. ಪರಿಣಾಮವಾಗಿ ವಿವಾಹ ಕೂಡಿಬರಲಿಕ್ಕೆ ಅನೇಕ ಅಡಚಣಿಗಳು ಬರುವವು. ಆದರೂ ಯಾರ ಜನ್ಮಕಾಲದಲ್ಲಿ ಶನಿ ಮಂಗಳ ಯುತಿ ಶುಭಕರವಿರುವದೋ ಅಂಥವರ ವಿವಾಹವು ದಿಸೆಂಬರ ೨೬ಕ್ಕಿಂತ ಮೊದಲು ಇಲ್ಲವೆ ಮೇ ೨೪ ರಿಂದ ಜುಲೈ ೧೮, ಇಲ್ಲವೆ ಸಪ್ಟಂಬರ ೨ರಿಂದ ಅಕ್ಟೋಬರ ೧೬ ಈ ಅವಧಿಯಲ್ಲಿ ಆಗುವದು. ಆದರೆ ವಧು ಇಲ್ಲವೆ ವರ ಪರಸ್ಪರರ ಬಗ್ಗೆ ಅಷ್ಟೊಂದು ಸಂತುಷ್ಟರಿರುವದಿಲ್ಲ ಇದು ಮಾತ್ರ ನಿಶ್ಚಿತ.

ಅದರಂತೆ ನಿಮ್ಮ ಮಕ್ಕಳಲ್ಲಿ ಯಾರದಾದರೂ ವಿವಾಹ ಮಾಡುವದಿದ್ದರೆ ಅದಕ್ಕೆ ಮಾರ್ಚ ೭ ರ ವರೆಗಷ್ಟೇ ಬಾಶಿಂಗ ಬಲವಿರುವದು. ಆದರೆ ಲಗ್ನವಾದವರ ಉಭಯ ಪಕ್ಷದವರು ಆ ಬಗ್ಗೆ ಅಷ್ಟೊಂದು ಸಂತೃಪ್ತ ಉಳಿಯುವರೆಂದು ಹೇಳಲಿಕ್ಕಾಗದು. ತಾವು ಮೋಸ ಹೋದೆವೆಂಬ ನಿಜ ಅಥವಾ ಸುಳ್ಳು ತಿಳಿವಳಿಕೆ ಅವರದಾಗುವದು. ಆದರೆ ಸೊಸೆ ಇಲ್ಲವೆ ಅಳಿಯ ನಿಮ್ಮ ಕಡೆಯ ವ್ಯಕ್ತಿಗಳಿಗಿಂತ ಹೆಚ್ಚು ಚೆನ್ನಾಗಿ ಇರುವರು. ಮಕ್ಕಳೆಲ್ಲರ ಆರೋಗ್ಯ ಚನ್ನಾಗಿ ಉಳಿಯುವದು ಆದರೆ ಅವರಿಂದ ನಿಮಗೆ ಸುಖ ಮಾತ್ರ ಚೆನ್ನಾಗಿ ಸಿಕ್ಕಲಾರದು. ಪಂಚಮಗುರು ಇರುವ ವರೆಗೆ ಅವರಲ್ಲಿ ಕೆಲವರ ಉತ್ಕರ್ಷ ಬಹಳ ಮಟ್ಟಿಗೆ ಆಗುವದು ಆದರೆ ಆ ಬಗ್ಗೆ ನಿಮಗೆ ಲಾಭವಾಗಲಿ, ಸಮಾಧಾನವಾಗಲಿ ಆಗುವದು ಅಶಕ್ಯವೆ.

ಧಂದೆ ಕೂಲಿಯ ದೃಷ್ಟಿಯಿಂದ ಈ ವರ್ಷ ಮಾರ್ಚ ೭ ರ ವರೆಗೆ ಇರುವ ಪಂಚಮಗುರುವಿನಿಂದಾಗಿ ಮತ್ತು ಮುಂದೆ ಮೇ ೧೮ ರ ನಂತರ ಬರುವ ನವಮರಾಹುವಿನಿಂದಾಗಿ ಒಳ್ಳೇ ಅನುಕೂಲವೆನಿಸುವದು. ಆದರೆ ಮಧ್ಯಂತರಅವಧಿಯಲ್ಲಿ ಧಂದೆಯವರಿಗೆ ತಮ್ಮ ಪತ್ತು ಮತ್ತು ಪ್ರತಿಷ್ಠೆಯನ್ನು ಉಳಿಸಿಕೊಳ್ಳುವದಕ್ಕಾಗಿ ಬಹಳ ಸಾಹಸ ಪಡಬೇಕಾಗುವದು. ಏಕೆಂದರೆ ನಿಮ್ಮ ಮೇಲೆ ಈ ವರೆಗೆ ಒಳ್ಳೆ ವಿಶ್ವಾಸವಿಟ್ಟ ಸಹಾಯಕರು ಕೂಡ ತಪ್ಪು ತಿಳಿವಳಿಕೆ ಮಾಡಿಕೊಳ್ಳುವರು. ಕೊನೆಗೆ ನವಮರಾಹು ಬಂದ ಬಳಿಕ ಎಲ್ಲವೂ ಸರಿ ಹೋಗುವದು. ಧಂದೆಯವರಿಗೆ ಮೇ ೨೪ ರಿಂದ ಮುಂದಿನ ಅವಧಿ ಒಳ್ಳೇ ಅನುಕೂಲ. ಅದರಂತೆ ನೌಕರ ವರ್ಗದವರಿಗೂ ಪಂಚಮ ಗುರುವಿದ್ದಾಗಿನಕ್ಕಿಂತ ಷಷ್ಠ ಗುರು ಬಂದಾಗ ಹೆಚ್ಚು ಅನುಕೂಲ. ಆಗ ಅನೇಕರಿಗೆ ಹೆಚ್ಚಿನ ಗ್ರೇಡು ಸಿಕ್ಕುವದು ಮತ್ತು ಯೋಗ್ಯ ಸ್ಥಳಕ್ಕೆ ಬದಲಿಯಾಗುವದು. ಹಾಗೆ ಆಗದಿದ್ದರೆ ತೊಂದರೆಯಿಲ್ಲದ ಕೆಲಸವಾದರೂ ಸಿಕ್ಕುವದು. ಜುಲೈ ೧೮ರ ನಂತರದ ದಿನಗಳೆಲ್ಲ ಹೆಚ್ಚು ಸಮಾಧಾನದಿಂದ ಹೋಗುವವು. ನಿಮ್ಮ ಕೈಕೆಳಗಿದ್ದವರು ಮತ್ತು ವರಿಷ್ಠರು ವಿರುದ್ಧವಿದ್ದವರೆಲ್ಲ ಹಿಂದೆ ಸರಿಯುವ ಘಟನಾವಳಿಗಳು ನಡೆಯುವವು. ಮತ್ತು ನಿಮ್ಮೊಡನೆ ವೈರಭಾವದಿಂದ ವರ್ತಿಸುವವರು ಕೂಡ ಈಗ ಶರಣಾಗತರಾಗುವರು. ಸಾಮಾನ್ಯವಾಗಿ ನವಂಬರ ೧೬ ರಿಂದ ಜನವರಿ ೧೪, ಫೆಬ್ರುಅರಿ ೧೨ ರಿಂದ ಮಾರ್ಚ ೧೪, ಎಪ್ರಿಲ ೧೩ರಿಂದ ಜುಲೈ ೧೬ ಮತ್ತು ಅಗಸ್ಟ ೧೭ ರಿಂದಸಪ್ಟಂಬರ ೧೭ ಈ ಅವಧಿ ಎಲ್ಲರಿಗೂ ಲಾಭದಾಯಕವೆನಿಸುವದು. ಅದಂತೆ ಚತುರ್ಥ ಶನಿ ಕೇತು ಯುಕ್ತನಾಗಿರುವವರೆಗೆ ಏನೂ ಸಂಗ್ರಹಮಾಡಲು ಹಣ ಉಳಿಯುವದಿಲ್ಲ. ಮುಂದೆ ಮಾತ್ರಅಂದರೆ ಮೇ೧೮ರ ನಂತರ ಸ್ಥಾವರಜಂಗಮ ಸಂಗ್ರಹ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಆಗಿಯೇ ತೀರುವದು. ಒಳ್ಳೆ ಬಟ್ಟೆ ಇಲ್ಲವೆ ಒಳ್ಳೆ ಬೆಲೆಯ ಆಭರಣವನ್ನು ಕೊಳ್ಳುವ ಯೋಗ ಖಾತ್ರಿ

ಯಿಂದ ಇದೆ. ಮೇ ೨೪ ರ ನಂತರ ವಾಹನ ಸುಖ ಚೆನ್ನಾಗಿ ಸಿಕ್ಕುವದು. ನಿಮ್ಮ ಆಪ್ತಿಷ್ಟರು ಮಾತ್ರ ಅಷ್ಟೊಂದು ಚನ್ನಾಗಿ ನಡೆದುಕೊಳ್ಳುವದಿಲ್ಲ. ಪಂಚಮಗುರುವಿನಿಂದಾಗಿ ಯಾತ್ರೆಯನ್ನು ಮಾಡುವಿರಿ ಇಲ್ಲವೆ ಬಹಳ ವೆಚ್ಚದ ಧಾರ್ಮಿಕ ಕಾರ್ಯವನ್ನು ಮಾಡುವಿರಿ. ಮಿತ್ರಸುಖ ಮಾತ್ರ ಚೆನ್ನಾಗಿರುವದಿಲ್ಲ.

ದಾವೆ ಫಿರ್ಯಾದಿಯು ಇಲ್ಲವೆ ಸ್ಪರ್ಧೆಯ ಕೆಲಸಗಳಲ್ಲಿ ಡಿಸೆಂಬರ ೨೬ ರಿಂದ ಮಾರ್ಚ ೧೭ರ ಅವಧಿಯಲ್ಲಿ ಒಂದು ನಿಮ್ಮ ವಿರುದ್ಧವಾಗುವದು. ಆದರೆ ಮೇ ೨೪ ರಿಂದ ಜುಲೈ ೧೪ ರ ಮಧ್ಯದಲ್ಲಿ ಮತ್ತೊಂದು ಮಹತ್ವದ ಕೆಲಸ ಒಳ್ಳೆ ಯಶಸ್ವಿಯಾಗುವದು. ಉಳಿದವೆಲ್ಲ ಹಾಗೆಯೇ ಅರ್ಧ-ಮರ್ಧ ಉಳಿಯುವವು.

ಡಿಸೆಂಬರ ೨೬ರೊಳಗಾಗಿ ಹಡೆಯುವ ಸ್ತ್ರೀಯರಿಗೆ ಸ್ವಲ್ಪವೂ ಕಷ್ಟವಾಗದೆ ಪುತ್ರರತ್ನ ಉದಯಿಸುವ ಯೋಗವಿದೆ. ಅನಂತರ ಮಾರ್ಚ ೧೭ರ ವರೆಗೆ ಬಾಣಂತಿತನ ಸ್ವಲ್ಪ ಕಷ್ಟದ್ದೆನಿಸುವದು. ಅನಂತರ ಹಡೆಯುವವರಿಗೆ ಕಷ್ಟ ಕಡಮೆಯೇ. ಆದರೆ ಕನ್ಯಾ ಹುಟ್ಟುವದರಿಂದ ಮನಸ್ಸಿನಲ್ಲಿ ಅಸಮಾಧಾನ.

ಡಿಸೆಂಬರ ೨೬ಕ್ಕಿಂತ ಮೊದಲು ಇಲ್ಲವೆ ಮಾರ್ಚ ೧೭ರ ನಂತರ ಪರೀಕ್ಷೆಯಾದವರು ನಿಶ್ಚಯವಾಗಿ ಪಾಸಾಗುವರು.

## ವೃಶ್ಚಿಕ

ಈ ವರ್ಷ ಈ ರಾಶಿಯವರಿಗೆ ಚತುರ್ಥ ಗುರು ಇರುವ ವರೆಗೆ ಹೆಚ್ಚು ಕಡಿಮೆ ಪ್ರಮಾಣದಲ್ಲಿ ತೊಂದರೆ ಇದ್ದರೂ ಪಂಚಮ ಗುರು ಬಂದ ಬಳಿಕ ಸಾಂಸಾರಿಕ ವಿಷಯಗಳಲ್ಲಿ ಕಿರಿಕಿರಿ ಇದ್ದರೂ ಔದ್ಯೋಗಿಕ ಮತ್ತು ಆರ್ಥಿಕ ವಿಷಯಗಳಲ್ಲಿ ಒಳ್ಳೇ ಉತ್ಕರ್ಷದಾಯಕವಿದೆಯೆಂಬುದು ನಿಶ್ಚಿತ.

ಈ ರಾಶಿಯವರ ಆರೋಗ್ಯ ಒಟ್ಟಾರೆ ಅನುಕೂಲವಾಗಿದ್ದರೂ ಮೇ ೧೪ ರಿಂದ ದ್ವಿತೀಯ ರಾಹು ಅರ್ಥಾತ ಅಷ್ಟಮರಾಹು ಬರುವದರಿಂದ ಯಾವಾಗಾದರೊಮ್ಮೆ ವಾತದಿಂದ ಮತ್ತು ವಿಚಿತ್ರ ಸ್ವಪ್ನದ ಅಂಜಿಕೆಯಿಂದ ಸ್ವಲ್ಪಮಟ್ಟಿಗೆ ಕಿರಿಕಿರಿಯುಳಿಯುವದಿಷ್ಟೇ. ಅದರಂತೆ ಸಪ್ಟೆಂಬರ ೨ ರಿಂದ ಅಕ್ಟೋಬರ ೧೬ ಈ ಮಧ್ಯಂತರ ಅವಧಿಯಲ್ಲಿ ಅನೇಕರಿಗೆ ಅರೆತಲೆಶೂಲಿಯ ತೊಂದರೆಯಾಗುವ ಸಂಭವವಿದೆ. ಉಳಿದ ವಿಷಯಗಳಲ್ಲಿ ಆವಶ್ಯಕ ಸುಖ ಮಾರ್ಚ ೭ ರಿಂದ ಪಂಚಮಗುರು ಬರುವದರಿಂದ ಬಹಳ ಉತ್ತಮ ದೊರೆಯುವದು. ಮತ್ತು ಮುಂದೆ ಅಷ್ಟಮ ರಾಹು ಮತ್ತು ದ್ವಿತೀಯ ಕೇತು ಬಂದರೂ ಅವರು ಉಚ್ಚ ಇರುವದರಿಂದ ಅದು ಯಾವದೇ ಬಗೆಯಿಂದ ಕೆಡುವ ಸಂಭವವಿಲ್ಲ. ಈ ವರ್ಷ ಯಾವಾವ ವಿಷಯಗಳಲ್ಲಿ ಯಶಸ್ಸು ಸಿಕ್ಕಬಲ್ಲದೊ ಅಂತಹ ಸುವಿಚಾರಗಳೇ ಬರುವವು. ಮತ್ತು ಪಂಚಮ ಗುರು ಬಂದ ಬಳಿಕ ಉಳಿದವರಿಗೂ ಅವು ಬಹಳಷ್ಟು ಆಕರ್ಷಕ. ಮತ್ತು ಮಾರ್ಗದರ್ಶಕ ಎನಿಸುವವು.

ಹೆಂಡತಿಯ ಆರೋಗ್ಯ ಈ ವರ್ಷ ಚನ್ನಾಗಿ ಉಳಿಯುವದು. ಆದರೆ ಕೆಲವರಿಗೆ ಅಕ್ಟೋಬರ ೬ ರಿಂದ ೩೦ ರ ಅವಧಿಯಲ್ಲಿ ರಜೋದರ್ಶನದಿಂದ ತೊಂದರೆಯಾಗುವ ಸಂಭವವಿದೆ. ಆದರೆ ದ್ವಿತೀಯ ಕೇತು ಬಂದಂದಿನಿಂದ ನಿಮ್ಮಲ್ಲಿ ಸುಳ್ಳು ಸೊಟ್ಟುಸಿಟ್ಟಿನಿಂದ ಅನೇಕ ಸಲ ವಾಗ್ವಾದ ಹೆಚ್ಚುವದು. ಆದರೆ ನಿಮ್ಮ ವಿವಾಹವಿನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವ ವಿಚಾರವಿದ್ದರೆ ಮಾರ್ಚ ೭ ರಿಂದ ಬರುವ ಪಂಚಮಗುರುವಿನ ಅವಧಿಯಲ್ಲಿ ಉತ್ತಮ ಬಾಶಿಂಗಬಲವಿದೆಯೆಂದು ತಿಳಿದು ಆ ಸಿದ್ಧತೆಗೆ ತೊಡಗಬೇಕು. ಏಕೆಂದರೆ ಬಹುತರ ಜನರ ವಿವಾಹ ಮೇ ೧೪ ರೊಳಗಾಗಿಯೇ ಆದುದು ಪ್ರತ್ಯಯಕ್ಕೆ ಬರುವದು. ವಧೂವರರು ಮನಸ್ಸಿನಲ್ಲಿದ್ದಂತೆ ಪೂರ್ಣ ಅನುರೂಪ ಇರುವರು. ಮೊದಲೇ ಪರಿಚಿತರಾದವರೂ ಇರುವರು.

ನಿಮ್ಮ ಮಕ್ಕಳಲ್ಲಿ ಯಾರದಾದರೂ ವಿವಾಹ ಮಾಡುವದಿದ್ದರೆ ಅದಕ್ಕೂ ಪಂಚಮಗುರು ಬಂದಾಗ ಒಳ್ಳೆ ಯೋಗವಿದೆ. ಲಗ್ನ ಕೂಡಿ ಬಂದ ನಾಲ್ಕಾರು ದಿನಗಳಲ್ಲಿಯೇ ಯಾವದೇ ಬಗೆಯ ತಕರಾರು ಇಲ್ಲದೆ ವಿವಾಹವಾಗಿ ಹೋಗುವದು. ಮೇ ೧೪ ರ ನಂತರ ಲಗ್ನವಾದರೆ ಮಾತ್ರ ಬಹಳಷ್ಟು ಕಿಟಿಕಿಟಿಯನ್ನು ಸಹಿಸಬೇಕಾಗುವದು. ಒಂದೊಮ್ಮೆ ಗೊತ್ತುಪಡಿಸಿದ ಮೊದಲನೇ ಮುಹೂರ್ತವನ್ನು ರದ್ದುಗೊಳಿಸಿ ಎರಡನೇ ಮುಹೂರ್ತ ಗೊತ್ತುಪಡಿಸಬೇಕಾಗುವದು. ಆದರೆ ಲಗ್ನ ಯಾವಾಗ ಆದರೂ ಸೊಸೆ ಇಲ್ಲವೆ ಅಳಿಯ ಹದಿನಾರಾಣೆ ಮನಸ್ಸಿಗೆ ಬರುವರು. ಅದರಂತೆ ಈ ಸಲ ಮಕ್ಕಳ ಉತ್ಕರ್ಷವೂ ಪಂಚಮಗುರುವಿರುವಾಗ ಬಹಳಷ್ಟಾಗುವದು. ಅನೇಕರ ಲೌಕಿಕವೂ ಜುಲೈ ೧೪ ರಿಂದ ಸಪ್ಟಂಬರ ೨ ಮತ್ತು ಅಕ್ಟೋಬರ ೧೬ ರಿಂದ ನವಂಬರ ೧೬ ಈ ಅವಧಿಯಲ್ಲಿ ಬಹಳ ಉತ್ಕರ್ಷ ಹೊಂದುವರು. ಅವರಲ್ಲಿ ಒಬ್ಬಿಬ್ಬರು ಪರದೇಶ ಪ್ರಯಾಣವನ್ನು ಮಾಡುವರು. ಆ ಬಗೆಯ ಯೊಗವಿದೆ. ಆದರೆ ನಿಮ್ಮಲ್ಲಿ ಮತ್ತು ಮಕ್ಕಳಲ್ಲಿ ಮತ್ಯೈಕ್ಯವುಳಿಯುವದಿಲ್ಲ. ಒಬ್ಬನಿಗಿಂತ ಹೆಚ್ಚು ಮಕ್ಕಳಿದ್ದರೆ ಅವರಲ್ಲಿ ಒಬ್ಬನಾದರೂ ವಿಭಕ್ತನಾಗುವನು.

ಧಂದೆ ಕೂಲಿಯವರಿಗೆ ಈ ವರ್ಷ ಕಾಯಂ ವಾಗಿ ಇರುವ ತೃತೀಯ ಶನಿಯ ಮೂಲಕ ಸುಮಾರಾಗಿ ಹದಿನಾಲ್ಕಾಣೆ ಯಶಸ್ಸು ಸಿಕ್ಕುವದು ಮತ್ತು ಪಂಚಮಗುರು ಬಂದ ಬಳಿಕ ಅಸಾಧ್ಯ ಮತ್ತು ದುರ್ಲಭವಾದ ಕೆಲಸಗಳೂ ಒಮ್ಮೆಲೆ ಮನಸ್ಸಿನಂತೆ ಪೂರ್ಣವಾಗುತ್ತಹೋಗುವವು. ಅನೇಕರಿಗೆ ಮೇ ೧೪ ರಿಂದ ಬರುವ ಅಷ್ಟಮರಾಹುವಿನಿಂದಾಗಿ ಆ ಅವಧಿಯಲ್ಲಿ ಗುಪ್ತ ಇಲ್ಲವೆ ಆಕಸ್ಮಾತ್ ಧನಲಾಭದ ಯೋಗವನ್ನು ತಂದುಕೊಡುವನು. ಧಂದೆಯವರಿಗೆ ಮಾರ್ಚ ೧೬ ರಿಂದ ಮೇ ೨೪ ಮತ್ತು ಜುಲೈ ೧೪ ರಿಂದ ಸಪ್ಟಂಬರ ೨ ಈ ಅವಧಿಯು ದೊಡ್ಡದೊಡ್ಡ ಸಾಹಸದ ಮತ್ತು ಅಂದಾಜಿಗಿಂತ ಹೆಚ್ಚು ಲಾಭವನ್ನುಂಟುಮಾಡುವದು. ನೋಕರರಿಗೆ ಮೇ ೨೪ ರಿಂದ ಜುಲೈ ೧೪ ಇಲ್ಲವೆ ಅಕ್ಟೋಬರ ೧೬ ರಿಂದ ನವಂಬರ ೧೬ ಈ ಅವಧಿಯಲ್ಲಿ ಮೇಲಿನ ಗ್ರೇಡು ಸಿಕ್ಕುವದು. ಸಂಬಳದಲ್ಲಿ ಹೆಚ್ಚಳವಂತೂ ಆಗಿಯೇ ತೀರುವದು. ಬದಲಿಯಾಗುವ ಶಾಖೆಯಿದ್ದರೆ ಮಾರ್ಚ ೭ ರಿಂದ ೨೪ ಮೇ ಇಲ್ಲವೆ ಜುಲೈ ೧೫ ರಿಂದ ಅಗಸ್ಟ ೧ ರ ಅವಧಿಯಲ್ಲಿ ಯೋಗ್ಯ ಸ್ಥಳಕ್ಕೆ ವರ್ಗವಾಗುವದು. ವರಿಷ್ಠರು ಸ್ವಲ್ಪ ಬೇಸರಗೊಳ್ಳುವರು. ಆದರೆ ಕೈಕೆಳಗಿನವರು ಆದರದಿಂದ ವರ್ತಿಸುವರು, ಕಲ್ಯಾಣಕ್ಕಾಗಿ ಪ್ರಯತ್ನಿಸುವರು. ಈ ಸಲ ಸ್ಥಾವರ ಜಂಗಮ ಸಂಗ್ರಹವನ್ನು ( ಮೂಲಗ್ರಹ ಬಲ ಪ್ರಮಾಣಕ್ಕನುಸಾರವಾಗಿ ) ಸ್ವಲ್ಪಿಲ್ಲಸ್ವಲ್ಪ ಮಾಡುವಿರಿ. ಚತುರ್ಥಗುರುವಿರುವಾಗ ಆಪ್ತರು ಇಲ್ಲವೆ ನೆರೆಯವರು ಬಹಳ ಬಿಗುವಿನಿಂದ ಇರುವರು. ಆದರೆ ಪಂಚಮಗುರು ಬಂದ ಬಳಿಕ ಅವರೆಲ್ಲ ವಿನೀತರಾಗುವರು. ಮಾತುಕತೆಯನ್ನು ನಯದಿಂದ ನಡೆಸುವರು. ವಾಹನಸುಖ ಬಹಳ ಉತ್ತಮ ಸಿಕ್ಕುವದು. ಪಂಚಮಗುರು ಬಂದಂದಿನಿಂದ ನವಮರಾಹು ಇರುವ ವರೆಗೆ ಅಂದರೆ ಮಾರ್ಚ ೭ ರಿಂದ ಮೇ ೧೪ ರ ಮಧ್ಯದ ಅವಧಿಯಲ್ಲಿ ಒಂದೆರಡು ಯಾತ್ರೆಗಳನ್ನು ಮಾಡುವಿರಿ. ಧಾರ್ಮಿಕಕೃತ್ಯಗಳೂ ನಡೆಯುವವು. ಈ ವರ್ಷ ಮಿತ್ರಸುಖವೂ ಚೆನ್ನಾಗಿ ದೊರೆವ ಯೋಗವಿದೆ. ಅವರಲ್ಲಿಯೂ ಕೆಲವರ ಒಳ್ಳೆ ಉನ್ನತಿಯಾಗುವದು. ನಿಮ್ಮ ಬಂಧುವರ್ಗದವರಿಗೂ ಈ ವರ್ಷ ಅನುಕೂಲವಿರುವದು. ಆದರೆ ಡಿಸೆಂಬರ ೨೬ ರಿಂದ ಮಾರ್ಚ ೧೭ ರ ವರೆಗೆ ಅವರ ಆರೋಗ್ಯ ಚೆನ್ನಾಗಿ ಉಳಿಯುವದಿಲ್ಲ ಮತ್ತು ನಿಮ್ಮ ಕೂಡವೂ ಚೆನ್ನಾಗಿ ನಡೆಯುವದಿಲ್ಲ.

ದಾವೆ ಫಿರ್ಯಾದಿ ಮತ್ತು ಖಾಸಗಿ ಸ್ಪರ್ಧೆಯಲ್ಲಿ ಈ ವರ್ಷ ಒಳ್ಳೆ ಯಶಸ್ಸು ತಂದು ಕೊಡುವಂತಹದಾಗಿದೆ. ಆದರೆ ಅದಕ್ಕಾಗಿ ನಿರರ್ಥಕ ವೆಚ್ಚವನ್ನು ಮಾಡಬೇಕಾಗುವದು ಮತ್ತು ಪರಾಜಯ ಹೊಂದಿದಂಥ ಶತ್ರುಗಳು ಮತ್ತೆ ಮತ್ತೆ ಮೇಲೇರಿ ಬಂದು ತೊಂದರೆಕೊಡಹತ್ತುವರು.

ಗರ್ಭವತಿ ಸ್ತ್ರೀಯರಲ್ಲಿ ಮಾರ್ಚ ೭ ಕ್ಕಿಂತ ಮೊದಲು ಹಡೆಯುವವರಿದ್ದರೆ ಅವರಿಗೆ ಬಹಳಷ್ಟು ಕಷ್ಟವೆನಿಸುವದು. ಆದರೆ ಅನೇಕರಿಗೆ ಗಂಡುಹುಟ್ಟುವದರಿಂದ ಸಂತೋಷವೂ ಆಗುವದು ಮತ್ತು ಅನಂತರ ಹಡೆದವರಿಗೆ ಕಷ್ಟವಾಗದಿದ್ದರೂ ಹೆಣ್ಣು ಹಡೆಯುವದರಿಂದ ಮನಸ್ಸಿನಲ್ಲಿ ಸ್ವಲ್ಪ ಬೇಸರವೆನಿಸುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ ೭ ಕಿಂತ ಮೊದಲು ಆಗುವದೊ ಅವರಿಗೆ ಯಶಸ್ಸಿನ ಖಾತ್ರಿ ಹೇಳಲಿಕ್ಕೆ ಬರಲಾರದು. ಅನಂತರ ಪರೀಕ್ಷೆಯಾದವರು ಮಾತ್ರ ಪರೀಕ್ಷೆ ಪಾಸಾಗಿಯೇ ತೀರುವರು. ಅದರಲ್ಲಿಯೂ ಜುಲೈ ೧೪ ರಿಂದ ಸಪ್ಟಂಬರ ೨ ಇಲ್ಲವೆ ಅಕ್ಟೋಬರ ೧೬ ರಿಂದ ನವಂಬರ ೧೬ ರೊಳಗೆ ಪರೀಕ್ಷೆಯಾದವರು ಪ್ರಥಮವರ್ಗದಲ್ಲಿಯೂ ಪಾಸಾಗುವರು.

# ಧನು

ಈ ರಾಶಿಯವರಿಗೆ ಈ ವರ್ಷ ಒಟ್ಟಿಗೆ ಸಾಂಸಾರಿಕ ದೃಷ್ಟಿಯಿಂದ ಅನುಕೂಲವಿಲ್ಲದಿದ್ದರೂ ಆರ್ಥಿಕ ವಿಷಯಗಳಲ್ಲಿ ಒಳ್ಳೇ ಲಾಭದಾಯಕವಾಗಿರುವದು. ಇದು ನಿಶ್ಚಿತ.

ಈ ರಾಶಿಯವರಿಗೆ ಕಳೆದ ಆರು ವರ್ಷಗಳಿಂದ ಇದ್ದ ಸಾಡೇಸಾತಿಯು ಇನ್ನೂ ಸುಮಾರಾಗಿ ಒಂದೂ ಕಾಲು ವರ್ಷ ಉಳಿದಿರುವದರಿಂದ ಈ ವರ್ಷವೂ ಅದರಲ್ಲಿಯೆ ಕಳೆಯುವದು. ಆದರೂ ಸಾಡೇಸಾತಿಯು ಕರ್ತನಾದ ದ್ವಿತೀಯ ಶನಿ ಧನಸ್ಥಾನದಲ್ಲಿ ಸ್ವರಾಶಿಯಾದ ಮಕರದಲ್ಲಿಯೇ ಇರುವದರಿಂದ ಮತ್ತು ಈ ವರ್ಷವೆಲ್ಲ ಅವನು ಬಹು ಅಂಶ ಕಾಲವೆಲ್ಲ ಶ್ರವಣಶುಭನಕ್ಷತ್ರದಲ್ಲಿಯೇ ಭ್ರಮಿಸುವದರಿಂದ ಈ ವರ್ಷದಲ್ಲಿಯಾದರೂ ಸಾಡೇಸಾತಿಯು ಅಪಕಾರಕವಾಗದೆ ತದ್ವಿರುದ್ಧ ಬಹಳಷ್ಟು ಉಪಕಾರಕವೆನಿಸುವದು. ಕೇತು ಧನು ರಾಶಿಗೆ ಮೇ ೧೮ ರಂದು ಹೋದ ಬಳಿಕ ಇದರ ನಿದರ್ಶನ ನಿಮಗೆ ಬರುವದು ನಿಶ್ಚಿತ. ಧನು ರಾಶಿಯಲ್ಲಿ ಕೇತು ಉಚ್ಚನಾಗುವದರಿಂದ ಈ ರಾಶಿಯವರ ಶಾರೀರಿಕ ವೈಚಾರಿಕ ಇಲ್ಲವೆ ಆರ್ಥಿಕ ಬಲವನ್ನು ಮೊದಲಿಗಿಂತ ಹೆಚ್ಚಿಸುವನೆಂಬುದಂತೂ ನಿಶ್ಚಿತ. ಅದರಂತೆಯೇ ಮಾರ್ಚ ೭ ರ ವರೆಗೆ ಇರುವ ತೃತೀಯ ಗುರು ಮುಂದೆ ಚತುರ್ಥದಲ್ಲಿ ಬಂದರೂ ಸ್ವರಾಶಿಯಾದ ಮೀನದಲ್ಲಿಯೇ ಬರುವನು, ಮತ್ತು ಇವನು ನಿಮ್ಮ ಅಂದರೆ ಧನು ರಾಶಿಯು ಸ್ವಾಮಿಯಾಗಿರುವನು. ಆದುದರಿಂದ ಚತುರ್ಥ ಸ್ಥಾನಕ್ಕೆ ಬಂದರೂ ತೊಂದರೆಯನ್ನು ಕೊಡದೆ ಹೆಚ್ಚು ಸುಖವನ್ನುಂಟುಮಾಡುವನು. ಒಟ್ಟಾರೆ ಈ ವರ್ಷ ನಿಮ್ಮ ಆರೋಗ್ಯ ಚೆನ್ನಾಗಿ ಉಳಿಯುವದು. ಆದರೆ ಕೆಲಮಟ್ಟಿಗೆ ಕಿರಿಕಿರಿಯಿರುವದು. ಅದೂ ಕೇವಲ ಡಿಸೆಂಬರ ೨೬ ರಿಂದ ಮಾರ್ಚ ೧೭ ರ ಮಧ್ಯಂತರ ಅವಧಿಯಲ್ಲಿ ಅಂದರೆ ಅಷ್ಟಮ ಮಂಗಳ ವಕ್ರೀ ಇರುವವರೆಗೆ ಕಾಯಿಲೆಯಿಂದಲ್ಲದಿದ್ದರೂ ಅಪಘಾತದಿಂದ ಸ್ವಲ್ಪ ತೊಂದರೆಯೆನಿಸುವದು. ಉಳಿದ ವಿಷಯಗಳಲ್ಲಿ ದೇಹ ಸುಖಕ್ಕೆ ಆವಶ್ಯಕ ಘಟನೆಗಳು ಮೇ ೨೩ ರಿಂದ ಒಂದರ ಹಿಂದೊಂದರಂತೆ ಸಂಭವಿಸುತ್ತ ಹೋಗುವವು.

ಹೆಂಡತಿಯ ಆರೋಗ್ಯವೂ ಮಂಗಳ ವಕ್ರೀ ಇರುವಾಗ ಸ್ವಲ್ಪ ಕೆಡಬಹುದು. ಉಳಿದ ವೇಳೆಯಲ್ಲಿ ಅದು ಚೆನ್ನಾಗಿ ಉಳಿಯುವದು. ಆದರೆ ಈ ವರ್ಷ ಯೋಗ್ಯ ಕಾರಣಗಳಿಗಾಗಿಯಾದರೂ ನಾಲ್ಕೈದು ತಿಂಗಳ ಅವಳ ಸಹವಾಸಸುಖ ದೊರೆಯದು. ಆ ಬಗೆಯ ಯೋಗವಿರುವದು. ಬಹುಶಃ ಡಿಸೆಂಬರ ೨೯ ರಿಂದ ಜನೆವರಿ ೩೧ ಮತ್ತು ಅಗಸ್ಟ ೧೮ ರಿಂದ ಅಕ್ಟೋಬರ ೩೦ ಈ ಅವಧಿಯಲ್ಲಿ ಈ ಯೋಗ ಬರುವದು. ಉಭಯತರಲ್ಲಿ ಮೇ ೧೮ ರ ವರೆಗೆ ಯಾವದೊಂದು ಕಾರಣಕ್ಕಾಗಿ ದುಸಮುಸಿ ನಡೆಯುವದು. ಆದರೆ ಮುಂದೆ ಮಾತ್ರ ಬಹುಶಃ ಎಲ್ಲ ವಿಷಯಗಳಲ್ಲಿ ಐಕಮತ್ಯದಿಂದ ಇರುವಿರಿ. ಆದರಂತೆಯೇ ಅವಿವಾಹಿತರ ವಿವಾಹವನ್ನು ಮಾಡುವ ಇಚ್ಛೆ ಇದ್ದರೆ ಅದಕ್ಕೆ ಮಾತ್ರ ಚತುರ್ಥ ಗುರುವಿಗಿಂತ ತೃತೀಯ ಗುರುವಿದ್ದಾಗಲೆ ಬಾಶಿಂಗಬಲ ಜೋರಿನಲ್ಲಿರುವದು. ಚತುರ್ಥ ಗುರುವಿದ್ದಾಗ ಆ ಯೋಗವಿಲ್ಲವೇ ಇಲ್ಲೆಂದಿಲ್ಲ, ಆದರೆ ಮೊದಲು ಕೂಡುವಾಗ ಅನಂತರ ಲಗ್ನ ಸಮಾರಂಭ ನಡೆಯುವಾಗ ಕೆಲ ಸಂಭಾವ್ಯ ಇಲ್ಲವೆ ಕೆಲ ಅಸಂಭಾವ್ಯ ಅಡಚಣಿಗಳು ಬಂದು ಮನಸ್ಸಿನಲ್ಲಿ ವಿರಸವೆನಿಸುವದು. ವಧೂವರರು ಇತರರ ದೃಷ್ಟಿಯಿಂದ ಪೂರ್ಣ ಅನುರೂಪ ಇದ್ದರೂ ಪರಸ್ಪರರಿಗೆ ಮಾತ್ರ ಹಾಗೆ ಅನಿಸುವದಿಲ್ಲ.

ಅದರಂತೆಯೇ ನಿಮ್ಮ ಮಕ್ಕಳ ಮದುವೆ ಈ ವರ್ಷ ಮಾಡುವದಿದ್ದರೆ ಮೇ ೨೩ ರಲ್ಲಿಯೇ ಅದಕ್ಕೆ ಹೆಚ್ಚು ಗ್ರಹಬಲವಿದೆ. ಮುಂದೆ ಮಾತ್ರ ಅಷ್ಟೊಂದು ಅನುಕೂಲತೆ ಇಲ್ಲ. ಒಂದು ವೇಳೆ ಲಗ್ನ ಕೂಡಿ ಬಂದರೂ ಅದನ್ನು ಮುಂದಿನ ವರ್ಷದ ವರೆಗೆ ಹಾಕಬೇಕಾಗುವದು. ಸೊಸೆ ಇಲ್ಲವೆ ಅಳಿಯ ರೂಪ ಇಲ್ಲವೆ ವಿದ್ವತ್ತಿಗಿಂತ ದೈವಾನುಸಾರವಾಗಿಯೇ ಹೆಚ್ಚು ಪ್ರಭಾವಿಯಾಗಿದ್ದುದು ತೀವ್ರವೇ ಕಂಡುಬರುವದು. ಈ ಸಲ ತೃತೀಯ ಗುರುವಿರುವಾಗ ಗಂಡುಹುಡುಗರ ಮತ್ತು ಚತುರ್ಥಗುರು ಬಂದಾಗ ಹೆಣ್ಣುಮಕ್ಕಳ ಉತ್ಕರ್ಷ ಹೆಚ್ಚಿಗೆ ಆದುದು ಕಂಡುಬರುವದು. ಅವರಲ್ಲಿ ಕೆಲವರು ಮೇ ೨೩ ರ ವರೆಗೆ ಕೆಲ ವಿಷಯಗಳಲ್ಲಿ ಬಹಳ ಅಪ್ರಿಯರಾಗಿ ವರ್ತಿಸುವರು ಆದರೆ ಅನಂತರ ಮಾತ್ರ ಒಳ್ಳೇರೀತಿಯಿಂದ ವರ್ತಿಸಿ ಸುಖವನ್ನುಂಟುಮಾಡುವರು.

ಉಪಜೀವನದ ಮುಖ್ಯ ಸಾಧನ- ಧಂದೆಯಿರಲಿ ನೋಕರಿಯಿರಲಿ ಎರಡರಲ್ಲಿಯೂ ಈ ವರ್ಷ ಒಳ್ಳೇ ಯಶಸ್ಸು ಸಿಕ್ಕುವದು, ಮೇ ೧೮ ರ ನಂತರವಂತೂ ಬಹಳಷ್ಟು ಮುನ್ನುಗ್ಗುವಿರಿ. ಧಂದೆಯವರಿಗೆ ತೃತೀಯ ಆದರೆ ನೋಕರರಿಗೆ ಚತುರ್ಥ ಗುರು ಹೆಚ್ಚು ಅನುಕೂಲನಿರುವನು. ವಿಶೇಷತಃ ನವಂಬರ ೭ ರಿಂದ ಡಿಸೆಂಬರ ೨೯ ಜನೆವರಿ ೩೧ ರಿಂದ ಫೆಬ್ರುವರಿ ೨೬, ಮಾರ್ಚ ೨೮ ರಿಂದ ಜೂನ ೬, ಜೂನ ೩೦ ರಿಂದ ಜುಲೈ ೨೫ ಅಗಸ್ಟ ೧೮ ರಿಂದ ಅಕ್ಟೋಬರ ೩೦ ರ ಅವಧಿಯು ಹೆಚ್ಚು ಲಾಭದ್ದೆಂದು ಕಂಡುಬರುವದು. ಧಂದೆಯವರ ಉದ್ಯೋಗವು ಹೆಚ್ಚು ಬೆಳೆಯುವದರಿಂದ ಹೆಚ್ಚು ಕೆಲಸಗಾರರನ್ನು ನೇಮಿಸಿಕೊಳ್ಳಬೇಕಾಗುವದು. ಒಂದೆರಡು ಕಡೆ ಶಾಖೆಗಳನ್ನು ತೆರೆಯುಬೇಕಾಗುವದು. ಬದಲಿಯಾಗುವ ಶಾಖೆ ಇದರೆ ಅವರಿಗೆ ಮೇಲಿನ ಗ್ರೇಡು ಚತುರ್ಥ ಗುರುವಿನ್ನ ಅವಧಿಯಲ್ಲಿ ದೊರೆತು ದಗದಗಿಯೆನಿಸುವ ಸ್ಥಳಕ್ಕೆ ಬದಲಿಯಾಗುವದು. ಆದರೆ ಆ ಸ್ಥಳ ಹವಾಮಾನ ಮತ್ತು ಇತರ ಅನುಕೂಲತೆಯ ದೃಷ್ಟಿಯಿಂದ ಬಹಳ ಸೌಕರ್ಯದ್ದೆನಿಸುವದು. ವರಿಷ್ಠರ ಮರ್ಜಿ ಅಖಂಡ ಉಳಿಯುವದು. ಆದರೆ ಕೆಳಗಿನವರಿಗೆ ಅದು ಸಹನವಾಗದೆ ಅವರು ಮೇಲಿಂದ ಮೇಲೆ ಗುರಗುರು ಮಾಡುವರು. ಮಿತ್ರಸುಖವೂ ಈ ವರ್ಷ ಅಷ್ಟೊಂದು ಚೆನ್ನಾಗಿ ಸಿಕ್ಕುವದಿಲ್ಲ. ಏಕೆಂದರೆ ಪ್ರೀತಿಪಾತ್ರರಾದ ಮಿತ್ರರು ಸ್ಥಳಾಂತರ ಮಾಡುವರು. ಮತ್ತು ಹೆಸರಿಗೆ ಮಾತ್ರ ಮಿತ್ರರೆನಿಸಿದವರನ್ನು ಯೋಗ್ಯ ಕಾರಣಗಳಿಗಾಗಿಯಾದರೂ ಸಮೀಪದಲ್ಲಿರಿಸಿಕೊಳ್ಳಬೇಕಾಗುವದು. ಪ್ರಥಮ ಕೇತು ಅರ್ಥಾತ್ ಸಪ್ತಮ ರಾಹು ಮೇ ೧೮ ಕ್ಕೆ ಬಂದಂದಿನಿಂದೆ ಧನಸಂಗ್ರಹವನ್ನು ಹೆಚ್ಚಿಗೆ ಮಾಡುವಿರಿ.. ಈ ವರ್ಷ ಯಾತ್ರಾಯೋಗ ಕಡಿಮೆಯೇ ಇದೆ. ಆದರೆ ಮಂಗಲಕಾರ್ಯಗಳು ಮತ್ತು ಧಾರ್ಮಿಕಕಾರ್ಯಗಳು ಹೆಚ್ಚಿಗೆ ನಡೆಯುವವು. ಪ್ರಥಮ ಕೇತು ಬಂದ ಬಳಿಕ ಮನೆಯವರೆಲ್ಲ ಐಕಮತ್ಯದಿಂದ ಮತ್ತು ಉಳಿದ ಆಪ್ತರು ಪರಿಚಿತರು ಬಹಳ ಆದರದಿಂದ ವರ್ತಿಸಹತ್ತುವರು. ವಾಹನಸುಖ ಚತುರ್ಥ ಗುರು ಬಂದಾಗ, ಹೆಚ್ಚಿಗೆ ದೊರೆಯುವದು.

ದಾವೆ ಫಿರ್ಯಾದಿ ಮತ್ತು ಸ್ಪರ್ಧೆಯ ಕಾರ್ಯಗಳಿಗೆ ಸಪ್ತಮ ರಾಹು ಬಂದ ಬಳಿಕ ಬಹಳ ಯಶಸ್ಸು ಸಿಕ್ಕುವದು. ಆದರೆ ಈ ವರ್ಷವಿಡಿ ಕೆಲ ಸ್ತ್ರೀಯರು ಶತ್ರುತ್ವವನ್ನು ಸಾಧಿಸುವರು. ಅವರಲ್ಲೊಬ್ಬರು ನಿಮ್ಮ ಅಜ್ಜನ ಮನೆತನದವರಿರುವರು.

ಈ ರಾಶಿಯ ಗರ್ಭಿಣಿ ಸ್ತ್ರೀಯರು ಹಡೆಯುವವರಿದ್ದರೆ ಮೇ ೧೮ರ ಮೊದಲು ಹಡೆದರೆ ಕಷ್ಟವೆನಿಸುವದು. ಮತ್ತು ಕೂಸು ಕೂಡ ಎಷ್ಟರ ಮಟ್ಟಿಗೆ ಉಳಿಯುವದೆಂಬುದು ಅದರ ಕುಂಡಲಿಯಿಂದಲೆ ನಿರ್ಧರಿಸಬೇಕಾಗುವದು. ಆದರೆ ಆ ತಾರೀಕಿನ ನಂತರ ಮಾತ್ರ ಸುಲಭ ಪ್ರಸೂತಿಯ ಯೋಗವಿದ್ದು ಹುಟ್ಟುವ ಮಕ್ಕಳು ಸಶಕ್ತರು ದೀರ್ಘಾಯುಗಳು ಮತ್ತು ಬಹುಶಃ ಗಂಡು ಮಕ್ಕಳು ಇರುವರು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಮೇ ೨೩ ರ ನಂತರ ಇರುವದೋ ಅವರು ಖಾತ್ರಿಯಿಂದ ಯಶಸ್ವಿಯಾಗುವರು. ಮತ್ತು ಕೇವಲ ಕಲಾವಿಷಯದ ಪರೀಕ್ಷೆ ಮಾರ್ಚ ೭ಕ್ಕಿಂತ ಮೊದಲು ಇದ್ದರೆ ಅವರೂ ಯಶಸ್ವಿಯಾಗುವರು ಇದನ್ನು ತಿಳಿದಿರಬೇಕು.

# ಮಕರ

ಈ ವರ್ಷ ನಿಮಗೆ ಸಾಡೇಸಾತಿಯ ತೊಂದರೆ ಅಷ್ಟೊಂದು ಆಗುವದಿಲ್ಲ. ಬಹುತರ ವಿಷಯಗಳಲ್ಲಿ ಮೇ ೧೮ ರಂದು ಷಷ್ಠ ರಾಹು ಬಂದಂದಿನಿಂದ ಬಹಳ ಪ್ರಗತಿಯಾಗುವದೆಂಬುದನ್ನು ನಿಶ್ಚಿತವಾಗಿ ತಿಳಿದುಕೊಳ್ಳಬೇಕು.

ಈಗ ನಿಮಗೆ ಸಾಡೇಸಾತಿ ಇದ್ದು ಶನಿ ಪ್ರಥಮದಲ್ಲಿರುವನು. ಇಡಿ ವರ್ಷ ಅವನು ಇದೇ ಸ್ಥಾನದಲ್ಲಿ ಉಳಿಯುವನು. ಆದರೆ ಈ ರಾಶಿಯ ಸ್ವಾಮಿಯೂ ಅವನೇ ಆಗಿರುವದರಿಂದ ಹಾನಿಗಾಗಲಿ ಕ್ಲೇಶಕ್ಕಾಗಲಿ ಅವನು ಕಾರಣನಾಗದೆ ತದ್ವಿರುದ್ಧ ಲಾಭವನ್ನುಂಟು ಮಾಡಿ ಮನಸ್ಸಿನಲ್ಲಿಯ ಉದ್ದೇಶಗಳನ್ನೆಲ್ಲ ಈಡೇರಿಸುವನು. ಆದರೆ ಮೇ ೧೮ ರ ವರೆಗೆ ಶನಿ ಜೊತೆ ಕೇತು ಇರುವನು ಮತದ ಅಲ್ಲಿಯವರೆಗೆ ಮಂಗಳನೂ ಇವರಿಬ್ಬರೆದುರಿಗಿದ್ದು ಇವರ ಪ್ರತಿದೃಷ್ಟಿ ಯೋಗವಾಗುವದು. ಆದ್ದು

ರಿಂದ ಈ ಅವಧಿಯೊಳಗಾಗಿ ಮೋಟರನ್ನಂತೂ ಬಿಡಿರಿ. ಸಾಯುಕಲ್ಲಿನಂಥ ಸಣ್ಣ ವಾಹನಗಳನ್ನು ಕೂಡ ನೀವು ಸ್ವತಃ ನಡೆಸಬಾರದು. ಏಕೆಂದರೆ ಅಪಘಾತದ ಅಂಜಿಕೆ ವಿಶೇಷವಿರುವದು. ವಿಶೇಷವಾಗಿ ಡಿಸೆಂಬರ ೨೬ ರಿಂದ ಮಾರ್ಚ ೧೭ ರ ಅವಧಿಯಲ್ಲಿ ಈ ಅಂಜಿಕೆ ಇದೆ. ಅದರಂತೆಯೇ ಯಾವಾಗಾದರೊಮ್ಮೆ ಎದೆ ಇಲ್ಲವೆ ಟೊಂಕ ನೊಯ್ಯಹತ್ತುವದು. ಆದರೆ ಗಂಡಾಂತರದ ಅಂಜಿಕೆ ಸ್ವಲ್ಪೂ ಇಲ್ಲ.

ಉಳಿದ ವಿಷಯಗಳಲ್ಲಿ ಆವಶ್ಯಕವಾದ ಪ್ರಾಪಂಚಿಕ ಸುಖ ಮಾರ್ಚ ೭ರ ವರೆಗೆ ದ್ವಿತೀಯ ಗುರುವಿರುವಾಗ ಇಲ್ಲವೆ ಅನಂತರ ತೃತೀಯ ಗುರು ಬಂದಾಗ ಬಹಳಷ್ಟು ಸಿಕ್ಕುವುದು. ದ್ವಿತೀಯ ಗುರು ಇರುವ ವರೆಗೆ ಕೌಟುಂಬಿಕ ಉತ್ಕರ್ಷ ಮತ್ತು ಲೌಕಿಕ ಬೆಳೆಯುವಂಥ ಒಂದೆರಡು ಸಂಗತಿಗಳು ಘಟಿಸುವವು. ಮತ್ತು ಕುಟುಂಬದಲ್ಲಿಯ ಎಲ್ಲರ ವೈಚಾರಿಕ ಮತೈಕ್ಯವು ಬಹಳ ಪ್ರಶಂಸನೀಯವೆನಿಸುವದು.

ಹೆಂಡತಿಯ ಆರೋಗ್ಯ ಮಾತ್ರ ಸಪ್ತಮದಲ್ಲಿ ರಾಹು ಮತ್ತು ಮಂಗಳ ಇರುವ ಅವಧಿಯಲ್ಲಿ ಚೆನ್ನಾಗಿ ಉಳಿಯುವದಿಲ್ಲ. ಈ ಪಾಪಗ್ರಹಗಳ ಜೊತೆ ಮೇ ೨೩ ರ ವರೆಗೆ ಇರುವದು. ಅವಳಿಗೆ ಯಾವಾಗಾದರೊಮ್ಮೆ ಪೈಶಾಚಿಕ ಬಾಧೆಯ ಅಂಜಿಕೆಯೂ ಇದೆ. ಸತ್ತ ಮನುಷ್ಯರು ಜೀವಂತರಾಗಿ ಅಡ್ಡಾಡುವಂತೆ ಅನೇಕರಿಗೆ ಭಾಸವಾಗಹತ್ತುತ್ತದೆ. ಬೇರೆ ಹಲವರಿಗೆ ಶೀತಪಿತ್ತದ ಇಲ್ಲವೆ ಆಮ್ಲಪಿತ್ತದ ಉಪದ್ರವವಾಗುವದು. ಅದರಂತೆಯೇ ಮೇ ೧೮ರ ವರೆಗೆ ಇರುವ ಸಪ್ತಮ ರಾಹು ಪರಸ್ಪರರಲ್ಲಿ ಸಂಶಯಪಿಶಾಚಿಯ ಭಾವನೆಯನ್ನು ಉಂಟುಮಾಡುವನು. ಆದರೂ ಅಂತಃಸ್ಥ ಸಹಾನುಭೂತಿಗೆ ಸ್ವಲ್ಪವೂ ವ್ಯತ್ಯಾಸಬರುವದಿಲ್ಲ. ಅವಳ ಆಯು-ರಾರೋಗ್ಯದ ಬಗೆಗೆ ಮಾತ್ರ ಹದಿನೆಂಟು ಸಾವಿರ ರಾಹು ಜಪ ಮತ್ತು ಹತ್ತು ಸಾವಿರ ಮಂಗಳ ಜಪ ಮಾಡಬೇಕಲ್ಲದೆ ಹನ್ನೊಂದು ಸಾವಿರ ಮಹಾಮೃ-ತ್ಯುಂಜಯ ಜಪವನ್ನೂ ಅವಶ್ಯವಾಗಿ ಮಾಡಬೇಕು. ಅಂದರೆ ಕ್ಲೇಶ ಪರಿಹಾರ ನಿಶ್ಚಿತವಾಗಿ ಆಗುವದು ಮತ್ತು ಅವಳ ಆಯುಷ್ಯವೂ ಹೆಚ್ಚುವದು.

ಈಗ ಅವಿವಾಹಿತರಿದ್ದು ಈ ವರ್ಷ ವಿವಾಹ ಮಾಡುವದಿದ್ದರೆ ಇಡಿ ವರ್ಷ ಬಾಶಿಂಗಬಲವಿದೆ ಇದು ನಿಜ. ಆದರೂ ಆದರಲ್ಲಿ ಮಾರ್ಚ ೭ಕ್ಕೆ ತೃತೀಯ ಗುರು ಬಂದಬಳಿಕ ಹೆಚ್ಚು ಬಲ ಬರುವದು. ಅರ್ಥಾತ್ ಅನಂತರ ಮಾಡುವ ಪ್ರಯತ್ನಗಳು ಹೆಚ್ಚು ಫಲಕಾರಿಯಾಗುವವು. ವಧೂ ಇಲ್ಲವೆ ವರ ಪೂರ್ಣ ಅನುರೂಪ ಇರುವರು. ಆದರೆ ತನ್ನ ಮೇಲೆ ಹೆಚ್ಚು ವರ್ಚಸ್ಸು ಕೂಡಿಸಲಾಗುತ್ತಿದೆಂದು ವಧೂವರರಿಬ್ಬರೂ ಭಾವಿಸುವರು. ಈ ಬಗೆಯ ತಿಳಿವಳಿಕೆ ಬಹು ದಿನ ಉಳಿಯುವದಿಲ್ಲ.

ಮಕ್ಕಳ ಮದಿವೆ ಮಾಡುವದಿದ್ದರೆ ಅದಕ್ಕೂ ಇಡಿ ವರ್ಷ ಗುರುಬಲ ಇರುವದರಿಂದ ಅನಾಯಾಸವಾಗಿ ಕೂಡಿಬರುವದು ಮತ್ತು ಸಮೀಪದ ಸ್ಥಳದಲ್ಲಿಯೇ ಕೂಡುವದು. ಈ ಮಾತನ್ನು ಪದರಿನಲ್ಲಿ ಗಂಟುಹಾಕಿಕೊಂಡು ಕಾರ್ಯಪ್ರವೃತ್ತರಾಗಿರಿ. ಬೀಗರು ಕೂಡ ನಿಮಕ್ಕಿಂತ ಒಂದು ಗುಂಜಿ ತೂಕ ಹೆಚ್ಚಿನವರೇ ಇರುವರು. ಅದರಂತೆಯೇ ಸೊಸೆ ಇಲ್ಲವೆ ಅಳಿಯ ಎಲ್ಲರಿಗೂ ಆಕರ್ಷಣೀಯ ಗುಣಸಂಪನ್ನರಾಗಿರುವರು. ಮತ್ತು ವಿವಾಹೋತ್ತರ ಬೇಗನೆ ನಿಮ್ಮೊಡನೆ ಸಮರಸರಾಗಿ ಬಿಡುವರು. ಅದರಂತೆಯೇ ಮಕ್ಕಳ ಉತ್ಕರ್ಷಕ್ಕೆ ಈ ವರ್ಷ ಬಹಳ ಉತ್ಕರ್ಷದ್ದಾಗಿದೆ. ತೃತೀಯ ಗುರುವಿರುವಾಗ ಮತ್ತು ವಿಶೇಷವಾಗಿ ಜುಲೈ ೧೮ ರಿಂದ ಸಪ್ಟಂಬರ ೨ ಮತ್ತು ಅಕ್ಟೋಬರ ೧೬ರಿಂದ ನವಂಬರ ೧೬ ಈ ಅವಧಿಯಲ್ಲಿ ಅವರು ಉತ್ಕರ್ಷ ಹೊಂದುವರು. ಮಕ್ಕಳೆಲ್ಲ ನಿಮ್ಮೊಡನೆ ವಿನಯದಿಂದ ನಡೆದುಕೊಳ್ಳುವರು. ಆದರೆ ಅವರಲ್ಲಿ ಒಬ್ಬ ಮಗಳು ಮತ್ತು ಒಬ್ಬ ಮಗ ವಿದೇಶಕ್ಕೆ ಹೋಗುವದರಿಂದ ವಿರಹವ್ಯಥೆ ಮನಸ್ಸನ್ನು ನೋಯಿಸುವದು.

ಧಂದೆ ಕೂಲಿಯವರಿಗೆ ಈ ವರ್ಷ ಸಾಡೇಸಾತಿಯ ಮೂಲಕವೇ ಹೆಚ್ಚು ಲಾಭದ ವಿಸ್ತಾರದ ಮತ್ತು ಲೌಕಿಕವನ್ನು ಬೆಳೆಸುವಂತಹದಾಗಿದೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಿ. ತೃತೀಯಗುರು ಬಂದ ಬಳಿಕಂತೂ ಧಂದೆ ಮಾಡುವವರಿಗೆ ಮಹಾಪೂರ ಬಂದಂತಾಗುವದು. ಯಾವದೇ ವ್ಯವಸಾಯವನ್ನು ಮಾಡುತಿದ್ದರೂ ಅದು ಲಾಭದಾಯಕವೆನಿಸುವದು. ಬಹಳ ದಿನಗಳಿಂದ ಮೂಲೆಗುಂಪಾಗಿ ಬಿದ್ದ ವ್ಯವಹಾರ ಕೂಡ ಅಲ್ಪಾವಧಿಯಲ್ಲಿ ಬಗೆಹರಿದು ಬಿಡುವದು ಮತ್ತು ಬಹಳದಿನ ಹಾಗೆಯೇ ಬಿದ್ದ ಸರಕಾರಿ ಕೆಲಸಗಳು ಕೂಡ ಅಕಲ್ಪಿತ ಮತ್ತು ವಿಲಕ್ಷಣ ಯೋಗಾಯೋಗದಿಂದ ಬಹಳ ಮಟ್ಟಿಗೆ ಯಶಸ್ವಿಯಾಗಿ ಪರಿಹೃತವಾಗುವವು. ನೋಕರರಿಗಂತೂ ದ್ವಿತೀಯ ಗುರು ಇರುವಾಗ ಮೇಲಿನ ಗ್ರೇಡ ಸಿಕ್ಕುವದು. ನಿಮ್ಮ ರೀತಿ ನಡೆವಳಿಕೆಗಳಿಗೆ ಹೊಂದದಿದ್ದ ಸ್ಥಾನಗಳಿಗೆ ನಿಮ್ಮ ಬದಲಿಯಾದರೂ ಅಲ್ಪಾವಧಿಯಲ್ಲಿಯೇ ನೀವು ಅದನ್ನೆಲ್ಲ ಸರಿಪಡಿಸಿಕೊಂಡು ಅಲ್ಲಿನ ವಾತಾವರಣಕ್ಕೆ ಹೊಂದಿಕೊಂಡು ನಡೆಯಹತ್ತುವಿರಿ. ಮೇಲಿನವರ ಮರ್ಜಿ ನಿಶ್ಚಲವಾಗಿದ್ದಂತೆ, ಕೈಕೆಳಗಿನವರೂ ಅತ್ಯಂತ ನಿಷ್ಠರಾಗಿ ಉಳಿಯುವರು. ಅನೇಕರಿಗೆ ದ್ವಿತೀಯ ಗುರುವಿರುವಾಗ ಮತ್ತು ಹಲವರಿಗೆ ಜುಲೈ ೧೮ರ ನಂತರ ಅವರವರ ಯೋಗ್ಯತೆಗೆ ತಕ್ಕಂತೆ ಸ್ಥಾವರ ಜಂಗಮ ಸಂಗ್ರಹ ಮಾಡಲು ಅವಕಾಶ ದೊರೆಯುವದು. ದ್ವಿತೀಯ ಗುರುವಿರುವಾಗ ನಿಮಗೆ ಪ್ರಿಯರಾದವರಲ್ಲಿ ಅನೇಕರ ಮಂಗಲವಾಗುವದು. ಅದರಂತೆಯೇ ಈ ಗುರುವಿರುವಾಗ ಶುಭ ಮತ್ತು ಭಾವೀಸೂಚಕ ಸ್ವಪ್ನಗಳು ಮೇಲಿಂದ ಮೇಲೆ ಬೀಳುವವು. ತೃತೀಯ ಗುರು ಬಂದ ಬಳಿಕ ಬಹಳ ದೂರದ ಯಾತ್ರೆಯೊಂದನ್ನು ಮಾಡುವಿರಿ. ಇಲ್ಲವೆ ಯಾತ್ರೆ ಹೋದವರ ಸಹವಾಸ ದೊರೆಯುವದು. ಅದರಂತೆಯೇ ನೀವು ಬಯಸುತಿರುವ ಪೂಜ್ಯ ವ್ಯಕ್ತಿಗಳ ಸಹವಾಸವೂ ಉಂಟಾಗುವದು. ಅನೇಕ ಸಲ ಈ ಬಗೆಯ ಯೋಗ ಲಭಿಸುವದು. ಈ ರಾಶಿಯವರಾರಾದರೂ ಸಾಮಾಜಿಕ ಕಾರ್ಯಕರ್ತರಾಗಿದ್ದರೆ ಅವರಿಗೆ ಈ ವರ್ಷ ಬಹಳ ಉನ್ನತಿ ಕಾರಕವಾಗಿದೆ. ಮತ್ತು ಯಾವದೇ ಬಗೆಯ ಚುನಾವಣಿಯಲ್ಲಿ ಹೋರಾಡಿದರೆ ನಿಶ್ಚಯವಾಗಿ ಯಶಸ್ಸು ದೊರೆಯುವದು. ಮಿತ್ರರಲ್ಲಿ ಕೆಲವರಿಗೆ ಮೇ ೨೩ ಕ್ಕಿಂತ ಮೊದಲು ಭಯಂಕರ ಕ್ಲೇಶದ ಇಲ್ಲವೆ ಗಂಡಾಂತರದ ಸಂಭವವಿದ್ದರೂ ಕೆಲವರಿಗೆ ಮೇ ೨೩ ರಿಂದ ಸಪ್ಟಂಬರ ೨ ಮತ್ತು ಅಕ್ಟೋಬರ ೧೬ ರಿಂದ ನವಂಬರ ೧೬ ಈ ಅವಧಿಯಲ್ಲಿ ಉತ್ತಮ ಸಹಾಯ ಮತ್ತು ಸುಖ ಲಬ್ಧವಾಗುವದು. ಎಲ್ಲ ಬಗೆಯ ಲೇಖನ ಕೆಲಸಗಳು ಮನಸ್ಸಿನಂತೆಯೇ ಆಗುವವು. ಅವುಗಳಲ್ಲಿ ಎರಡು ಅಥವಾ ಮೂರು ಭಾವೀ ಉತ್ಕರ್ಷಕ್ಕೆ ಬಹಳ ಪೋಷಕವೆನಿಸುವವು. ನಿಮಗೆ ಪೈ ಖರ್ಚ ಬೀಳದೆ ಒಂದೆರಡು ಸಲ ದೂರದ ಪ್ರವಾಸವನ್ನೂ ಮಾಡುವಿರಿ ಮತ್ತು ಪ್ರತ್ಯಕ್ಷ ಭೆಟ್ಟಿಯಾದಾಗ ನಿಮ್ಮ ವರ್ಚಸ್ಸನ್ನು ಕೂಡಿಸುವಿರಿ.

ದಾವೆ ಫಿರ್ಯಾದಿ ಮತ್ತು ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಮೇ ೧೮ ರ ವರೆಗೆ ಪ್ರತಿಪಕ್ಷಿಗಳ ಜೋರು ಬಹಳ ಉಳಿಯುವುದು. ಅನಂತರ ಒಮ್ಮೆಲೆ ತಕ್ಕಡಿ ಬದಲಾಗಿ ಅವರಿಗೆ ಎಲ್ಲಿ ಹೋಗಲಿ ಎಂದೆನಿಸಿ ಬಹಳ ಮಟ್ಟಿಗೆ ಹಿಮ್ಮೆಟ್ಟಬೇಕಾಗುವುದು. ಅಂತೆಯೇ ನೀವು ಎಣಿಸಿದ್ದಕ್ಕಿಂತ ಹೆಚ್ಚು ಯಶಸ್ಸು ನಿಮಗೆ ಸಿಕ್ಕುವುದು. ಇದು ನಿಶ್ಚಿತವೆಂದು ತಿಳಿದುಕೊಳ್ಳಿರಿ. ನಿಮ್ಮ ವಿರುದ್ಧ ಅವರು ಮಾಡಿದ್ದೆಲ್ಲ ನಿಮಗೆ ಮುಂದೆ ಸುಖಕಾರಕ ಮತ್ತು ಭಾಗ್ಯದಾಯಕವಾಗಿ ಪರಿಣಮಿಸುವವು. ಇದು ನಿಮ್ಮ ನಿದರ್ಶನಕ್ಕೆ ಬರುವದು.

ಈ ರಾಶಿಯವರು ಸಪ್ಟಂಬರ ೨ ರೊಳಗಾಗಿ ಹಡೆದರೆ ಅವರಿಗೆ ಸ್ವಲ್ಪವೂ ತೊಂದರೆಯಾಗುವುದಿಲ್ಲ. ಅರ್ಥಾತ್ ಅನಂತರ ಹಡೆಯುವವರಿಗೆ ಸ್ವಲ್ಪ ತೊಂದರೆಯೆನಿಸುವದು. ಅದರಂತೆಯೇ ದ್ವಿತೀಯ ಗುರುವಿದ್ದಾಗ ಹಡೆದರೆ ಗಂಡು ಹುಟ್ಟುವದು. ತೃತೀಯ ಗುರು ಬಂದ ಬಳಿಕ ಹಡೆದರೆ ಹೆಣ್ಣು ಹುಟ್ಟುವದು ಎಂದು ತಿಳಿದುಕೊಂಡು ನಡೆಯಬೇಕು.

ಡಿಸೆಂಬರ ೨೬ ರಿಂದ ಮಾರ್ಚ ೧೭ ಮತ್ತು ಮೇ ೧೨ ರಿಂದ ಜೂನ ೬ ರ ಅವಧಿಯಲ್ಲಿ ಯಾವ ವಿದ್ಯಾರ್ಥಿಗಳ ಪರೀಕ್ಷೆಯಾಗುವದೋ ಅವರಿಗೆ ಯಶಸ್ಸು ಎಷ್ಟರ ಮಟ್ಟಿಗೆ ದೊರೆಯುವದೆಂಬುದು ಸಂಶಯವಿದ್ದರೂ ಉಳಿದ ವೇಳೆಯಲ್ಲಿ ಪರೀಕ್ಷೆ ಕಟ್ಟಿದವರು ನಿಶ್ಚಿತವಾಗಿ ಯಶಸ್ಸು ಪಡೆಯುವರು.

## ಕುಂಭ

ಒಟ್ಟಾರೆ ಈ ರಾಶಿಯವರು ಸಾಡೇಸಾತಿಯನ್ನು ಈ ವರ್ಷ ಅನುಭೋಗಿಸುತ್ತಿದ್ದರೂ ಗುರು, ರಾಹು, ಕೇತು, ಇಡೀ ವರ್ಷ ಬಹಳ ಅನುಕೂಲರಾಗಿರುವುದರಿಂದ ದ್ರವ್ಯಲಾಭ ಬಹಳಷ್ಟು ಆಗುವದು. ಆದರೆ ಅವಾಂತರ ವಿಷಯಗಳಲ್ಲಿ ಕೂಡ ಬೀಳುತ್ತ ಏಳುತ್ತ ಅನುಕೂಲ ಸ್ಥಿತಿಯನ್ನು ಹೊಂದುವಿರಿ ಎಂಬುದನ್ನು ನಿಶ್ಚಿತವಾಗಿ ತಿಳಿದುಕೊಂಡು ಮುಂದೆ ನಡೆಯಿರಿ.

ಈ ರಾಶಿಯವರಿಗೆ ಸಾಡೇಸಾತಿ ಇದೇ ತಾನೆ ಒಂದೂವರೆ ವರ್ಷಗಳಿಂದ ಪ್ರಾರಂಭವಾಗಿದ್ದು ಕಳೆದ ವರ್ಷದಂತೆ ಈ ವರ್ಷವೂ ಸಾಡೇಸಾತಿಯ ಕರ್ತಾ ಶನಿಯು ವ್ಯಯಸ್ಥಾನದಲ್ಲಿ ಅಂದರೆ ದ್ವಾದಶದಲ್ಲಿರುವದರಿಂದ ಆರೋಗ್ಯದ ತಕರಾರು ಸದಾ ಇದ್ದದ್ದೇ. ಆದರೂ ಇಡೀವರ್ಷ ಗುರು

ಅನುಕೂಲನಾಗಿರುವದರಿಂದ ಅಂದರೆ ಮಾರ್ಚ ೭ ರ ವರೆಗೆ ಪ್ರಥಮ ಗುರು ಅನಂತರ ದ್ವಿತೀಯ ಗುರು ಹೀಗೆ ಶುಭ ಫಲದಾಯಕನಾಗಿರುವದರಿಂದ ಹಾಸಿಗೆ ಹಿಡಿದು ಮಲಗುವ ಅಂಜಿಕೆ ನಿಮಗೆ ಸ್ವಲ್ಪೂ ಇಲ್ಲ. ಆದರೆ ಜನ್ಮಕುಂಡಲಿಯಲ್ಲಿ ಲಗ್ನ ಇಲ್ಲವೆ ರಾಶಿಯ ಅಷ್ಟಮದಲ್ಲಿ ಶನಿ ಇರುವವರೆಗೆ ಮಾತ್ರ ಜುಲೈ ೧೮ ರಿಂದ ಸಪ್ಟಂಬರ ೨ ರ ಅವಧಿಯಲ್ಲಿ ಆ ಬಗೆಯ ಅಂಜಿಕೆ ಅಲ್ಪಸ್ವಲ್ಪ ಇರುವದು ಬಹುಶಃ ಕೆಮ್ಮಿನ ಅಥವಾ ಮೂತ್ರಕೃಚ್ಛ್ರದ ವಿಕಾರವಾಗುವದು. ಆದರೆ ಶನಿಯೆ ಈ ರಾಶಿಯ ಸ್ವಾಮಿಯಾಗಿರುವದರಿಂದ ಎಷ್ಟೇ ತ್ರಾಸವಾದರೂ ಜೀವಕ್ಕೆ ಅಂಜಿಕೆಯಿಲ್ಲ. ಉಳಿದ ವಿಷಯಗಳಲ್ಲಿ ಅವಶ್ಯಕ ದೇಹಸುಖ ಪ್ರಥಮ ಗುರುವಿರುವಾಗ ಹೆಚ್ಚು ಸಿಕ್ಕುವದು, ದ್ವಿತೀಯ ಗುರು ಬಂದಾಗ ಮಾನಸಿಕ ಸುಖ ಹೆಚ್ಚಿಗೆ ದೊರೆಯುವದು.

ಸ್ತ್ರೀಸುಖಕ್ಕೆ ಈ ವರ್ಷದಲ್ಲಿ ದ್ವಿತೀಯ ಗುರು ಇದ್ದಾಗಿನಕಿಂತ ಪ್ರಥಮ ಗುರು ಇದ್ದಾಗಲೆ ಹೆಚ್ಚು ಅನುಕೂಲವಿರುವದು. ಅನಂತರ ದ್ವಿತೀಯ ಗುರು ಬಂದ ಬಳಿಕವೂ ಅವಳ ಆರೋಗ್ಯ ಉತ್ತಮವೇ ಉಳಿಯುವದು. ಆದರೆ ಉಭಯತರಲ್ಲಿ ತೀವ್ರ ಮತಭೇದವಾಗಹತ್ತುವದರಿಂದ ಮೇಲಿಂದ ಮೇಲೆ ದುಸಮುಸಿ ನಡೆಯುವದು ಅಷ್ಟೆ. ಅದರಂತೆ ಅವಿವಾಹಿತರ ಮದುವೆ ಮಾಡುವದಿದ್ದರೆ ಅದಕ್ಕೂ ಈ ವರ್ಷವಿಡಿ ಒಳ್ಳೆ ಬಾಶಿಂಗಬಲ ಇರುವದು. ಇದರಲ್ಲಿ ಅಂತರವಿಷ್ಟೆ. ಪ್ರಥಮ ಗುರು ವಿರುವಾಗ ಲಗ್ನವೇನೊ ಕೂಡಲೆ ಗೊತ್ತಾಗುವದು. ಆದರೆ ಕೆಲಸ ಮಾತ್ರ ಬಹಳಷ್ಟು ಮನಸ್ಸಿನಂತೆ ಆಗುವದಿಲ್ಲ. ಆದರೆ ದ್ವಿತೀಯ ಗುರು ಬಂದ ಬಳಿಕ ಇದರ ವಿರುದ್ಧ ಅನುಭವ ಬರುವದು. ಅಂದರೆ ಲಗ್ನ ಗೊತ್ತಾಗುವದರಲ್ಲಿ ಅನೇಕ ಅಡಚಣಿಗಳು ಬಂದರೂ ಒಮ್ಮೆ ಗೊತ್ತಾದ ಬಳಿಕ ಬೇಗನೆ ಕಾರ್ಯವು ಒಳ್ಳೆ ವೈಭವದಿಂದ ಪೂರ್ಣವಾಗಿ ಸಮಾಧಾನಕರ ರೀತಿಯಲ್ಲಿ ಸಾಂಗವಾಗುವದು. ಮೊದಲು ಕೆಲ ತಿಂಗಳು ವಧೂವರರು ಪರಸ್ಪರ ಅಷ್ಟೊಂದು ಸಂತುಷ್ಟರಿರುವದಿಲ್ಲ. ಆದರೆ ಸಪ್ಟಂಬರ ೨ ರಿಂದ ಮುಂದೆ ಅವರು ಬಹಳ ಸಂತುಷ್ಟರಿರುವರು.

ಅದರಂತೆಯೇ ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ದ್ವಿತೀಯ ಗುರು ಬಂದಾಗಿನಕ್ಕಿಂತ ಪ್ರಥಮಗುರುವಿದ್ದಾಗಲೆ ಹೆಚ್ಚು ಅನುಕೂಲ. ಏಕೆಂದರೆ ಆಗ ಅಲ್ಪಾಯಾಸದಿಂದ ಮತ್ತು ಅಲ್ಪ ವೆಚ್ಚದಲ್ಲಿ ಸಮಾರಂಭ ಸಾಂಗವಾಗುವದು. ದ್ವಿತೀಯ ಗುರು ಬಂದ ಬಳಿಕ ಮಾತ್ರ ನಿಮ್ಮ ವೆಚ್ಚ ಹೆಚ್ಚುವುದು. ಮದುಮಕ್ಕಳ ವಿಚಾರಲಹರಿ ಗಗನಕ್ಕೇರಿ ಬಹಳ ತೊಂದರೆ ಮತ್ತು ಗೊಂದಲವೇಳುವುದು. ಆದರೆ ದ್ವಿತೀಯ ಗುರು ಸ್ವರಾಶಿಯಲ್ಲಿಯೇ ಇದ್ದುದರಿಂದ ದುರ್ಲೌಕಿಕ ಹೆಚ್ಚುವುದಿಲ್ಲ. ಯಾವುದೇ ಬಗೆಯ ಮೋಸವೂ ಆಗುವುದಿಲ್ಲ. ಪ್ರಥಮಗುರುವಿರುವಾಗ ಲಗ್ನವಾದರೆ ಸೊಸೆ ಇಲ್ಲವೆ ಅಳಿಯ ಎಷ್ಟು ಒಪ್ಪಿಗೆಯಾಗುವರೋ ಅದಕ್ಕಿಂತ ಹೆಚ್ಚು ದ್ವಿತೀಯಗುರುವಿದ್ದಾಗ ಒಪ್ಪಿಗೆಯಾಗುವರು. ಮಕ್ಕಳ ಉತ್ಕರ್ಷಕ್ಕೆ ಈ ವರ್ಷ ದ್ವಿತೀಯ ಗುರುವಿರುವಾಗ ಹೆಚ್ಚು ಅನುಕೂಲ. ಅದರಂತೆಯೇ ಮೇ ೧೮ ರಿಂದ ಬರುವ ಪಂಚಮ ರಾಹುವಿನಿಂದ ಮಕ್ಕಳಲ್ಲಿ ಒಬ್ಬರ ಉತ್ಕರ್ಷ ಬಹಳವಾಗುವದು. ಆದರೆ ಈ ರಾಹುವಿನಿಂದ ಒಬ್ಬಿಬ್ಬರಲ್ಲಿ ಚೆನ್ನಾಗಿ ಕೂಡಿ ನಡೆಯುವದಿಲ್ಲ.

ಧಂದೆ ಕೂಲಿಯವರಿಗೆ ಈ ವರ್ಷ ಗುರು ಭ್ರಮಣದಿಂದ ಬಹಳ ಅನುಕೂಲ. ಏಕೆಂದರೆ ಗುರುವೇ ಈ ರಾಶಿಯ ಲಾಭೇಶ ಮತ್ತು ಧನೇಶನಾಗಿರುವನು. ಅಲ್ಲದೆ ವರ್ಷಾರಂಭದಲ್ಲಿ ಅಷ್ಟಮ ಅಂದರೆ ಗುಪ್ತಲಾಭವನ್ನು ಕೊಡುವಂತಹ ಉಚ್ಚವಾದ ಕನ್ಯಾರಾಶಿಯಲ್ಲಿ ಬುಧ ಇರುವದರಿಂದ ಒಂದೆರಡು ಸಲವಾದರೂ ಅಕಸ್ಮಾತ್ ದ್ರವ್ಯಲಾಭವಾಗುವದು ಮತ್ತು ಈ ಬಗೆಯ ಯೋಗ ಬಹುಶಃ ಡಿಸೆಂಬರ ೮ ರಿಂದ ೨೮ ಇಲ್ಲವೆ ಜೂನ ೫ ರಿಂದ ಜುಲೈ ೧೫ ಅಥವಾ ಅಕ್ಟೋಬರ ೩ ರಿಂದ ೨೬ ಈ ಅವಧಿಯಲ್ಲಿ ಬರುವದು. ಮೇ ೧೮ ರಿಂದ ಬರುವ ಏಕಾದಶ ಕೇತು ತನ್ನ ಉಚ್ಚರಾಶಿಯಲ್ಲಿರುವದರಿಂದ ಧಂದೆ ಮಾಡುವವರಿಗೆ ವಿಪುಲ ಲಾಭವನ್ನುಂಟುಮಾಡುವನು. ಧಂದೆ ಹೆಚ್ಚಿಗೆ ಬೆಳೆದು ಗಿರಾಕಿಗಳೂ ಬಹಳಷ್ಟು ಹೆಚ್ಚುವರು. ಮತ್ತು ಧಂದೆಯಲ್ಲಿಯ ಪ್ರಾವೀಣ್ಯಕ್ಕಾಗಿ ದೊಡ್ಡ ದೊಡ್ಡವರಿಂದ ಪ್ರಶಂಸೋದ್ಗಾರಗಳನ್ನು ಕೇಳುವಿರಿ. ನೋಕರರಿದ್ದರೆ ಮೇ ೨೩ ರ ವರೆಗೆ ಅವರಿಗೆ ಕೆಲಸದ ಒತ್ತಡಕ್ಕಾಗಿ ಮತ್ತು ವರಿಷ್ಠರ ಎಳೆದಾಟದಿಂದ ಬಹಳ ತೊಂದರೆಯನ್ನನುಭೋಗಿಸಬೇಕಾಗುವದು. ಆದರೆ ಅನಂತರ ಮಾತ್ರ ಬೇಗನೆ ನೀವು ಇಲ್ಲವೆ ಅವರು ಬದಲಿಯಾಗಿ ಹೋಗುವದರಿಂದ ಕೆಲಸವೂ ಬಹಳ ಹಗುರಾಗಹತ್ತುವದು. ಇದರಿಂದ ಸಮಾಧಾನ ಹೆಚ್ಚುವದು. ಮತ್ತು ಅನೇಕರಿಗೆ ಅಕ್ಟೋಬರ ೧೬ ರ ನಂತರ ಮೇಲಿನ ಗ್ರೇಡೂ ಸಿಕ್ಕುವದು. ಆದರೆ ಈ ವರ್ಷ ಎಷ್ಟೇ ಹಣ ದೊರೆತರೂ ಸಾಡೇಸಾತಿಯ ಮೂಲಕ ಮತ್ತು ಅದರ ಕರ್ತನಾದ ಶನಿಯು ವ್ಯಯಸ್ಥಾನದಲ್ಲಿರುವದರಿಂದ ವೆಚ್ಚ ಬಹಳ ಹೆಚ್ಚುವದು. ಮತ್ತು ಹಣಸಂಗ್ರಹವಿಲ್ಲದವರಿಗೆ ಸಾಲಮಾಡುವ ಸರತಿಯೂ ಬರುವದು. ಆದರೆ ಶನಿಯು ಸ್ವಕ್ಷೇತ್ರದಲ್ಲಿಯೇ ಇರುವದರಿಂದ ವೆಚ್ಚವು ಅನವಶ್ಯಕವೆನಿಸುವದಿಲ್ಲ. ಮತ್ತು ಹಣ ಮುಳುಗಿ ಹೋಗುವ ಕಾರ್ಯಗಳಲ್ಲಿಯೂ ಆಗುವದಿಲ್ಲ. ಯಾವ ಉದ್ದೇಶದಿಂದ ಹಣ ವೆಚ್ಚಮಾಡುವಿರೋ ಆ ಉದ್ದೇಶ ಪೂರ್ಣವಾಗಿ ಸಫಲವಾಗುವದು. ಆದರೂ ಯಾರ ಕುಂಡಲಿಯಲ್ಲಿ ಶನಿಮಂಗಳ ಸಮಸಪ್ತಮ ಪ್ರತಿದೃಷ್ಟಿಯೋಗ ಆಗಿರುವದೋ ಅಂಥವರ ಮನೆಯಲ್ಲಿ ಡಿಶಂಬರ ೨೩ ರಿಂದ ಮಾರ್ಚ ೧೭ ರ ಅವಧಿಯಲ್ಲಿ ಯಾವದೊಂದು ಸಣ್ಣದೊಡ್ಡ ಕಳವಾಗುವ ಸಂಭವವಿದೆ. ಅನೇಕರ ಮಾತುಲ ವರ್ಗಕ್ಕೆ ಈ ಸಾರಿ ಬಹಳ ಕ್ಲೇಶಕಾರಕವಿದೆ. ಪ್ರಥಮ ಗುರುವಿರುವಾಗ ಯಾವದೊಂದು ದೇವತಾರ್ಚನೆಯ ಸತ್ಕೃತ್ಯ ಘಟಿಸುವದು. ಯಾತ್ರೆ ಮಾಡುವ ಯೋಗ ಸಹಸಾ ಇರುವದಿಲ್ಲ. ಆದರೆ ಲಗ್ನ ಮುಂಜಿವೆಗಳಂಥ ಧಾರ್ಮಿಕ ಕೃತ್ಯಗಳು ನಡೆಯುವವು. ಕೈಕೆಳಗಿನ ನವಕರ ಚಾಕರರು ವ್ಯವಸ್ಥಿತ ರೀತಿಯಿಂದ ನಡೆದುಕೊಳ್ಳುವರು. ಮತ್ತು ನಿಮ್ಮ ಕಲ್ಯಾಣಕ್ಕಾಗಿ ಬಹಳಮಟ್ಟಿಗೆ ಪ್ರಯತ್ನಿಸುವರು. ಕುಟುಂಬದಲ್ಲಿಯ ಜನರಿಗಿಂತ ಉಳಿದ ಆಪ್ತರಿಂದಲೆ ಹೆಚ್ಚು ಸುಖ ದೊರೆಯಹತ್ತುವದು. ಆದರೆ ಈ ವರ್ಷ ಯಾರಿಗಾದರೂ ಜಾಮೀನಾದರೆ ಬಹಳಷ್ಟು ತೊಂದರೆ ಅನುಭೋಗಿಸಬೇಕಾಗುವದು, ಕೊನೆಗೆ ಒಳ್ಳೇ ಹೊಡೆತವೂ ಕೊಡುವದು.

ದಾವೆ ಫಿರ್ಯಾದಿ ಖಾಸಗಿ ಸ್ಪರ್ಧೆಗಳ ವಿಷಯದಲ್ಲಿ ವೆಚ್ಚ ಮತ್ತು ತೊಂದರೆ ಬಹಳ ಅನುಭವಿಸಬೇಕಾದರೂ ಮೇ ೧೮ ಕ್ಕಿಂತ ಮೊದಲು ಯಾವ ಖಟ್ಲೆಯ ತೀರ್ಪು ಆಗುವದೊ ಅದರಲ್ಲಿ ಎಲ್ಲವೂ ಯಶಸ್ವಿಯಾಗುವದು. ಪ್ರತಿಪಕ್ಷಿಗಳು ಪೂರ್ಣ ಪರಾಜಯಹೊಂದುವರು ಮತ್ತು ಅನಂತರ ತೀರ್ಪು ಆದುದರಲ್ಲಿಯೂ ನಿಮಗೆ ಯಶಸ್ಸು ಸಿಕ್ಕುವದು ನಿಜ. ಆದರೆ ಅದು ಅಷ್ಟೊಂದು ಸ್ಥಿರ ಉಳಿಯುವದಿಲ್ಲ. ಮೇ ೧೮ ಕ್ಕಿಂತ ಮೊದಲು ಶತ್ರುಗಳಲ್ಲಿ ಕೆಲವರು ಸ್ವರ್ಗಸ್ಥರಾಗುವ ಸಂಭವವವೂ ಇದೆ.

ಈ ರಾಶಿಯ ಸ್ತ್ರೀಯರು ಮಾರ್ಚ ೭ ರೊಳಗಾಗಿ ಹಡೆದರೆ ಕಷ್ಟವೆನಿಸುವದಿಲ್ಲ. ಅಲ್ಲದೆ ಗಂಡು ಹುಟ್ಟಿದ ಸಂತೋಷವೂ ಅವರಿಗೆ ಲಭಿಸುವದು. ಅನಂತರ ಮೇ ೧೮ ರೊಳಗೆ ಹಡೆದವರಿಗೂ ಕಷ್ಟವಾಗುವದಿಲ್ಲ. ಆದರೆ ಅವರಿಗೆ ಬಹುಶಃ ಹೆಣ್ಣು ಹುಟ್ಟುವದು. ಅನಂತರ ಹಡೆಯುವವರಿಗೆ ಅಲ್ಪ ಸ್ವಲ್ಪಕಷ್ಟವೆನಿಸುವದು, ಅಲ್ಲದೆ ಹುಟ್ಟುವ ಕೂಸು ಹೆಣ್ಣಿದ್ದರೆ ಮಾತ್ರ ಹೆಚ್ಚು ಆಯುಸ್ಸುಳ್ಳದ್ದಿರುವದೆಂದು ತಿಳಿಯತಕ್ಕದ್ದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ ೭ ಕ್ಕಿಂತ ಮೊದಲು ಆಗುವದೊ ಅವರು ಯಶಸ್ವಿಯಾಗುವರಿಷ್ಟೇ ಅಲ್ಲ ಬಹುಶಃ ವರ್ಗವನ್ನು ಸಂಪಾದಿಸುವರು. ಅನಂತರ ಪರೀಕ್ಷೆಯಾದವರು ಪಾಸಾಗುವಷ್ಟು ಗುಣಗಳನ್ನು ಮಾತ್ರ ಪಡೆಯುವರು ಮತ್ತು ಮುಂದಿನ ವರ್ಗದಲ್ಲಿ ಕಾಲಿಡುವರು.

# ಮೀನ

ಈ ವರ್ಷ ಈ ರಾಶಿಯವರಿಗೆ ಮೊದಲಿನ ನಾಲ್ಕು ತಿಂಗಳು ಮಧ್ಯಮ ಯಶಾಪಯಶಸ್ಸಿನದು. ಅನಂತರದ ಎಲ್ಲ ತಿಂಗಳುಗಳು ಎಲ್ಲ ವಿಷಯುಗಳಲ್ಲಿ ಸುಖ ಮತ್ತು ಯಶಸ್ಸಿನ ಶಿಖರವನ್ನು ಮುಟ್ಟಿಸುವಂತಹವು ಎಂಬುದನ್ನು ನಿಶ್ಚಿತವಾಗಿ ತಿಳಿದುಕೊಂಡು ನಡೆಯಬೇಕು.

ಈ ರಾಶಿಯು ಜನರ ಆರೋಗ್ಯದ ಬಗ್ಗೆ ಯಾವಾಗಾದರೊಮ್ಮೆ ತಕರಾರು ಇದ್ದದ್ದೇ. ಏಕೆಂದರೆ ಮಾರ್ಚ ೭ ರ ವರೆಗೆ ಗುರು ದ್ವಾದಶದವನಾಗಿರುವದರಿಂದ ಹೀಗಾಗುವದು. ಆದರೆ ಮುಂದೆ ಪ್ರಥಮ ಗುರು ಸ್ವರಾಶಿಯಲ್ಲಿಯೇ ಬರುವದರಿಂದ ಒಳ್ಳೆ ನಿರೋಗಿಗಳಾಗುವಿರಿ ನೀವು. ಆದರೆ ಯಾರಿಗೆ ಮೂಲವ್ಯಾಧಿ ಇಲ್ಲವೆ ಮಧುಮೇಹವಿರುವದೊ ಅವರಿಗೆ ಸಪ್ಟಂಬರ ೨ ರಿಂದ ಅಕ್ಟೋಬರ ೧೬ ಈ ಅವಧಿಯಲ್ಲಿ ಸ್ವಲ್ಪ ಕ್ಲೇಶ ಎನಿಸಬಹುದು. ಉಳಿದ ಆವಶ್ಯಕ ವಿಷಯುಗಳಲ್ಲಿಯೂ ದ್ವಾದಶಗುರು ಇರುವಾಗ ದೇಹಸುಖ ಕಡಿಮೆ. ಪ್ರಥಮಗುರು ಬಂದಬಳಿಕ ಅದು ವಿಪುಲವಾಗಿ ದೊರೆಯುವದು.

ಹೆಂಡತಿಯ ಆರೋಗ್ಯ ಬಹುಶಃ ಎಲ್ಲ ಕಾಲದಲ್ಲಿಯೂ ನಿರೋಗಿ ಉಳಿಯುವದು. ಆದರೆ ಮಾರ್ಚ ೪ ರಿಂದ ೨೨ ಮತ್ತು ಅಗಷ್ಟ ೧ ರಿಂದ ೧೦ ಈ ಅವಧಿಯಲ್ಲಿ ಆರೋಗ್ಯ ಸ್ವಲ್ಪ ಕಿರಿಕಿರಿಯದೆನಿಸುವದು. ಉಭಯತರಲ್ಲಿ ಮೂಲತಃ ಪರಸ್ಪರ ಆದರ ಅಭಿಮಾನ ಮತ್ತು ಪ್ರೇಮ ಚನ್ನಾಗಿ ಉಳಿಯುವದು ಮತ್ತು ಪ್ರಥಮ ಗುರುವಿರುವಾಗ ಅದು ಪ್ರತ್ಯಕ್ಷವಾಗಿ ಕಂಡುಬರುವಂಥ ಘಟನೆಗಳು ಸಂಭವಿಸುವವು. ಅದರಂತೆಯೇ ಈ ವರ್ಷ ಮದುವೆ ಮಾಡಿಕೊಳ್ಳುವದಿದ್ದರೆ ದ್ವಾದಶಗುರುವಿರುವಾಗ ಆ ಬಗ್ಗೆ ಸ್ವಲ್ಪವೂ ವಿಚಾರ ಮಾಡಬಾರದು, ಮಾತುಕತೆ ನಡೆಸಬಾರದು. ಪ್ರಥಮ ಗುರು ಬಂದ ಬಳಿಕ ಮಾತ್ರ ಆಲಸ್ಯ ಮಾಡದೆಯೇ ಆ ಬಗ್ಗೆ ಪ್ರಯತ್ನಿಸಬೇಕು. ಅಂದರೆ ಸಮೀಪದ ಆಪ್ತರಲ್ಲಿಯೇ ಅನಾಯಾಸವಾಗಿ ಒದಗಿ ಬರುವದು ಮತ್ತು ಹಾ ಹಾ ಅನ್ನುವದರೊಳಗಾಗಿ ಲಗ್ನ ಕೂಡಿ ಬಂದು ಸಮಾರಂಭ ಸಾಂಗವಾಗಿಯೇ ಹೋಗುವದು. ವಧೂವರ ಪರಸ್ಪರ ಬಹಳ ಪ್ರೀತಿಮಾಡುವರು. ಆದರೆ ಜನರಿಗೆ ಮಾತ್ರ ಸ್ವಭಾವ, ಶಿಕ್ಷಣ, ರೂಪ ಇಲ್ಲವೆ ಪರಿಸ್ಥಿತಿ ಇವುಗಳಲ್ಲಿ ಯಾವದಾದರೊಂದರಲ್ಲಿ ವಿಸಂಗತಿ ಇಲ್ಲವೆ ಇಜ್ಜೋಡವಿದ್ದಂತೆನಿಸುವದು.

ಅದರಂತೆಯೇ ನಿಮ್ಮ ಮಕ್ಕಳಲ್ಲಿಯಾರದಾದರೂ ಮದುವೆ ಮಾಡುವದಿದ್ದರೆ ಅವರಲ್ಲಿ ಬಹುತರ ಜನರಿಗೆ ಮೇ ೨೩ ರ ನಂತರವೇ ಒಳ್ಳೆ ಬಾಶಿಂಗ ಬಲವಿದೆ. ಅದಕ್ಕಿಂತ ಮೊದಲು ಎಷ್ಟೊಂದು ಜೋರಿನಿಂದ ಪ್ರಯತ್ನ ಮಾಡಿದರೂ ಒಂದೊಮ್ಮೆ ಕೂಡಿ ಬಂದರೂ ಮೇಲೆ ಹೇಳಿದ ತಾರೀಕಿನ ನಂತರವೇ ಅದು ಒದಗಿಬರುವದೆಂಬುದು ಅನೇಕರ ಅನುಭವಕ್ಕೆ ಬರುವದು— ಸೊಸೆ ಇಲ್ಲವೆ ಅಳಿಯು ಸಾಮಾನ್ಯರಿರುವರೆಂದು ಹೇಳಬಹುದು. ನೀವು ಅವರನ್ನು ಮೆಚ್ಚಲೂಬಹುದು, ಮೆಚ್ಚಲಿಕ್ಕೂ ಇಲ್ಲ. ಮೇ ೧೮ ರ ವರೆಗೆ ಮಕ್ಕಳಲ್ಲಿ ಕೆಲವರೊಡನೆ ಕೂಡಿ ನಡೆಯುವದಿಲ್ಲ. ಡಿಸೆಂಬರ ೨೬ ರಿಂದ ಮಾರ್ಚ ೧೭ ರೊಳಗಾಗಿ ಒಬ್ಬನು ಬಹಳ ಕಾಯಿಲೆಬೀಳುವನು ಇಲ್ಲವೆ ನಿಮ್ಮ ಮನಸ್ಸಿನ ವಿರುದ್ಧ ವರ್ತಿಸಬಹುದು. ಆದರೂ ಮಾರ್ಚ ೭ ರಿಂದ ಅವರ ಉತ್ಕರ್ಷ ಸಾವಕಾಶವಾಗಿ ಪ್ರಾರಂಭವಾಗಿ ಮೇ ೨೩ ರ ನಂತರ ಜೋರಿನಿಂದ ನಡೆಯುವದು.

ಧಂದೆ-ಕೂಲಿಕಾರರ ದೃಷ್ಟಿಯಿಂದ ವಿಚಾರ ಮಾಡಿದರೆ ಈ ವರ್ಷ ಇರುವ ಏಕಾದಶ ಶನಿಯಿಂದ ಹೆಚ್ಚು ಕಡಮೆ ಪ್ರಮಾಣದಲ್ಲಿ ಲಾಭವಾಗುತ್ತ ಹೋಗುವದು. ಅಂಥ ದಿನವಿಲ್ಲದೆ ಒಂದು ದಿನವೂ ಕಳೆಯದು. ಆದರೆ ದ್ವಾದಶ ಗುರುವಿರುವವರೆಗೆ ಎಷ್ಟೊಂದು ಲಾಭವಾದರೂ ವೆಚ್ಚದ ಪ್ರಮಾಣವು ಹೆಚ್ಚಿ ಯಾವಾಗಲೂ ಕೈಯಲ್ಲಿ ಹಣವುಳಿಯದು ಪ್ರಥಮ ಗುರು ಬಂದಬಳಿಕ ಅಂದಾಜಿಗಿಂತ ಹೆಚ್ಚು ಪ್ರಮಾಣದಲ್ಲಿ ದ್ರವ್ಯಲಾಭವಾಗುವದು ನಿಶ್ಚಿತ. ಅಲ್ಲದೆ ಮೇ ೧೮ ರಿಂದ ಬರುವ ದಶಮ ಮತ್ತು ಉಚ್ಚ ರಾಹುವಿನಿಂದ ರಾಜಕೀಯ ಮತ್ತು ಸಾಮಾಜಿಕ ದರ್ಜೆ ಬಹಳ ಮಟ್ಟಿಗೆ ಹೆಚ್ಚುವದು. ನೋಕರರಿಗೆ ದಶಮರಾಹು ಹಕ್ಕು ಇಲ್ಲವೆ ಕ್ಲೇಮು ಇಲ್ಲದಿದ್ದರೂ ಮೇಲಿನ ಗ್ರೇಡು ತಂದುಕೊಡುವನು ಧಂದೆ ಮಾಡುವವರ ಪತ್ತು ಮತ್ತು ಪ್ರತಿಷ್ಠೆ ಬಹಳಷ್ಟು ಹೆಚ್ಚುವದು ಮತ್ತು ಆ ಯೋಗವು ಮೇ ೨೩ ರಿಂದ ಸಪ್ಟಂಬರ ೨ ರೊಳಗಾಗಿ ಬಹುಶಃ ಖಾತ್ರಿಯಿಂದ ಬರುವದು. ಉದ್ಯೋಗವಂತೂ ಬಹಳಷ್ಟು ಹಬ್ಬುವದು. ನಿಮಗೆ ಕೂಡ ನಿಜವೆನಿಸದಷ್ಟು ಅದು ವ್ಯಾಪಕವಾಗುವದು. ದ್ವಾದಶ ಗುರುವಿರುವಾಗ ಮಾತಾಡಲು ಕೂಡ ಒಪ್ಪದಿದ್ದವರು ತಾವಾಗಲಿ ಮಧ್ಯಸ್ಥರ ಮುಖಾಂತರವಾಗಲಿ ಆರ್ಜವಮಾಡಹತ್ತುವರು. ಆ ವರೆಗೆ ಗುರುಗುರು ಮಾಡುವ ಆಶ್ರಯದಾತರು ಇಲ್ಲವೆ ವರಿಷ್ಠರು ಪ್ರಥಮ ಗುರು ಬಂದ ಬಳಿಕ ಒಮ್ಮೆಲೆ ವಿನಮ್ರರಾಗುವರು. ಯಥೋಚಿತ ಮಾತುಕತೆ ನಡೆಸುವರು. ನೋಕರಿಯಲ್ಲಿ ಖಾತೆಗಳು ಬದಲಾಗುವದಿದ್ದರೆ ಮತ್ತು ಯಾರಿಗೆ ಬದಲಿ ಆಗಬೇಕೆನಿಸುವದೊ ಅವರಿಗೆ ದ್ವಾದಶಗುರುವಿರುವ ವರೆಗೆ ಆಗುವದಿಲ್ಲ. ಬೇಡಾದವರಿಗೆ ಮಾತ್ರ ನಿಶ್ಚಿತವಾಗಿ ಆಗುವದು. ಪ್ರಥಮಗುರು ಬಂದಬಳಿಕ ಎಲ್ಲವೂ ನಿಮ್ಮ ಮನಸ್ಸಿನಂತೆಯೇ ಆಗುವದು. ಮೇ ೧೮ಕ್ಕೆ ಚತುರ್ಥಕೇತು ಬಂದಬಳಿಕ, ಯಾರ ಜನ್ಮಕಾಲದಲ್ಲಿ ದತ್ತಕ ಹೋಗುವ ಯೋಗವಿದೆಯೋ ಅಂಥವರಿಗೆ ಆ ಯೋಗ ಬಹುಶಃ ಬಂದೇತೀರುವದು. ಅಲ್ಲದೆ ಅನೇಕರಿಗೆ ದೂರದ ಆಪ್ತರು ವಾರಸದಾರನೆಂದು ನಿರ್ಧರಿಸಿ ಬಹಳಷ್ಟು ಆಸ್ತಿಯನ್ನು ತಂದು ಕೊಡುವರು. ಆದರೆ ಈ ಕೇತು ಆಪ್ತರಲ್ಲಿ ಅನೇಕರೊಡನೆ ಮತ್ಸರ ಇಲ್ಲವೆ ದ್ವೇಷವನ್ನು ಹೆಚ್ಚಿಸುವನು. ವಾಹನಸುಖ ಚೆನ್ನಾಗಿ ಸಿಕ್ಕುವದು. ಆದರೆ ಅವುಗಳ ದುರಸ್ತಿಗಾಗಿ ಇಲ್ಲವೆ ಸುಧಾರಣೆಗಾಗಿ ಬಹಳಷ್ಟುಹಣ ವೆಚ್ಚಮಾಡಬೇಕಾಗುವದು. ನೋಕರ ಚಾಕರರು ಕಾರ್ಯತತ್ಪರರೆನಿಸಿದರೂ ಪೇಚು ಹಾಕುವುದರಲ್ಲಿ ತತ್ಪರರು. ಪ್ರಥಮ ಗುರು ಬಂದ ಬಳಿಕ ಸ್ವಲ್ಪಿಲ್ಲ ಸ್ವಲ್ಪ ಸಂಗ್ರಹವನ್ನು ಮಾಡದೆ ಇರಲಾರಿರಿ. ಅದರಂತೆಯೇ ಯಾತ್ರೆ ಇಲ್ಲವೆ ಬೇರೆ ದೈವಿಕ ಕೃತ್ಯಗಳು ನಿಶ್ಚಯವಾಗಿ ಘಟಿಸುವವು. ಅದರಿಂದ ಭಾಗ್ಯ ಹೆಚ್ಚಿದ್ದು ಸ್ಪಷ್ಟವಾಗಿ ಕಾಣಹತ್ತುವದು. ಡಿಸೆಂಬರ ೨೬ ರಿಂದ ಮಾರ್ಚ ೧೭ ರ ಅವಧಿಯಲ್ಲಿ ಮಿತ್ರಸುಖ ಕೆಟ್ಟಿದೆ ಎಂದೆನಿಸುವದು ನಿಜ. ಆದರೆ ಉಳಿದ ವೇಳೆಯಲ್ಲಿ ಅದು ಪೂರ್ಣವಾಗಿ ದೊರೆಯುವದು.

ದಾವೆ ಖಟ್ಲೆ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ದ್ವಾದಶಗುರು ಇರುವವರೆಗೆ ಹಿಂದೆ ಸರಿಯುವದೇ ಒಳಿತು. ಆದರೆ ಪ್ರಥಮ ಗುರು ಬಂದ ಬಳಿಕ ವಿಶೇಷವಾಗಿ ದಶಮರಾಹು ಬಂದ ಬಳಿಕ ಬಹುತರ ಖಟ್ಲೆಯಲ್ಲಿ ಒಳ್ಳೆ ಯಶಸ್ಸು ಸಿಕ್ಕುವದು. ಪ್ರತಿಪಕ್ಷಿಗಳಿಗೆ ಚಳ್ಳಹಣ್ಣು ತಿನ್ನಬೇಕಾಗುವದು.

ಮಾರ್ಚ ೭ ರೊಳಗಾಗಿ ಹಡೆಯುವ ಸ್ತ್ರೀಯರಿಗೆ ಮತ್ತು ಕೂಸಿಗೆ ಬಹಳ ಕಷ್ಟ. ಅನಂತರ ಮೇ ೧೮ ರ ವರೆಗೆ ಹಡೆಯುವ ಸ್ತ್ರೀಯರಿಗೆ ಏನಿಲ್ಲದಿದ್ದರೂ ಕೂಸುಗಳಿಗೆ ಹೆಚ್ಚು ಕಷ್ಟ. ಉಳಿದ ವೇಳೆಯಲ್ಲಿ ಹಡೆದವರಿಗೆ ಸ್ವಾಭಾವಿಕ ಕಷ್ಟಕ್ಕಿಂತ ಹೆಚ್ಚು ಕಷ್ಟವಾಗದೆ ಹುಟ್ಟುವ ಕೂಸು ದೀರ್ಘಾಯು ಮತ್ತು ನಿರೋಗಿ ಇರುವವು ಮತ್ತು ಬಹುಶಃ ಗಂಡು ಕೂಸೇ ಹುಟ್ಟುವವು.

ಮಾರ್ಚ ೭ಕ್ಕಿಂತ ಮೊದಲು ಪರೀಕ್ಷೆಗೆ ಕೂಡುವ ವಿದ್ಯಾರ್ಥಿಗಳು ಚೆನ್ನಾಗಿ ಅಭ್ಯಾಸ ಮಾಡಿದ್ದರೆ ಮಾತ್ರ ಪರೀಕ್ಷೆಗೆ ಕೂಡ್ರಬೇಕು. ಮಾರ್ಚ ೭ ರಿಂದ ಮೇ ೧೮ ರ ವರೆಗೆ ಯಾರ ಪರೀಕ್ಷೆಯಿರುವದೋ ಅವರು ಪಾಸಾಗುವಷ್ಟು ಗುಣ ಪಡೆದು ಯಶಸ್ವಿಗಳಾಗುವರು. ಮೇ ೧೮ ರ ನಂತರ ಯಾರ ಪರೀಕ್ಷೆ ಇದೆಯೋ ಅವರು ೧ ನೇ, ೨ನೇ ವರ್ಗಗಳಲ್ಲಿ ಪಾಸಾಗುವಷ್ಟು ಯಶಸ್ಸು ಸಂಪಾದಿಸುವರು. ಇದು ನಿಶ್ಚಿತ.

**॥ ಸರ್ವೇ ಜನಾಃ ಸುಖಿನೋ ಭವಂತು ॥**



# "ಈಗ ನಾನೇನ್ಮಾಡಲಿ"

ಲೇಖಕರು :
ರಾ. ಶಿ. , ಬೆಂಗಳೂರು

ಮೂರು ವರ್ಷಗಳ ವರೆಗೆ ಅವಳು ಪತಿದೇವರನ್ನು ಆಯ್ದುಕೊಳ್ಳಲಾಗಲಿಲ್ಲ. ಒಂದಿಲ್ಲೊಂದು ಅಡೆತಡೆ ಬಂದು ನಿಲ್ಲುತ್ತಿದ್ದವು. ನಾಲ್ಕನೇ ವರುಷ ಅವಳ ಕಾಲೇಜಶಿಕ್ಷಣವೂ ಮುಗಿಯಿತು; ಪತಿದೇವರೂ ದೊರೆತ— ಅವಳ ಮನಸ್ಸಿಗೆ ಒಪ್ಪುವಂಥವನೇ. ಕ್ರಮೇಣ ಮೂರು ಗಂಡು ಮಕ್ಕಳಾದವು. ಪತಿದೇವರಿಗೆ ಈ ಮಕ್ಕಳನ್ನು ಚೆನ್ನಾಗಿ ಸಾಕುವ ಚಿಂತೆಯಲ್ಲಿ ಪತ್ನಿಯ ಮುಖಾವಲೋಕನಕ್ಕೂ ಅವಕಾಶ ದೊರೆಯಲಿಲ್ಲ. ಅವರಿಗೆ ಮಂತ್ರಿಪದವಿ ಕೂಡ ದೊರೆಯುವ ಸಂದರ್ಭ ಬಂತು. ಆಗ ಅವಳಿಗೊಂದು ಸಮಸ್ಯೆ ಕಾಡಿತು. ಅದೇನೆಂಬುದೇ ಅತಿ ಕುತೂಹಲಕಾರಿಯಾದದ್ದು.

ಪಿ. ಯು. ಸಿ. ಪರೀಕ್ಷೆ ಮುಗಿದಿತ್ತು. ಬೇಸಿಗೆ ರಜದಲ್ಲಿ ಕತೆಪುಸ್ತಕಗಳನ್ನು ಓದಿ ಕಾಲ ಕಳೆಯೋಣ ಹಾಯಾಗಿ ಅಂತ ಇದ್ದೆ. ಅಡುಗೂಲಜ್ಜಿಯ ಅಂತರಂಗದ ಕತೆಗಳನ್ನೂ ನವ್ಯ ಲೇಖಕರು ಬಹಿರಂಗವಾಗಿ ಬರೆಯುತ್ತಾರಲ್ಲ! ಅಂತ ಕಾದಂಬರಿಗಳನ್ನು ಓದೋಣ ಅಂತ ಅಂದುಕೊಂಡಿದ್ದೆ. ಬಂಡೆಮನೆ ಸರೋಜಾನೂ ಹೇಳಿದ್ದಳು : ನಾಲ್ಕನೇ ಬೀದೀಲಿ ಮಹಿಳಾ ಸಮಾಜದವರು ಪುಸ್ತಕ ಭಾಂಡಾರ ತೆಗೆದಿದ್ದಾರೆ ಕಣೆ. ಪುಸ್ತಕದ ಅಂಗಡಿಯೋರ ಹೆಂಡತೀನೆ ಕಾರ್ಯದರ್ಶಿ. ಬೇಕಾದಷ್ಟು ಪುಸ್ತಕ ಸಿಗುತ್ತೆ ಅಂತ.

ಆದರೆ ಏಳೇ ದಿನಗಳಲ್ಲಿ ಅಪ್ಪ ಬಂದು ಅಮ್ಮನಿಗೆ ಹೇಳಿದರು. ಮುಂದಿನ ಶುಕ್ರವಾರ ರಾಮರಾಯರ ಮನೆಯವರು ವಿಶಾಲೂನ ನೋಡುಕ್ಕೆ ಬರ್ತಾರೆ. ಎಲ್ಲಾ ಏರ್ಪಾಡೂ ಮಾಡು ಅಂತ. ಶುಕ್ರವಾರದ ದಿನ ಬಂದವರಿಗೆ ಉಪ್ಪಿಟ್ಟು, ಬೋಂಡಾಗಳನ್ನು ನಾನೇ ಕೊಟ್ಟೆ. ಕಾಫಿಯನ್ನು ಕೊಡುವಾಗ ಸಕ್ಕರೆ ಸಾಕೆ, ಇನ್ನಷ್ಟು ತರಲೇ ಎಂದು ಹುಡುಗನನ್ನು ಕೇಳಿದೆ. ಬೆದರುಬಿದ್ದ ಅವ ಸಾಕು ಅಂತ ಕೋಲೆಬಸವನ ಹಾಗೆ ತಲೆ ಅಲ್ಲಾಡಿಸಿದ, ಅಡ್ಡಡ್ಡಲಾಗಿ. ಬಾಯಿ ಬಿಡಲಿಲ್ಲ.

ಅವರೆಲ್ಲ ಹೋದ ಮೇಲೆ ' ಏನಂತೀವಮ್ಮಾ ವಿಶಾಲು ' ಅಂತ ಅಪ್ಪ ಕೇಳಿದರು.

' ಏನ್ಮಾಡ್ಕೊಂಡಿದಾರೆ ? ' ಅಂತ ನಾನು ಕೇಳಿದೆ.

' ಎಲ್. ಎಲ್. ಬಿ. ಗೆ ಓದ್ತಾ ಇದಾರೆ. ಜಾಣ ಮನೆತನ.' ಅಂದರು ಅಪ್ಪ.

' ಶಕುನ ಆಗ್ಲಿಲ್ಲ ಅಂತ ಹೇಳಿಬಿಡಿ ' ಅಂತ ಅಮ್ಮ ಅಪ್ಪಣೆ ಕೊಡಿಸಿದಳು.

'ಯಾಕೆ ? ದಿವಾನಾಗಿದಾನಲ್ಲೇ ಹುಡುಗ' ಎಂದು ಅಪ್ಪ ದನಿ ಎತ್ತಿದರು.

' ಲಾಯರಿ ಮಾಡಿ ಉದ್ಧಾರ ಆಗೋದು ಅಷ್ಟರಲ್ಲಿಯೇ ಇದೆ. ಹಾಗಾಗೋದಾದ್ರೆ ನಮ್ಮ ಹುಡಗೀನೇ ಲಾಯರಿ ಆಗಲಿ. ಹೂವಿನ ಸರ ಎತ್ತಿದ ಹಾಗೆ ಸುಳ್ಳು ಹೇಳ್ತಾಳೆ. ಇವಳೇ ಲಾಯರ ಕೆಲಸ ಮಾಡಿ ಸಂಪಾದಿಸಲಿ, ಆ ಮೇಲೆ ಯಾವ ಬೇಕೂಫನ್ನಾದರೂ ಮದುವೆ ಆಗಲಿ ಎಂದಳು ಅಮ್ಮ.

ಮದುವೆಯಾದ ಮೂವತ್ತು ವರ್ಷದಿಂದ ಅಮ್ಮನಿಗೆ ಒಂದೇ ಕೋಪ. ಲಾಯರನ್ನು ಮದುವೆಯಾದೆನಲ್ಲಾ ಅಂತ. ಉಣ್ಣುಕ್ಕೆ ತಿನ್ನುಕ್ಕೆ ಸಾಕಷ್ಟಿದ್ದರೂ ಬೆಡಗುಕ್ಕೆ ಮೆರೆಯುಕ್ಕೆ ಅವಕಾಶ ಸಾಕಷ್ಟು ಇಲ್ಲವಲ್ಲಾ ಅಂತ ಅಪಾರ ವ್ಯಸನ.

ಆ ವರ್ಷ ಗಂಡಾಂತರ ಕಳೆದು ಹೋಯ್ತು.

* * *

ಬಿ. ಎ. ಕ್ಲಾಸು ಸೇರಿದಾಗ ಗೃಹವಿಜ್ಞಾನವನ್ನು ತೆಗೆದುಕೊಂಡಿದ್ದೆ. ಮೊದಲ ವರ್ಷ ಮುಗಿದು ರಜಾ ಬಂದಾಗ, ಶಾಲೇಲಿ ಕಲಿತಿದ್ದನ್ನ ರಜೆಯಲ್ಲಿ ಮನೆಯವರ ಮೇಲೆ ಪ್ರಯೋಗಿಸಿ ನೋಡೋಣ ಅಂತ ಯೋಜನೆ ಹಾಕಿದ್ದೆ. ಸರೋಜಾ ಕೂಡ ಕುಯಾಕ್ಕು ಕೊಟ್ಟಿದ್ದಳು. ನಮ್ಮನೇಲಿ ನಾನೂ ಹಾಗೇ ಮಾಡ್ತೀನಿ ಕಣೆ. ಮೊದಲು ಯಾರ ಮನೇಲಿ ದೊಡ್ಡೋರು ಕಾಯಿಲೆ ಬೀಳ್ತಾರೋ ಅವರೇ ಗೆದ್ದೋರು ಅಂತ ತೀರ್ಮಾನ ಮಾಡೋಣ, ಹಾಗೆ ಬಾಜಿ ಕಟ್ಟೋಣ ಎಂದಳು. ಸೈ ಅಂತ ಬಾಜಿ ಕಟ್ಟಿದೆ.

ಆದರೆ ಎರಡೇ ದಿನ ನಾನು ಅಡಿಗೆಗೆ ಪ್ರಯತ್ನಮಾಡಿದ್ದು. ಅಷ್ಟರಲ್ಲಿಯೇ ಅಪ್ಪ ಬಂದು ಹೇಳಿದರು : ನಾಡಿದ್ದು ಗುರುವಾರ, ಹೆಂಡತಿ ಮಕ್ಕಳೊಂದಿಗೆ ಕೃಷ್ಣಾಚಾರ್ರು ವಿಶಾಲೂನ ನೋಡಲಿಕ್ಕೆ ಬರ್ತಾರೆ. ಎಲ್ಲಾನೂ ಅಣೀಮಾಡಿಕೊಂಡಿರು ಅಂತ.

ಸರಿ. ಸೀರೆಗಳನ್ನು ಒಗೆಸಿ ಇಸ್ತ್ರಿಮಾಡಿಸಿ, ಪೌಡರು ತರಿಸಿ ಕ್ಯೂಟಿಕ್ಸ್ ಹುಡುಕಿ ತೆಗೆದಿಟ್ಟು, ತಲೇಬಾಚಿಕೊಳ್ಳೊ ಅಷ್ಟರಲ್ಲೇ ಗುರುವಾರ ಬಂದೇ ಬಿಡ್ತು. ಹಿಂದೇನೇ ಅವರೂ ಬಂದುಬಿಟ್ಟರು. ಕೇಸರೀಭಾತು,

ವಾಂಗೀಭಾತುಗಳನ್ನೂ ಬಾಳೆಎಲೆಯಲ್ಲಿಟ್ಟು ನಾನೇ ಎಲ್ಲರಿಗೂ ಕೊಟ್ಟೆ. ಅಮ್ಮ ಕಾಫಿ ತಂದುಕೊಟ್ಟಳು.

ಕೃಷ್ಣಾಚಾರ್ರೇ ನನ್ನ ಮಾತನಾಡಿಸಿದರು. ‘ ಏನೇನು ಹೇಳಿ ಕೊಡ್ತಾರಮ್ಮ ಗೃಹವಿಜ್ಞಾನ ದಲ್ಲಿ. ಮುಸುರೆ ತಿಕ್ಕೋದು, ರಂಗೋಲಿ ಹಾಕೋದು, ಕೃಷ್ಣನ ಮಂಟಪ ಕಟ್ಟೋದು ಇವನ್ನೇನ್ನಾದರೂ ಕಲಿಸ್ತಾರಾ? ಅಥವಾ ಕಿರಿಸ್ತಾ-ನರ ಸಂಸಾರದ ವಿಷಯಗಳನ್ನು ಮಾತ್ರ ಹೇಳಿಕೊಡ್ತಾರಾ ’ ಎಂದು ಕೇಳಿದರು. ಡೆಟ್



“ ಅವರ್ಾ್ಯಗೆ ಮಂತ್ರಿಗಳಾದರು ? ಮಾತೇ ಬರೊಲ್ಲ. ನಾನೇ ಮಂತ್ರಿಣಿ ಕಣೆ. ”

ಉಪಯೋಗಿಸಿದರೆ ಮುಸುರೆ ತಿಕ್ಕೋದೇನೂ ಬೇಕಾಗುಲ್ಲ. ತೂತಿನ ಡಬ್ಬೀನ ಹೊಸಲ ಮುಂದೆ ಎಳೆದರೆ ದಿವನಾದ ರಂಗೋಲಿ ತಾನೇ ಬೀಳುತ್ತೆ. ಕೃಷ್ಣನ ಮಂಟಪ ಏನು ಬಂತು. ಕಾಗದದಲ್ಲಿ ಮನೇನ ಕಟ್ಟೋದನ್ನೂ ಕಲಿಸ್ತಾರೆ ಅಂತಹೇಳಿ ಕೋ-ಲೇಜಲ್ಲಿ ಕಟ್ಟಿಸಿದ್ದ ಒಂದು ಮಾಡಲ್ ರಟ್ಟಿನ ಮನೆಯನ್ನು ತಂದುತೋರಿಸಿದೆ. ಬಲು ಚಾಲೂಕಮ್ಮ ಅಂತ ಕೃಷ್ಣಾಚಾರ್ರು ಅಂದರು. ಎಲ್ಲರೂ ಹಿಂತಿರುಗಿ ಹೊರಟರು. ಕೃಷ್ಣಾಚಾರ್ರು, ಅವರ ಹಿಂದೆ ಇಬ್ಬರು ಕಿರಿಯ ಮಕ್ಕಳು. ಅವರ ಹೆಂಡತಿ. ಕಡೆಗೆ ಆ ಮದುವೆಯ ಹುಡುಗ. ಈ ಮಗ ನಡೆಯೋದನ್ನೇ ನೋಡಿದೆ. ಯಾಕೋ ಬಲಗಾಲು ಕುಂಟೋತರಹ ಕಾಣಿಸ್ತು.

ಅವರೆಲ್ಲ ಹೋದ ಮೇಲೆ ಯಥಾಪ್ರಕಾರ ಅಪ್ಪ ಕೇಳಿದರು ‘ ಏನಂತೀಮ್ಮಾ ’ ಅಂತ.

‘ ಯಾಕೋ ಸ್ವಲ್ಪ ಕುಂಟೋ ಹಾಗೆ ಕಾಣಿಸ್ತಲ್ಲಪ್ಪ ’ ಎಂದೆ.

‘ ಇಂಜನಿಯರಿಂಗ್ ಪಾಸು ಮಾಡಿದ್ದಾನೆ. ಮೊದಲ ರ್‍ಯಾಂಕು. ಆರು ಮೆಡಲುಗಳು ಬಂದಿವೆ. ಖಾಯಂ ಕೆಲಸ ’ ಅಂದರು ಅಪ್ಪ.

“ಅದಲ್ಲಾ ಅಪ್ಪಾ ನಾ ಹೇಳಿದ್ದು. ಕುಂಟ್ತಾ ಇದ್ದ ಹಾಗೆ ಇತ್ತಲ್ಲ ಯಾಕೆ ” ಎಂದೆ.

“ ಸ್ವಂತ ಮನೆ ಇದೆ, ಒಬ್ಬನೇ ಮಗ ಅವರ ತಂದೆ ಭಾಗ್ಯವಂತರು” ಅಂದರು ಅಪ್ಪ.

“ ಯಾವ ಕಾಲು ಕುಂಟಾದರೇನು ಸೊಂ-ಟಕ್ಕೆ ಊನ, ವಿಶಾಲು. ಆಗುಲ್ಲ ಅಂತ ಹೇಳಿ ಬಿಡಿ ಅಂದ್ರೆ. ಕುಂಟುತಾ ಕುಂಟುತಾ ಸಪ್ತ ಪದಿ ಹಾಕಿದರೆ ಮುಂದೆ ಗತಿ ? ” ಎಂದು ಅಮ್ಮ ಖರಾರುವಾಕ್ಕಾಗಿ ಅಂದುಬಿಟ್ಟಳು. ಅಂದು ಬಿಟ್ಟು ಕಾವೇರಿ ಮನೆಗೆ ಸ್ವಲ್ಪ ಹೋಗಿಬರ್ತೀನಿ ಎಂದು ಹೇಳಿ ಹೊರಟು ಹೋದಳು : ಅಮ್ಮ ಕಾವೇರಿ ಮನೆಗೆ ಹೊರಟಳು ಎಂದರೆ ಮಾತು ತೀರ್ಮಾನ ಆದ ಹಾಗೇ ನಮ್ಮನೇಲಿ.

ಆ ವರ್ಷವೂ ಗಂಡಾಂತರ ತಪ್ಪಿತು.

* * *

ಬಿ. ಎ. ಪರೀಕ್ಷೆ ಮುಗಿದಿತ್ತು. ನಪಾಸಾಗುಲ್ಲ ಅಂತ ಭರವಸೆ ಇತ್ತು. ಸರೋಜ ಹೇಳಿದಳು ರಜಾದಲ್ಲಿ ಸೋದರಮಾವನ ಮನೆಗೆ ಹೋಗ್ತೀನಿ ಕಣೆ. ಸೊರಬದಲ್ಲಿದಾರೆ ಅವರು. ಮಲನಾಡು ಬಲು ಚೆನ್ನ ಕಣೆ ಅಂದಳು. ಅವತ್ತೇ ಅಮ್ಮ ನನಗೆ ಹೇಳಿದಳು ಹಾಳು ಪರೀಕ್ಷೆಗೆ ಓದಿಓದಿ ಬಿಳುಚಿಕೊಂಡಿದ್ದಿ ವಿಶಾಲೂ, ನಿಮ್ಮ ಸೋದರತ್ತೆ ಮನೆಗೆ ಹೋಗಿ ಒಂದು ತಿಂಗಳಿದ್ದು ಸುಧಾರಿಸಿಕೊಂಡು ಬಾ. ನಿಮ್ಮ ಸೋದರತ್ತೆ ಮಾಡೊ ಚಿಗಳಿಉಂಡೆ ಬಲು ರುಚಿ ಕಣೆ; ನಿಮ್ಮಪ್ಪನಿಗೆ ಹೇಳ್ತೀನಿ ಎಂದು.

ರಾತ್ರಿ ಅಪ್ಪ ಹಿಂತಿರುಗಿದಾಗ ಅಮ್ಮ ಈ ವಿಷಯ ತಿಳಿಸಿದಳು. “ ಅಕ್ಕ ಕೂಡ ನಿನ್ನ ಮಗಳನ್ನು ಕಳಿಸೆ ರಜಕ್ಕೆ ಅಂತ ಹೇಳ್ತಾನೆ ಇದಾಳೆ. ಸೊರಬದ ಹವಾ ಆರೋಗ್ಯ” ಎಂದು ಒಪ್ಪಿಕೊಂಡರು, ಅಪ್ಪ.

ಬಲು ಖುಷಿಯಾಯ್ತು. ಸೊರಬದ ಹವಾ ಚನ್ನು, ಮಲೆನಾಡು, ಸೋದರತ್ತೆ ಮಾಡಿಕೊಡುವ ಉಂಡೆಗಳು, ಸರೋಜ ಬೇರೆ ಅಲ್ಲಿಗೆ ಹೋಗಿರ್ತಾಳೆ, ಬೇಕಾದಷ್ಟು ಹರಟೆ ಕೊಚ್ಚಬಹುದು. ಹಾಯಾಗಿರಬ-ಹುದು ಅಂತ ಖುಷಿ. ಮಾರನೇ ದಿನ ಅಪ್ಪ ಸೊರಬಕ್ಕೆ ಕಾಗದ ಬರೆದರು. ನಾನೇ ಅಂಚೆಗೆ ಹಾಕಿದೆ. ಮೂರುನಾಲ್ಕು ದಿನಗಳಲ್ಲಿ ಜವಾಬು ಬರುತ್ತೆ ಅಂತ ಎದುರು ನೋಡ್ತಿದ್ದೆ. ನಾಲ್ಕನೆ ದಿನ ಸಂಜೆ ಅಪ್ಪ ಬಂದು “ವಿಶಾಲೂ ಸೊರಬಕ್ಕೆ ಹೋಗುಕ್ಕಾಗುಲ್ಲ. ಈ ತಿಂಗಳ ಕೊನೆಯಲ್ಲಿ ಕುಲಕರ್ಣಿಯವರು ಬರ್ತಾರೆ, ಸಂಸಾರಸಮೇತ. ಅವರು ಬಂದು ನೋಡಿಕೊಂಡು ಹೋದ ಮೇಲೆ ನಿನ್ನ ಪ್ರಯಾಣದ ಮಾತು” ಅಂದರು.

ಒಂದು ವಾರದಲ್ಲಿ ಸೊರಬದಿಂದ ನನಗೆ ಕಾಗದ ಬಂತು. ಸರೋಜನ ಕಾಗದ. ರಜಾಕ್ಕೆ ಅಂತ ಮಾತ್ರ ಅಲ್ಲ ಸೋದರ ಮಾವ ಕರೆಸಿಕೊಂಡಿದ್ದು ಇಲ್ಲೊಂದು ಅನುಕೂಲಸ್ಥ ವರ ಇದೆ. ತೋರಿಸೊಕ್ಕೆ ಅಂತ. ನಿನ್ನೆ ಅವರೆಲ್ಲಾ ಬಂದಿದ್ರು. ಇವರು ನೋ-ಡುಕ್ಕೆ ಚೆನ್ನಾಗಿದಾರೆ. ಮಿತಭಾಷಿ, ನಕ್ಕಾಗ ಮುಖ ಅರಳುತ್ತೆ, ಅಂತ ಬರೆದಿದ್ದಳು. ನನಗೆ ಹೇಗೆಹೇಗೋ ಆಯಿತು. ಕೊನೆ ಶುಕ್ರವಾರ ಕುಲಕರ್ಣಿಯವ್ವರು ಮಗನೊಡನೆ ನಮ್ಮನೆಗೆ ಬಂದರು. ಎಲ್ಲವೂ ಯಥಾಪ್ರಕಾರ ಆಯಿತು. ನೋಡಿಕೊಂಡು ಹೋದರು.

"ಆಗಬಹುದು" ಅಂದ್ರೆ; ಮಿಕ್ಕ ಏರ್ಪಾಡಿನ ವಿಚಾರ ಮಾಡೋಣ. ಅವರೇನಂತಾರೆ ನಾಳೇನೆ ಕೇಳಿಕೊಂಡು ಬನ್ನಿ'' ಅಂತ ಅಮ್ಮಾ ಅಪ್ಪಣೆಕೊಟ್ಟಳು. ನನ್ನ ಯಾರೂ ಕೇಳಲೇ ಇಲ್ಲ. ಕೇಳಿದ್ದರೆ ನಾನೂ ಹೂ ಅಂತಿದ್ದೆ. ಸರೋಜ ಮದುವೆಯಾದ ಮೇಲೆ ನಾನು ಹಾಗೇ ಇರುಕ್ಕಾಗುತ್ತ್ಯೇ ? ಹುಡುಗ ನನ್ನನ್ನು ಕದ್ದು ಕದ್ದು ನೋಡಿದ ಹಾಗೇನೆ ಅವನ ಮೋರೆ ಮೇಲಿನ ಮೀಶೀನೂ ಇಣಿಕಿ ಹಣಿಕಿ ಚೆಂದ ಕಾಣಿಸುತ್ತಿತ್ತು.

ಸರೋಜನ ಮದಿವಿನೂ ನನ್ನದೂನೂ ಒಂದೇ ದಿವಸ, ಒಂದೇ ಮುಹೂರ್ತದಲ್ಲಿ ನಡೆಯಿತು. ಆದರೆ ಬೇರೆ ಬೇರೆ ಊರುಗಳಲ್ಲಿ.

* * *

ಮೊದಲು ಮೂರು ವರ್ಷ ನನ್ನ ಸಂಸಾರ ಬಲು ಹಿತವಾಗಿತ್ತು. ಇವರು ಕೂಡ ಹೇಳಿದ ಹಾಗೆ ಕೇಳಿಕೊಂಡು, ಬೆಳಿಗ್ಗೆ ಕಾರ್ಖಾನೆಗೆ ಬೇಗ ಹೋಗಿ, ಸಂಜೆಮುಂದೆ ಬಂದು, ಮನೆ ಕೆಲಸಕ್ಕೆ ನೆರವಾಗುತ್ತಿದ್ದರು. ರಜಾದಿನ ಬಂದರೆ ನಾವಿಬ್ಬರೂ ನಮ್ಮ ಕೇರಿಯ ಲಲಿತಕಲಾಸಂಘಕ್ಕೆ ಸಂಜೆ ಹೋಗುತ್ತಿದ್ದೆವು. ಕಲೆ, ಸೌಂದರ್ಯ ನಾದ, ಸಂಗೀತ, ಭರತನಾಟ್ಯ, ಶಿಲ್ಪ, ಚಿತ್ರ ಇತ್ಯಾದಿ ವಿಷಯಗಳ ಮೇಲೆ ಭಾಷಣಗಳು ಸಂಭಾಷಣೆಗಳು ನಡೆಯುತ್ತಿದ್ದವು. ಮೂರು ವರ್ಷಗಳಲ್ಲಿ ಇವರು ಒಂದೇ ಸಲ ಒಂದು ಪ್ರಶ್ನೆಯನ್ನು ಬಾಯಿಬಿಟ್ಟು ಕೇಳಿದ್ದರು. "ಹೆಸರಾಂತ ಹೆಂಗಸು, ಚಿತ್ರಕಾರರು ಯುರೋಪಿನಲ್ಲಿ ಏಕೆ ಹುಟ್ಟಲಿಲ್ಲ? ಹೆಸರಾಂತ ವಾಗ್ಗೇಯಕಾರ ಹೆಂಗಸರು ಸಂಗೀತ ಕೃತಿಗಳನ್ನು ಏಕೆ ನಮ್ಮಲ್ಲಿ ರಚಿಸಲಿಲ್ಲ?" ಯಾರೂ ಉತ್ತರ ಕೊಡುವ ಗೋಜಿಗೆ ಹೋಗಲಿಲ್ಲ. ಇವರೂ ಒತ್ತಾಯಪಡಿಸಲಿಲ್ಲ.

ಮೂರು ವರ್ಷಗಳಾಯ್ತು. ಮೊದಲ ಗಂಡುಮಗು ಹುಟ್ಟಿತು. ವಿಶ್ವಾಸಕ್ಕೆ ಪಾತ್ರನಾದ ಆ ಮಗನೇ ಹುಟ್ಟಿದಂದಿನಿಂದ ನನಗೆ ದ್ರೋಹ ಬಗೆದ. ಅವನ ಪುಟಾಣಿ ಮೂಗನ್ನು ಬೆರಳತುದಿಯಿಂದ ಸವರಿ ಇವರಂದರು- "ಇವನನ್ನು ಚೆನ್ನಾಗಿ ಬೆಳಸಿ ಕಲಿಸಬೇಕು ಕಣೆ'' ಎಂದು.

ಆ ವರ್ಷ ಕಾರ್ಖಾನೆಯ ಕಾರ್ಮಿಕ ಸಂಘದ ಸದಸ್ಯರಾದರು. ಪಿಟಕ್ ಅಂತಾ ತುಟಿಬಿಡದೆ ಇದ್ದ ಇವರು ಭಾಷಣಕ್ಕೆ ಶುರು ಮಾಡಿದರೆ ಆಲಿಕಲ್ಲುಮಳೆ ತರಹ ಜಡಿಯುತ್ತಿದ್ದರು. ಇವರ ಮಗ ಮನೇಲಿ ದಿನರಾತ್ರಿ ಹೇಗೆ ಬೊಬ್ಬೆ ಹಾಕ್ತಿದ್ದ, ಹಾಗೆ ಅವರು ಹೊರಗೆ ಹೊಡಕೊಳ್ಳುಕ್ಕೆ ಶುರುಮಾಡಿದರು.

ಇನ್ನೆರಡು ವರ್ಷಗಳಾಯಿತು. ಇನ್ನೊಂ-ದು ಗಂಡನ್ನು ಹೆತ್ತೆ. ಆ ವರ್ಷ ಇವರು ಕಾರ್ಮಿಕ ಸಂಘದ ಅಧ್ಯಕ್ಷರಾದರು. ಮುಂ-ಜಾವಿಂದ ಸಂಜೆಯತನಕ ಕಾರ್ಖಾನೆ ಕೆಲಸ, ಸಂಜೆಯಿಂದ ನಿಶಿ ರಾತ್ರಿತನಕ ಸಂಘದ ಕೆಲಸ. ಎಷ್ಟೋ ವಾರಗಳು ಇವರ ಮುಖಾ-

ನಾ ಹಗಲ ಬೆಳಕಿನಲ್ಲಿ ಕಾಣುತ್ತಲೇ ಇರಲಿಲ್ಲ. ಹೀಗಾಗಿ ಎಷ್ಟೋ ರಾತ್ರಿ ನನಗೆ ಕುಂಟು ಇಂಜನಿಯರಿನ ಸವಿ ನೆನಪು ಮರಕಳಿಸಿ ಮರಕಳಿಸಿ ಬರುತ್ತಿತ್ತು.

ಇನ್ನೆರಡು ವರ್ಷಗಳಾದುವು. ಮೂರನೆಯ ಗಂಡು ಮಗನನ್ನು ಹೆತ್ತಾಗ ಇವರು ಕೇಂದ್ರ ಕಾರ್ಮಿಕ ಸಚಿವರ ಆಹ್ವಾನದ ಮೇಲೆ ದಿಳ್ಳಿಗೆ ಹೋಗಿದ್ದರು. ಹಿಂತಿರುಗಿ ಹಾರಿಬಂದು ಮೂರನೆ ಮಗನ ಪುಠಾಣಿ ಗಲ್ಲದ ಮೇಲಿದ್ದ ಸಣ್ಣ ಗುಳಿಯಲ್ಲಿ ತಮ್ಮ ಬೆರಳ ತುದಿ ಇರಿಸಿ ಆಡಿಸುತ್ತಾ "ಅಚ್ಚಿನಲ್ಲಿ ತೆಗೆದ ಬೆಲ್ಲದ ಅಚ್ಚುಗಳು ಕೂಡ ಈ ಮೂರು ಮಕ್ಕಳ ತರಹ ಅಚ್ಚು ಅಚ್ಚಾಗಿ ಬರುಲ್ಲವಲ್ಲೇ" ಅಂತ ಆದರದ ಹೆಮ್ಮೆಯ ಉದ್ಗಾರ ತೆಗೆದರು. ಈ ಮಕ್ಕಳಿಗೆಲ್ಲಾ ಸರಿಯಾದ ವ್ಯವಸ್ಥೆಯನ್ನು ಈಗಿನಿಂದಲೇ ಅಣಿ ಮಾಡಬೇಕು ಕಣೆ ಎಂದು ನನ್ನ ಕಡೆ ನೋಡಿ ಹೇಳಿದರು. ಮೂರು ತಿಂಗಳಲ್ಲಿ ಅವತ್ತೇ ಅವರು ನನ್ನ ಮುಖಾನ ಪೂರ್ತಿ ಒಂದು ನಿಮಿಷ ಹಗಲ ಬೆಳಕಲ್ಲಿ ನೋಡಿದ್ದು. ಆ ಮೇಲೇ ಕೆಲಸಕ್ಕೆ ರಾಜೀನಾಮೆ ಕೊಟ್ಟು ಕಾರ್ಮಿಕ ಸಂಘದ ಕೆಲಸಕ್ಕೇ ಟೊಂಕ ಕಟ್ಟಿ ನಿಂತಿದ್ದು.

* * *

ಬಯಕೆ ಬಸಿರು ಬಾಣಂತನದ ಈ ಗಲಾಟೆಯಲ್ಲಿ ಸರೋಜನ ಜ್ಞಾಪಕವೇ ಮರೆತು ಹೋಗಿತ್ತು.

ಒಂದು ಸಂಜೆ ಬಾಗಿಲು ತಟ್ಟಿ, "ಯಜಮಾನ್ರು ಇದಾರಾ" ಅಂತ ಬಾಗಿಲಾಚೆ ಕೂಗು, ಕೇಳಿಸಿತು. ಬಾಗಿಲು ತೆಗೆದು ನೋಡ್ತೀನಿ! ಬಿಳಿ ಸಮವಸ್ತ್ರ ಧರಿಸಿದ್ದ ಜವಾನ. ರಸ್ತೆಯಲ್ಲಿ ಬಾವುಟ ಏರಿಸಿದ್ದ ದೊಡ್ಡ ಮೋಟಾರೊಂದು ನಿಂತಿದೆ. ಅದರಲ್ಲಿ ಯಾರೋ ಹೆಂಗಸರು ಕೂತಿದ್ದಾರೆ. "ಯಜಮಾನ್ರು ಇಲ್ಲಪ್ಪಾ! ಯಾರು ಬಂದಿದ್ದು ಅಂತ ಹೇಳಲಿ ಅವರು ಬಂದ ಮೇಲೆ" ಎಂದೆ.

ಮೋಟಾರಿನಿಂದ ಒಳಗಿದ್ದಾಕೆ ಇಳಿದು ಬಂದಳು. ಧಸ ಧಸ ಓಡಿಬಂದಳು. "ನಿನ್ನ ಧ್ವನಿ ಗುರುತು ಹಿಡಿದು ಬಂದೆ ಕಣೆ. ವಿಶಾಲು! ಇಲ್ಲಿದೀಯೇನೇ! ಎಷ್ಟು ದಿವಸ ಆಯಿತೆ ನಿನ್ನ ನೋಡಿ" ಎಂದು ಏದುಸಿರು ಬಿಡುತ್ತಾ ಆ ದುಡುಮಿ ಹೇಳಿದಳು.

ಅವಳ ತೋಳು ಹಿಡಿದು ಅವಳನ್ನು ಕುಲುಕಿ, "ಸರೋಜನೇನೇ ನೀನು. ಎಷ್ಟು ತಿಂಗಳೇ ಈಗ" ಎಂದೆ.

" ತಿಂಗಳೂ ಇಲ್ಲ, ಮಂಗಳೂ ಇಲ್ಲ. ಬಂಜೆ ಬೆಳೆದಿ ಇರೋದೇ ಹಾಗೆ" ಅಂದಳು ಸರೋಜ. "ಇದೇನೆ ಬಾವುಟದ ಮೋಟಾರು! ನಿಮ್ಮ ಯಜಮಾನರು ಮಂತ್ರಿಗಳಾದರೇನೆ" ಎಂದೆ. "ಅವರ್‍ಯಾಗೆ ಮಂತ್ರಿಗಳಾದಾರು, ಮಾತೇ ಬರುಲ್ಲ. ನಾನೇ ಮಂತ್ರಿಣಿ ಕಣೆ" ಎಂದಳು ಸರೋಜ.

"ಮತ್ತೆ ನಮ್ಮನೇಗೆ . . . ನೀನು . . . ಯಾಕೆ ಬಂದೆ. ನಾನಿರೋದೂ ತಿಳಿಯದು. ನಿನಗೆ" ಎಂದು ತಡವರಿಸುತ್ತಾ ಹೇಳಿದೆ.

"ನಿಮ್ಮ ಯಜಮಾನ್ರನ್ನ ನೋಡುಕ್ಕೆ ಅಂತ ಬಂದೆ. ಒಳಗೆ ಹೋಗೋಣ ಬಾ. ಅಲ್ಲಿ ಹೇಳ್ತೀನಿ" ಅಂತ ಅವಳೇ ನನ್ನನ್ನು ನನ್ನ ಮನೆಯೊಳಕ್ಕೆ ಕರೆದುಕೊಂಡು ಹೋದಳು. ಅಲ್ಲಿ ಕೂತುಕೊಂಡು, ನನ್ನ ಮೂರನೇ ಪುಟ್ಟಾಣಿಯನ್ನು ತೊಡೆಯ ಮೇಲೆ ಕೂರಿಸಿಕೊಂಡು ಆಡಿಸುತ್ತಾ ಹೇಳಿದಳು.

"ಉತ್ಸಾಹಿ ಯುವಕರನ್ನು ಸಚಿವ ಸಂಪುಟಕ್ಕೆ ಸೇರಿಸಿಕೊಳ್ಳಬೇಕು, ಎಂದು ದಿಳ್ಳಿಯಿಂದ ಸಲಹೆ ಬಂದಿದೆ. ನಿಮ್ಮ ಯಜಮಾನರನ್ನು ನಮ್ಮ ಮುಖ್ಯಮಂತ್ರಿಗಳು ಮೆಚ್ಚಿಕೊಂಡಿದ್ದಾರೆ. ನಮ್ಮ ಜತೆ ಸೇರಿಕೊಳ್ತಾರೆಯೇ ಅಂತ ಕೇಳುಕ್ಕೆ ಬಂದಿದ್ದೀನಿ ಕಣೆ. ನಿನ್ನ ಗಂಡ ಅಂತ ಈಗ ತಿಳಿದ ಮೇಲೆ ಒತ್ತಾಯ ಪಡಿಸ್ತೀನಿ ಕಣೆ. ಮುಂದಕ್ಕೆ ಅವರು ಮುಖ್ಯಮಂತ್ರಿಗಳಾಗೋ ಅವಕಾಶ ಇದೆ ಕಣೆ" ಎಂದು ಸರೋಜಾ ಹೇಳಿದಳು.

"ಇವರೇನಾದ್ರೂ ಮಂತ್ರಿಯಾಗುಕ್ಕೆ ಒಪ್ಪಿಕೊಂಡರೆ, ಆಮೇಲೆ ನಾವು ಸಚಿವ ಗೃಹಗಳಲ್ಲೇ ಇರಬೇಕು ಅಲ್ಲವೇನೆ" ಎಂದೆ.

"ಹ್ದೂ ಕಣೆ, ಎಲ್ಲಾ ಸೌಕರ್ಯಗಳೂ ಇವೆ" ಅಂದಳು ಸರೋಜ.

"ಇರಬಹುದು, ಆದರೆ ಪ್ರಸವಕ್ಕೆ ಅನುಕೂಲಗಳಿವೆಯೋನೆ! ಆ ಪ್ರಶ್ನೇನ ನಿನ್ನ ಹತ್ತಿರ ಕೇಳಿದರೆ ಏನು ಪ್ರಯೋಜನ" ಅಂದೆ.

"ಅಯ್ಯೋ! ಅದಕ್ಯಾಕೆ ಹೆದರತಿ. ಅವಳಿ ಮಕ್ಕಳನ್ನೂ ಬೇಕಾದರೂ ಹೆರು. ನಾನೆಲ್ಲ ಅಣಿಯಾಗಿ ನೋಡಿಕೋತೀನಿ" ಅಂದಳು ಸರೋಜ.

"ನಿನ್ನ ಗಂಡನಿಗೆ ಹೇಳಿ ಒಪ್ಪಿಸು. ತಿರುಗಿ ನಾವೆಲ್ಲಾ ಬಂದು ಮಾತಾಡ್ತೀವಿ" ಅಂತ ಹೇಳಿ ಸರೋಜ ಹೊರಟು ಹೋದಳು.

* * *

ಪಳಗಿದ ಮನೆ, ಇಲ್ಲೇ ಇದ್ದು ಎಲ್ಲಾ ಮುಗಿಸಿಕೊಂಡು ಬಾಣಂತನಕ್ಕೆ ಸಚಿವ ಗೃಹಕ್ಕೆ ಹೋಗಲೇ? ಅಥವಾ ಈಗಲೇ ಹೋಗಿ ಅಲ್ಲೇ ಎಲ್ಲವನ್ನೂ ಮಾಡಿಕೊಳ್ಳಲೇ.

ಈಗ ನಾನೇನ್ಮಾಡಲಿ ಮಾವಯ್ಯ ಅಂತ ನನ್ನ ವಿಶಾಲು ಕೇಳಿದಳು. ಆ ದಿನವೇ ಸೊರಬದಿಂದ ಅವಳ ಮನೆಗೆ ಬಂದಿದ್ದೆ.

ಈ ವಿಷಯವೆಲ್ಲಾ ನನಗೇನು ತಿಳಿಯೋದು? ಬೇಗ ಬೇಗ ಬಸುರಾಗಿ ಹೆರುಕ್ಕೆ ಸಚಿವಗೃಹಕ್ಕೆ ಹೋಗೋದು ತಪ್ಪಲ್ಲ ಎಂದು ಹೇಳಿದೆ.

## ತೇಪೆ ಹಚ್ಚಿದ ಕೋಟು

ಸುರಿಮಳೆ, ಕೊರೆವ ಚಳಿ ಬಿರುಗಾಳಿ ಉರಿಬಿಸಿಲು
ತಿರುತಿರುಗಿ ಎರಗೆರಗಿ ನುಗ್ಗುಮುಗ್ಗಾಗಿಸಲು
ಮಾಸಿ ಲಡ್ಡಾಗಾಗಿ ಹರಿದಿತ್ತು ಅಲ್ಲಲ್ಲಿ
ಬಿರಿದಿತ್ತು ನನ್ನ ಬಾಳಿನ ಕೋಟು; ಅನಿತರಲಿ
ಬಂದೆ ನೀನರಸಿಂಪಿಗಿತ್ತಿ ಓ ನಲಿದೊಲೆದು
ನೇಹನಗೆ ನೆಮ್ಮದಿಯ ತೇಪೆ ಹಚ್ಚಿದೆ ಹೊಲಿದು
ಉಸಿರಾಡಿಸಿದೆ ಕೊಂಚ ಬಳಿಕ ನಾ ಚೇತರಿಸಿ
ಬದುಕು ಸಾರ್ಥಕವೆಂದೆ ಹೊಸ ಆಸೆಯಂಕುರಿಸಿ

ಆದರೊಳಗೊಳಗೆ ತಳಮಳಿಸುತಿದೆ ಮನ ನೊಂದು
ಹುಚ್ಚು, ಬದುಕಿದು ತೇಪೆ ಹಚ್ಚಿರುವ ಕೋಟೆಂದು
ಸಾಗಿ ಬರುವದು ಕೊರಗು ತೂಗಿ ತೆರೆ ತೆರೆಯಾಗಿ
ಎದ್ದೆದ್ದು ಏರೇರುವದು ಪರಂಪರೆಯಾಗಿ
ಬದಿಗೆ ನೀನಿದ್ದರೂ ಬೆಚ್ಚುತಿದೆ ಎದೆಯಾನೆ
ಹೊಲಿದಲ್ಲೆ ಬಿರಿವ ಚಾಪಲ್ಲೆ ಬಟ್ಟೆಗೆ ತಾನೆ?

—ಸೂರ್ಯ
ಪಾಂಡಿಚೇರಿ.

ಹರಟುವುದೂ ಸುಳ್ಳುಹೇಳುವುದೂ

ಅವಳಿ – ಜವಳಿ ಅಕ್ಕ – ತಂಗಿಯರು



# ಹರಟೆ

ಹರಟೆ ಹೊಡೆಯುವುದು, ಹರಟೆ ಕೊಚ್ಚುವುದು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತು. ಯಾರಿಗೂ ಅದು ಅಪರಿಚಿತವಲ್ಲ. ಆದರೆ ಎಲ್ಲ ಹರಟೆಯೂ ಸಾಹಿತ್ಯವೆನಿಸಲಾರದು. ಸಾಹಿತ್ಯಿಕ ಹರಟೆ ಕೆಲವೊಂದು ಲಕ್ಷಣಗಳಿಂದ ವೈಶಿಷ್ಟ್ಯಗಳಿಂದ ಕೂಡಿರುವುದು. ಈ ಸಾಹಿತ್ಯಿಕ ಹರಟೆಯೆಂದರೇನು? ಅದರ ಗುಣಲಕ್ಷಣಗಳೇನು? ಯಾವ ಯಾವ ಮಾದರಿಯ ಹರಟೆಗಳಿವೆ? ಈ ಮೊದಲಾದ ಸಂಗತಿಗಳನ್ನೆಲ್ಲ ಲೇಖಕರು ಸೋದಾಹರಣವಾಗಿ ಈ ಲೇಖನದಲ್ಲಿ ನಿರೂಪಿಸಿರುವರು. . .

ಲೇಖಕರು :
**ಪ್ರೊ. ಬಿ. ಎಚ್. ಶ್ರೀಧರ,**
ಆರ್ಟ್ಸ್ ಆ್ಯಂಡ ಸಾಯನ್ಸ ಕಾಲೇಜ, ಶಿರ್ಶಿ

“ ಯೋಗ್ಯವಾದ ವಸ್ತುವಿಲ್ಲದಾಗ ಹರಟೆ ಆರಂಭವಾಗುತ್ತದೆ; ಹರಟೆಯು ತನ್ನ ಬೇಟೆ ಸಾಯುವ ತನಕ ತಡೆಯದೆ, ಮೊದಲೇ ಅದನ್ನು ನುಂಗಿಬಿಡುವ ಮಾಂಸಾಹಾರಿ ಮೃಗ—ಹರಟುವುದೂ ಸುಳ್ಳು ಹೇಳುವುದೂ ಅವಳಿ-ಜವಳಿ ಅಕ್ಕತಂಗಿಯರು” ಎಂಬ ಮಾತುಗಳು ಎಲ್ಲರಿಗೂ ಸುಪರಿಚಿತ.

ಅಷ್ಟೇನೂ ಯೋಗ್ಯವೆನ್ನಿಸದ ವಿಷಯ ಹರಟೆಯದು—ಎಂಬ ಅಭಿಪ್ರಾಯವು ಹರಟೆಯ ಒಂದು ಲಕ್ಷಣವನ್ನು ಹೇಳುತ್ತದೆ. ಯಾವುದಕ್ಕೆ ಯೋಗ್ಯವಲ್ಲದ್ದು? ಮಾತಾಡಲು ಕುಳಿತವರ ಸ್ಥಾನಮಾನಗಳಿಗೆ, ವ್ಯಕ್ತಿತ್ವಕ್ಕೆ, ಚಾರಿತ್ರ್ಯಕ್ಕೆ ಅಥವಾ ಕುಳಿತಂಥ ದೇಶ-ಕಾಲ-ಸಂದರ್ಭಗಳಿಗೆ ! ಆದರೆ ಅನೌಚಿತ್ಯಕ್ಕಿಂತ ಹೆಚ್ಚಿನ ರಸಭಂಗಕಾರಣವಿನ್ನೊಂದಿಲ್ಲವೆಂಬ ವಿಮರ್ಶನೀತಿಯಿದೆ. ಇದಕ್ಕೇನೆನ್ನಬೇಕು ?

ಹಾಸ್ಯವು ನವರಸಗಳಲ್ಲಿ ಬಹಳ ವಿಲಕ್ಷಣವಾದುದು. “ ಅನೌಚಿತ್ಯವು ಹಾಸ್ಯದ ಆತ್ಮ” ಎಂಬ ಒಂದು ಹೇಳಿಕೆಯಿದೆ. ಆದರೆ ‘ ಅಯುಕ್ತ ’, ‘ ಅಯೋಗ್ಯ’, ‘ ಅನುಚಿತ ’ ಎಂದು ಯಾವುದನ್ನಾದರೂ ಸರ್ವ ಸಂದರ್ಭಗಳಲ್ಲೂ ಹೇಳಲು ಸಾಧ್ಯವೇ ? ಸಾಧ್ಯವಿಲ್ಲ. ಸಂದರ್ಭವಶಾತ್ ಗುಣವು ದೋಷವಾದೀತು, ದೋಷವು ಗುಣವೆನಿಸೀತು. ಹೀಗೆ ಹರಟೆಯಲ್ಲೊಂದು ಖಾಸಗಿತನವಿದೆ, ಶ್ರಾವಕ-ವಾಚಕ ವರ್ಗಗಳ ಹೆಚ್ಚಿನ ಪರಿಚಯಜನ್ಯವಾದ ಕ್ಷಮಾಗುಣವನ್ನು ಗೃಹೀತವೆಂದಿಟ್ಟುಕೊಂಡು ಮುನ್ನಡೆಯುವ ಮನಃಪ್ರಣಾಳಿ ಅಡಗಿದೆ. ಇದು ಹಾಸ್ಯ-ಹರಟೆಗಳಿಗೆ ಸಾಧಾರಣ. ಅದರಿಂದಲೋ ಏನೋ ಹರಟೆ ಅನೇಕ ಸಂದರ್ಭಗಳಲ್ಲಿ ತಿಳಿಹಾಸ್ಯದ ಶೈಲಿಯಲ್ಲೇ ಸಾಗುತ್ತದೆ.

ಆದರೆ ಹರಟೆಯ ಸ್ಥಾಯೀಭಾವ ಯಾವಾಗಲೂ ಹಾಸವೇ ಆಗಿರುತ್ತದೆ ಎಂಬ ನಿಯಮವಿಲ್ಲ; ಅದರ ಸ್ವರೂಪ ಗದ್ಯವೇ ಆಗಿರಬೇಕೆಂದೂ ಯಾರೂ ಸರ್ವಾಧಿಕಾರೋಕ್ತಿಯನ್ನಾಡಲಾರರು. ಗದ್ಯವನ್ನು ಹರಟೆಗನ್ವಯಿಸುವುದು ರೂಢಿ. ಹರಟೆಯ ಲಘುತ್ವವಿರುವುದು ಅದರ Non-chalance (ಅನುದ್ರೇಕ, ಅಕ್ಷೋಭ ಅಥವಾ) ಅಲಕ್ಷ್ಯಭಾವದಲ್ಲಿ. ಯಾವುದರ ಬಗ್ಗೆ ಅಲಕ್ಷ್ಯ ? ಮಾತಿನ ವರಸೆಗಳ ವಾಚ್ಯಪರಿಣಾಮಕತೆಯ ಬಗ್ಗೆ ಹರಟೆಗಾರ ಹೆಚ್ಚು ಲಕ್ಷ್ಯಹಾಕದಿರುವುದು ಸಾಮಾನ್ಯ—ಎಂದು. ಆದರೆ ಗುರಿಯಿಟ್ಟು ಹರಟೆ ಹೊಡೆಯುವ ತಂತ್ರಜ್ಞ ಅಥವಾ ಸಾಹಿತಿ ಏನು ಮಾಡುತ್ತಾನೆ ? ಅಲಕ್ಷ್ಯವನ್ನು ನಟಿಸುತ್ತಾನೆ—ಅಷ್ಟೆ.

ವಾಸ್ತವಿಕ ಜೀವನದ ಎಲ್ಲ ಹರಟೆಗಳಲ್ಲೂ ಸಾಹಿತ್ಯಿಕ ಗುಣವಿದೆಯೆಂದು ಹೇಳಲು ಸಾಧ್ಯವಿಲ್ಲ. ಅವುಗಳಲ್ಲಿ ಹಲವು ಗ್ರಾಮ್ಯ (Unliterary) ವಾಗಿರುತ್ತವೆ. ಸಾಹಿತ್ಯವೆಂದಾದರೂ ಜೀವನದ“ನೊಣಪ್ರತಿ” ಎನ್ನಿಸೀತೇ ? ಹಾಗೆ ನೊಣಪ್ರತಿಗಳೆನ್ನಿಸುವ ಹರಟೆಗಳನ್ನು ಹರಟೆ, ನಾಟ್ಯಚ್ಛಟ, ಸಾಮಾಜಿಕನಾಟಕಗತಸಂವಾದ, ಭಾಷಣ, ಮುನ್ನುಡಿ, ವಿಮರ್ಶೆ, ಪರಿಚಯ, ನವ್ಯಕಾವ್ಯ ಮುಂತಾದ ಹೆಸರುಗಳಲ್ಲಿ ಹೊರಬಿದ್ದ ಕೆಲ ಹೊತ್ತಗೆಗಳಲ್ಲಿಂದು ಕಾಣಬಹುದು. ಪ್ರಸಾದ, ಮಾಧುರ್ಯ, ಓಜಸ್ಸುಗಳಲ್ಲಿ ಒಂದೂ ಇಲ್ಲದ ಬರಹದಲ್ಲಿ ಕಾವ್ಯಗುಣವಿನ್ನಾವುದಿರಲು ಸಾಧ್ಯ ?

“ ಹಳೆ ಹರಟೆಯ ಮನೆತನ ದೊಡ್ಡದ್ದು. ರಾಜರ ಸುಖಸಂಕಥಾವಿನೋದದಲ್ಲಿ ಮೊಳೆತು, ಪಂಡಿತರ ಕಾವ್ಯಶಾಸ್ತ್ರವಿನೋದದಲ್ಲಿ ಚಿಗಿತು, ಕವಿಗಳ ಅಕ್ಕರಗೊಟ್ಟಿಯಲ್ಲಿ ಬೆಳೆದು ವೇಶ್ಯಾವಾಟದ ವಿಟವಿದೂಷಕರಲ್ಲಿ ಶಾಖೋಪಶಾಖೆಯಾಗಿ, ಚದುರೆಯರ ಮಾತಿನಲ್ಲಿ ಹೂತು, ವಿಲಾಸವಿಲಾಸವಾಗಿ ಅದು ನಾಟ್ಯವಾಡಿದೆ. ಇಂದು ಇನ್ನೊಂದು ಮನ್ವಂತರಕ್ಕೆ ಮೊದಲಾಯಿತು;” ಮತ್ತು “ ಸಾಮಾನ್ಯ ಜನರು ಗಂಭೀರ ವಿಷಯಗಳಿಗೆ ಬೇಸರಿಯುವುದರಿಂದಲೂ ಹಾಸ್ಯವು ಎಲ್ಲರಿಗೂ ಬೇಕಾಗುವುದರಿಂದಲೂ ಅಕುಟಿಲ ಹಾಸ್ಯವು ಹಿರಿಯರಿಗೂ ರಂಜಿಸುವುದರಿಂದಲೂ ಕೊಂಕುವೆತ್ತ ಪೊಸನುಡಿಯು ನೇರವಾಗಿ ಎದೆಯನ್ನು ಸೇರುವುದರಿಂದಲೂ ಹರಟೆಯು ಜಡಾನ್ನವಾಗದೆ, ವ್ಯಂಜನಪದಾರ್ಥಮಿಶ್ರವಾದ ಅಲ್ಪಾಹಾರದಂತೆ ಸೊಗಸಾಗುವುದರಿಂದಲೂ ದಿನಾಲು ವಿರಾಮಕಾಲಕ್ಕೆ ವಿನೋದವಾಗಿ ಏನಾದರು ಓದಲು ದೊರೆಯಬೇಕೆಂಬ ಜನರ ಸಂಖ್ಯೆಯು ಬೆಳೆಯುತ್ತಿರುವುದರಿಂದಲೂ ಈ ಸಾಹಿತ್ಯಪ್ರಕಾರಕ್ಕೆ ಒಂದು ಕಳೆ ಬರಲಿದೆ. ಹಾಗೆ ಕಲೆಗೆ ಯುಕ್ತವಾದ ಕಳೆಯು ಇದಕ್ಕೂ ಬಂದರೆ ಇದೂ ಉಳಿಯಬಹುದು—ಇಲ್ಲದಿದ್ದರೆ ಅಳಿಯಬಹುದು.”

—ದ. ರಾ. ಬೇ.

ಹಾಸ್ಯ ಅವಿನಾಭಾವಿಯಾದ ಹರಟೆಯಲ್ಲಿ ಹಾಸ್ಯಪ್ರಕಾರಗಳೆಷ್ಟುಂಟೋ ಅಷ್ಟು ವಿಭಾಗಗಳನ್ನು ಮಾಡಬಹುದು. ಆದರೆ ಹಾಸವನ್ನು ರೀತಿಯ ಸ್ಥಾನದಲ್ಲಿಟ್ಟುಕೊಂಡು ರತಿ, ಕ್ರೋಧ, ಭಯ, ಉತ್ಸಾಹ, ಜುಗುಪ್ಸೆ, ಶಮ, ಶೋಕ, ವಿಸ್ಮಯಗಳನ್ನು ಮೂಡಿಸುವ ಚಾತುರ್ಯವುಳ್ಳ ಹರಟೆಪ್ರಬಂಧಗಳು ಮೂಲಭೂತವಾದ ಒಂಭತ್ತರಲ್ಲಿ ಎಂಟೆನ್ನಿಸಬಹುದು; ಹಾಸ್ಯವನ್ನು ಮೂಡಿಸುವದು ಹರಟೆಯ ಒಂಭತ್ತನೆಯ ಮೂಲಭೂತ'ವರ್ಗ. ಅದರ ಕುರಿತಾಗಿಯೇ ಮೇಲೆ ಶ್ರೀ. ದ. ರಾ. ಬೇ. ಅವರಮಾತುಗಳನ್ನು ಉದ್ಧರಿಸಿ ಹೇಳಲಾಗಿದೆ.

ಹಾಸ್ಯದ ಮೂಲಕವಾಗಿ ಕರುಣವನ್ನು ಪ್ರಚೋದಿಸುವ ಕಠಿನ ಕರ್ಮವನ್ನು ಷೇಕ್ಸ್‌ಪಿಯರನು "ಕಿಂಗ್‌ಲಿಯರ್" ಎಂಬ ಆವಿದ್ಧ ಪ್ರಯೋಗದಲ್ಲಿ ಯಶಸ್ವಿಯಾಗಿ ಮಾಡಿ ತೋರಿಸಿದ್ದಾನೆ. ಜೀವನದ ಎಷ್ಟೋ ಸಂವಾದಗಳಲ್ಲಿ ಅಂಥ ದುಃಖವ್ಯಂಜಕ ಹಾಸ್ಯೋಕ್ತಿಗಳ ರಸನಿಮಿಷಗಳನ್ನು ನಾವು ಅನುಭವಿಸಬಲ್ಲೆವು.

ಹಾಸ್ಯವು ಶೃಂಗಾರಕ್ಕೆ ಮಿತ್ರರಸ ಎಂದಿರುವಲ್ಲಿ "ನಗೆಯು ಪ್ರೇಮಪ್ರವೇಶಕ್ಕಾಗಿ ಎದೆ ತೆರೆದುಕೊಡುತ್ತದೆ" ಎಂಬ ಮೆರಿಡಿತ್ ಮಹಾಶಯನ ಮಾತು ಸ್ಮರಣೀಯ. ಹೀಗೇ ಚಾಟು-ಕಟು-ಚತುರೋಕ್ತಿಗಳಿಂದ ಕೂಡಿದ, ಕಥನ-ವರ್ಣನ-ವಿವರಣ--ವಿವೇಚನಾಂಶಗಳನ್ನೊಳಗೊಂಡ, ವಾಚ್ಯ-ಲಕ್ಷ್ಯ-ವ್ಯಂಗ್ಯಗಳೆಂಬ ಶಕ್ತಿತ್ರಯದಲ್ಲಿ ಒಂದರ ಮೂಲಕ ಲಘುತ್ವದ ಅಥವಾ ಶಿಥಿಲತ್ವದ (ಹರಟೆಗಾರನ) ದೃಷ್ಟಿಕೋನವನ್ನು ಬಿಂಬಿಸುವ ಗದ್ಯದ ಅಥವಾ ಪದ್ಯದ ರೂಪವುಳ್ಳ ಪ್ರಬಂಧವೇ ಲಘು-ಪ್ರಬಂಧ ಅಥವಾ ಹರಟೆ. ಆದುದರಿಂದ ಹರಟೆಯ ಅವಚ್ಛೇದಕ (Differentia) ಇರುವುದು ನಿಜವಾದ ಅಥವಾ ತೋರಿಕೆಯ **ಲಘುತ್ವದ ಮನಃಪ್ರಣಾಲಿಯ ಪ್ರದರ್ಶನದಲ್ಲಿ.** ಹರಟೆಯು ಅತಿ ಘನೋಕ್ತಿಗಳ ಅಥವಾ ಅತಿ ಹುಲುನುಡಿಗಳ ಮೂಲಕ ಉಕ್ತ (ಗ್ರಂಥಕರ್ತೃಗತ) ಲಘುಮನೋಧರ್ಮಾಂಶವನ್ನು ಪ್ರಕಟಿಸುತ್ತದೆ. ಆ ಧರ್ಮಾಂಶವೊಂದು ಸಂಚಾರಿಭಾವ. ಅದು ಪ್ರಬಂಧದ ಆದಿ-ಮಧ್ಯ-ಅಂತಗಳ ಉದ್ದಕ್ಕೂ ಹಿನ್ನೆಲೆಯಾಗಿರುತ್ತದೆ; ಅದೊಂದು ಹರಟೆಗಾರಿಕೆಯ Assumed or Real ಕೃತಕ ಅಥವಾ ನಿಜವಾದ ಮನೋಭೂಮಿಕೆ ಎಂಬುದು ಪ್ರತಿಯೊಬ್ಬ (ಹರಟೆಯ) ಓದುಗನಿಗೂ ಗೊತ್ತಾಗುವಂತಿರುತ್ತದೆ. ಆದರೆ ಆ ಲಘುತ್ವದ ಪ್ರವೃತ್ತಿಯ ದೆಸೆಯಿಂದ ಹರಟೆಯಲ್ಲಿ ಗ್ರಾಮ್ಯತ್ವ ಬರಬಾರದು; ಅದರ ಆಭಾಸ ಒಮ್ಮೆ ಬಂದರೆ ಕ್ಷಮ್ಯ. ಗ್ರಾಮ್ಯತ್ವವು ಅರಸಿಕತೆ, ಅಸಾಹಿತ್ಯಿಕತೆ (unliteraryness), ಅಸಭ್ಯತೆ (Indecency) —ಸಾಹಿತ್ಯಿಕವಾದ ಅಸಭ್ಯತೆ. ಅದರ ನಿರ್ಣಯವು ವಕ್ತೃ-ಶ್ರೋತೃಗಳ ಸಾಹಿತ್ಯ-ಸಂಸ್ಕಾರದ ಮಟ್ಟವನ್ನು ಅವಲಂಬಿಸಿರುತ್ತದೆ. ಏಕೆಂದರೆ ಒಬ್ಬರಿಗೆ ಉದ್ವೇಗಜನಕವಾದುದು ಇನ್ನೊಬ್ಬರಿಗೆ ಯಾವಾಗಲೂ ಉದ್ವೇಗಜನಕವಾದೀತೆಂದು ಹೇಳಲು ಸಾಧ್ಯವಿಲ್ಲ.

ಕೆಲವೊಮ್ಮೆ ಹರಟೆಗಿರುವುದು Nonsense ವ್ಯರ್ಥಾಲಾಪಕ್ಕಿರುವಂತಹ ಅಸಾಂಗತ್ಯದ ಹೊದಿಕೆ. ಆದರ ಹೂರಣ (Content) ಎಂದೂ ಅಸಂಗತವಲ್ಲ; ಒಮ್ಮೆ ಹೂರಣ ಅಸಾಂಗತ್ಯಮಿಶ್ರವಾಗಿದ್ದರೂ ತಾತ್ಪರ್ಯ ಅಸಂಗತವಾಗಿರದು. ಅತ್ಯುತ್ತಮವಾದ ಹರಟೆಯ ಶೈಲಿ ಅಥವಾ ರೂಪರೇಷೆ (Form) ಅತಿಶಿಥಿಲ, ಹೂರಣ ಅತಿಶ್ಲಿಷ್ಟ. Serio-comic (೧) ಪ್ರಚ್ಛನ್ನಗಂಭೀರತಾತ್ಪರ್ಯ ಮತ್ತು ಪ್ರಕಟವಾದ ಲಘೂಕ್ತಿಗಳು ಬಂದಿರುವುದೊಂದು; (೨) ಪ್ರಕಟಗಂಭೀರಪದಬಂಧ ಮತ್ತು ಪ್ರಚ್ಛನ್ನಲಘುತಾತ್ಪರ್ಯ ಬಂದಿರುವುದಿನ್ನೊಂದು--ಹೀಗೆ ಅದರ ಶೈಲಿ ಇಬ್ಬಗೆಯದಾಗಿರಬಲ್ಲದು. ಇಂಗ್ಲೀಷ್ ಸಾಹಿತ್ಯದಲ್ಲಿರುವ "ಗಲಿವರ್ಸ್ ಟ್ರಾವಲ್ಸ್", ಡಾನ್‌ಕ್ವಿಕ್ಸೋಟನ ಸಾಹಸಕತೆಗಳು ಮುಂತಾದವು ಗಂಭೀರ ತಾತ್ಪರ್ಯವುಳ್ಳ ಲಘುಪ್ರಬಂಧದ ಜಾತಿಗೆ ಸೇರಿದಂಥವೆಂದು ಒಂದು ದೃಷ್ಟಿಯಿಂದ ಸ್ಥೂಲವಾಗಿ ಹೇಳಬಹುದು. ಮೇಲಿನ ಎರಡು ವಿಭಜನೆಗಳನ್ನು ನಿಂದಾವ್ಯಾಜದಿಂದ ಮಾಡುವ ಸ್ತುತಿಗೂ ಸ್ತುತಿವ್ಯಾಜದಿಂದ ಮಾಡುವ ನಿಂದೆಗೂ ಹೋಲಿಸಬಹುದು. ಗಂಭೀರಪದಬಂಧವೂ ಲಘುತಾತ್ಪರ್ಯವೂ ಉಳ್ಳ ಹರಟೆಯ ಕ್ರಮ ಆಂಗ್ಲ ಗ್ರಂಥವಾದ "ಪಿಕ್‌ವಿಕ್ ಪೇಪರ್ಸ್"ನಲ್ಲಿ ಬಂದಿದೆ ಎನ್ನಬಹುದು. ಈ ಸಂದರ್ಭದಲ್ಲಿ ಚಾಟೂಕ್ತಿಗಳಿಗವಕಾಶ ಹೆಚ್ಚು.

ಮತ್ತೆ ಕೆಲವೊಮ್ಮೆ ಹರಟೆಯು ಕಟೂಕ್ತಿನಿಬದ್ಧವಾಗಿರಬಹುದು. ಇಲ್ಲಿ ವಿಪರೀತ ಲಕ್ಷಣೆಯುಳ್ಳ ವಿಡಂಬನೆ (Satire) ಹೆಚ್ಚು; ಗೇಲಿ, ಲೇವಡಿ, ಕುಚೇಷ್ಟೆಗಾರಿಕೆಗಳು ಕಡಿಮೆ—ತಾತ್ಪರ್ಯದ ಗಾಂಭೀರ್ಯ ಉಗ್ರ. ಇದರದು ಪುಚ್ಛದಲ್ಲಿ ವಿಷವುಳ್ಳ ಹಾಸ್ಯವಾಗಲೂಬಹುದು. ಇದರ ಬಿಂಕ ಇದರದೇ ಸರಿ.

ಈ ಉಭಯಸಂದರ್ಭದ ಹರಟೆಗಳಲ್ಲಿ "ವಕ್ರೋಕ್ತಿಯ ರೀತಿ, ಸುಭಾಷಿತಗಳ ಚಮತ್ಕಾರ, ಅನ್ಯೋಕ್ತಿಯ ಬೆಡಗು, ಕಿರಿಮಾತು-ಕುಸುರಿಮಾತು--ಶ್ಲೇಷೋಕ್ತಿ-- ವ್ಯಾಜೋಕ್ತಿ ಮೊದಲಾದ ಉಕ್ತಿಪ್ರಕಾರಗಳು, ಹಾಸ್ಯದಲ್ಲಿದ್ದ ಉಪಮೆ-ರೂಪಕಾದಿಗಳು, ಮಾತಿನ ಜಾಣರ ಮುಂಗಾಲುಪುಟಿಕೆಯ ಮಾತು, ಹರಿಕಥೆಯವರ ಅಡ್ಡಕಥೆ, ಅಡ್ಡಮಾತು, ಅಡ್ಡನಗೆ" ಇವೆಲ್ಲವೂ ಬಂದದ್ದುಂಟು. ಕೊಂಕು-ಅಣಕುಗಳು ಬರಬಹುದು; ಆದರೆ ಕೊಳಕು ಮಾತು ಬರಬಾರದು. ಹರಟೆ ಯಾವಾಗಲೂ ಹುಡುಗಾಟಿಕೆಯದಲ್ಲ. ಹುಡುಗಾಟದ ಹರಟೆಯು ಕೇವಲ ಭಾವವ್ಯಂಜಕವಾದುದಾದರೆ ಹುರುಳುಳ್ಳ ಹರಟೆಯು ಭಾವೋತ್ತರ ತತ್ವಧ್ವನಿಯುಳ್ಳದ್ದು.

ಮೇಲಿನ ವಿಶ್ಲೇಷ-ವಿವರಣೆಗಳಿಂದ ಹರಟೆ ಮತ್ತು ಹಾಸ್ಯಲೇಖನಗಳ ಭೇದವು ಸಾಮಾನ್ಯರ ತಿಳಿವಳಿಕೆಯಂತೆ ಅನಿರ್ದಿಷ್ಟವಾಗಿರುವುದು ಸ್ಪಷ್ಟವಾಗುತ್ತದೆ. ಹಾಸ್ಯಪ್ರಧಾನವಾದ ಹರಟೆಯೇ ಹರಟೆಯೆಂಬ ಸಾಮಾನ್ಯ ತಿಳಿವಳಿಕೆಯ ಪಾಕ್ಷಿಕ ಸತ್ಯವನ್ನು ಈ ದೃಷ್ಟಿಕೋನವು ಆಧರಿಸಿರುವುದು ಕಂಡುಬರುತ್ತದೆ. ಅದರಿಂದಲೇ ಬಹುಶಃ ಇಂದಿನ ಅನೇಕಮಿಶ್ರಶ್ರಾವಕರು (Mixed audience) ಹರಟೆಯ ರೂಪದ ಭಾಷಣವನ್ನು ಹೆಚ್ಚಾಗಿ ಮೆಚ್ಚುತ್ತಾರೆ. ಸಂಪೂರ್ಣ ಸೈನಿಕಶಿಸ್ತಿನ ವಿಚಾರನಿಯಮಬದ್ಧವಾದ ಉಪನ್ಯಾಸಕ್ಕಿಂತಲೂ ಈ ಬಗೆಯ ಸಂಬದ್ಧಾಸಂಬದ್ಧ ವಿಷಯಗಳ ಮಾನಸಶಾಸ್ತ್ರೀಯ ಮಿಶ್ರಣದಿಂದೊಡಗೂಡಿದ ಅಸ್ಫುಟ, ಪರೋಕ್ಷ-ವ್ಯವಸ್ಥೆಯುಳ್ಳ ವಿಚಾರ-ಸಂಗತಿಗಳನ್ನುಳ್ಳ Free Talk **ಮುಕ್ತಛಂದವು** ಸಾಮಾನ್ಯ ಜನರಿಗೆ ಈಗ ಪ್ರಿಯವಾಗುತ್ತ ಹೋಗಿದೆ—ಓದಲು ಅಲ್ಲದಿದ್ದರೂ ಕೇಳಲು! ಅಸಂಬದ್ಧ ಪ್ರಲಾಪವನ್ನು ಮೆಚ್ಚುವವರೂ ಇರಬಹುದು— ಆದರೆ ಅವರು ವಿಮರ್ಶಾಬಾಹಿರರು.

Light Essay ಅಥವಾ ಲಘುಪ್ರಬಂಧ, ಹರಟೆ, ಹಾಸ್ಯಲೇಖನ, ವಿಡಂಬನೆ, ನಗೆಬರಹ, ಚುಟುಕು, ಹಾಸ್ಯದ ಹನಿ, ನಗೆಬುಗ್ಗೆ ಮುಂತಾದ ಹೆಸರುಗಳಲ್ಲಿ ಅಚ್ಚಾದವುಗಳನ್ನು ಮೇಲಿನ ವಿಚಾರದ ಪ್ರಕಾರ ಹರಟೆಯ ವರ್ಗಕ್ಕೆ ಸೇರಿಸಬಹುದು. ಹರಟೆಯೊಮ್ಮೆ Monologue ಏಕಪಾತ್ರದ ಅಂತಶ್ಚಿಂತನದ ಉದ್ಗಾರವಾಗಿರಬಹುದು. ಬಹುಪಾತ್ರಗಳ ಸಂವಾದವಾಗಿಯೂ ಇರಬಹುದು— ಆದರೆ ಆ ಸಂವಾದವು ಕಾರ್ಯ (Action) ಪ್ರಧಾನವಾದ ನಾಟಕದ ಸಂವಾದವಲ್ಲ. (ಕಾರ್ಯಪ್ರಧಾನವಲ್ಲದ ನಾಟಕಾಭಾಸಗಳ ಮಾತು ಬೇರೆ!) ಪುರುಷತ್ರಯದ ಯಾವ ಭಂಗಿ-ಭಣತಿಯಲ್ಲಿ ಬೇಕಾದರೂ ಹರಟಬಹುದು. "ಕರ್ಮವೀರ" ಪತ್ರಿಕೆಯಲ್ಲಿ ಪ್ರತಿವಾರವೂ ಬರುವ "ಓದುಗರೊಡನೆ ಹರಟೆ" ಎಂಬವುಗಳಲ್ಲಿ ಹರಟೆಯ ಅನೇಕ ಮಾದರಿಗಳನ್ನು ಗುರುತಿಸಬಹುದು. ಅವೆಲ್ಲಾ ಶಾಸ್ತ್ರೀಯವಾದ ಹರಟೆಗಳು; ಮೇಲೆ ಹೇಳಿದ ಹಲವಾರು ತರಹಗಳ ಶೈಲಿ- ರೀತಿ-ವೃತ್ತಿಗಳ ಶುದ್ಧ-ಮಿಶ್ರ ಉದಾಹರಣೆಗಳನ್ನಲ್ಲಿ ಕಾಣಬಹುದು.

ಹರಟೆಗಳು ಅಥವಾ ಲಘುಪ್ರಬಂಧಗಳು ಭಾರತದ ನವನಾಗರಿಕತೆಯ ನಿರ್ಮಾಣದ ಸಂದರ್ಭದಲ್ಲಿ ಉದ್ಭವಿಸುತ್ತಿರುವ ಹಲವಾರು ಲೋಪದೋಷಗಳನ್ನು ಉದ್ಘಾಟಿಸಿ, ಅವಕ್ಕೆ

ತಕ್ಕ ಪರಿಹಾರವನ್ನೂ (ಬೇಕಾದರೆ) ಸೂಚಿಸಿ **ಕಾವ್ಯಗುಣವಿಮುಖವಾಗದೆ** ನಡೆದರೆ, ಅವು ಸದ್ಯದ ಐತಿಹಾಸಿಕ ಸಂದರ್ಭದಲ್ಲಿ ತಕ್ಕ ಶಿಕ್ಷಣಮಾಧ್ಯಮದ ಕಾರ್ಯವನ್ನು ಮಾಡಿದಂತಾಗುವುದು. ಆದರೆ ಓದುಗರು ಮಾತ್ರ ಪತ್ತೆದಾರಿ ಕಾದಂಬರಿಯ ಮಟ್ಟದಿಂದ ಮೇಲಕ್ಕೆ ಏರಬೇಕು. ಇತ್ತೀಚೆಗೆ ಇಲ್ಲಿ ಒಂದು ಪುಸ್ತಕ ಭಾಂಡಾರಕ್ಕಾಗಿ ಬಂದ ಬೇಡಿಕೆಯಲ್ಲಿ ನೂರು ರೂಪಾಯಿಗಳ ಬೆಲೆಯ ಪತ್ತೆದಾರಿ ಕಾದಂಬರಿಗಳನ್ನೇ ಕಳಿಸಬೇಕೆಂದಿದ್ದುದು ನಮ್ಮ ಗ್ರಾಮೀಣವಾಚಕರ ಸಂಸ್ಕಾರದಾರಿದ್ರ್ಯವನ್ನು ಬೊಟ್ಟುಮಾಡಿ ತೋರಿಸುತ್ತದೆ. ಕುಲ ಕುಟುಂಬಗಳ ದುರಭಿಮಾನಗಳನ್ನೂ ಉಜ್ವಲವಾಗಿ ಉಳಿದಿರುವ ಹಳ್ಳಿಗಳ ಮನೆತನದವರ ಅಭಿರುಚಿ ಬಹಳ ಸಲ ಈ ಮಟ್ಟದಿಂದ ಮೇಲಕ್ಕೇರಿಲ್ಲ. ಅದನ್ನು ಏರಿಸುವುದು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಕರ ಕರ್ತವ್ಯ. ಅಂಥ ಕರ್ತವ್ಯದಲ್ಲಿ ನಿಯತವಾದ ಶಾಲಾಕಾಲ ಮೀರಿ ಅವರು **ಸಪರಿಹಾರವಾಗಿ** ದುಡಿಯುವಂತೆ ಏರ್ಪಡಿಸುವುದು ಗ್ರಾಮ— ಪಟ್ಟಣಗಳಲ್ಲಿಯ ಮುಖಂಡರ ಪಾಲಿನ ಹೊಣೆ.

ತತ್ವೋಪದೇಶಕ್ಕಾಗಿ ಹೊರಟ **ಮುದ್ದಾಂ** ಕೃತಿಗಳಲ್ಲಿ ಇಂದು ಕತೆ, ಕಾದಂಬರಿ, ಕವಿತೆ, ನಾಟಕಗಳು ಮಾಡಿದಷ್ಟು ಕಾವ್ಯವಿಮುಖತೆಯ ಅಪರಾಧವನ್ನು ಹರಟೆಗಳು ಮಾಡಿಲ್ಲ. ಕಾವ್ಯಗುಣವನ್ನು ಕಡೆಗಣಿಸಿ ಬರೆದ ಪ್ರಚಾರ ಸಾಹಿತ್ಯವು ತ್ಯಾಜ್ಯ; ಅದು ಕಾವ್ಯ ಸಂಪತ್ತನ್ನೂ ಹೆಚ್ಚಿಸದು, ಪ್ರಚಾರಕಾರ್ಯವನ್ನೂ ಸಮರ್ಥವಾಗಿ (ಶುದ್ಧವಾದ ನೇರ ಪ್ರಚಾರಕ್ಕಿಳಿವ ಕೃತಿಗಳಂತೆ) ನೆರವೇರಿಸದು. ಅದರ ಪಾತ್ರಗಳು ತಪ್ಪದೆ ಯಾಂತ್ರಿಕ, ನಿರ್ಜೀವ ಮತ್ತು ಅವೈಶಿಷ್ಟ್ಯಪೂರ್ಣ. ಹರಟೆಯು ಅದಕ್ಕಿಂತ ಕಾವ್ಯಗುಣಸಾಂದ್ರತೆಯಲ್ಲಿ ಹೆಚ್ಚು ನಿರಂಕುಶ ಎಂದು ಧಾರಾಳವಾಗಿ ಹೇಳಬಹುದು. ಅದರಲ್ಲೂ ಅದು ಗದ್ಯರೂಪದಲ್ಲಿರುವಾಗ! ಪ್ರಕಟ ನೀತಿಬೋಧದಲ್ಲಿ ಎಂದಿನಿಂದಲೂ ಕತೆ-ಕವಿತೆಗಳು ಯಶಸ್ವಿಯಾಗಿ ಕಾರ್ಯ ಮಾಡುತ್ತ ಬಂದದ್ದು ಹೆಚ್ಚು. ಅವುಗಳ Didactism ನೀತಿಬೋಧಪರತೆ ಜನರಿಗೆ ಎಂದಿನಿಂದಲೂ ಒಗ್ಗಿದ್ದು. ಆದರೆ ಕೃತಕವೆನ್ನಿಸುವ ಪಾತ್ರಗಳುಳ್ಳ ಕಾದಂಬರಿ ನಾಟಕಗಳು ಸರ್ವಕಾಲದಲ್ಲಿ ಸರ್ವರಿಗೂ ಜುಗುಪ್ಸಾವಹ. ಹರಟೆಯ ರಚನೆಯಲ್ಲಿ ಸ್ವಾಭಾವಿಕವಾದ ಸ್ವಾತಂತ್ರ್ಯಾತಿಶಯವಿರುವುದರಿಂದ ವಿಚಾರಪ್ರಚೋದಕ ಪ್ರಬಂಧದಲ್ಲಿಯ ಶಬ್ದದ ಅಥವಾ ಅರ್ಥದ (ಇಲ್ಲವೆ ಎರಡರ) ಗಡಚುತನವನ್ನು ತಾರದೆ, ಮನೋರಂಜನೆಯ ಮೂಲಕವಾಗಿಯೇ ಯಶಸ್ವಿಯಾಗಿ ಸಾಮಾನ್ಯರಲ್ಲಿ ವಿಚಾರ ಪ್ರಚೋದನದ ಪರಿಣಾಮವನ್ನು ಅಪ್ರತ್ಯಕ್ಷವಾಗಿ ಉಂಟುಮಾಡಿಬಿಡಬಹುದು. ಆದರ್ಶದ ಮಾನದಿಂದ ಮಾತನಾಡಿದರೆ ಉತ್ತಮ ಹರಟೆಯನ್ನು ಬರೆಯುವುದೂ ಅತಿ ಕಷ್ಟ; ಅದರ ಸೂಕ್ಷ್ಮಾತಿಸೂಕ್ಷ್ಮ ಟೀಕಾಧ್ವನಿಗಳ ಅರ್ಥವನ್ನು ಕೂಲಂಕಷವಾಗಿ ತಿಳಿದುಕೊಳ್ಳಬಲ್ಲ ಸಂಸ್ಕೃತರು ಸಿಗುವುದೂ ದುರ್ಲಭ.

ಈಗ ಹರಟೆಗಳ ಕೆಲ ಉದಾಹರಣೆಗಳನ್ನು ಪ್ರತ್ಯಕ್ಷ ಅವಲೋಕಿಸೋಣ :

(೧) ಮಳೆ ಬಂದರೆ ಸಡಗರ; ಬರದಿದ್ದರೆ ದುಃಖ. ಜೋರಾಗಿ ಬಂದರೆ ಕೋಪ; ಮೆತ್ತಗೆ ಬಂದರೆ ತಾಪ. ಕೊಡೆ ಇಲ್ಲದಿದ್ದವರಿಗೆ ಬೇಸರ; ಕೊಡೆ ಇದ್ದವರಿಗೆ ಕಾತರ. ಬಟ್ಟೆ, ಮನೆ, ವಸ್ತುಗಳಿಗೆಲ್ಲ ತೊಂದರೆ; ರಸ್ತೆಗಳು, ಚರಂಡಿಗಳು ಇವುಗಳಿಗೆ ಆನಂದ!

(೨) ಪುಟ್ಟಾಚಾರಿಯನ್ನು ನಾನು ನೋಡಿದ್ದೆ. ಎಷ್ಟೋ ಸಾರಿ ಅವನೊಡನೆ ಹರಟೆ ಹೊಡೆದಿದ್ದೆ. ಚಿಕ್ಕವನಾಗಿದ್ದ ನನಗೆ ಅವನ ಹರಟೆಗಳು ರಾಮಾಯಣ ಮಹಾಭಾರತಗಳಂತೆಯೇ ಮನೋಹರವಾಗಿದ್ದವು. ಅವನ ಹರಟೆ ಎಂದರೆ ಕಾಡುಹರಟೆಗಳಲ್ಲ; ಕಾಡಿನ ಹರಟೆಗಳು. ನಮ್ಮೂರಿನಲ್ಲಿ ಅವನೊಬ್ಬ ದೊಡ್ಡ ಬೇಟೆಗಾರನಾಗಿದ್ದ. ಅವನದು ನುರಿತ ಕೈ. ಇಟ್ಟಗುರಿ ತಪ್ಪುತ್ತಿರಲಿಲ್ಲ. ಪ್ರಾಣಿ ಎಷ್ಟು ವೇಗವಾಗಿ ಹಳುವಿನ ನಡುನಡುವೆ ಮಿಂಚಿ ಬಂದರೂ ಪುಟ್ಟಾಚಾರಿಯ ಕಂಡಿ ಅದರ ಭಾಗಕ್ಕೆ ಸಾವಿನೂರಿನ ಹೆಬ್ಬಾಗಿಲಾಗಿಯೇ ಬಿಡುತ್ತಿತ್ತು.

(೩) 'ಗಣೇಶಚತುರ್ಥಿ' ಅಂಬೋದು ನಮ್ಮ ರಾಷ್ಟ್ರೀಯ ಹಬ್ಬ—ಇದು ನಿಮಗೆಲ್ಲಾರಿಗೂ ಗೊತ್ತೇ ಅದೆ' ಅಂತ ದನಿ ತೆಗೆದರು ನಮ್ಮ ರಾಮಾಶಾಸ್ತ್ರಿಗಳು. ಅದೇನಪಾ ಅಂತ ಕೇಳಿದರೆ ಅವರದ್ದೊಂದು ಭಾಷಣ ಇತ್ತು ಕೊಪ್ಪಳದಲ್ಲಿ. 'ಜ್ಞಾನ ಹೆಚ್ಚು ಬೆಳೆಯಿರಿ' ಎನ್ನುವುದು ಭಾಷಣದ ವಿಷಯವಾಗಿತ್ತು, ಅದನ್ನು ಕೇಳಿದ ನಮ್ಮ ಆಶ್ರಮದ ಉಪಸಂಪಾದಕ ಮಹಾಶಯನು (ಉಪ-ಸಂಪಾದಕನೆಂದರೆ ಬಹಳ ವಿಷಯಗಳ ಬಗ್ಗೆ ಸ್ವಲ್ಪಸ್ವಲ್ಪ ತಿಳಿದವನು ಎಂದು) ಉದ್ಗರಿಸಿದ: 'ಅಂದರೆ ಹೆಚ್ಚು ಜ್ಞಾನ ಬೆಳೆಯಿಸೋದು ಪರಿಮಾಣದಂತೆಯೋ ಪ್ರಕಾರದಂತೆಯೋ?' ಎಂದು. 'ಈಗಿನ ಕಾಲದಲ್ಲಿ ಬಹಳ ತಿಳಿದರೆ ಏನೂ ಉಪಯೋಗವಿಲ್ಲ' ಎಂದ ಹಿರೇಮನಿ ಬೂದ್ಯ. 'ಅದ್ಹೇಂಗೆಲೇ?' ಅಂತ ಎಲ್ಲರೂ ಕೇಳಿಬಿಟ್ಟರು. 'ಒಂದು ಬಹಳ ಬಟ್ಟೆ ಹೊತ್ತಕತ್ತೆ, ಇನ್ನೊಂದು ಸ್ವಲ್ಪ ವಸ್ತ್ರ ಉಟ್ಟ ಸಿನೆಮ ನಟಿ ಹೆಚ್ಚು ಕಲಿತವ-ಕಡಿಮೆ ಕಲಿತವ ಅಂದರೆ ಹೀಂಗೇ!' ಎಂದನವ.

(೪) ವ್ಯಾಪಾರಿಗಳು ಲಾಭಬಡಿಕರಾದರು, ನೌಕರರು ಲಂಚಗುಳಿಗಳಾದರು, ಒಕ್ಕಲಿಗರು, ಹಾಲಿಗರು, ತರಕಾರಿಗರು ದುಡ್ಡು ಹೀರುವ ತಗಣಿಗಳಾದರು. ಪೋಲೀಸರು ದುಷ್ಕೃತ್ಯಪ್ರೇಕ್ಷಕರಾದರು. ರೈಲಿನವರು ನಿದ್ರಾಮುದ್ರಿತರಾದರು. ಕೂಲಿಕಾರರು ಮುಷ್ಕರಕಾರರಾದರು. ಕಳ್ಳರು ಕುಬೇರರಾದರು. ಸಾತ್ವಿಕರು ಸಾಯದವರೂ ಬದುಕದವರೂ ಆದರು!

(೫) ಅಮೇರಿಕದ ಗಂಡಸರಿಗೆ ರಶಿಯದ ಗ್ರಾಮಿಕೋ ಅವರನ್ನು ಕಂಡರೆ ಆಗುವುದಿಲ್ಲವಂತೆ. ಆದರೆ ಹೆಂಗಸರು ಅವರ ಗಂಡುತನವನ್ನು ನೋಡಿ ಮೆಚ್ಚಿಕೊಂಡಿರುವರಂತೆ. ಆದುದರಿಂದ ಅಮೇರಿಕಕ್ಕೆ ನಾಳೆ ಹೆಂಗಸೊಬ್ಬಳು ಅಧ್ಯಕ್ಷೆಯಾದರೆ ಉಭಯ ದೇಶಗಳಲ್ಲಿಯ ವೈಷಮ್ಯ ಹೋಗಿ ಸ್ನೇಹ ಬೆಳೆಯಬಹುದು!

(೬) ಊರ ಮೇಲಿನ ಸಮಾಚಾರದೊಳಗೆ ನಮ್ಮ ಸ್ವಂತ ಸಮಾಚಾರ ಮುಳುಗಿಯೇ ಹೋಯಿತು. ಆದರೆ ಬಿಸಿಲ ಬೇಗೆಗೆ ಬಳಲಿ ಬೆಂಡಾಗಿ, ಬಾಯ್ ಬತ್ತಿ ಡಗೆಸುತ್ತಿ ಬಸವಳಿದ ಸಭೆಯಲ್ಲಿ ನಮ್ಮಲ್ಲಿಯ ಯಾರಿಗೂ

ಯಾವ ರಾಜಕಾರಣವೂ ಬೇಡವಾಗಿ ಹೋಯಿತು. ಮೊನ್ನಿನ ಸಭೆ ಸಪ್ಪೆಯ ಸಾಮ್ರಾಜ್ಯವಾಗಿ ಹೋಯಿತು. ಸುಂಟರ ಗಾಳಿ ಸುಯ್ಯೆಂದು ಸುಳಿ ಸುಳಿಯುತ್ತ ದಾರಿಗರ ಕಣ್ಮನಗಳಿಗೆ ಧೂಳಿನ ಕದಲಾರತಿ ಯೆತ್ತುತ್ತಿತ್ತು. ಧೂಳೀಸ್ನಾನ, ಧೂಳೀಪಾನ ನಮಗೂ ಆಯಿತು. "ನೀನು ಧೂಳು, ನಿನಗೆ ಧೂಳೇಗತಿ" ಎಂಬ ಮಹಾವಾಕ್ಯದ ಅರ್ಥದ ಸವಿ ನಮಗಾಯಿತು.

(೭) ಹಳೆಯ ಗಾದೆಗಿಂತ ಹೊಸದಾದ ಹೊಸ ಗಾದೆಯಿಲ್ಲ. ಹೊಸ ನಾಗರಿಕತೆಗಿಂತ ಹಳೆಯದಾದ ನಾಗರಿಕತೆ ಇಲ್ಲ. ನಾಡಾಡಿಗಿಂತ ಹೆಚ್ಚು ಕಾಡಾಡಿ ಇಂದಿಲ್ಲ. ಸೌಂದರ್ಯಕ್ಕಿಂತ ಹೆಚ್ಚಿನ ಕುರೂಪವಿಂದು ಸಿಗಲಾರದು. ಧೀರರಿಗಿಂತ ಹೆಚ್ಚಿನ ಹೇಡಿಗಳು ಭಾರತದಲ್ಲಿಲ್ಲ. ಅಹಿಂಸಕರಿಗಿಂತ ಹೆಚ್ಚಿನ ಹಿಂಸಕರು ಹುಡುಕಿದರೆ ಸಿಗಬಹುದೇ ? ದರ್ ಸಮಿತಿಗಿಂತ ಹೆಚ್ಚಿನ ಕುಶಾಗ್ರಬುದ್ಧಿಯ ರಾಜಕೀಯ ಸಮಿತಿಯುಂಟೇ ?

(೮) ನಾಯಿಗೆ ಕೋಲು
ಕಾಗೆಗೆ ಕಲ್ಲು,
ಎಮ್ಮೆಗೆ ಹಗ್ಗ
ಹತ್ತಿಗೆ ಮಗ್ಗ !
ದುಡಿಯದೆ ಪಾಲಿಗೆ
ಬರುವ ಹಮಾಲಿಗೆ
ಹೋಗೋ ಹೋಗೆಂ
ದಿಡು ಬರೆ ಕಾಲಿಗೆ !

ಈ ಎಂಟು ಮಾದರಿಗಳು ಪ್ರಸಿದ್ಧವಾದ ಹರಟೆಗಳ ಒಂದೊಂದು ತುಂಡುಗಳು. 'ಗದ್ಯಮಣಿದರ್ಪಣ' ಮತ್ತು 'ಬೇತಾಳಗಳ ಕುಣಿತ' ಎಂಬ ಸಂಗ್ರಹಗಳಲ್ಲಿ ಇವುಗಳ ಪೂರ್ಣಪಾಠಗಳನ್ನು ಪರಾಂಬರಿಸಬಹುದು. ಶ್ರೀ. ವಿ. ಜಿ. ಭಟ್ಟರ 'ಬುರುಕಿ'ಯಲ್ಲಿ ವಿಡಂಬನಾತ್ಮಕ ಚುಟುಕು ಕತೆಗಳ ಚುರುಕನ್ನು ಕಾಣಬಹುದು. ಪಿ. ರಮಾನಂದ ರಾಯರ 'ಹುಚ್ಚು ಬೆಳುದಿಂಗಳಿನ ಹೂಬಾಣಗಳು' ಪು. ತಿ. ನ. ಅವರ 'ಈಚಲಮರದಡಿಯಲ್ಲಿ', ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರ 'ನಮ್ಮ ಊರಿನ ರಸಿಕರು', ಎ. ಎನ್. ಮೂರ್ತಿರಾಯರ 'ಹಗಲುಗನಸುಗಳು', ನಾ. ಕಸ್ತೂರಿಯವರ 'ಅಲ್ಲೋಲ-ಕಲ್ಲೋಲ', ಬೀಚಿಯವರ 'ತಿಮ್ಮನ ತಲೆ' ಮುಂತಾದ ಎಷ್ಟೋ ಪುಸ್ತಕಗಳಲ್ಲಿ ಹರಟೆಯ ಒಳ್ಳೆಯ ಮಾದರಿಗಳನ್ನು ಕಾಣಬಹುದು.

ಹರಟೆಗಳು ಸುಂದರವಾಗಿ ಹೊರಡಲು ಮತ್ತು ತೋರಲು ಲೇಖಕ-ವಾಚಕರಲ್ಲಿ (೧) ಭಾಷಾಜ್ಞಾನ, (೨) ಶ್ರೋತ್ರಶಿಕ್ಷೆ, (೩) ಊಹನಪ್ರತಿಭೆ, (೪) ಪೂರ್ವಭೂಮಿಕೆಯ ಪರಿಚಯ, (೫) ತಾರತಮ್ಯವಿವೇಕ, (೬) ಮಾನುಷ್ಯಾಸಕ್ತಿ, (೭) ಮತತಾಟಸ್ಥ್ಯ, (೮) ವಿಶ್ವವಿಸ್ತಾರದೃಷ್ಟಿ ಇರುವುದು ಅಗತ್ಯ. ಈ ಸಂದರ್ಭದಲ್ಲಿ ಶ್ರೀ. ಡಿ. ವಿ. ಜಿ. ಅವರಿಂದ ಕೆಲ ಮಾತುಗಳನ್ನು ಹರಟೆಗಾರರ ನೆನಪಿಗೆ ತಂದುಕೊಡಬಹುದು :

'ಜಗತ್ಸೃಷ್ಟಿಯಲ್ಲಿ ಭಾಷೆಯ ಶಕ್ತಿ ಒಂದು ಅದ್ಭುತ. ಆ ಶಕ್ತಿಯಲ್ಲಿ ಸಹಜಭಾಗಕ್ಕಿಂತ ಕವಿಗಳು ಅದಕ್ಕೆ ಸಂಪಾದಿಸಿಕೊಟ್ಟಿರುವ ಕೃತಕ ಭಾಗವು ಕಡಿಮೆಯಾದದ್ದೇನೂ ಅಲ್ಲ. ಭೂಗರ್ಭದೊಳಗಿನಿಂದ ಅಯಶ್ಶಿಲೆಯನ್ನೆತ್ತಿ ತೆಗೆದು, ಅದರಿಂದ ಕಬ್ಬಿಣ, ಉಕ್ಕುಗಳನ್ನೂ ಕೊಡಲಿ, ಸೂಜಿಗಳನ್ನೂ ನಿರ್ಮಿಸಿಕೊಂಡಿರುವುದು ಎಂಥ ಪೌರುಷಸಿದ್ಧಿಯೋ,—ನದೀವೇಗದಿಂದ ವಿದ್ಯುಚ್ಛಕ್ತಿಯನ್ನು ಹೊರಡಿಸಿ ಮನೆಗೆ ಬೆಳಕನ್ನೂ ಒಲೆಗೆ ಕಾವನ್ನೂ ತಂದುಕೊಂಡಿರುವುದು ಎಂಥ ಪೌರುಷಾದ್ಭುತವೊ,—ಭಾಷೆಯನ್ನು ಕಾವ್ಯ-ಶಾಸ್ತ್ರ-ಪ್ರಬಂಧರೂಪಗಳಿಗೆ ತಿರುಗಿಸಿ ಮನೋಬುದ್ಧಿಗಳ ವಿಕಾಸಕ್ಕೂ ಜೀವನೋನ್ನತಿಗೂ ಸಾಧನಗಳನ್ನೊದಗಿಸಿಕೊಂಡಿರುವುದು ಅಂಥಾ ಪೌರುಷ ವಿಜೃಂಭಿತ. ಇದನ್ನು ಭಾಷಾವ್ಯವಹಾರಿಗಳೆಲ್ಲ —ವಾಚಕರೂ ಲೇಖಕರು ಸಹ—ಸಂತತವಾಗಿ ದೃಷ್ಟಿಯಲ್ಲಿಟ್ಟುಕೊಂಡಿರಬೇಕು.'

ಶ್ರೀ ಡಿ. ಎಲ್. ನರಸಿಂಹಾಚಾರ್ಯರೆಂದಿರುವಂತೆ ಹೊಸಗನ್ನಡಸಾಹಿತ್ಯಪ್ರಪಂಚದಲ್ಲಿ ಕವಿತೆ, ಕಾದಂಬರಿ, ಸಣ್ಣ ಕತೆಗಳಲ್ಲಿ ಉಂಟಾಗಿರುವಷ್ಟು ಪ್ರಗತಿ ಇತರ ಸಾಹಿತ್ಯ ರೂಪಗಳಲ್ಲಿ ಕಾಣುವುದಿಲ್ಲ. ಉತ್ತಮ ಹರಟೆಯ ಸಂಗ್ರಹಗಳ ಸಂಖ್ಯೆ ಅತ್ಯಲ್ಪವೆನ್ನಬಹುದು. ಜನರಲ್ಲಿ ಜಾಣ್ನುಡಿ, ಚುರುಕು ಮಾತು, ಸೂಕ್ಷ್ಮಜ್ಞಾನದ ಬಗ್ಗೆ ಕುತೂಹಲ, ನಿರ್ಮಲವಾದ ವಿನೋದ ಬುದ್ಧಿ, ನ್ಯಾಯ ಪಕ್ಷಪಾತ, ದೋಷ ನಿರ್ಮೂಲನಕ್ಕಾಗಿ ದೋಷೋದ್ಘಾಟನ ಮಾಡುವ ತೀವ್ರಾಸಕ್ತಿ, ರಸವಿಲಾಸಪರತೆ ಮುಂತಾದ ಆರೋಗ್ಯ ಸೌಂದರ್ಯವರ್ಧಕ ವಸ್ತು-ಗುಣಗಳ ಸಂಗ್ರಹ ಬೇರೂರಿ ಬೆಳೆಯಬೇಕಾದರೆ ಪ್ರತಿಭಾವಂತರ ಲೇಖನಿಯಿಂದ ಹೆಚ್ಚು ಹೆಚ್ಚಾಗಿ ರಸವತ್ತಾದ ಲಘು ಪ್ರಬಂಧಗಳು ಹೊರಬೀಳಬೇಕಾಗಿದೆ. ಇಂದಿನ ಮುದ್ರಣ ಯುಗದಲ್ಲಿ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಕಾಶಕರ ಪಾತ್ರ ಕಡಿಮೆ ಪ್ರಾಧಾನ್ಯವುಳ್ಳದ್ದಲ್ಲ. ಕನ್ನಡ ಪ್ರಕಾಶಕರು ಸಾಹಿತ್ಯ ಸರಸ್ವತಿಯ ಸೇವೆಯಲ್ಲಿ ಈ ವರೆಗೆ ಎಷ್ಟೋ ಸಲ ಒಳ್ಳೆಯ ದೃಷ್ಟಿಯನ್ನು ತಳೆದು ಉತ್ತಮ ಗ್ರಂಥಗಳನ್ನು ಪ್ರಕಾಶಕ್ಕೆ ತಂದಿದ್ದಾರೆ. ಅವರ ಲಕ್ಷ್ಯವು ಹರಟೆಯ ಕಡೆಗೆ ಇನ್ನೂ ಹೆಚ್ಚಾಗಿ ಹರಿಯುವುದು ಕ್ರಮಪ್ರಾಪ್ತ. ಅವರು ಉತ್ತಮ ಹರಟೆಗಾರರಿಂದ ಹರಟೆಗಳನ್ನು ಬರೆಯಿಸಿ ಪ್ರಸಿದ್ಧಿಗೆ ತರಬೇಕು. ಪತ್ರಿಕಾಕರ್ತರಾದರೂ ಕೇವಲ 'ವಾರದ ಕತೆ'ಯನ್ನಷ್ಟೇ ಪ್ರೋತ್ಸಾಹಿಸದೆ, ಆಕರ್ಷಕವೂ ಜ್ಞಾನನೇತ್ರೋನ್ಮಿಲನಪರವೂ ಆದ ಲಘುಪ್ರಬಂಧಗಳಿಗೀಗ ಹೆಚ್ಚುಹೆಚ್ಚಾಗಿ ಸ್ಥಳವನ್ನು (ಪುರಸ್ಕಾರಪೂರ್ವಕವಾಗಿ) ಮೀಸಲಿಡಬೇಕು. ಆಗ ಕನ್ನಡದ ಹೊಸ ಸಾಹಿತ್ಯ-ವಾಹಿನಿಯು ವರ್ಣರಂಜಿತವಾದೀತು; ಜನರ ರಸದೃಷ್ಟಿ ಇನ್ನಷ್ಟು ಚನ್ನಾಗಿ ಪರಿಷ್ಕೃತವಾದೀತು.

|| ಓಂ ನಲ್ ||





ಲೇಖಿಕೆ :
ಶ್ರೀಮತಿ ಪದ್ಮಾಬಾಯಿ ನರಗುಂದ
ಘಟಪ್ರಭಾ

# ಸುಭದ್ರೆ ರುಕ್ಮಿಣಿಗೆ ಮುಯ್ಯ ಒಯ್ದಾಗ

ಲಗ್ನವಾದ ಕೆಲ ದಿನಗಳಲ್ಲಿ ಬೀಗರು ಬೀಗರಿಗೆ ಮುಯ್ಯ ಒಯ್ಯುವ ಪರಂಪರೆಯೊಂದು ಉತ್ತರ ಕರ್ನಾಟಕದಲ್ಲಿ ಬೆಳೆದುಬಂದಿದೆ. ಈಗೀಗ ಇದು ಕಣ್ಮರೆಯಾಗುತಿರುವದಾದರೂ ಇದೊಂದು ವೈಶಿಷ್ಟ್ಯಪೂರ್ಣವಾದ ಸಂದರ್ಭ. ಮಹಾಭಾರತದ ಕಾಲದಲ್ಲಿ ಸುಭದ್ರೆ ತನ್ನ ಅಣ್ಣನ ಹೆಂಡತಿ ರುಕ್ಮಿಣಿಗೆ ಮುಯ್ಯ ಒಯ್ದ ಸಂದರ್ಭವನ್ನು ಶ್ರೀ ಮೋಹನದಾಸರು ಕೋಲುಪದದಲ್ಲಿ ಬಹು ಸುಂದರವಾಗಿ ಹೆಣೆದಿದ್ದಾರೆ. ಮುಯ್ಯದ ಹಿನ್ನೆಲೆಯೊಂದಿಗೆ ಭಾರತದ ಈ ಸಂದರ್ಭವನ್ನು ಲೇಖಿಕೆಯರು ಇಲ್ಲಿ ಕವಿಯ ವಾಣಿಗೆ ತಮ್ಮ ವಿವರಣೆ ನೀಡಿ ನಿರೂಪಿಸಿದ್ದಾರೆ.

'ಮುಯ್ಯ'ವೊಂದು ಸಾಂಸ್ಕೃತಿಕ ಸಂಪ್ರದಾಯ. ಲಗ್ನ ನಡೆದಾಗ ಅಥವಾ ಲಗ್ನವಾದ ಕೆಲವು ದಿನಗಳಲ್ಲಿ ಬೀಗರು ಬೀಗರಿಗೆ ಮುಯ್ಯ ತೆಗೆದುಕೊಂಡು ಹೋಗುತ್ತಾರೆ. ಅಲ್ಲದೆ ಅತ್ತಿಗೆ ನಾದಿನಿಗೆ, ನಾದಿನಿ ಅತ್ತಿಗೆಗೆ ಮುಯ್ಯವನ್ನು ತೆಗೆದುಕೊಂಡು ಹೋಗುವ ಸಂಪ್ರದಾಯವಿದೆ. ಕರ್ನಾಟಕದ ವಿಜಾಪೂರ, ಧಾರವಾಡ, ಬೆಳಗಾಂವಿ ಈ ಮೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಈ ಸಂಪ್ರದಾಯ ಪ್ರಚಲಿತವಿದ್ದಿತೆಂದು ಹೇಳಬಹುದು. ವಿಶೇಷತಃ ಬ್ರಾಹ್ಮಣರಲ್ಲಿ ಇದು ಕಂಡುಬರುವದು.

ಇಂದಿಗೆ ಇಪ್ಪತ್ತೈದು ಮೂವತ್ತು ವರ್ಷಗಳ ಹಿಂದೆ ಇದ್ದ ಈ ಪದ್ಧತಿಯು ಈಗ ಅಷ್ಟೊಂದು ಇಲ್ಲವೆಂದರೆ ಅನುಚಿತವಾಗಲಿಕ್ಕಿಲ್ಲ. ಸದ್ಯದ ಕಾಲದ ಹೆಣ್ಣು ಮಕ್ಕಳಿಗೆ ಬಹುಶಃ ಹಿಂದೆ ಈ ತರಹದ ಸಂಪ್ರದಾಯವು ಇದ್ದಿತೆಂಬ ಮಾತು ಸಹ ನೆನಪಿರಲಿಕ್ಕಿಲ್ಲ.

'ಮುಯ್ಯ' ಈ ವಿಷಯದ ಬಗ್ಗೆ ನಾನು ಚಿಕ್ಕವಳಿದ್ದಾಗ ಕಂಡು ಕೇಳಿದ ಅನೇಕ ಸಂಗತಿಗಳು ವಿಶೇಷ ಕುತೂಹಲಕಾರಿ ಇವೆ.

ಮುಯ್ಯವನ್ನು ತೆಗೆದುಕೊಂಡು ಹೋ-ಗುವ ವಿಶೇಷ ರೀತಿಯೊಂದು ಇದೆ.

ಅತ್ತಿಗೆ ನಾದಿನಿಗೆ ಮುಯ್ಯವನ್ನು ಒಯ್ಯುವದಾದರೆ ಆ ಮಾತನ್ನು ಯಾರಿಗೂ ಹೇಳುತ್ತಿರಲಿಲ್ಲ. ಮನೆಯಲ್ಲಿಯ ಒಬ್ಬಿಬ್ಬ ಹಿರಿಯರನ್ನು ಬಿಟ್ಟು ಮತ್ತಾರಿಗೂ ಈ ಮಾತು ಗೊತ್ತಿರುತ್ತಿದ್ದಿಲ್ಲ. ಒಮ್ಮೆಲೇ ರಾತ್ರಿ ಹತ್ತು ಹನ್ನೊಂದು ಘಂಟೆಗೆ ನಾದಿನಿಯ ಮನೆಗೆ ಊದಿಸುತ್ತ, ಬಾರಿಸುತ್ತ ವಾದ್ಯದೊಂದಿಗೆ ಹೊರಡುತ್ತಿದ್ದರು. ವಾದ್ಯಗಳನ್ನು ಬಾರಿಸುತ್ತಲೇ ಆಕೆಯ ಮನೆಯ ಮುಂದೆ ನಿಲ್ಲುತ್ತಿದ್ದರು. ಮನೆಯವರು ಮತ್ತು ನೆರೆಮನೆಯವರು ಎದ್ದು ಇದೇನು ಸದ್ದು ಎಂದು ನೋಡಿದರೆ ಬರಿ ನಗುವದಷ್ಟೇ ಮುಯ್ಯದ ಗುಂಪಿನಲ್ಲಿ ಇದ್ದವರ ಕೆಲಸ.

ಊದುತ್ತ ಬಾರಿಸುತ್ತ ನಾದಿನಿಯ ಮನೆಯ ಮುಂದೆ ನಿಲ್ಲುವದು. ಆಕೆ ಒಳಗಿನಿಂದ ಬಂದು ಬಾಗಿಲು ತೆರೆದು ನೋಡುವದು, ಹೊರಗೆ ನಿಂತವರು ಖೊಳ್ಳೆಂದು ನಗುವದು. ಇಷ್ಟಾದಮೇಲೆ ನಾದಿನಿ ಮತ್ತೆ ಬಾಗಿಲನ್ನು ಹಾಕಿಕೊಂಡು ಒಳಗೆ ಗೌರೀ ಕೂಡಿಸುವ ಸಿದ್ಧತೆಯಲ್ಲಿ ತೊಡಗುವಳು, ಬಂದವರ ಸತ್ಕಾರಕ್ಕಾಗಿ ಹಾಸಿ ಅರಿಸಿಣ ಕುಂಕುಮ ಎಲೆ ಅಡಿಕೆಯ ತಾಟನ್ನು ಸಿಂಗರಿಸುವದು, ನಾದಿನಿ ಒಳಗಿನ ಕೆಲಸ ತೀರಿಸಿಕೊಂಡು ಬಾಗಿಲು ತೆರೆಯುವ ವರೆಗೆ ಹೊರಗೆ ಇದ್ದವರು ಹಾಡನ್ನು ಹಾಡುತ್ತ ಕುಳಿತುಕೊಳ್ಳುವರು. ನೆರೆಮನೆಯ ಜನರಾದರೂ ಹಾಡುಗಳನ್ನು ಕೇಳುತ್ತಾರೆ, ಗಂಡಸರು ಸಹ ಹಾಡು ಕೇಳಲು ಬರಬಹುದು. ಬಾಗಿಲದ ಹೊರಗೆ ಕುಳಿತು ಹಾಡುವ ಹಾಡಿಗೆ ಬಾಗಿಲ ಕಟ್ಟಿದ ಹಾಡು ಎನ್ನುತ್ತಾರೆ.

ಒಳಗಿನ ಸಿದ್ಧತೆಯಾದ ಮೇಲೆ ನಾದಿನಿ ಬಾಗಿಲು ತೆಗೆಯುತ್ತಾಳೆ. ಎಲ್ಲರನ್ನೂ ಕರೆದು ಸತ್ಕರಿಸಿ ಕೂಡಿಸುತ್ತಾಳೆ. ಆ ಬಳಿಕ ಮತ್ತೆ ಹಾಡಲಾರಂಭಿಸುತ್ತಾರೆ.

ಮುಯ್ಯದ ಹಾಡು ಬಹಳ ದೊಡ್ಡದು. ಎಲ್ಲರಿಗೂ ಈ ಹಾಡು ಬರುವದಿಲ್ಲ. ಕೆಲವೇ ಹೆಣ್ಣುಮಕ್ಕಳು ಹಾಡುತ್ತಾರೆ. ಹಾಡು ಮುಗಿಯಲು ನಾಲ್ಕೈದು ಗಂಟೆಗಳಾದರೂ ಬೇಕು. ಒಬ್ಬರೇ ಹಾಡಲು ಧ್ವನಿ ಸಾಲುವುದಿಲ್ಲವೆಂದು ಇಬ್ಬರು ಕೂಡಿ ಹಾಡುವ ಪರಿಪಾಠವಿದೆ. ಈ ಹಾಡು ಬೆಳಗುಮುಂಜಾವಿನ ಹೊತ್ತಿಗೆ ಮುಗಿಯುತ್ತದೆ. ಆ ಬಳಿಕ ನಾದಿನಿಗೂ ಆಕೆಯ ಬಳಗಕ್ಕೂ ಅರಿಷಿಣ. ಕುಂಕುಮ ಉಡುಗರೆ ವೀಳ್ಯ ಕೊಡುತ್ತಾರೆ. ನಾದಿನಿಯಾದರೂ ಬಂದವರಿಗೆ ಅರಿಷಿಣ ಕುಂಕುಮ ವೀಳ್ಯ ಕೊಟ್ಟು ಸತ್ಕರಿಸಿ ಹೋಗಿ ಬನ್ನಿರೆಂದು ಬಾಗಿಲವರೆಗೆ ಕಳಿಸಿಬರುತ್ತಾಳೆ. ಆ ಹಾಡಿಗೂ ಈ ಸಂಪ್ರದಾಯಕ್ಕೂ ಒಂದು ಐತಿಹ್ಯವಿದೆ.

ಸುಭದ್ರೆ ದ್ರೌಪದಿಯರು ರುಕ್ಮಿಣಿ ಸತ್ಯಭಾಮೆಯರಿಗೆ ಮುಯ್ಯವನ್ನೊಯುತ್ತಾರೆ. ರುಕ್ಮಿಣಿ ಸತ್ಯಭಾಮೆಯರು ತಿರುಗಿ ಸುಭದ್ರೆ ದ್ರೌಪದಿಯರಿಗೆ ಮುಯ್ಯ ತರುತ್ತಾರೆ. ಹಸ್ತಿನಾಪುರದಿಂದ ದ್ವಾರಕೆಗೆ ದ್ವಾರಕೆಯಿಂದ ಹಸ್ತಿನಾಪುರಕ್ಕೆ ಮುಯ್ಯವನ್ನೊಯ್ದ ಕಥೆ ಇದೆ. ಈ ಹಾಡಾದರೂ ಬಹಳ ಸುಂದರವಿದೆ.

ಸುಭದ್ರೆ ತನ್ನ ಅತ್ತಿಗೆಯರಾದ ರುಕ್ಮಿಣಿ ಸತ್ಯಭಾಮೆಯರಿಗೆ ಮುಯ್ಯವನ್ನು ತೆಗೆದುಕೊಂಡು ಹೋಗಲು ಪಾಂಡವರ ಸಲಹೆ ಕೇಳುತ್ತಾಳೆ. ಅದನ್ನು ಶ್ರೀ ಮೋಹನದಾಸರು ಕೋಲುಹಾಡಿನ ಪದ್ಧತಿಯಲ್ಲಿ ಬಹಳ ಸಂದರವಾಗಿ ವರ್ಣಿಸಿದ್ದಾರೆ.

ಸುಭದ್ರೆ ಅರ್ಜುನ ದ್ರೌಪದಿಯರನ್ನು ಮುಂದಿಟ್ಟುಕೊಂಡು ಹಿರಿಯನಾದ ಭಾವ ಧರ್ಮರಾಜನನ್ನು ದ್ವಾರಕೆಗೆ ಮುಯ್ಯವನ್ನೊಯ್ಯುವದರ ಬಗ್ಗೆ ಕೇಳುತ್ತಾಳೆ. ಧರ್ಮರಾಜನಿಗೆ ಬಹಳ ಹರುಷವಾಗುತ್ತದೆ. ಈ ಕಾರಣದಿಂದ ದ್ವಾರಕೆಗೆ ಹೋಗಿ ಕೃಷ್ಣನನ್ನು ಕಾಣುವೆವಲ್ಲಾ ಎಂದು ಸಂತೋಷಪಡುತ್ತಾನೆ. ಆದಷ್ಟು ಬೇಗನೆ ಮುಯ್ಯದ ಸಿದ್ಧತೆ ಮಾಡಲು ಹೇಳುತ್ತಾನೆ. ಜೊತೆಗೆ ಚತು-ರಂಗ ಸೈನ್ಯ ತೆಗೆದುಕೊಳ್ಳಲು ದ್ರೌಪದಿಗೆ

ಸೂಚಿಸುತ್ತಾನೆ. ಪಾಂಡವ ಪರಿವಾರವು ಯಾವ ಮುನ್‌ಸೂಚನೆಯೂ ಇಲ್ಲದೆ ದ್ವಾರಕೆಗೆ ಬಂದು ಬೀಡುಬಿಡುತ್ತದೆ.

ಕೃಷ್ಣನಿಗೆ ಯಾವ ಸೂಚನೆಯೂ ಇಲ್ಲದೆ ಪಾಂಡವರು ಬಂದದ್ದಕ್ಕಾಗಿ ಪರಮಾಶ್ಚರ್ಯವಾಗುತ್ತದೆ.

ನಾರಿರುಕ್ಮಿಣಿ ಸತ್ಯಭಾಮಾದೇವಿ ಮತೆ
ವಾರಿಜಮುಖಿಯರ ನಾಲ್ಕೆರಡು
ವಾರಿಜಮುಖಿಯರ ನಾಲ್ಕೆರಡು ಸಹಿತಾಗಿ
ವಾರಿಜನಾಭ ಕುಳಿತಿದ್ದ ಕೋಲೆ ॥ ೧ ॥

ಶ್ರೀಕೃಷ್ಣನು ತನ್ನ ಅರಮನೆಯಲ್ಲಿ ಅಷ್ಟ ಮಹಿಷಿಯರೊಡನೆ ಮಾತಾಡುತ್ತ ಕುಳಿತಿದ್ದಾನೆ. ಆಗ ಚಾರರು ಬಂದು ತಿಳಿಸುತ್ತಾರೆ.



ಶ್ರೀರಮಣನಾದ ಶ್ರೀಕೃಷ್ಣನರಮನೆಗೆ
ಸುಭದ್ರೆಮುಯ್ಯ ತರುತಾಳೆ ೋಲ
ಸುಭದ್ರೆಮುಯ್ಯ ತರುತಾಳ ಹಸ್ತಿನಾಪುರ
ಭೂಭುಜರೆಲ್ಲಾ ಬರುತಾರೆ ಕೋಲೆ ॥ ೨ ॥

ಲಕ್ಷ್ಮೀಪತಿಯಾದ ಶ್ರೀ ಕೃಷ್ಣನೇ ನಿನ್ನ ತಂಗಿ ಸುಭದ್ರೆ ಮುಯ್ಯ ತೆಗೆದುಕೊಂಡು ನಿನ್ನ ಅರಮನೆಯ ಕಡೆಗೆ ಬರತೊಡಗಿದ್ದಾಳೆ. ಜೊತೆಗೆ ಗಜಪುರಿಯ ರಾಜರೂ ಚತುರಂಗ ಸೈನ್ಯವೂ ಇದೆ ಎಂದು ತಿಳಿಸುತ್ತಾರೆ.

ಧರ್ಮ ಭೀಮಾರ್ಜುನ ನಕುಲ ಸಹದೇವರು
ಪೇರ್ಮೆಯಿಂದಲಿ ಹೊರವಂಟು ಕೋಲೆ
ಪೇರ್ಮೆಯಿಂದಲಿ ಹೊರವಂಟು ದಿಕ್ಪಾಲಕರು
ಕೂರ್ಮೆಯಿಂದಲಿ ಬರುತಾರೆ ಕೋಲೆ ॥ ೩

ಯಾವಾಗಲೂ ಯುದ್ಧಸನ್ನದ್ಧರಾದ ಪಾಂಡವರನ್ನು ನೋಡಿದ ಜನರಿಗೆ ಇಂದಿನ ಅವರ ನಗೆಮೊಗ ನೋಡಿ ಆಶ್ಚರ್ಯವಾಗಿರಬಹುದು. ಆ ಆಶ್ಚರ್ಯವನ್ನು ಮೇಲಿನ ನುಡಿಯಲ್ಲಿ ವ್ಯಕ್ತಮಾಡಿದ್ದಾರೆ — ಕೃಷ್ಣನ ಮುಂದೆ. ಅಲ್ಲದೆ ಪಾಂಡವರ ಜೊತೆಗೆ ಯಾರು ಬರುವರೆಂಬ ವರ್ಣನೆಯನ್ನಾದರೂ ಮಾಡಿದ್ದಾರೆ. ಅವೆಲ್ಲ ಹೇಳಲು ಸಾಧ್ಯವಿಲ್ಲ. ಒಂದೆರಡು ನುಡಿಗಳನ್ನು ಉದಾಹರಣೆಗೆಂದು ಹೇಳಬಹುದು.

ಇಂದ್ರನು ತಾನು ಗಜೇಂದ್ರನೇರಿಕೊಂಡು
ಮಂದಗಮನೆ ಶಚಿಸಹಿತಲಿ ಕೋಲೆ ।
ಮಂದಗಮನೆ ಶಚಿಸಹಿತ ವಜ್ರವಧರಿಸಿ
ಉಪೇಂದ್ರನರಮನೆಗೆ ಬರುತಾನೆ ಕೋಲೆ ॥೪॥

ದೇವರಾಜನಾದ ಇಂದ್ರನು ತನ್ನ ಅರ್ಧಾಂಗಿ ಶಚಿಯೊಡನೆ ಐರಾವತವನ್ನು ಹತ್ತಿಕೊಂಡು ನಿನ್ನರಮನೆಗೆ ಬರತೊಡಗಿದ್ದಾನೆ.

ಯಮನು ಮಹಿಷವೇರಿ ಗಮಕದಿಂದಲಿ ಸತಿ
ಶಾಮಲಾದೇವಿಸಹಿತಾಗಿ ಕೋಲೆ
ಶಾಮಲಾದೇವಿಸಹಿತ ದಂಡಧರಿಸಿ
ರಾಮನರಮನೆಗೆ ಬರುತಾರೆ ಕೋಲೆ ॥೫॥

ಲೋಕಸಂಹಾರಕ ಯಮದೇವನು ತನ್ನ ಸತಿ ಶಾಮಲಾದೇವಿಯ ಜತೆಗೆ ಬಲರಾಮನ ಅರಮನೆಗೆ ಬರತೊಡಗಿದ್ದಾನೆ. ಇದರಂತೆಯೇ ಎಲ್ಲ ದೇವತೆಗಳು ತಮ್ಮ ತಮ್ಮ ಪರಿವಾರದೊಂದಿಗೆ ಚಿತ್ರ-ವಿಚಿತ್ರ ವಾಹನಗಳನ್ನೇರಿ ಬರುತ್ತಿರುವ ಸಂಗತಿಯನ್ನು ಚಾರರು ಕೃಷ್ಣನಿಗೆ ಬಣ್ಣಿಸಿ ಹೇಳುತ್ತಾರೆ. ಇಷ್ಟರಲ್ಲಿ ಮುಯ್ಯ ತಂದವರು ಕೃಷ್ಣನ ಅರಮನೆಯ ಬಾಗಿಲಿಗೆ ಬರುತ್ತಾರೆ.

ಕಸವೆಲ್ಲ ಪರಿಮಳ ಕೆಸರೆಲ್ಲ ಶ್ರೀಗಂಧ
ಬಿಸರುಹನೇತ್ರನರಮನೆ ಕೋಲೆ ।
ಬಿಸರುಹನೇತ್ರನರಮನೆಯೊಳಗೆಲ್ಲ
ಕುಸುಮದ ಮಳೆಗರೆವುದು ಕೋಲೆ ॥೬॥

ಬರುವವರು ಕೃಷ್ಣನ ಅರಮನೆಯ ವರ್ಣನೆಯನ್ನು ಮಾಡುತ್ತಲೇ ಬರುತ್ತಾರೆ. ಇವರನ್ನು ನೋಡಿ ರುಕ್ಮಿಣಿ ಸತ್ಯಭಾಮೆಯರು ಕದ ಹಾಕಿಕೊಂಡು ಒಳಗೆ ಹೋಗಿ ಬಂದವರ ಸತ್ಕಾರಕ್ಕಾಗಿ ಸಿದ್ಧತೆ ಮಾಡತೊಡಗುತ್ತಾರೆ. ಹೊರಗೆ ಬಾಗಿಲ ಮುಂದೆ ಸುಭದ್ರೆ ದ್ರೌಪದಿಯರು ಹಾಡತೊಡಗುತ್ತಾರೆ.

ಕಂಜಾಕ್ಷಿ ರುಕ್ಮಿಣಿ ಕರೆಯ ಬರಲಿಲ್ಲಾ
ಸಂಜೆಯಲಿ ನಾವು ಬಂದೇವೆ ಕೋಲೆ ।
ಸಂಜೆಯಲಿ ನಾವು ಬಂದರೇನಾಯಿತು
ಅಂಜಬೇಡಭಯ ಕೊಡುತೇವೆ ಕೋಲೆ ॥೭॥

ಒಳಗೆ ಹೋಗಿ ಕದ ಹಾಕಿಕೊಂಡ ರುಕ್ಮಿಣಿಗೆ ಸುಭದ್ರೆ ಹಾಸ್ಯದಿಂದ ಕೇಳುತ್ತಾಳೆ. ನಾವು ಬಂದು ಬಹಳ ಹೊತ್ತಾದರೂ ಬಾಗಿಲವನ್ನು ಏಕೆ ತೆರೆಯಲೊಲ್ಲೆ? ನಮ್ಮನ್ನು ನೋಡಿ ಅಂಜಿದೆಯಾ? ಅಂಜಬೇಡ. ಅಭಯವಿದೆ ಎಂದು ನಗುತ್ತಾಳೆ.

ರುಕ್ಮಿಣಿಯಿಂದ ಉತ್ತರ ಬಾರದಿರಲು ಸತ್ಯಭಾಮೆಯನ್ನು ಕರೆಯುತ್ತಾಳೆ ಸುಭದ್ರೆ,

ಅಣ್ಣನ ಮನೆಗೆ ಬಂದು ಸಣ್ಣ ಹೊತ್ತಾದೀತು
ಅಣ್ಣನ ಮಡದಿ ಬರಲಿಲ್ಲ ಕೋಲೆ।
ಅಣ್ಣನ ಮಡದಿ ಬರಲಿಲ್ಲ ಸತ್ಯಭಾಮೆ
ಇನ್ನು ಬಾ ಅಭಯ ಕೊಡುತ್ತೇನೆ ಕೋಲೆ ॥೮॥

ಅಭಯ ಕೊಡುವೆನೆಂದು ಹೇಳಿದರೂ ಸತ್ಯಭಾಮೆಯಿಂದ ಉತ್ತರ ಬಾರದಿರಲು ಕೃಷ್ಣನ ಎಲ್ಲ ಮಡದಿಯರನ್ನು ಉದ್ದೇಶಿಸಿ ಹೇಳುತ್ತಾಳೆ ಸುಭದ್ರೆ,

ತಾಯಿ ಮನೆಗೆ ಬಂದು ಬಹಳ ಹೊತ್ತಾದಿತು
ತಾಯಿ ಸೊಸೆಯರು ಬರಲಿಲ್ಲ ಕೋಲೆ।
ತಾಯಿ ಸೊಸೆಯರು ಬರಲಿಲ್ಲ ನಮಗಂಜಿ
ಬಾಯಿ ಬಿಡುತಾರೆ ಒಳಗೆಲ್ಲ ಕೋಲೆ ॥೯॥

ಸುಭದ್ರೆ ಎಲ್ಲ ಅತ್ತಿಗೆಯವರಿಗೆ ಕೇಳಿದರೂ ಯಾರೂ ಬಾಗಿಲು ತೆಗೆಯುವದಿಲ್ಲ. ಸ್ವಲ್ಪ ವೇಳೆಯ ನಂತರ ಬಾಗಿಲು ತೆಗೆದು ರುಕ್ಮಿಣಿ ಬಂದವರ ಪರಿಚಯವನ್ನು ಕೇಳುತ್ತಾಳೆ.

ಬಂದ ಬೀಗಿತ್ತಿಯ ಚಂದದಿಂದಿದಿರ್ಗೊಂಡು
ಮಂದಹಾಸದಲಿ ನುಡಿಶ್ಯಾಳೆ ಕೋಲೆ।
ಮಂದಹಾಸದಲಿ ನುಡಿಸಿ ರುಕ್ಮಿಣಿದೇವಿ
ಬಂದವರು ಯಾರಾ ಮನೆಯವರು ಕೋಲೆ ॥೧೦॥

ಬಂದವರನ್ನು ಆದರಿಸಿ ತನಗೆ ಗೊತ್ತಿಲ್ಲದವರಂತೆ ಪರಿಚಯ ಕೇಳಿದ್ದಕ್ಕಾಗಿ ಸುಭದ್ರೆ ಯಾದರೂ ಮಾರ್ಮಿಕವಾಗಿ ಉತ್ತರ ಕೊಡುತ್ತಾಳೆ,

ಶುಂಡಾಲನಗರದ ಪಾಂಡುಭೂಪರ ಸೊಸೆ
ಗಂಡುಗಲಿ ಪಾರ್ಥನಾರ್ಧಾಂಗಿ ಕೋಲೆ।
ಗಂಡುಗಲಿ ಪಾರ್ಥನಾರ್ಧಾಗಿ ಮುಯ್ಯವ
ಕೊಂಡುಬಂದಿಹಳು ಆಲಿಸು ಕೋಲೆ ॥೧೧॥

ಸುಭದ್ರೆಯ ಪರಿಚಯವನ್ನು ತಿಳಿದುಕೊಂಡು ಆದರಿಸಿ ಮೇಲೆ ಕರೆಯುತ್ತಾಳೆ ರುಕ್ಮಿಣಿ ಆಕೆಯನ್ನು.

ಬಾರವ್ವ ಸುಭದ್ರೆ ಏರವ್ವ ಸೋಪಾನ
ತೋರವ್ವ ನಿನ್ನ ವಚನವ ಕೋಲೆ।
ತೋರವ್ವ ನಿನ್ನ ವಚನವೆಂದೆನುತಲಿ
ದ್ವಾರೆದ ಕೈಯ್ಯ ಪಿಡಿದಾಳೆ ಕೋಲೆ ॥೧೨॥

ರುಕ್ಮಿಣಿ ಸುಭದ್ರೆಯ ದ್ವಾರೆಯ (ಕೈಯಲ್ಲಿ ಹಾಕುವ ಒಂದು ತರಹದ ಆಭರಣ) ಕೈಯನ್ನು ಪಿಡಿದು ಮೇಲೆ ಕರೆದು ಕೂಡ್ರಿಸುತ್ತಾಳೆ. ಮತ್ತೆ ಎಲ್ಲ ಪಾಂಡವ ಪರಿವಾರವನ್ನು ಆದರಿಸಿ ಕೂಡ್ರಿಸಿ ಸುಭದ್ರೆಗೆ ಇನ್ನು ನಿನ್ನ ಮಾತಿನ ಜಾಣ್ಮೆಯನ್ನು ತೋರಿಸು ಎಂದು ಹೇಳುತ್ತಾಳೆ ರುಕ್ಮಿಣಿ. ಈಗ ಅವರೆಲ್ಲರ ಪ್ರೇಮಕಲಹವಾರಂಭವಾಗುತ್ತದೆ,

ಸುಭದ್ರೆ ರುಕ್ಮಿಣಿಯ ತಪ್ಪನ್ನು ಎತ್ತಿ ತೋರಿಸುವಳು.

ಓಡಿ ಬಂದವಳು ಒಳಗೆ ಸೇರಿಕೊಂಡು
ನೋಡುವಳೆ ನಮ್ಮ ನುಡಿಸುವಳೆ ಕೋಲೆ।
ನೋಡುವಳೆ ನಮ್ಮ ನುಡಿಸುವಳೆ ನಮ್ಮಣ್ಣ
ಮಾಡಿದ ಮೋಹಾ ತಲೆಗೇರಿತು ಕೋಲೆ ॥೧೩॥

ಎಷ್ಟೆಂದರೂ ನೀನು ಓಡಿಬಂದವಳು. ನಮ್ಮನ್ನೇಕೆ ಮಾತಾಡಿಸುವಿ? ನಮ್ಮಣ್ಣ ಮಾಡಿದ ಮೋಹ ತಲೆಗೇರಿದೆಯಲ್ಲವೇ? ಎಂದು ಕೊಂಕು ನುಡಿಯುತ್ತಾಳೆ, ಸುಭದ್ರೆ ರುಕ್ಮಿಣಿಗೆ.

ಸುಭದ್ರೆಯ ಕೊಂಕು ನುಡಿಗೆ ಹೆದರದೆ ರುಕ್ಮಿಣಿ ಆಕೆಯ ತಪ್ಪನ್ನು ಆಕೆಗೆ ತೋರಿಸುತ್ತ,

ಅತ್ತೆಯ ಮಗಳೆಂದು ಹತ್ತೆಂಟು ತಾಳಿದೆ
ಉತ್ತರ ನಿನಗೊಂದು ಕೊಡುತೇನೆ ಕೋಲೆ।
ಉತ್ತರ ನಿನಗೊಂದು ಕೊಡುತ್ತೇನೆ ಸುಭದ್ರೆ
ಚಿತ್ತಕೆ ಹೋಗಿ ನಡುವಂತೆ ಕೋಲೆ ॥೧೪॥

ನೀನು ನನ್ನ ನಾದಿನಿ ಎಂದು ಅಂದುದನ್ನು ತಾಳಿಕೊಂಡೆ. ಮನಸ್ಸಿಗೆ ನಡುವಂತಹ ಮಾತನ್ನು ನಾನೇನಾದರೂ ಅಂದರೆ ತಾಳುವ ಸ್ಥಿರತೆ ಇರಲಿ ಸುಭದ್ರೆ ಎಂದು—

ಓಡಿ ಬಂದವಳೆಂದು ಆಡಿದರೇನು
ತಿರುಗಾಡಿದಷ್ಟು ಹುರುಳಿಲ್ಲ ಕೋಲೆ
ಆಡಿದರಿಷ್ಟು ಹುರುಳಿಲ್ಲ ಸುಭದ್ರೆ
ನೋಡಿಕೋ ನಿನ್ನ ಮನದೊಳು ಕೋಲೆ ॥೧೫॥

ಸಂಕೇತದಿಂದ ನಾದಿನಿಗೆ ರುಕ್ಮಿಣಿಯು ತಿಳಿಸಿದರೂ ಆಕೆ ತಿಳಿಯದವಳಂತೆ ಮತ್ತೆ ಅತ್ತಿಗೆಯನ್ನು ಜರೆಯುತ್ತಾಳೆ.

ಅಣ್ಣನ ವಂಚಿಸಿ ಓಡಿ ಬಂದವಳೆನ್ನ
ಕಣ್ಣಿಲಿ ನೋಡಿ ಕರೆಯುವಳೆ ಕೋಲೆ
ಕಣ್ಣಿಲಿ ನೋಡಿ ಕರೆಯುವಳೆ ನಮ್ಮ
ಅಣ್ಣನ ಬಲವ ಹಿಡಕೊಂಡು ಕೋಲೆ ॥೧೬॥

ಅಣ್ಣನಾದ ರುಕ್ಮಾಂಗದನನ್ನು ವಂಚಿಸಿ ಓಡಿ ಬಂದವಳು ನೀನು. ಇನ್ನು ನಮ್ಮಂಥವರ ಪರಿವೆಯೇ ನಿನಗೆ? ಅಲ್ಲದೆ ನಮ್ಮಣ್ಣನಾದ ಕೃಷ್ಣನ ಬೆಂಬಲವಿದೆಯೆಂಬ ಹೆಮ್ಮೆ ನಿನಗೆಂದು ಮೂದಲಿಸುತ್ತಾಳೆ ಸುಭದ್ರೆ ರುಕ್ಮಿಣಿಗೆ.

ಅಣ್ಣನ ವಂಚಿಸಿ ಓಡಿ ಬಂದವಳೆಂದು
ಎನ್ನ ನೀ ನುಡಿವೆ ಸುಭದ್ರೆ ಕೋಲೆ
ಎನ್ನ ನೀ ನುಡಿವೆ ಸುಭದ್ರೆ ಕೇಳು ನಾ
ಸನ್ಯಾಸಿಯೊಡನೋಡಿ ಹೋಗಿಲ್ಲ ಕೋಲೆ ॥೧೭॥

ನಾನೇನೋ ನಿನ್ನ ಅಣ್ಣನನ್ನು ವಂಚಿಸಿ ಬಂದವಳು. ಆದರೆ ನಿನ್ನಂತೆ ಸಂನ್ಯಾಸಿಯೊಡನೆ ಓಡಿಹೋಗಲಿಲ್ಲ ಎಂದು ತನ್ನ ಮೇಲ್ಮೆಯನ್ನು ಎತ್ತಿತೋರಿಸಿ ಸುಭದ್ರೆಯನ್ನು ಸುಮ್ಮಗಿರಿಸುತ್ತಾಳೆ ರುಕ್ಮಿಣಿ.

ರುಕ್ಮಿಣಿಗೆ ಸುಭದ್ರೆ ಆಡಿದ ಕೊಂಕು ಮಾತನ್ನು ಕೇಳಿ ಸಹಿಸಲಾರದೆ ಸತ್ಯಭಾಮೆ ನಡುವೆ ಬಾಯಿ ಹಾಕುತ್ತಾಳೆ.

ಒಂದನೆಂದು ಹನ್ನೊಂದ ನೆನಸಿಕೊಂಬೆ
ಕುಂದಿಲ್ಲವಲ್ಲೆ ನಿನ ಬಣ್ಣ ಕೋಲೆ
ಕುಂದಿಲ್ಲವಲ್ಲೆ ನಿನ ಬಣ್ಣ ಸುಭದ್ರೆ
ಬಂದ ಹಾದಿ ಹಿಡಿದು ಮನೆಗೆ
ಹೋಗು ಕೋಲೆ ॥೧೮॥

ಏಕೆ ಸುಭದ್ರೆ ಅಂದು ಅನಿಸಿಕೊಳ್ಳುವದನ್ನು ನಿನಗಾರು ಕಲಿಸಿದರು ? ಹೆಚ್ಚು ಮಾತಾಡದೆ ಬಂದ ದಾರಿಯಿಂದ ತಿರುಗಿ ಮನೆಗೆ ಹೋಗು ಎಂದು ದರ್ಪದಿಂದ ಹೇಳುತ್ತಾಳೆ ಸತ್ಯಭಾಮೆ ನಾದಿನಿಗೆ.

ಆನೆಯು ಸಂಗಡ ಆಡು ಹುಲ್ಲು ಮೆದ್ದರೆ
ಆನೆ ಹಿಂಗಾಲಿಲೊದೆಯುದೆ ಕೋಲೆ
ಆನೆ ಹಿಂಗಾಲಿಲೊದೆಯುದೆ ಸುಭದ್ರೆ
ರಾಣಿ ರುಕ್ಮಿಣಿಗೆ ನೀ ಸರಿಯೇನೆ ಕೋಲೆ ॥೧೯॥

ದೇವಿ ರುಕ್ಮಿಣಿ ಆನೆ ಇದ್ದಂತೆ. ನೀನು ಆಡು ಇದ್ದಂತೆ. ಆಕೆಗೂ ನಿನಗೂ ಎಲ್ಲಿಯ ಸಾಟಿ ? ಎಂದು ಸುಭದ್ರೆಗೆ ಸತ್ಯಭಾಮೆ ಹಾಸ್ಯ ಮಾಡುತ್ತಾಳೆ. ಸತ್ಯಭಾಮೆಯ ಮಾತಿಗೆ ಉತ್ತರ ಕೊಡಲು ಹೊಳೆಯದಂತಾಯಿತು ಸುಭದ್ರೆಗೆ. ಪತಿ ಅರ್ಜುನನ ಕಡೆಗೆ ನೋಡುತ್ತಾಳೆ. ಅವನು ಸುಭದ್ರೆಯ ಮನದ ಇಂಗಿತವನ್ನು ಅರಿತು ಕೃಷ್ಣನನ್ನು ಜರೆಯಲು ಸುರುವು ಮಾಡುತ್ತಾನೆ.

ವಾರಿಧಿಯೊಳ್ ಮನೆ ಹಾವಿನಮೇಲ್ ನಿದ್ರೆ
ಹಾರುವ ಹದ್ದಿನ ಏರುವ ಕೋಲೆ
ಹಾರುವ ಹದ್ದಿನ ಏರುವನೆಂಬಂಥ
ತೋರ ಅಹಂಕಾರಾ ನಿನಗೇಕೆ ಕೋಲೆ ॥೨೦॥

ಅಯ್ಯೋ ಕೃಷ್ಣ ನಿನ್ನ ಹೆಂಡಂದಿರು ಅದೆಷ್ಟು ಗರ್ವಪಡುತ್ತಾರಲ್ಲ? ಇವರು ಗರ್ವಪಡುವಂತಹದು ಏನಿದೆ ನಿನ್ನ ಹತ್ತಿರ? ಮನೆಯೇ ? ಅದಿಲ್ಲವೆಂದು ಸಾಗರದಲ್ಲಿ ಮಲಗುವಿ. ಹಾಸಿಗೆಯೇ ? ಅದೂ ಇಲ್ಲ. ಹಾವಿನ ಮೇಲೆ ಮಲಗುವಿ. ಹತ್ತಿ ತಿರುಗಾಡಲು ಚನ್ನಾದ ವಾಹನವಿದೆಯೇ ? ಅದೂ ಇಲ್ಲ. ಹದ್ದನ್ನು ಏರಿ ಹಾರಾಡುವಿ. ಮತ್ತೆ....

ಹಾರುವ ಹದ್ದಿನ ಏರಿ ತಿರುಗಾಡುವಾಗ
ಜಾರಿ ಬಿದ್ದರೆ ಗತಿಯೇನು ಕೋಲೆ
ಜಾರಿ ಬಿದ್ದರೆ ಗತಿಯೇನೆ ನಿನಗೆ ಬುದ್ಧಿ
ಯಾರು ಹೇಳುವರು ಜಗದೊಳಗೆ ಕೋಲೆ॥೨೧॥

ಆಕಾಶದಲ್ಲಿ ಹದ್ದು ಹಾರಾಡುವಾಗ ಕೆಳಗೆ ಜಾರಿ ಬಿದ್ದರೆ ನಿನ್ನ ಗತಿಯೇನು ? ಇಂಥ ವಾಹನವನ್ನು ಏರಬೇಡವೆಂದು ಎರಡು ಬುದ್ಧಿಯ ಮಾತುಗಳನ್ನು ಹೇಳುವವರು ಯಾರೂ ಇಲ್ಲವೆ ನಿನಗೆ ಎಂದು ಅರ್ಜುನನು ಕೃಷ್ಣನನ್ನು ಜರೆಯುತ್ತಾನೆ.

ಭರದಿಂದ ನಿನ್ನನೆ ಬಿರಿಯಲೊದ್ದನು ರುಷಿ
ದುರುಳ ಶಿಶುಪಾಲ ಸಭೆಯೊಳು ಕೋಲೆ
ದುರುಳ ಶಿಶುಪಾಲ ಸಭೆಯೊಳು ಬೈದದ್ದು
ಸರಿಬಂತು ಎನ್ನ ಮನಸಿಗೆ ಕೋಲೆ ॥೨೨॥

ಭೃಗುಋಷಿಯು ನಿನ್ನನ್ನು ಒದ್ದನು. ಶಿಶುಪಾಲನು ತುಂಬಿದ ಸಭೆಯಲ್ಲಿ ನಿನಗೆ ಬೈದನು. ಇವರಿಬ್ಬರು ನಿನಗೆ ಕೊಟ್ಟ ಶಿಕ್ಷೆ ನೋಡಿ ಬಹಳ ಆನಂದವಾಯಿತು ನನಗೆ.

ಇದಿರಾಗಿ ಇದ್ದು ಕಾದಿ ಒಬ್ಬರನಾದರು
ಮಧುವೈರಿ ನೀನು ಗೆಲಲಿಲ್ಲ ಕೋಲೆ
ಮಧುವೈರಿ ನೀನು ಗೆಲಲಿಲ್ಲ ಸರ್ವರ
ಸದದೆ ಮಾರ್ಮಲಚಿ ವಂಚಿಸಿ ಕೋಲೆ ॥೨೩॥

ನೀನು ವಂಚಕನು, ಒಬ್ಬರ ಜತೆಗೂ ಎದುರಿಗೆ ನಿಂತು ಕಾದಿದವನಲ್ಲ, ಎಲ್ಲರನ್ನೂ ಮೋಸದಿಂದಲೇ ಗೆದ್ದಿರುವಿ, ಮತ್ತೆ

ಕ್ಷೀರಸಾಗರ ಶಯನನೆಂದರೆ ಹಿಗ್ಗುವಿ
ಯಾರರಿಯರು ನಿನ್ನ ಹುಳಕನು ಕೋಲೆ
ಯಾರರಿಯರು ನಿನ್ನ ಹುಳಕು ಅತ್ತೆಯ
ಮನೆಯ ಸೇರಿ ಇದ್ದುದನರಿಯರೆ ಕೋಲೆ
॥೨೪॥

ಸಾಗರವು ನಿನ್ನ ಅತ್ತೆಯ (ಮಾವನ)ಮನೆಯಲ್ಲವೆ ? ಮಾವನ ಮನೆ ಸೇರಿದ ಕುಹಕನೆಂದು ಎಲ್ಲರೂ ಅರಿತಿದ್ದಾರೆ. ಎಲ್ಲರೂ ಅರಿಯಲೆಂದೇ ನಿನ್ನ ಹೆಸರಿನ ಹಿಂದೆ ಕ್ಷೀರಸಾಗರ ಶಯನ ಎಂಬ ಬಿರುದನ್ನು ಜೋಡಿಸಿಕೊಂಡಿರುವಿಯಲ್ಲವೇ ?

ಬೀಗನಾಡಿದಂಥ ಬಿಂಕದ ನುಡಿ ಕೇಳಿ
ಸಾಗರಶಯನಾ ನಸುನಕ್ಕಾ ಕೋಲೆ
ಸಾಗರಶಯನಾ ನಸುನಗುತ ಕೇಳಿದಾ
ಹೀಗಿದೆ ನಿನ್ನ|ಮನದೊಳು ಕೋಲೆ ॥೨೫॥

ಬೀಗನಾದ ಅರ್ಜುನನ ಮಾತನ್ನು ಕೇಳಿ ಕೃಷ್ಣನು, ಹೀಗಿದೆಯೆ, ನಿನ್ನ ಮನದೊಳಗೆ? ಸರಿ, ಎಂದು ನಸುನಕ್ಕು ಉತ್ತರವೀಯುತ್ತಾನೆ.

ಹುಚ್ಚು ಕುಂದಿನ ಮಾತು ಆಡಿದೆ ನೀ ಕೇಳು
ಹುಚ್ಚಾಗಿ ಹೋದಿ ಸಭೆಯೊಳು ಕೋಲೆ
ಹುಚ್ಚಾಗಿ ಹೋದಿ ಸಭೆಯೊಳಗೆ ನಗುತಲಿ
ಅಚ್ಯುತಾನಂತಾ ನುಡಿದಾನು ಕೋಲೆ ॥೨೬॥

ಏನಾದರೂ ಹುಚ್ಚನಂತೆ ಮಾತನಾಡಬೇಡ ಅರ್ಜುನಾ, ಹೀಗೆ ಮಾತಾಡಿ ಸಭೆಯಲ್ಲಿ ಹುಚ್ಚನೆನಿಸಿಕೊಂಡಿ? ಎಚ್ಚರ. ಎಂದು ಕೃಷ್ಣ ಹೇಳುತ್ತಾನೆ. ಆದರೂ ಕೇಳದೆ ಪಾರ್ಥ . . .

ಆವು ಕಾವನಿಗೆ ಯಾವಾಗ ಮೂರ ದುಡ್ಡು
ಭಾವ ನಿನಗೊಮ್ಮೆ ಧೊರೆತನ ಕೋಲೆ
ಭಾವ ನಿನಗೊಮ್ಮೆ ಧೊರೆತನ ಉಂಟಯ್ಯ
ನಾವೆ ಕೊಟ್ಟೀವು ತಕ್ಕೊಳ್ಳೊ ಕೋಲೆ ॥೨೭॥

ಆಕಳ ಕಾಯುವ ನಿನಗೆ ಅರಸೊತ್ತಿಗೆ ಎಲ್ಲಿ? ಏನೋ ಒಂದು ಸಲ ಧೊರೆತನ ಬಂದಿದೆ. ಅದನ್ನಾದರೂ ನಾವೇ ಕೊಟ್ಟಿರುವೆವು ತಿಳಿಯಿತೆ? ಎಂದು ಗಹಗಹಿಸಿ ನಗುತ್ತಾನೆ ಪಾರ್ಥ.

ದನಗಾಹಿ ಎಂದರೆ ಎನಗೆ ಹೀನತೆ ಇಲ್ಲ,
ಜನರೆಲ್ಲ ಬಲ್ಲರು ಈ ಮಾತು ಕೋಲೆ
ಜನರೆಲ್ಲ ಬಲ್ಲರು ಈ ಮಾತು ಭಾವಯ್ಯ
ನೆನಪು ಕೊಟ್ಟೆಲ್ಲೊ ಮರೆತಿದ್ದೆ ಕೋಲೆ ॥೨೮॥

ನಾನು ದನಕಾಯುವವನು ಎಂಬುದನ್ನು ಎಲ್ಲರೂ ಬಲ್ಲರು. ಇದರಿಂದ ನನಗೇನು ಹೀನತೆ? ಬಹಳ ಹಿಂದಿನ ಸಂಗತಿಯಾದುದರಿಂದ ನಾನದನು ಮರೆತಿದ್ದೆ. ನೆನಪು ಕೊಟ್ಟು ಬಹಳ ಚೆನ್ನಾಗಿ ಮಾಡಿದಿ ಎಂದು ನಗುತ್ತಾನೆ ಕೃಷ್ಣ.

ಇವರಿಬ್ಬರ ವಾದವನ್ನು ಕೇಳುತ್ತಿದ್ದ ಬಲರಾಮನು ಅರ್ಜುನನನ್ನು ಕೆಣಕುತ್ತಾನೆ.

> ಅತ್ತೆಯ ಮಗನೆಂದು ಮತ್ತೆ ತಂಗಿಯ ಕೊಟ್ಟು
> ಅರ್ಥಿಲಿ ರಥವ ನಡೆಸಿದ ಕೋಲೆ
> ಅರ್ಥಿಲಿ ರಥವ ನಡೆಸಿದುಪಕಾರವ
> ಎತ್ತಲು ದಾನವನರುಹಿದೆ ಕೋಲೆ ॥೨೯॥

ಸೋದರತ್ತೆಯ ಮಗನೆಂದು ನಿನಗೆ ತಂಗಿಯನ್ನು ಕೊಟ್ಟೆವು. ಯುದ್ಧದಲ್ಲಿ ಕೃಷ್ಣನು ನಿನಗೆ ಸಾರಥಿಯಾದನು. ಇದೆಲ್ಲದರ ಉಪಕಾರವನ್ನು ಸರಿಯಾಗಿ ತೀರಿಸಿದೆ ಎಂದು ಬಲರಾಮನು ಕೋಪಗೊಂಡು ಕೇಳುತ್ತಾನೆ ಫಲ್ಗುಣನನ್ನು.

ಬಲರಾಮನ ಮಾತನ್ನು ಕೇಳಿ ಅರ್ಜುನನು ತಲೆತಗ್ಗಿಸಿ ಕೃಷ್ಣನ ಜತೆಗೆ ವಿನೀತನಾಗಿ ಮಾತಾಡುತ್ತಾನೆ.

> ಗುಣನಿಧಿ ನಿನ್ನ ದುರ್ಗುಣಿಯೆಂದು ಪೇಳಿದೆ
> ಎಣಿಸದಿರೆನ್ನ ಅಪರಾಧ ಕೋಲೆ
> ಎಣಿಸದಿರೆನ್ನ ಅಪರಾಧವೆನುತಲಿ
> ಮಣಿದನು ಶ್ರೀಹರಿಚರಣಕ್ಕೆ ಕೋಲೆ ॥೩೦॥

ಕೃಷ್ಣ ನಿನ್ನನ್ನು ದುರ್ಗುಣಿಯೆಂದು ಭಾವಿಸಿ ಜರೆದೆ. ನನ್ನ ಅಪರಾಧವನ್ನು ಕ್ಷಮಿಸು ಎಂದು ತನ್ನ ಭಾವನ ಚರಣಕ್ಕೆ ಎರಗುತ್ತಾನೆ ಅರ್ಜುನ.

ಅರ್ಜುನನು ಕೃಷ್ಣನಿಗೆ ವಂದಿಸಿದುದನ್ನು ನೋಡಿ ಮೆಲ್ಲಗೆ ಏಳುತ್ತಾಳೆ ಸುಭದ್ರೆ.

> ಬಡನಡು ಬಳಕುತ್ತ ಕುಚಗಳಲ್ಲಾಡುತ
> ಮುಡಿದ ಪುಷ್ಪಗಳು ಉದರುತ ಕೋಲೆ
> ಮುಡಿದ ಪುಷ್ಪಗಳು ಉದರುತ ಅಣ್ಣನ
> ಅಡಿಗೆರಗಿದಳು ಸುಭದ್ರೆ ಕೋಲೆ ॥ ೩೧ ॥

ವೈಯಾರದಿಂದ ಎದ್ದುಬಂದು ಅಣ್ಣ ಕೃಷ್ಣನಿಗೆ ನಮಸ್ಕರಿಸಿ ಹೇಳುವಳು ಸುಭದ್ರೆ.

> ಹೆಣ್ಣು ಕೊಟ್ಟ ಮೇಲೆ ಹಿತವ ಚಿಂತಿಸಬೇಕು
> ಇನ್ನು ನುಡಿದುದರಿಂದ ಫಲವೇನು ಕೋಲೆ
> ಇನ್ನು ನುಡಿದುದರಿಂದ ಫಲವೇನು ಅಣ್ಣಯ್ಯ
> ಎನ್ನ ಕಡೆ ನೋಡಿ ಮನ್ನಿಸು ಕೋಲೆ ॥೩೨॥

ಹೆಣ್ಣು ಕೊಟ್ಟೆಯಾ, ಬೆನ್ನು ಕೊಟ್ಟೆಯಾ ಎಂಬ ಸಾಮತಿ ಇದೆಯಲ್ಲವೆ? ಹೆಣ್ಣನ್ನು ಕೊಟ್ಟಮೇಲೆ ಹಿತವನ್ನೆ ಚಿಂತಿಸಬೇಕಲ್ಲವೆ? ಅಣ್ಣ! ಅವರ ತಪ್ಪೇನಿದ್ದರೂ ನನ್ನ ಕಡೆಗೆ ನೋಡಿ ಮನ್ನಿಸು ಎಂದು ಕೃಷ್ಣನಿಗೆ ವಂದಿಸಿ ಕೇಳಿಕೊಳ್ಳುತ್ತಾಳೆ.

ತಂಗಿಯ ದೈನ್ಯವನ್ನು ನೋಡಿ ಕೃಷ್ಣನು. . . .

> ಏನಮ್ಮ ಸುಭದ್ರೆ ಈ ನುಡಿ ನಿನಗೇಕೆ
> ನೀನು ನಿನ್ನಿಂದ ನಿಮ್ಮವರು ಕೋಲೆ
> ನೀನು ನಿನ್ನಿಂದ ನಿಮ್ಮವರು ಎ
> ಪ್ರಾಣಪದಕವೆನುತಿಹೆ ಕೋಲೆ ॥ ೩೩

ಇದೇನು ಮಾತೆ ಸುಭದ್ರೆ? ಮೊದಲಿನಿಂದಲೂ ಪಾಂಡವರು ನನಗೆ ಪ್ರಿಯರು. ನಿನ್ನನ್ನು ಕೊಟ್ಟಮೇಲಂತೂ ನಾನವರನ್ನು ನನ್ನ ಪ್ರಾಣಪದಕವೆಂದೇ ತಿಳಿದಿರುವೆ. ಅಂಜಬೇಡ ಎಂದು ತಂಗಿಗೆ ಅಭಯ ಕೊಟ್ಟು ಅರ್ಜುನನಿಗೆ ಮತ್ತೆ ಹಾಸ್ಯದಿಂದ ಹೇಳುತ್ತಾನೆ.

> ಮೊದಲೆ ಅತ್ತೆಯಮಗ ಅದರಿಂದ ನಿನಕೊಟ್ಟೆ
> ಹೆದರುವರೆ ಅವರು ನಮಗಿನ್ನು ಕೋಲೆ
> ಹೆದರುವರೆ ಅವರು ನಮಗಿನ್ನು ಎನುತಲಿ
> ಮುದದಿಂದ ಮಾಧವ ನಗುತಿದ್ದ ಕೋಲೆ ॥ ೩೪ ॥

ತಂಗಿ, ನಿನ್ನ ಪತಿ ನನ್ನ ಸೋದರತ್ತೆಯ ಮಗನು. ಅಲ್ಲದೆ ನಿನ್ನನ್ನವನಿಗೆ ಧಾರೆಎರೆ ದಿರುವೆ. ಇಷ್ಟಾದ ಬಳಿಕ ನನಗೆ ಮಾತಾ ಡಲು ಪಾರ್ಥನು ಹೆದರುವನೇ ? ಎಂದು ಕೃಷ್ಣನು ಸುಭದ್ರೆಗೆ ಹೇಳಿ ನಗುತ್ತಾನೆ.

ಕೃಷ್ಣನು ಶಾಂತವಾದುದನ್ನು ಕಂಡು ಸುಭದ್ರೆ ರುಕ್ಮಿಣಿಯ ಕಡೆಗೆ ಹೊರಳಿ.

ಸಿಂಧುಜಾತೆ ದೇವಿ ಮಂದರುದ್ಧರನರಸಿ
ಮಂದಮತಿಯಲಿ ನುಡಿದೆನು ಕೋಲೆ ।
ಮಂದಮತಿಯಲಿ ನುಡಿದಪರಾಧವ
ನೊಂದು ಎಣಿಸದೆ ಕರುಣಿಸು ಕೋಲೆ ॥೩೫॥

ದೇವಿ ರುಕ್ಮಿಣಿ, ತಿಳಿಯದೆ ನಾನೇನಾದರೂ ಮಾತಾಡಿದೆ. ಈ ತಪ್ಪನ್ನು ಮನ್ನಿಸು ಎಂದು-

ಸರಿಯಲ್ಲದವಳು ನಾ ಸರಿಯೆಂದು ನುಡಿದೆನು
ಹಿರಿ ಅತ್ತಿಗೆ ನೀನು ನನಗಿನ್ನು ಕೋಲೆ ।
ಹಿರಿ ಅತ್ತಿಗೆ ನೀನು ನಿಮ್ಮಿಂದ ತಪ್ಪೆಂದು
ಚರಣಕ್ಕೆರಗಿದಳು ಸುಭದ್ರೆ ಕೋಲೆ ॥೩೬॥

ನಿನಗೆ ನಾನು ಸಾಟಿಯಲ್ಲ. ಆದರೂ ಸರಿ. ಕಳೆಂತೆ ಮಾತಾಡಿದೆ. ಇದೆಲ್ಲ ತಪ್ಪನ್ನು ಕ್ಷಮಿಸು ಎಂದು ರುಕ್ಮಿಣಿಗೆ ನಮಸ್ಕರಿಸು ತ್ತಾಳೆ ಸುಭದ್ರೆ,

ಎರಗಿದ ನಾದುನಿಯ ಕರಗಳ ಪಿಡಿದೆತ್ತಿ
ಭರದಿ ತಕ್ಕೈಸಿ ರುಕ್ಮಿಣಿ ಕೋಲೆ ।
ಭರದಿ ತಕ್ಕೈಸಿ ರುಕ್ಮಿಣಿ ಸುಭದ್ರೆ
ಧೊರಿಮಗಳೆ ಎಮಗೆ ಎರಗುವಿಯಾ
ಕೋಲೆ ॥೩೭॥

ರಾಜಪುತ್ರೀ ನನಗೆ ಎರಗುವಿಯಾ ? ಎಂದು ಎಬ್ಬಿಸಿ ಭರದಿಂದ (ಪ್ರೇಮದಿಂದ) ಅಪ್ಪುತ್ತಾಳೆ ನಾದಿನಿಯನ್ನು ರುಕ್ಮಿಣಿ. ಆಗ ಸುಭದ್ರೆ-

ಬ್ರಹ್ಮೇಶಶಕ್ರರವಿಧರ್ಮಶಶಾಂಕಪೂರ್ವ
ಸುಮ್ಮನಸಸಂತತಿ ಮೊದಲಾಗಿ ಕೋಲೆ ।
ಸುಮ್ಮನಸಸಂತತಿ ಮೊದಲಾಗಿ ಶ್ರೀದೇವಿ
ನಿಮ್ಮ ಕಟಾಕ್ಷ ಬಯಸುವರು ಕೋಲೆ ॥೩೮॥

ಬ್ರಹ್ಮಾದಿ ದೇವತೆಗಳೆಲ್ಲರೂ ನಿಮ್ಮ ದಯವನ್ನು ಬಯಸುತ್ತಾರೆ. ಇಂತಹ ಮಹ ನೀಯಳು ನೀನು ಎಂದು ಅತ್ತಿಗೆಯನ್ನು ಹೊಗಳುತ್ತಾಳೆ ಸುಭದ್ರೆ.

ತನ್ನನು ಹೊಗಳುತ್ತಿರುವ ನಾದಿನಿಗೆ.

ಅಂದರೇನಮ್ಮ ನಿನ್ನ ಕುಂದ ಹಿಡಿದವರಾರು
ಮಂದರೋದ್ಧರನ ಕಿರುತಂಗಿ ಕೋಲೆ
ಮಂದರೋದ್ಧರ ಕಿರುತಂಗಿ ಸುಭದ್ರೆ
ಗಂಧ ಕುಂಕುಮವ ಧರಿಸವ್ವ ಕೋಲೆ ॥೩೯॥

ನುಡಿದರೇನು ತಪ್ಪು ಹಿಡಿದವರಾರು ನಿನ್ನ
ಕಡಲಶಯನನ ಕಿರುತಂಗಿ ಕೋಲೆ
ಕಡಲಶಯನನ ಕಿರುತಂಗಿ ಸುಭದ್ರೆ
ಉಡಿಯ ತುಂಬುವೆನು ಬಾರವ್ವ ಕೋಲೆ॥೪೦॥

ಏನು ಅಂದರೂ ಏನು ಆಡಿದರೂ ಸರಿ. ನೀನು ಶ್ರೀಕೃಷ್ಣನ ಚಿಕ್ಕ ತಂಗಿಯಲ್ಲವೇ ? ನಿನ್ನ ತಪ್ಪನ್ನು ಎಣಿಸುವ ಧೈರ್ಯ ಯಾರಿ ಗಿದೆ? ಅರಿಷಿಣ ಕುಂಕುಮ ಕೊಟ್ಟು ಉಡಿ ತುಂಬುತ್ತೇನೆ ಎಂದು ಪ್ರೇಮದಿಂದ ಕುಳ್ಳಿರು ಸುತ್ತಾಳೆ ರುಕ್ಮಿಣಿ ನಾದಿನಿಯನ್ನು.

ಸುಭದ್ರೆ ತಾನು ತಂದ ಉಡುಗರೆಗಳನ್ನು ತೆಗೆದಿಡುತ

ಚರಣಕಂದಿಗೆ ಗೆಜ್ಜೆ ಮಿನಗೋಪೀತಾಂಬರ
ಸಿರಿವತ್ಸಗಂಧ ತುಳಸಿಯು ಕೋಲೆ
ಸಿರಿವತ್ಸ ಗಂಧ ತುಳಸಿ ಕೌಸ್ತುಭ ಹಾರ
ಸಿರಿದೇವಿ ರಮಣಿಗೆ ಉಡುಗರೆ ಕೋಲೆ ॥೪೧॥

ನೊಸಲೊಳೊಪ್ಪ ನಾಮ ಎಸೆವ ಕರ್ಣಕುಂಡಲ
ಮಿಸುನಿಯಂತೊಪ್ಪುವ ವಸನವು ಕೋಲೆ
ಮಿಸುನಿಯಂತೊಪ್ಪುವ ಮುಕುಟ ಕೌಸ್ತುಭ
ಹಾರ ವಸುದೇವತನಯಗೆ ಉಡುಗರೆ
ಕೋಲೆ ॥೪೨॥

ಕಾಲಿನಲ್ಲಿಯ (ಕಾಲಿನಲ್ಲಿ ಹಾಕುವ ಒಡವೆ) ಒಡವೆ, ಪೀತಾಂಬರ, ಶ್ರೀಗಂಧ, ತುಳಸಿ, ಚಿನ್ನದ ನಾಮ, ಕರ್ಣಕುಂಡಲ, ಹೊಳೆಯುವ ಕೌಸ್ತುಭಹಾರ ಮುಂತಾದ ಉಡುಗರೆಗಳನ್ನು ರುಕ್ಮಿಣಿಗೆ ತೋರಿಸಿ ಇದೆಲ್ಲ ಅಣ್ಣ ಕೃಷ್ಣನಿಗೆ ಎಂದು ಹೇಳಿ ಉಡುಗರೆ ಯಿಂದ ತುಂಬಿದ ತಾಟನ್ನು ಅವನ ಮುಂದಿ ರಿಸಿ ನಮಸ್ಕರಿಸುತ್ತಾಳೆ ಸುಭದ್ರೆ. ಆಮೇಲೆ ರುಕ್ಮಿಣಿಯ ಕಡೆಗೆ ತಿರುಗಿ

ಅನರ್ಘ್ಯವಾಗಿಹ ಅನಂತ ವಸ್ತ್ರಾಭರಣ
ಅನಂತವಾಗಿ ತಂದೀವೆ ಕೋಲೆ ।
ಅನಂತವಾಗಿ ತಂದೀವೆ ಲಕ್ಷ್ಮಿ ನಿಮ್ಮ
ಅನಂತ ಬಳಗಕ್ಕೆ ಕೊಡು ಬನ್ನಿ ಕೋಲೆ ॥೪೩॥

ಅತ್ಯಂತ ಬೆಲೆಯುಳ್ಳ ವಸ್ತ್ರಾಭರಣಗಳನ್ನು ಅಗಣಿತವಾಗಿ ತಂದಿದ್ದೇನೆ. ( ಎಣಿಕೆ ಇಲ್ಲ ದಷ್ಟು ತಂದಿದ್ದೇನೆ. ) ಇವೆಲ್ಲವನ್ನು ನಿಮ್ಮ

ಎಲ್ಲ ಬಳಗಕ್ಕೆ ಕೊಡಲು ಸಹಾಯ ಮಾಡ ಬನ್ನಿ ನನಗೆ, ಎಂದು ಸುಭದ್ರೆ ರುಕ್ಮಿಣಿಗೆ ಕೇಳುತ್ತಾಳೆ ಸಹಾಯ ಮಾಡಲು.

ಒಬ್ಬರೊಬ್ಬರಿಗೆ ಅರಿಶಿಣ ಕುಂಕುಮ ಹಚ್ಚಿ ಉಡುಗರೆ ಕೊಟ್ಟು ವೀಳ್ಯ ಕೊಡುತ್ತಾರೆ. ಅತ್ತಿಗೆ ನಾದಿನಿಯರಿಬ್ಬರೂ ಕೂಡಿ,

ಗಂಧ ಕುಂಕುಮ ಹಚ್ಚಿ ತಂದ ವೀಳ್ಯವ ಕೊಟ್ಟು
ಮಂದಹಾಸದಲಿ ಕಳಹುತ ಕೋಲೆ ।
ಮಂದಹಾಸದಲಿ ಕಳಹುತ ರುಕ್ಮಿಣಿ
ಬಂದಳು ಬಾಗಿಲ ಹೊರಹೊಂಟು ಕೋಲೆ ॥೪೪॥

ಮುಯ್ಯ ತಂದ ಸ್ತ್ರೀಯರೆಲ್ಲರಿಗೂ ಅರಿಶಿಣ ಕುಂಕುಮ ಹಚ್ಚಿ ಎಲ್ಲರಿಗೂ ವೀಳ್ಯ ಕೊಟ್ಟು ಪಾಂಡವಪರಿವಾರಕ್ಕೆ ಅಪ್ಪಣೆ ಕೊಡಲು ಬಾಗಿಲದ ಹೊರಗೆ ಬರುತ್ತಾಳೆ. ರುಕ್ಮಿಣಿ ಸಪರಿವಾರವಾಗಿ.

ಅಪ್ಪಣೆ ಕೊಡಲು ಹೊರಗೆ ಬಂದ ಅತ್ತಿಗೆಗೆ ವಂದಿಸಿ ಮತ್ತೊಮ್ಮೆ ಹೇಳುತ್ತಾಳೆ ಸುಭದ್ರೆ

ಸಾಗರತನಯಳೆ ಪೂಗರ್ಭನಮಾತೆ
ನಾಗಾರಿಗಮನನಾರ್ಧಾಂಗಿ ಕೋಲೆ ।
ನಾಗಾರಿಗಮನನಾರ್ಧಾಂಗಿ ರುಕ್ಮಿಣಿ
ಹೋಗಿ ಬರ್ತೇವೆ ದಯವಿರಲಿ ಕೋಲೆ ॥೪೫॥

ಸಾಗರಕನ್ಯೆ, ಬ್ರಹ್ಮನ ಮಾತೆ, ಗರುಡವಾಹನನರಸಿ ರುಕ್ಮಿಣಿ ಹೋಗಿ ಬರುತ್ತೇವೆ. ನಮ್ಮ ಮೇಲೆ ದಯವಿರಲಿ ನಿನ್ನದು, ಎಂದು ಮತ್ತೊಮ್ಮೆ ನಮಸ್ಕರಿಸಿ ತನ್ನ ಪರಿವಾರದೊಂದಿಗೆ ಹಸ್ತಿನಾಪುರಕ್ಕೆ ತೆರಳುತ್ತಾಳೆ, ಸುಭದ್ರೆ.

ಈ ಪೌರಾಣಿಕ ಕಥೆಯ ಆಧಾರದಿಂದಲೇ ಮುಯ್ಯವನ್ನು ತರುವ ಮತ್ತು ತಿರುಗಿಸುವ ಸಂಪ್ರದಾಯವಿದೆ.

## ಬಿಡಾಡೀ

ಎಲೇಲೇಲೇಲೇ ಬಿಡಾಡೀ । ಏನು ನಡಿಸಿರುವಿ ಅಡಾಡೀ ?
ಏರಿದ ಪಲ್ಲಕ್ಕಿ ಇಳಿದು ಬಂದು ಹೇಸಿಕಿಲ್ದೆ ನಡಿಸೀದೆಲ್ಲ ಹುಡದಿ ! ॥
    ತುಪ್ಪದನಾತ ಬಡಿದ ಕೂಡಲೆ ಓಡಿ ಹೋದಿ ಬುಧಂಗನೇ
    ನಾಲಿಗೀ ಕೊಯ್ಯುವ ಖಬರಿಲ್ಲದೆ ಅಲಗ ನೆಕ್ಕಿದಿ ಚಂಗನೇ ॥
ಸಾಕಿದ ಮನೆ ಕಾಯುಲಿಲ್ಲ । ಹಾಕಿದ ರೊಟ್ಟಿ ಸಾರ್ಥಕಿಲ್ಲ
ಧನಿಯನ ಕಂಡು ಬಾಲಾ ಅಲುಗಿಸಿ ಹಿಗ್ಗು ತೋರಿಸಲಿಲ್ಲ ॥
    ಹಾಲುಕುಡಿದು ದೊಡ್ಡವನಾದಿ । ಅನ್ನಾ ಉಂಡು ನಿದ್ದೀ ಹೊಡೆದೀ
    ಯಾರು ಬಂದರು ಅದೇ ಜೊಗುಳಿ ಮುಂದಕೆ ನಡೆದೀ ॥
ಉಂಬುವ ತನಕಾ ತೆಪ್ಪಗಿದ್ದು । ಉಂಡಮೇಲೆ 'ಗುರ್' ಅಂದು
ಒನಕೀ ಮಿಂಡ ಆಗತೀದಿ ನ್ಯಾಯಾ ಯಾತರದು ? ॥
    ಅಂಗೀ ತೊಟ್ಟ ಮೈತುಂಬ । ಗೆಜ್ಜೀ ಕಟ್ಟಿ ಕೊರಳಿಗಿಂಬಾ
    ದತ್ತಾತ್ರಯನ ಕಾಲಮುಂದೆ ಕೂತುಕೊಳ್ಳುವ ಜಂಬ ॥
ಹಳ್ಳಕ್ಕಂತೂ ಹೋಗಲಿಲ್ಲ । ಮನಿಯೆಂದೂ ಕಾಯುಲಿಲ್ಲ
ಹೊತ್ತು ನೋಡಿ ಅಗಸನ ಕುತ್ತ ಬಿಡಿಸಲಿಕ್ಕೆಷ್ಟೂ ಆಗಲಿಲ್ಲ ॥
    ತುಡುಗುಮಾಡಿ ತೆಂಗು ತಂದೀ । ಸುಲಿಲಾರದೆ ಹೇಗೆ ತಿಂದೀ ?
    ಬಾಯಾಗ ಹಿಡಿದು ಓಡೇ ಓಡುತೀ ಸಂದಿಗೊಂದಿ ॥
ಮನೆಯೆಂಬುದು ಮೊದಲೇ ಇಲ್ಲ । ಹೆಂಡತಿ ಮಕ್ಕಳ ಕಂಡೇ ಇಲ್ಲ
ಎಲ್ಲೋಬಿದ್ದು ಏನೋ ತಿಂದು ಆಗಿ ಹೋಗುತೀ ತಿಪ್ಪೀಪಾಲ ॥
    ಒಕ್ಕಲಾಗದೆ ಊರಿಗೆ । ಹೆಣವಾಗದೆ ಮಸೂತಿಗೆ
    ತಿರುಗೇ ತಿರುಗತೀ ಪುರಸೊತ್ತಿಲ್ಲ ನಾಯೀಗೆರಿ ಕಾಲಿಗೆ ॥
ಸಾವಿರ ವರುಷದ ಸಹವಾಸ । ಏನೂ ಕಲಿಸಲಿಲ್ಲ ಈ ಮನುಷ್ಯ
ತಾ ಮಾತ್ರ ನಾಯಕ, ನಾಯೀ ಬಾಳೇ ನಿನಗಿನ್ನೂ ಏಸು ದಿವಸ ? ॥
    ಕೊಟ್ನಿ ನೋಡಿದರೆ ಸಲಿಗೆ । ಏರಿ ಕುಳಿತೆ ತಲೀಗೆ
    ಛೂ ಎಂದರೆ ಮೊಲ ಹಿಡಿಯದೆ ಬುದ್ಧಿ ಹೇಳಿದೆ ಕಾಲಿಗೆ ॥
ಕೊಟ್ಟದ್ದ ಕೆಲಸ ಬಾಲಕೆ ಹೇಳಿ । ಹೊರಟು ನಿಂತೀ ಸಂತೆಯ ಪಾಳಿ
ಲಳಗಿಯಿಂದ ಬಡಿಸಿಕೊಂಡು ನೆಲಹಿಡಿದೆ ಕಾಲಾನ ಧೂಳಿ ॥
    ಬಾಲ ಒಂಕ ಗುಣಡೊಂಕ । ಹಣಿಕಿ ಹಾಕಿದಿ ಅಡಗಿ ಕೊಂಕ
    ಸೊಂಟ ಹೋಯ್ತೊ-ಕುಂಟಕಾಲೋ ಹೊಡೀ ಇನ್ನು ಶಂಖ ॥

—ಸಿಂಪಿ ಲಿಂಗಣ್ಣ, ಚಡಚಣ



ಲೇಖಕರು :
ಶ್ರೀ. ಸೂ. ಸುಬ್ರಮಣ್ಯಂ,
ಬೆಂಗಳೂರು

ಇದು ಸೋಜಿಗದ್ದೆನಿಸಿದರೂ ನಿಜವಾದದ್ದು

# ಪ್ರಾಣಿಗಳಲ್ಲಿ ಪ್ರಣಯ

**ಪ್ರಣಯ ಪ್ರತಿಯೊಂದು ಜೀವಿಯ ಜೀವನದಲ್ಲಿ ಅವಶ್ಯಕ ಅಂಗ. ಪ್ರಪಂಚದ ಆಗುಹೋಗುಗಳಲ್ಲಿ ಅದು ತುಂಬಾ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಿದೆ. ಅದಿಲ್ಲದ ಜೀವಿಯೋ ಇಲ್ಲವೆಂದರೂ ಸರಿ. ಆದರೆ ಮಾನವರಲ್ಲಿ ಒಂದು ವಿಧವಾದರೆ ಪ್ರಾಣಿಗಳಲ್ಲಿ ಇನ್ನೊಂದು ವಿಧ. ಪ್ರಾಣಿಗಳಲ್ಲಿ ತುಂಬ ಅಚ್ಚರಿಯ ವಿಧಾನಗಳೂ ಇವೆ. ಅವು ತುಂಬಾ ಕುತೂಹಲಕಾರಿಯಾಗಿವೆ.**

ಇಂಗ್ಲಂಡಿನ ಹಿಂದಿನ ಪ್ರಧಾನಮಂತ್ರಿ ಸರ್ ವಿನ್‌ಸ್ಟನ್ ಚರ್ಚಿಲರು ಒಮ್ಮೆ ತಮ್ಮ ರಾಜಕೀಯಕ್ಕೆ ಪ್ರಾಣಿಶಾಸ್ತ್ರದಿಂದ ಉದಾಹರಣೆಯೊಂದನ್ನು ಎರವಲು ಪಡೆದು ಇಂತೆಂದರು : "ನಮ್ಮ ಕಮ್ಯೂನಿಸ್ಟ ಮಿತ್ರರು ಗೆದ್ದಲು ಹುಳುವಿನ ಜೀವನವನ್ನೂ ಆತ್ಮವನ್ನೂ ಪರೀಕ್ಷಿಸಬೇಕು. ಅದು ಅವರ ಪ್ರಾಚೀನದ ಬಗೆಗೆ ಬಹಳವನ್ನೇ ಹೇಳುವುದಲ್ಲದೆ ಅವರ ಭವಿಷ್ಯದ ಬಗೆಗೂ ಮುನ್ಸೂಚನೆ ನೀಡುತ್ತದೆ."

ವಾಸ್ತವದಲ್ಲಿ ಚರ್ಚಿಲರು ಗೆದ್ದಲು ಹುಳುವಿನ ಸಾಂಘಿಕ ಜೀವನವನ್ನು ಶ್ಲಾಘಿಸಿದ್ದರು. ಗೆದ್ದಲು ಹುಳುವಿನಲ್ಲಿ ಕಾಣಬರುವ ಒಗ್ಗಟ್ಟು ಅತ್ಯಾಶ್ಚರ್ಯಕರವಾದುದು. ವಿಜ್ಞಾನ ಈ ಅನುಪಮ ನಿಕಟ ಸೌಹಾರ್ದವನ್ನು ಇನ್ನೂ ವಿವರಿಸಿಲ್ಲ. ವೈಯಕ್ತಿಕವಾಗಿ, ಪ್ರತಿ ಗೆದ್ದಲು ಹುಳವೂ ಅಶಕ್ತವಾದ ಒಂದು ಬಗೆಯ ಮೂರ್ಖತನದ ಪ್ರಾಣಿ. ಸಾಂಘಿಕವಾಗಿ, ಅದರಷ್ಟು ಶಕ್ತಿಯುತ ವಿಶೇಷ ಬಗೆಯ ಜ್ಞಾನ ಹೊಂದಿದ ಜೀವಸಮುದಾಯ ಮತ್ತಾವುದೂ ಇರಲಾರದು.

ಕೀಟವಿಜ್ಞಾನಿಗಳ ದೃಷ್ಟಿಯಲ್ಲಿ ರಾಣಿ-ಗೆದ್ದಲುಹುಳುಗಳು ಮೊಟ್ಟೆಯಿಕ್ಕುವ ಯಂತ್ರವೇ ಸರಿ. ಅವು ದಿನಕ್ಕೆ ಸುಮಾರು ನಾಲ್ಕುಸಾವಿರ ಮೊಟ್ಟೆಗಳನ್ನಿಡುತ್ತವೆ. ಕೆಲವು ಜಾತಿಯ ಗೆದ್ದಲು ಹುಳುವಿನ ಹೊಟ್ಟೆಯು ವಿಪರೀತವಾಗಿ ದಪ್ಪನಾಗಿ ಅವು ನಿಶ್ಚೇಷ್ಟಿತವಾಗಿ ಬಿದ್ದಿರುತ್ತವೆ. ಕೆಲವುಗಳ ಹೊಟ್ಟೆ ಸುಮಾರು ನಾಲ್ಕು ಅಂಗುಲದಷ್ಟು ಗಾತ್ರವುಳ್ಳದ್ದೂ ಆಗಿರುತ್ತದೆ. ಇತರ ಗೆದ್ದಲು ಹುಳುಗಳು ಅದನ್ನು ಸುತ್ತುವರಿದು ಅದಕ್ಕೆ ಆಹಾರವನ್ನು ಊಡಿಸುತ್ತಲೂ ಅದರ ಉಬ್ಬಿದ ಹೊಟ್ಟೆಯ ಹೊರಮೈಯನ್ನು ನೇವರಿಸುತ್ತಲೂ ಮೊಟ್ಟೆಗಳನ್ನು ಸುರಕ್ಷಿತ ಪ್ರದೇಶಗಳಿಗೆ ಸಾಗಿಸುವುದರಲ್ಲೂ ತೊಡಗಿರುತ್ತವೆ. ರಾಜಗೆದ್ದಲು ಹುಳುವಿನ ಕಾರ್ಯವೆಂದರೆ ತನ್ನ ಪ್ರಿಯತಮೆ ಗರ್ಭಿಣಿಯಾಗಿ ಮೊಟ್ಟೆಯಿಕ್ಕುವ ತಾಂತ್ರಿಕಕಾರ್ಯದಲ್ಲಿ ತೊಡಗಿರುವಂತೆ ನೋಡಿಕೊಳುವುದು.

ಗೆದ್ದಲು ಹುಳುವಿನ ರಾಜ್ಯದಲ್ಲಿ ಪ್ರಣಯವೆಂದರೆ, ರಾಜ–ರಾಣಿಯರಿಗೆ ಮಾತ್ರ ಮೀಸಲಾದ ಭೋಗ. ಊಳಿಗದವರು ಪ್ರಣಯದ ವಾಸನೆಯನ್ನೂ ಅರಿಯದ ಮುಗ್ಧ ಜೀವಿಗಳು. ಅವುಗಳ ಪ್ರೇಮಪ್ರಣಯದ ಪರ್ಯವಸಾನ ಸೇವೆಯಲ್ಲಿ. ಸೇವೆಯಲ್ಲೇ ಅವುಗಳ ಆದಿ ; ಅವುಗಳ ಅಂತ್ಯ.

ಇರುವೆಗಳಲ್ಲಿ ಸೈನಿಕ ಇರುವೆಯೆನ್ನುವುದೇ ಒಂದು ಜಾತಿ. ಗೆದ್ದಲಿನಂತೆ ಅದು ಕೇವಲ ಸಮುದಾಯಗಳಲ್ಲಿರುವುದಿಲ್ಲ. ನಿಂತರೆ, ಪ್ರವಾಸಹೊರಟರೆ ಇರುವೆಗಳ ಒಂದು ಸೈನ್ಯವೇ ಹೊರಡುತ್ತದೆ. ಈ ಸೈನ್ಯಗಳನ್ನು ಎದುರಿಸಿನಿಲ್ಲುವುದು ದೊಡ್ಡ ಪ್ರಾಣಿಗಳಿಗೂ ಏಕೆ, ಮಾನವನಿಗೂ ಸಹ— ಸಾಧ್ಯವಿಲ್ಲ. ಅವುಗಳು ಹಾದು ಹೋದ ಸ್ಥಳದಲ್ಲಿ ಕಾಣುವುದು ಜೀವಜಂತುಗಳಲ್ಲ, ಅವುಗಳ ಅಸ್ಥಿ ಅವಶೇಷ.

ಈ ಬಗೆಯ ಇರುವೆಗಳ ಒಂದು ಜಾತಿಯಲ್ಲಿ ಬಹುಮಟ್ಟಿನ ಊಳಿಗವರ್ಗವೆಲ್ಲ ಸುಮಾರು ಅರ್ಧಅಂಗುಲದ ಹೆಣ್ಣು ಇರುವೆಗಳು. ಪಂಗಡದ ನಿಯಮಾನುಸಾರ ಸಂತಾನೋತ್ಪತ್ತಿಕಾರ್ಯ ನಿಷಿದ್ಧವಾದ ಈ ಊಳಿಗದ ಹೆಣ್ಣು ಇರುವೆಗಳು ಆಜೀವಪರ್ಯಂತ ಕನ್ಯಾಮಣಿಗಳು. ಬೆಳೆದು ಬಲಿತ ಗರ್ಭಧಾರಣಕಾರ್ಯದಲ್ಲಿ ತೊಡಗಬಹುದಾದ ಏಕೈಕ ಇರುವೆಯೆಂದರೆ ರಾಣಿ ಇರುವೆ. ಅವಳ ಉದ್ದ ಸುಮಾರು ಮುಕ್ಕಾಲು ಅಂಗುಲ. ಅವಳ ಸುತ್ತಮುತ್ತ ನಾಲ್ಕಾರು ರೆಕ್ಕೆಯುಳ್ಳ ಗಂಡು ಇರುವೆಗಳು. ಇದು ಇರುವೆಗಳ ಒಂದು ಸಮುದಾಯ; ಅವುಗಳ ಸಂಸಾರಸಾಗರ.

ಕನ್ಯಾಇರುವೆಗಳು ಪ್ರೇಮಪ್ರಣಯ ತಿಳಿಯದವು. ಪ್ರಾಯಶಃ ತಿಳಿದಿದ್ದರೂ ಅದುಮಿಡುವಂತೆ ಸಮಾಜದ ಕಟ್ಟುನಿಟ್ಟಿನ, ನೇಮನಿಷ್ಠೆಯ ಬಲವಂತ ಮಾಘಸ್ನಾನ. ಈ ಬಲವಂತದ ವೈರಾಗ್ಯದಿಂದಲೇ ಇರಬೇಕು, ಅವು ಗಂಡು ಇರುವೆಗಳನ್ನು ಹಾರದಂತೆ ಹಿಡಿದು ಕಟ್ಟು ಹಾಕಿಡುವುದು. ಈ ಕಿರಾತಕನ್ಯೆಯರು ಗಂಡು ಇರುವೆಗಳಿಗೆ ಅತ್ಯುಪಚಾರ

ಮಾಡುತ್ತವೆ; ತಮ್ಮ ಸೇವಾಸಂಕೋಲೆ-ಯಿಂದ ಬಂಧಿಸುತ್ತವೆ. ಹಾರುವ ಪ್ರಯತ್ನ ಮಾಡಿದರೆ, ರೌದ್ರಾವತಾರ ತಳೆಯುತ್ತವೆ. ಹಸಿವಾದಾಗ ಗಂಡನ್ನು ನುಂಗಿ, ನೀರು ಕುಡಿಯುವುದೂ ಉಂಟು.

ರಾಣಿ ಇರುವೆ ತನ್ನ ನೆಚ್ಚಿನ ಭಕ್ತರ ರಕ್ಷಣೆಯಲ್ಲಿ, ಪ್ರಜಾವರ್ಗದಲ್ಲಿ ಬೆರೆಯುವುದುಂಟು. ಕೆಲವು ದಿನಗಳ ಪ್ರತ್ಯೇಕಜೀವನ ನಡೆಸಿದ ಬಳಿಕ ರಾಣಿ ಗರ್ಭಿಣಿಯಾಗುತ್ತಾಳೆ. ಅವಳ ಹೊಟ್ಟೆ ಉಬ್ಬುತ್ತದೆ. ಸುಮಾರು ಮೂವತ್ತು ಸಾವಿರ ಮೊಟ್ಟೆಗಳ ತಾಯಿಯಾಗುತ್ತಾಳೆ.

ಆದರೆ ವಿಜ್ಞಾನಿಗಳಿಗೆ ನಿಗೂಢ ಸಮಸ್ಯೆ-ಯೆಂದರೆ ಈ ರಾಣಿಯ ಪ್ರಣಯಜೀವನ. ಚಿರಕನ್ಯೆಯರು ಗಂಡನ್ನು ಹಿಡಿದು ನಿಲ್ಲಿಸಿರುತ್ತಾರೆ. ಹಾಗೆಯೇ ಉಳಿದ ಕನ್ಯೆಯರು ರಾಣಿಯ ಮೈನಿಂದ ಸ್ರವಿಸುವ ವಿಶೇಷ ಬಗೆಯ ವಸ್ತುವೊಂದನ್ನು ನೆಕ್ಕಲು ನುಗ್ಗಾ-ಡುತ್ತಿರುತ್ತವೆ. ಹೀಗಾಗಿ, ರಾಣಿಗೆ ಗಂಡಿನ ಸಾಮಿಪ್ಯವೂ ಸಂಪರ್ಕವೂ ಅಸಾಧ್ಯವಾಗಿರುತ್ತದೆ. ಪ್ರಾಯಶಃ ರಾಣಿ ಇರುವೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುವ ಮಾರ್ಗಮಧ್ಯದಲ್ಲಿ ಅಷ್ಟು ರಕ್ಷಣೆ ಇಲ್ಲದಿರುವಾಗ ಗಂಡು ಇರುವೆಯ ಸಾನ್ನಿಧ್ಯ ದೊರಕಲು ಸಾಧ್ಯವೆಂದು ವಿಜ್ಞಾನಿಗಳು ಊಹಿಸಿರುತ್ತಾರೆ. ಊಹೆ ಭಾವನೆಗಳ ಸಮಸ್ಯೆಯ ಪರಿಹಾರವಲ್ಲ; ಸತ್ಯದರ್ಶನವೂ ಅಲ್ಲ.

ಸೇವಾ ಧುರೀಣರಾದ ಗೆದ್ದಲೂ ಚಿರಕನ್ಯಾಮಣಿಗಳಾದ ಸೈನಿಕ ಇರುವೆಗಳೂ ಪ್ರಣಯ ಜೀವನವನ್ನೇ ಅರಿಯದವರಾದರೆ ಸೊಳ್ಳೆಗಳ ಜೀವನವನ್ನು ಎರಡು ಶಬ್ದಗಳಲ್ಲಿ ಹೇಳಬಹುದು; ಪ್ರಣಯ ಮತ್ತು ಆಹಾರ. ಹೆಣ್ಣು ಸೊಳ್ಳೆಯ ಹಾಡು ಪ್ರಣಯಸೂಚಿ, ನಾದ ಮಾಧುರ್ಯ.

ಅಮೇರಿಕದ ಸೈನ್ಯ ದಳದ ವಿಜ್ಞಾನಿಗಳು ಹಳದಿಜ್ವರ ತರುವ ಈಡೀಸ್ ಜಾತಿಯ ಸೊಳ್ಳೆಗಳನ್ನು ಮಲೇರಿಯಾ ಜ್ವರಕ್ಕೆ ಕಾರಣವಾದ ಅನಾಫಿಲೀಸ್ ಸೊಳ್ಳೆಗಳನ್ನೂ ಪ್ರಯೋಗಗಳಿಗೊಳಪಡಿಸಿದರು. ಸುಮಾರು ಸೆಕೆಂಡಿಗೆ ೩೫೦–೭೫೦ ಸ್ಪಂದನದ ಶಬ್ದನಾದವನ್ನು ಪ್ರಣಯಾಹ್ವಾನದ ಕರೆಯೆಂದು ತಿಳಿದು ಈಡೀಸ್ ಗಂಡು ಸೊಳ್ಳೆಗಳು ಆ ದಿಕ್ಕಿನತ್ತ ಧಾವಿಸಿದುವು. ಅನಾಫಿಲೀಸ್ ಸೊಳ್ಳೆಗೆ ಈ ಸ್ಪಂದನ ೩೨೦–೪೮೦ ರಷ್ಟು ಕೆಳ ಮಟ್ಟದಲ್ಲಿತ್ತು. ಆದರೆ ಬೇರೆ ಜಾತಿಯ ಹೆಣ್ಣುಸೊಳ್ಳೆಯತ್ತ ಅವು ಆಕರ್ಷಕ ನೋಟ ಬೀರಲಿಲ್ಲ. ಅಂದಮೇಲೆ ಗಂಡಿನ ಆಕರ್ಷಣೆಗೆ ಹೆಣ್ಣುಸೊಳ್ಳೆಯ ನಾದಮಾಧುರ್ಯವೇ ಕಾರಣವಲ್ಲವೆಂದು ತಿಳಿಯಿತು.

ಈಡೀಸ್ ಗಂಡುಸೊಳ್ಳೆ ಕೋಶಾವಸ್ಥೆಯಿಂದ ಹೊರಬಂದ ಐದು ಗಂಟೆಗಳ ಬಳಿಕ ಪ್ರಣಯಜೀವನದಲ್ಲಿ ಆಸಕ್ತಿ ಹೊಂದುತ್ತದೆ. ಅನಾಫಿಲೀಸ್ ಮತ್ತೂ ಸ್ವಲ್ಪ ಜಡ ಸ್ವಭಾವ-ವುಳ್ಳದ್ದು. ಕೆಲವು ವೇಳೆ ಅತ್ಯಂತ ಸುಮಧುರ ಪ್ರಣಯಾಹ್ವಾನ ನಾದವೂ ಅವುಗಳನ್ನು ಪ್ರಚೋದಿಸಲಾರದು. ಎರಡೂ ಜಾತಿಯ ಸೊಳ್ಳೆಗಳ ಸ್ಪರ್ಶಾಂಗಗಳನ್ನು ತೆಗೆದುಬಿಟ್ಟಾಗ ಅವು ಯಾವ ನಾದದಿಂದಲೂ ಪ್ರಚೋದನೆಗೊಳ್ಳುತ್ತಿರಲಿಲ್ಲ. ಅಂತೆಯೇ ಹೆಣ್ಣು ಸೊಳ್ಳೆ ತನ್ನ ರೆಕ್ಕೆಗಳನ್ನು ತಪ್ಪಾಗಿ ಬಡಿದು ಬೇರೆ ನಾದವನ್ನು ಹೊರಡಿಸಿದಾಗ ಅದು ಗಂಡನ್ನು ಆಕರ್ಷಿಸುತ್ತಿರಲಿಲ್ಲ.

ಇರುವೆ, ಸೊಳ್ಳೆಗಳ ಪ್ರಣಯಜೀವನದಲ್ಲಿ ಈ ವೈವಿಧ್ಯವಿದ್ದರೂ ಒಂದು ಬಗೆಯ ಈ ಜೀವಜಾತಿಗಳಲ್ಲಿ ಪರಸ್ಪರ ಸೌಹಾರ್ದ ಸೂಚಕ ಕ್ರಿಯೆ ನಡೆಯುತ್ತದೆ. ಈ ಜಾತಿಯ ಸೊಳ್ಳೆ, ಇರುವೆಯ ಮುಂದೆ ಹಾರಿ ಬಂದು ಅದನ್ನು ತನ್ನ ಮುಂಗಾಲುಗಳಿಂದ ಹಿಡಿದುಕೊಳ್ಳುತ್ತದೆ. ಸ್ವಲ್ಪ ಹೊತ್ತಿನ ಬಳಿಕ ಇರುವೆ ತನ್ನ ಬಾಯಿಯನ್ನು ಬಿಡುತ್ತದೆ. ಆಗ ಸೊಳ್ಳೆ ತನ್ನ ಸ್ಪರ್ಶಾಂಗವನ್ನು ಇರುವೆಯ ಬಾಯಿಯೊಳಗಿಟ್ಟು ಅದು ಹೊಟ್ಟೆಯಿಂದ ಹೊರದೂಡುವ ಆಹಾರವನ್ನು ಸೇವಿಸುತ್ತದೆ. ಎರಡೂ ಪ್ರಾಣಿಗಳು ಈ ವಿನಿಮಯ ಕಾರ್ಯವನ್ನು ಮೆಚ್ಚುತ್ತವೆಂದು ಕಾಣುತ್ತದೆ. ಸೊಳ್ಳೆ ತನ್ನ ರೆಕ್ಕೆಯನ್ನು ಆನಂದದಿಂದ ಬಡಿಯುತ್ತದೆ; ಇರುವೆ ತನ್ನ ಮೂತಿಯಿಂದ ಅದರ ಸ್ಪರ್ಶಾಂಗವನ್ನು ಚುಂಬಿಸುತ್ತದೆ.

ಜೇಡರ ಹುಳುವಿನ ಅವತಾರಕಾಲ ಬಹು ಪ್ರಾಚೀನಕ್ಕೆ ಸೇರಿದುದು. ಈ ಲಕ್ಷಾಂತರ ವರ್ಷಗಳಲ್ಲಿ ಅವು ನೊಣ ಜಿಟ್ಟೆ ಮೊದಲಾದು-ವುಗಳನ್ನು ಹಿಡಿಯುವ ಸಲುವಾಗಿ ಬಲೆ ರಚಿಸುವುದರಲ್ಲಿ ನಿಷ್ಣಾತವಾಗಿರುವುದಲ್ಲದೆ ಇನ್ನೂ ಅನೇಕ ತಂತ್ರಗಳಲ್ಲಿ ನೈಪುಣ್ಯ ಹೊಂದಿವೆ. ಕೆಲವು ಜೇಡಗಳು ಇರುವೆಯಂತಿದ್ದು ಇರುವೆಯೊಡನೆಯೇ ವಾಸಿಸುತ್ತವೆ. ಮತ್ತೆ ಕೆಲವು ಗೋಸುಂಬೆಯಂತೆ ತಾವಿರುವ ಹಿನ್ನೆಲೆಗೆ ಮೈ ಬಣ್ಣವನ್ನು ಸರಿಹೋಗಿಸಿಕೊಂಡು ಆಹಾರಕ್ಕಾಗಿ ಕಾಯುತ್ತವೆ.

ಗಂಡು ಜೇಡ ಹೆಣ್ಣು ಜೇಡಕ್ಕಿಂತ ಆಕಾರದಲ್ಲಿ ಚಿಕ್ಕದು, ಗಂಡಸುತನವೂ ಅಷ್ಟಕ್ಕಷ್ಟೆ. ಹೆಣ್ಣು ಜೇಡ ಗಂಡಿನೊಡನೆ ಜೊತೆಗೂಡಿದ ಬಳಿಕ ತನ್ನ ಪ್ರಿಯತಮನನ್ನು ಆಹಾರವಾಗಿ ಹೊಂದಲು ಹವಣಿಸುತ್ತದೆ. ಗಂಡು ಪೆಚ್ಚಾದಾಗ, ಜಡವಾಗಿದ್ದಾಗ ಪ್ರಿಯತಮೆಯ ಆಹಾರವಾಗಿ ಅವಳ ಶರೀರವನ್ನೇ ಸೇರುವುದು ಅಸಾಮಾನ್ಯವಾದುದೇನಲ್ಲ. ಪ್ರಾಯಶಃ ಪ್ರೀತಿಯ ಪರಮಾವಧಿಯಿರಬಹುದು!

ಕೆಲವು ಜಾತಿಯ ಗಂಡುಗಳು ಪ್ರಿಯತಮೆಗೆ ಆಹಾರವಾಗಿ ಸತ್ತ ನೊಣವನ್ನು ತನ್ನ ಶರೀರದಿಂದ ಹೊರಬಂದ ರೇಷ್ಮೆ ಎಳೆಗಳಲ್ಲಿ ಸುತ್ತಿ ಪ್ರೇಮಕಾಣಿಕೆಯಾಗಿ ಅರ್ಪಿಸುತ್ತವೆ. ಕಾರಣವಿಷ್ಟೆ. ಅವಳು ಹೆಚ್ಚು ಹಸಿವಿನಿಂದಿರದಿರಲೆಂದು! ಮತ್ತೆ ಕೆಲವು ಆಕೆಯೊಡನೆ ಜೊತೆಗೂಡುವ ಮುನ್ನ ಪ್ರಣಯೋನ್ಮತ್ತತೆಯಲ್ಲಿರುವಾಗ ಪ್ರಿಯತಮೆಯ ಮುಂಗಾಲುಗಳನ್ನು ಕಟ್ಟಿ ಹಾಕುತ್ತವೆ. ಭವಿಷ್ಯವನ್ನು ಬಲ್ಲ ಜೀವಿಗಳು ಬದುಕುವ ಮಾರ್ಗವನ್ನು ಈ ರೀತಿ ಕಲ್ಪಿಸಿಕೊಳ್ಳುತ್ತವೆ. ತಮ್ಮಿಚ್ಛೆಯಂತೆ ಪ್ರಣಯಸುಖ ಸಿಗದಾಗ ಕೂಡ ಹೆಣ್ಣು ಜೇಡ ಗಂಡನ್ನು ತಿಂದು ಹಾಕುತ್ತವೆ — ಪ್ರೀತಿಯಿಂದಲ್ಲ, ಕೋಪದಿಂದ!

ಜೇಡರ ಹುಳುವಿನಲ್ಲಿ ಮುಖ್ಯವಾಗಿ ಎರಡು ಜಾತಿ, ಬಲೆಜೇಡ ಮತ್ತು ಬೇಟೆಜೇಡ. ಬೇಟೆ ಜೇಡ ಹೆಣ್ಣನ್ನು ಒಲಿಸಿಕೊಳ್ಳುವ ಸಲುವಾಗಿ ವಿಶೇಷವಾದ ವಿವಾಹಪೂರ್ವ ನೃತ್ಯವನ್ನೇ ಮಾಡುತ್ತದೆ. ಅಷ್ಟೇಅಲ್ಲ, ಹಾಗೆ ನೃತ್ಯ ಮಾಡುವಾಗ ಹೆಣ್ಣಿಗೆ ಕಾಣುವ ಅಂಗಾಂಗಗಳು ವರ್ಣರಂಜಿತವಾಗಿಯೂ ಪ್ರಕಾಶವಾಗಿಯೂ ಇರುತ್ತವೆ. ಬಲೆಜೇಡ ಬಹುಮಟ್ಟಿಗೆ ಕುರುಡುಪ್ರಾಣಿ, ಅದರಲ್ಲಿ ನೃತ್ಯಮೇಳವಿಲ್ಲ. ಗಂಡು ಬಲೆಜೇಡ ಹೆಣ್ಣಿನ ಬಲೆಯ ಎಳೆಯೊಂದನ್ನು ವಿಶೇಷವಾದ ರೀತಿಯಲ್ಲಿ ಎಳೆದು ತನ್ನ ಇರುವಿಕೆ ಇಷ್ಟವನ್ನು ಸೂಚಿಸುತ್ತದೆ. ಆ ಎಳೆತ ಪ್ರಣಯಸೂಚಕ ಆಹ್ವಾನ. ಆ ವಿಶೇಷ ಎಳೆತವಿಲ್ಲದೆ ಸುಮ್ಮನೆ ಬಲೆಯನ್ನು ಅಡಿಸಿದರೆ ಹೆಣ್ಣು ಯಾವುದೋ ಆಹಾರ ಸಿಕ್ಕಿತೆಂದು ಭಾವಿಸಿ ಇನಿಯನನ್ನು ಹಿಡಿದು ನುಂಗಿ ಬಿಡುತ್ತದೆ!

ಇರುವೆ, ಜೇಡರ ಜಾತಿಗಳಲ್ಲಿ ಹೆಣ್ಣಿನ ಪೌರುಷ ಎದ್ದು ಕಾಣುತ್ತದಾದರೆ ಜೇನುನೊಣಗಳಲ್ಲಿ ಹೆಣ್ಣು ಗಂಡುಗಳು ಪರಸ್ಪರ ಒಬ್ಬರನ್ನೊಬ್ಬರು ಅಸಡ್ಡೆ, ಅಲಕ್ಷ್ಯದಿಂದ ಕಾಣುತ್ತವೆ. ಯಾವಾಗಲೂ ಅಲ್ಲ, ಗೂಡಿನಲ್ಲಿರುವಾಗ ಮಾತ್ರ. ಕನ್ನಿಕೆ ರಾಣಿ ಜೇನು ಗಂಡಿನ ಸಂಪರ್ಕವಾಶಿಸಿದಾಗ ಅದೇನು ಅವರಿವರನ್ನು ಮದುವೆಯಾಗೆಂದು ಬೇಡುತ್ತ ಹೋಗುವದಿಲ್ಲ. ರಾಣಿಯಂತೆ ಒಂದು ಬೆಚ್ಚನೆಯ ದಿನ ಗೂಡನ್ನು ಬಿಟ್ಟು ನೇರವಾಗಿ ಮೇಲಕ್ಕೆ ಹಾರಿ ಹೋಗುತ್ತದೆ. ಮೇಲೇರಿ ಹೋಗುತ್ತಿರುವ ರಾಣಿಯನ್ನು ಕಂಡಕೂಡಲೇ ಆ ಸುತ್ತಲಿನ ಗಂಡು ಜೇನುಗಳು ಮಾಡುತ್ತಿದ್ದ ಕೆಲಸವನ್ನು ಅಲ್ಲಿಯೇ ಬಿಟ್ಟು ರಾಣಿಯ ಸಾಮಿಪ್ಯಕ್ಕಾಗಿ ಹಾರಿಹೋಗುತ್ತವೆ.

ಹೆಮ್ಮೆಯಿಂದ ರಾಣಿ ಮತ್ತೂ ಎತ್ತರಕ್ಕೆ ಹಾರುತ್ತ ಹೋಗುತ್ತಾಳೆ. ಯಾವ ಗಂಡು ಜೇನು ಮಿಕ್ಕೆಲ್ಲವನ್ನೂ ಸೋಲಿಸಿ ಅತಿ ದೂರದ ಪ್ರಯಾಸಕರ ಪ್ರೇಮಪ್ರಯಾಣ ನಡಸುವುದೋ ಅದು ರಾಣಿಯೊಡನೆ ಜೊತೆಗೂಡುತ್ತದೆ—ಸಾಯುವುದಕ್ಕೆ. ·ಹೌದು, ಜೇನು ಜಾತಿಯಲ್ಲಿ ವಿವಾಹದ ಅಂತ್ಯ ರಾಣಿ ವಧುವಿನ ವೈಧವ್ಯದಲ್ಲಿ. ಅವುಗಳ ಪ್ರೇಮಮಿಲನ ತಮ್ಮ ಮಧುಭರಿತ ಅರಮನೆಯಲ್ಲಿಲ್ಲ; ಅಂತರಿಕ್ಷದಾಳದಲ್ಲಿ.

ಹೀಗೆಯೇ ಇನ್ನೂ ಅನೇಕ ಜೀವಜಂತುಗಳು ಮರಣ ಕಾರಣ ಏಕೈಕ ಪ್ರಣಯದಲ್ಲಿ ಪರ್ಯವಸಾನ ಹೊಂದುತ್ತವೆ. ಮಿಡತೆ, ಜೀರುಂಡೆ ಈ ಜೀವಜಾತಿಗಳಲ್ಲಿ ಪ್ರಣಯವೇ ಬದುಕಿನ ಮೂಲ; ಪ್ರಣಯವೇ ಸಾವಿನ ಶೂಲ.

ಮಿಡತೆಯ ಒಂದು ಜಾತಿ-ಕೈಮುಗಿಯುತ್ತಿರುವಂತೆ ಕಾಣುವ ಒಂದು ಬಗೆಯ ಕೀಟ (ಇದನ್ನು ಕೆಲವರು 'ಕುದುರೆಹುಳ'ವೆಂದೂ ಕರೆಯುತ್ತಾರೆ) ತನ್ನ ಕುಲದವರನ್ನೇ ಭಕ್ಷಿಸುವುದರಲ್ಲಿ ಜೇಡವನ್ನೂ ಮೀರಿಸಿ ನಿಂತುದು. ಎರಡು ಮಿಡತೆಗಳಿಗೆ ಜಗಳವಾದಾಗ ಸಾಯುವತನಕ ಹೋರಾಡಿ ಸೋತ ಬಂಧುವನ್ನು ಗೆದ್ದ ಮಿಡತೆ ಏನೂ ಆಗದಿದ್ದಂತೆ ತನ್ನ ಇತರ ಆಹಾರವನ್ನು ತಿನ್ನುವಂತೆ ಚಪ್ಪರಿಸಿಕೊಂಡು ತಿಂದುಬಿಡುತ್ತದೆ. ಇವುಗಳಲ್ಲಿ ಪ್ರೇಮಾಲಿಂಗನ ಕೆಲವು ವೇಳೆ ೫–೬ ಗಂಟೆಗಳ ಕಾಲ ನಡೆಯುತ್ತದೆ. ಮುಂದೆ ಆ ಎರಡು ಜೀವಗಳು ಒಂದಾಗುತ್ತವೆ. ಗರ್ಭಾಧಾನ ಮಾಡಿದ ತನ್ನ ಇನಿಯನನ್ನು ಪ್ರೀತಿಸಿದ್ದರೆ ಅದು ಪ್ರಿಯತಮನನ್ನು ಅತ್ಯುತ್ತಮ ಆಹಾರವೆಂದು ಪ್ರೀತಿಸಿರುತ್ತದೆ. ಅದೇ ದಿನ, ನಿಧಾನವೆಂದರೆ ಮಾರನೆಯ ದಿನದೊಳಗೆ, ಪ್ರಿಯನನ್ನು ಹಿಡಿದು ಕತ್ತಿನ ಹಿಂಭಾಗದಿಂದ ಪ್ರಾರಂಭಿಸಿ ಅದನ್ನು ಕ್ರಮೇಣ ಭುಜಿಸುತ್ತದೆ. ಕೊನೆಗೆ ಉಳಿಯುವ ಇನಿಯನ ಅವಶೇಷವೆಂದರೆ ಅವನ ರೆಕ್ಕೆಗಳು. ಕೆಲವು ಮಿಡತೆಗಳು ಸುಮಾರು ಹದಿನೈದು ದಿನಗಳಲ್ಲಿ ಎಳೆಂಟು ಗಂಡಂದಿರೊಡನೆ ಸಹವಾಸ ಹೊಂದಿದ್ದು ಅಷ್ಟೇ "ಭೋಜನ" ನಡೆಸಿರುವುದು ವೀಕ್ಷಣೆಗಳಿಂದ ತಿಳಿದುಬಂದಿದೆ.

ಜೀರುಂಡೆಯ ನಾದಮಾಧುರ್ಯವನ್ನು ಕೇಳದವರು ಅತಿ ವಿರಳ. ಅವುಗಳಲ್ಲಿನ ಪ್ರಣಯವೂ ಪ್ರಾಣಕ್ಕೇ ಸಂಚುಕಾರಿಯಾದದ್ದು. ಪ್ರಣಯಕೂಟಕ್ಕೆ ಸಮ್ಮತಿಯಿತ್ತ ಬಳಿಕ ಹೆಣ್ಣು ಜೀರುಂಡೆ ತನ್ನ ಇನಿಯನನ್ನು ಹಿಂದಿನಿಂದ ಅನುಸರಿಸಿ ಅವನ್ನು ಕಡಿದು ಅದರ ಹೊಟ್ಟೆಯನ್ನು ಯಥಾಶಕ್ತಿ ತುಂಬಿಕೊಳ್ಳುತ್ತದೆ. ಹೆಣ್ಣಿಗೆ ತನ್ನ ಮಾಜಿ ಗಂಡನ ಮೇಲೆ ಆಕ್ರೋಶವಿರಬಹುದೇನೋ! ಆದರೂ ಗಂಡುಹೆಣ್ಣನ್ನು ಹೊಡೆದಾಗಲೀ, ಓಡಿಹೋ-

ಗುವುದಾಗಲೀ ಮಾಡದೆ ಅದರ ಹಿಡಿತದಿಂದ ತಪ್ಪಿಸಿಕೊಳ್ಳಲು ಹಿಂದೆ ಹಿಂದೆ ಹೋಗುತ್ತದೆ. ಕ್ರೌರ್ಯ ಗಂಡಿಗೆ ತಿಳಿಯದ ರಸವಿಶೇಷ. ಮೃತ್ಯುಮುಖದಲ್ಲಿಯೂ ಅದು ಪ್ರಿಯತಮೆಗೆ ನೋವುಂಟುಮಾಡುವುದಿಲ್ಲ. ಆಕೆಯ ಪ್ರೇಮಪಾಶದಿಂದ—ಮೃತ್ಯುಪಾಶವೆಂದರೂ ಸರಿಯೆ— ಬಿಡಿಸಿಕೊಳ್ಳಲು ಹಿಂದೆ ಸರಿಯುವುದೇ ಅದು ತಿಳಿದಿರುವ ಯುಕ್ತಿ. ಅಂತೂ ಇನಿಯಳ ಎದೆ ಇರಿತದಿಂದ ಗಂಡು ಸಾವನ್ನಪ್ಪುತ್ತದೆ.

ಚೇಳಿನ ಪ್ರಣಯವೂ ಗಂಡಿನ ಸಾವಿನಲ್ಲೇ ಪರ್ಯವಸಾನವಾಗುವುದಿದ್ದರೂ ಭವಿಷ್ಯವನ್ನು ತಿಳಿಯದ ಗಂಡು ತನ್ನ ಪಾಲಿನ ಮೃತ್ಯುವಾಗುವ ಹೆಣ್ಣಿನೊಡನೆ ಗಂಟೆಗಟ್ಟಳೆ ಪ್ರಣಯ ನೃತ್ಯದಲ್ಲಿ ತೊಡಗುವುದು ವಿಸ್ಮಯಕರ ವಿಶೇಷವಲ್ಲದೆ ಮತ್ತೇನು? ಹೆಣ್ಣು-ಗಂಡಿನ ಭೇಟಿಯಾದ ಮೇಲೆ ಜೊತೆಗೂಡುವ ಮುನ್ನ ತಮ್ಮ ಮುಂಗೈಗಳಿಂದ ಕಟ್ಟಿಕೊಂಡು, ಬಾಲವನ್ನು ಮೇಲಕ್ಕೆತ್ತಿ ಒಂದನ್ನೊಂದು ಸಾವರಿಸುತ್ತ ನೃತ್ಯದಲ್ಲಿ ತೊಡಗುತ್ತವೆ. ಈ ಆಲಿಂಗನ ಗಂಟೆಗಟ್ಟಳೆ ನಡೆದಿರುತ್ತದೆ. ಜೊತೆ ಕೂಡಿದ ಬಳಿಕ ಗಂಡು ತಪ್ಪಿಸಿಕೊಳ್ಳದಿದ್ದರೆ ಹೆಣ್ಣು ಅದನ್ನು ತನ್ನ ಆಹಾರವಾಗಿ ಮಾಡಿಕೊಳ್ಳುವುದು ಖಂಡಿತ. ಅದೇನು ಪ್ರೇಮವೋ ಪ್ರಾಚೀನ ಕರ್ಮವೋ, ಅಂತೂ ಬಹುಮಟ್ಟಿನ ಗಂಡುಗಳು ಹೆಣ್ಣಿನ ಪಾಶಕ್ಕೆ ಸಿಕ್ಕಿ ಬಲಿಯಾಗುತ್ತವೆ.

ಭೂಮಿಯ ಮಧ್ಯಪ್ರದೇಶದಲ್ಲಿ ವಾಸಿಸುವ ಕೆಲವು ಜೀವಿಗಳ ಪ್ರಣಯ ಇಂತಾದರೆ ಧ್ರುವ ಪ್ರದೇಶಗಳಲ್ಲಿ ವಾಸಿಸುವ ಪೆಂಗ್ವಿನ್ ಪಕ್ಷಿಯ ಜೀವನವೇ ಒಂದು ಬಗೆಯದು. ಪೆಂಗ್ವಿನ್, ಮಾನವನಂತೆ ಸಂಘಜೀವಿ; ಅವುಗಳ ಪ್ರಣಯಜೀವನದಲ್ಲೂ ಮಾನವನಂತೆ, ನಗು, ಕೈಬೀಸುವುದಕ್ಕೆ ಸಮಾನವಾದ ಪೀಠಿಕಾ ಪ್ರಕರಣಗಳುಂಟು. ಪ್ರಥಮ ಪರಿಚಯವಾದ ಮೇಲೆ ಗೆಳೆತನ, ವಿಶ್ವಾಸ ನಿಕಟವಾಗಿ ಪ್ರೇಮಾಂಕುರವಾಗುವ ವರೆಗೆ ಪೆಂಗ್ವಿನ್ ಹಲವಾರು ವಿಚಿತ್ರ ಸಾಂಪ್ರದಾಯಿಕ ಆಚರಣೆಗಳಲ್ಲಿ ತೊಡಗುತ್ತದೆ. ಮೊದಲಿಗೆ ಹೊಳಪಿನ ಬಣ್ಣದ ಸಣ್ಣ ಕಲ್ಲುಗಳನ್ನೂ ಪ್ರಿಯತಮೆಗೆ ಉಡುಗೊರೆಯಾಗಿ ತೆಗೆದುಕೊಂಡು ಹೋಗುತ್ತವೆ; ಬಳಿಕ ತಮ್ಮ ರೆಕ್ಕೆಗಳನ್ನು ಹರಡಿ ಬಾಗಿ ಪರಸ್ಪರ ನಮಸ್ಕರಿಸುತ್ತವೆ. ನಂತರ, ಹೆಚ್ಚು ಆತ್ಮೀಯ ಭಾವನೆಯಿದೆಯೆಂದರಿವಾದರೆ, ತಲೆಯಾಡಿಸಿ ಕತ್ತುಚಾಚಿ ವಿಚಿತ್ರವಾಗಿ ಕೆಕ್ಕರಿಸುತ್ತದೆ. ಬಾಂಧವ್ಯ ಬೆಳೆದಮೇಲೆ ಅವು ಒಂದರ ಕತ್ತನ್ನೊಂದು ಉಜ್ಜುವ ಚುಂಬನಕಾರ್ಯದಲ್ಲಿ ತೊಡಗುತ್ತವೆ.

ರಾಗಪರವಶತೆಯ ಅಂತಿಮಘಟ್ಟದಲ್ಲಿ ಅವು ತೀರ ಸಮೀಪದಲ್ಲಿ ನಿಂತು ರೆಕ್ಕೆಗಳನ್ನು ವಿಶಾಲವಾಗಿ ಚಾಚಿ ಬಡಿಯುತ್ತ ಕತ್ತುಗಳನ್ನು ಪರಸ್ಪರ ಉಜ್ಜುತ್ತ ವಿಚಿತ್ರ ಶಬ್ದಮಾಡುತ್ತವೆ. ಈ ಪ್ರಣಯಿಗಳಿಗೆ ಪ್ರತ್ಯೇಕತೆ ಬೇಕಿಲ್ಲ. ಚಿಳ್ಳೆ-ಪಿಳ್ಳೆ ಪೆಂಗ್ವಿನ್‌ಗಳು ಅವರನ್ನು ಸುತ್ತಿ ಸಮಾರಂಭವನ್ನು ನೋಡುತ್ತ ನಿಲ್ಲುತ್ತವೆ. ಇಷ್ಟೆಲ್ಲ ನಡೆದರೂ ಮಿಕ್ಕೆಲ್ಲ ಪ್ರಾಣಿಗಳಂತೆ ಅವು ಜೊತೆಗೂಡುವುದಿಲ್ಲ. ಅವು ಜೊತೆಗೂಡುವುದು ಅತಿ ಗುಪ್ತವಾಗಿ; ಅದೂ ಹೆಣ್ಣಿನ ಆದೇಶದ ಮೇರೆಗೆ.

ಪೆಂಗ್ವಿನ್ ಪ್ರಣಯದಲ್ಲಿ ಪ್ರಾಮಾಣಿಕತೆ ಇದೆ. ಸಾಮಾನ್ಯವಾಗಿ ಅವುಗಳಲ್ಲಿನ ವಿವಾಹ ಒಂದು ಸಂವತ್ಸರಕ್ಕೂ ಹೆಚ್ಚುಕಾಲ ಉಳಿಯುತ್ತದೆ. ಅವುಗಳ ಸಂಸಾರಜೀವನಕ್ಕೆ ಧಕ್ಕೆಯುಂಟುಮಾಡುವ ಶತ್ರುಗಳೆಂದರೆ, ನಿರುದ್ಯೋಗಿ ಗಂಡು ಪೆಂಗ್ವಿನ್‌ಗಳು. ಸಾಮಾನ್ಯವಾಗಿ ಒಂದು ಹೆಣ್ಣಿಗೆ ವಿವಾಹ ಬಯಸಿ ಅನೇಕ ಕೋರಿಕೆಗಳು ಬಂದರೂ ಅದು ದಿಟ್ಟನೋಟದಿಂದ ಗಂಡನ್ನು ಓಡಿಸುತ್ತದೆ. ಕೆಲವು ವೇಳೆ ಮರಳಿ ಯತ್ನಮಾಡುವ

ಗಂಡು ತನ್ನ ಬಯಕೆಯ ಹೆಣ್ಣನ್ನು ಪಡೆಯಲೂ ಸಾಧ್ಯ. ಪೆಂಗ್ವಿನ್ ಸಂಸಾರ ಬೇಗ ಒಡೆಯುವುದು ಪ್ರಯಾಸಸಾಧ್ಯ. ಏಕೆಂದರೆ, ಬೇರೆ ಗಂಡಿನ ಒಲವು ಹಲವಾರು ಸಂಪ್ರದಾಯಗಳನ್ನು ಹಾದಬಳಕವೇ ಸಾಧ್ಯ. ಕೈಲಿರುವ ಹಕ್ಕಿ ಪೊದೆಯಲ್ಲಿನ ಎರಡು ಹಕ್ಕಿಗಿಂತ ಮಿಗಿಲೆಂದು ಅದು ತಿಳಿದಿದ್ದರೆ, ಆಶ್ಚರ್ಯವೇನಲ್ಲ.

ಪೆಂಗ್ವಿನ್ನನಷ್ಟೇ ಗುಪ್ತವಾಗಿ ತಮ್ಮ ಮಧುರ ಪ್ರಣಯದಲ್ಲಿ ತೊಡಗುವ ಮತ್ತೊಂದು ಪ್ರಾಣಿಯೆಂದರೆ ಪ್ಲಾಟೈಪಸ್. ವಿಜ್ಞಾನಿಗಳಿಗೆ ಅದೊಂದು ನಿಗೂಢ ರಹಸ್ಯ. ಅಂತಲೇ ಅನ್ವೇಷಣೆಗೆ ಆಕರವಾಗಿದೆ.

ಪ್ರಣಯಾಚರಣೆಯ ಪರಾಕಾಷ್ಠೆಯನ್ನು ನಾವು ಪಕ್ಷಿಪ್ರಪಂಚದಲ್ಲಿ ಕಾಣಬಹುದು- ಪರಿಷ್ಕಾರದ ಪ್ರಣಯ, ಆ ಮೊದಲ ಅನುನಯ ಪಕ್ಷಿಗಳಲ್ಲಿ ಹೆಚ್ಚು ಮೋಹಕವಾಗಿರುತ್ತದೆ. ಮೀನಿನಲ್ಲಿ ಅಷ್ಟೇ ಪ್ರಣಯಾಚರಣೆಯಿದ್ದರೂ ಅವುಗಳಲ್ಲಿ ಗರ್ಭಾಧಾನವಾಗುವುದು ಮೊಟ್ಟೆಯಿಟ್ಟ ಮೇಲೆಯೇ. ಕಪ್ಪೆ ರಾತ್ರಿಯ ವೇಳೆ ವಟಗುಟ್ಟಿದರೆ, ಹುಲ್ಲಿನ ಮೇಲೆ ಕುಪ್ಪಳಿಸುವ ಒಂದು ಜಾತಿಯ ಮಿಡಿತೆ ತನ್ನ ಕಾಲುಗಳಿಂದಲೋ ಅಥವಾ ರೆಕ್ಕೆಗಳ ಬಡಿತದಿಂದ ಪ್ರಣಯಸೂಚಕ ಸೈರನ್ ಕಳುಹಿಸುತ್ತದೆ. ಈ ಸಂತಾನೋತ್ಪತ್ತಿ ಸಾಧಕ ಸಂಗೀತದಲ್ಲಿ ಮಿಡಿತೆ ಪ್ರಥಮವಾಗಿ ಜೀವಿಗಳಲ್ಲಿ ವಾದ್ಯ ನುಡಿಸುತ್ತದಾದರೆ ಕಪ್ಪೆಯದು ಬಾಯಿ ಹಾಡುಗಾರಿಕೆ.

ಸಾಗರಪ್ರದೇಶದಲ್ಲಿ ವಾಸಿಸುವ ಒಂದು ಜಾತಿಯ ಪಕ್ಷಿಯಲ್ಲಿ ಗಂಡು ವಿವಿಧ ರೂಪ ಆಕಾರಗಳಿಂದ ಅಲಂಕೃತವಾಗಿರುತ್ತದೆ— ಪ್ರಣಯ ಋತುವಿನಲ್ಲಿ. ಗಂಡು ಪಕ್ಷಿಗಳ ಬಣ್ಣ ರೆಕ್ಕೆಗಳ ವೈವಿಧ್ಯವೇ ಅವುಗಳನ್ನು ಗುರುತಿಸಲು ಸಹಾಯಕವಾಗುವುದು. ಒಂದರಂತೆ ಒಂದಿರುವುದಿಲ್ಲ. ಹೀಗೆ ವೈಯಕ್ತಿಕ ಲಕ್ಷಣಗಳಿಂದ ಕೂಡಿದ ಗಂಡು ಪಕ್ಷಿಗಳು ಒಂದೆಡೆ ಕಲೆತು ಆಟ-ಕೂಟ, ನೃತ್ಯ-ಕದನಗಳಲ್ಲಿ ತೊಡಗಿರುತ್ತವೆ. ಹೆಣ್ಣು ಪಕ್ಷಿಗಳು ಆಗೊಮ್ಮೆ ಈಗೊಮ್ಮೆ ಈ ಗಂಡುಬೀಡಾರವನ್ನು ಇಣುಕಿ ನೋಡಿ ಹೋಗುತ್ತವೆ. ಕೆಲವು ಸಲ ಅದು ಒಳಗೂ ಪ್ರವೇಶಿಸಬಹುದು. ಹಾಗೆ ಅದು ಪ್ರವೇಶಿಸಿದಾಗ ಕುಣಿದು ಕುಪ್ಪಳಿಸಿ ಕೇಕೆಹಾಕಿ ನೃತ್ಯ, ಕದನಗಳಲ್ಲಿ ತೊಡಗಿರುವ ಗಂಡು ಪಕ್ಷಿಗಳು ಕೂಡಲೇ ಎಲ್ಲವನ್ನೂ ನಿಲ್ಲಿಸಿ ನೆಲದ ಮೇಲೆ ಮಲಗಿ ಹಲವು ಸಲ ತಮ್ಮ ರೆಕ್ಕೆಗಳನ್ನು ಹರವುವುದೂ ಉಂಟು. ಆಗ ಹೆಣ್ಣು ಪಕ್ಷಿ ಈ ಕೋರ್ಕೆಯ ಮುಗ್ಧ ಗಂಡುಗಳನ್ನು ಹಾಗೆಯೇ ನೋಡಿಕೊಂಡು ತನ್ನಪಾಡಿಗೆ ತಾನು ಹಾರಿಹೋಗಬಹುದು; ಅಥವಾ, ತನಗಿಷ್ಟ ಬಂದ ಗಂಡಿನ ಕತ್ತನ್ನು ಮಧುರ ಭಾವದಿಂದ ನೇವರಿಸಿ ಅದರೊಡನೆ ತನ್ನ ಪ್ರಣಯವನ್ನು ಸಾಫಲ್ಯಗೊಳಿಸಿಕೊಳ್ಳಬಹುದು. ಸ್ವಯಂವರ ಪಕ್ಷಿ ಸಾಮ್ರಾಜ್ಯದಲ್ಲೂ ಇರಲು ಸಾಧ್ಯವೆನ್ನುವುದಕ್ಕೆ ಇದೊಂದು ಉತ್ತಮ ನಿದರ್ಶನ.

ಡಾರ್ವಿನ್ ಮಹಾಶಯನ ಸಿದ್ಧಾಂತಕ್ಕೆ ಕೂಡ ಇದೊಂದು ಉದಾಹರಣೆಯಾಗಿದೆ. ಪ್ರಣಯ ಋತುವಿನಲ್ಲಿ, ಕೇವಲ ಗಂಡಿನಲ್ಲಿ ಮಾತ್ರ ಅಲಂಕೃತ ಅಂಗಾಂಗಗಳ ವಿಕಸನ ಪ್ರಣಯಪೂರ್ವ ಕದನ ಅಥವಾ ನೃತ್ಯ ಮೇಳಗಳಲ್ಲಿ ಅವುಗಳ ವಿಶೇಷ ಬಳಕೆ; ತನ್ನ ಬಯಕೆಯನ್ನು ಬಲವಂತಪಡಿಸಲಾರದ ಅಸಹಾಯಕ ಗಂಡು; ತನ್ನಿಚ್ಛೆಯಂತೆ ನಿರ್ಧಾರ ತಳೆಯಬಹುದಾದ ಹೆಣ್ಣು; ಕೊನೆಯದಾಗಿ ಆ ಹಕ್ಕನ್ನು ಚಲಾಯಿಸಿ ಪ್ರಣಯದೇವತೆಯನ್ನು ಆರಾಧಿಸುವ ಗಂಡು-ಹೆಣ್ಣಿನ ಒಡಲಾಟ—ಡಾರ್ವಿನ್ ತತ್ತ್ವವನ್ನು ಸಾಧಿಸುವ ಸತ್ಯಸ್ತಂಭಗಳಿವು. ಈ ವೇಷಭೂಷಣಗಳು, ಈ ನೃತ್ಯಮೇಳಗಳು, ಈ ಹೋರಾಟ-ಇವೆಲ್ಲ ಪ್ರಣಯಾಂಕುರ ಸಾಧಕಗಳೆಂದು ಹಲವು ವಿಜ್ಞಾನಿಗಳ ಅಭಿಮತ. ಇರಬಹುದು. ಅಪರೂಪದ ಹಾಗು ಅಪೂರ್ವವಾದ ವೈವಿಧ್ಯಪೂರ್ಣ ವಸ್ತ್ರಗಳು ಹೆಚ್ಚು ಆಕರ್ಷಕವೇ ಸರಿ.

ಗಂಡಿನ ರೂಪ ಆಕಾರಗಳು ವರ್ಣರಂಜಿತವಾದುವೆಂದು ಮೊದಲೇ ಹೇಳಿದೆಯಷ್ಟೆ. ಹೆಣ್ಣಿನ ಬಣ್ಣ ಸಾಕಷ್ಟು ರಕ್ಷಣೆನೀಡುವುದಾಗಿರುತ್ತದೆ. ಮೊಟ್ಟೆಯಿಟ್ಟು ಮರಿಯನ್ನು ಕಾಪಾಡುವುದು ತಾಯಿಯ ಕರ್ತವ್ಯವಾಗಿರುವುದರಿಂದ ಹೆಣ್ಣು ಪಕ್ಷಿಗೆ ಆಡಂಬರದ ಬಣ್ಣದ ಆವಶ್ಯಕತೆಯಿಲ್ಲ. ಅದು ಗಂಡಿಗೆ ಮಾತ್ರ ಮೀಸಲಾದುದು—ಒಮ್ಮೆ ಗರ್ಭಾಧಾನ ಮಾಡಿದ ನಂತರ ಅದು ಬದುಕಿರಬಹುದು ಇಲ್ಲವೆ ಸಾಯಬಹುದು.

ಪಕ್ಷಿಗಳು ಸಾಮಾನ್ಯವಾಗಿ .ಏಕಸತೀ ವ್ರತವನ್ನು ಆಚರಿಸುತ್ತ—ಕೊನೆಯ ಪಕ್ಷ ಒಂದು ಪ್ರಣಯ ಋತುವಿಗಾದರೂ. ಆ ಜಾತಿಯ ಬಹುಮಟ್ಟಿನ ಗಂಡುಪಕ್ಷಿಗಳು ಹಾಡುಪಕ್ಷಿಗಳು. ಋತು ಸಮೀಪಿಸಿದಾಗ ಅವು ಒಂದು ಪ್ರದೇಶಕ್ಕೆ ಹೋಗಿ ಅಲ್ಲಿ ತಮ್ಮ ಸ್ಥಾನವನ್ನು ಕಾಯ್ದು ಕುಳಿತುಕೊಳ್ಳುತ್ತವೆ. ಇದೇ ಮುಂದೆ ಅದರ ಆವಾಸಸ್ಥಾನ. ಕೆಲವು ಸಲ ತನ್ನ ಪ್ರದೇಶವನ್ನು ಪಡೆಯಲು ಅದು ಹೋರಾಡಬೇಕಾಗುತ್ತದೆ. ಹೀಗೆ ತನ್ನ ಸ್ವಸ್ಥಾನದಲ್ಲಿ ಕುಳಿತು ಅದು ಹಾಡುತ್ತದೆ. ಈ ಹಾಡು ಬೇರೆ ಗಂಡುಗಳು ಅಲ್ಲಿಗೆ

ಬಾರದಿರುವದಕ್ಕೆ ಸೂಚನೆ ಹೇಗೋ ಹಾಗೆಯೇ ಹೆಣ್ಣು ಪಕ್ಷಿಗಳಿಗೆ ಪ್ರಣಯದ ಕರೆಯಾಗುತ್ತದೆ. ಅದೊಂದು ಪ್ರಕಟಣೆ.

ಒಂದು ಹೆಣ್ಣು ಪಕ್ಷಿಯೇನಾದರೂ ಬಂದರೆ ಅದು ಗಂಡಿನೊಡಗೂಡಿ ಆ ಋತುವನ್ನು ಅಲ್ಲಿ ದಾಂಪತ್ಯಜೀವನದಲ್ಲಿ ಕಳೆಯುತ್ತದೆ. ಎರಡು ಹೆಣ್ಣುಪಕ್ಷಿಗಳು ಬಂದಾಗ ಅಲ್ಲಿ ವಿರಸವಾರಂಭವಾಗುತ್ತದೆ. ಮೊದಲೇ ಹೇಳಿದಂತೆ ಅಲ್ಲಿ ಏಕಸತಿತ್ವವಿರುವುದರಿಂದ ಎರಡು ಹೆಣ್ಣಿಗೆ ಅಲ್ಲಿ ಸ್ಥಾನವಿರುವುದಿಲ್ಲ. ಅಕಸ್ಮಾತಾಗಿ ಬಂದ ಈ ಎರಡು ಹೆಣ್ಣುಗಳಿಗೆ ಹೊಡೆದಾಟ ಆರಂಭವಾಗಿ ಗಂಡು ಕೇವಲ ವೀಕ್ಷಕನಾಗಿ ಉಳಿಯುತ್ತದೆ. ಗೆದ್ದ ಹೆಣ್ಣು ಗಂಡಿನಜೊತೆಗೂಡಿ ತಮ್ಮ ಪ್ರದೇಶದಲ್ಲಿ ಸಂಸಾರ ಹೂಡುತ್ತದೆ. ಆ ಬಳಿಕವೇ ಅದರ ಪ್ರಣಯದ ಚೆಲ್ಲಾಟ, ಆಡಂಬರ. ಪಕ್ಷಿಯ ಮನಸ್ಸು ವಿಚಿತ್ರವಾದುದರಿಂದ ಅದರ ಜೀವನವೂ ವಿಚಿತ್ರ ಬಗೆಯದಾಗಿರುತ್ತದೆ.

ಪಕ್ಷಿಗಳಲ್ಲಿನ ಪ್ರಣಯ ಪರ್ಯವಸಾನವಾಗುವುದು ಪ್ರಣಯದಲ್ಲೇ ಹೊರತು ಜೊತೆಗೂಡುವುದರಲ್ಲಲ್ಲ. ನೃತ್ಯಮೇಳಗಳು, ಆಡಂಬರದ ಆಟಗಳು, ಉಡುಗೊರೆಯ ಪ್ರೇಮಕಾಣಿಕೆ–ಇವೆಲ್ಲ ಸಾಂಘಿಕ ಜೀವನದ ಪ್ರತೀಕ, ಪ್ರೇಮದಾಂಪತ್ಯದ ಸಾಂಸಾರಿಕ ಜೀವನದ ಅಡಿಪಾಯ. ಸಸ್ತನಿಗಳಲ್ಲಿ ಈ ಆಟ ಕೂಟಗಳಿಗಿಂತ ಕದನವೇ ಪ್ರಾಧಾನ್ಯ. ಇಲ್ಲಿ ಪ್ರಣಯ ಶಾರೀರಿಕ ಕ್ರಿಯೆಯ ಅಧೀನದಲ್ಲಿರುತ್ತದೆ, ಪಕ್ಷಿಗಳಂತೆ ಅದು ಮನೋಭಾವಗಳಿಂದ ಉದ್ರಿಕ್ತವಾಗುವುದಿಲ್ಲ.

ಹೆಣ್ಣುಸೊಳ್ಳೆ ತನ್ನ ಸಂಗೀತದಿಂದ ಇನಿಯನ ಮನಸೆಳೆಯುತ್ತದೆ; ಜೀರುಂಡೆಗಳಲ್ಲಿಯೂ ಕಪ್ಪೆಯಲ್ಲಿಯೂ ಈ ಪ್ರಣಯಾಹ್ವಾನದ ಕರೆ ವಿವಿಧ ಶಬ್ದಗಳ ಮೂಲಕ ಸಾಗುತ್ತಿದೆ; ಪಕ್ಷಿಗಳಲ್ಲಿ ಮನೋಮೋಹಕ ವರ್ಣರಂಜಿತ ರೆಕ್ಕೆಪುಕ್ಕಗಳು, ಅಂಗ ಸೌಂದರ್ಯ, ನಟಭಾವ ಭಂಗಿಗಳು, ಹೆಣ್ಣನ್ನಾಕರ್ಷಿಸುವ ಸಾಧನಗಳು. ಆದರೆ ತನ್ನ ಶರೀರದಿಂದ ಹೊರಡಿಸುವ ಬೆಳಕಿನಿಂದ ಪ್ರಣಯಸಂಕೇತಗಳನ್ನು ವಿನಿಮಯ ಮಾಡಿಕೊಳ್ಳುವ ಪ್ರಾಣಿಯೊಂದಿದೆ. ಅದೇ ಮಿಣುಕು ಹುಳು ಅಥವಾ ಮಿಂಚುಹುಳು. ಇದೂ ಜೀರುಂಡೆಯ ಜಾತಿಗೆ ಸೇರಿದುದು. ಅದರ ಶರೀರದ ಕೆಳಭಾಗದಲ್ಲಿ ಮಧ್ಯಕ್ಕೂ ಸ್ವಲ್ಪ ಕೆಳಗೆ ಕಿತ್ತಳೆಯ ತೊಳೆಯಂತೆ ಕಾಣುವ ಖಂಡ ಪ್ರದೇಶದಿಂದ ಬೆಳಕು ಹೊರಹೊಮ್ಮುತ್ತದೆ. ಹೆಣ್ಣಿನ ಶರೀರದಲ್ಲಿ ಇಂತಹ ಖಂಡ ಪ್ರದೇಶ ಒಂದೇ ಇರುತ್ತದೆ. ಗಂಡಿನಲ್ಲಿ ಅದರ ಕೆಳಭಾಗದಲ್ಲಿ ಅದಕ್ಕಿಂತಲೂ ದೊಡ್ಡದಾದ ಮತ್ತೊಂದು ಖಂಡಪ್ರದೇಶವಿರುತ್ತದೆ. ಮೊದಲನೆಯದರಿಂದ ಸುಮಾರು ಪ್ರತಿ ೧೫–೨೦ ಸೆಕೆಂದಿಗೊಮ್ಮೆ ಬೆಳಕು, ಅಷ್ಟು ಪ್ರಕಾಶಮಾನವಲ್ಲದ ಬೆಳಕು, ಹೊಮ್ಮಿದರೆ ಈ ಎರಡನೆಯ ಪ್ರದೇಶದಿಂದ ಆಗೊಮ್ಮೆ ಈಗೊಮ್ಮೆ ಪ್ರಕಾಶಯುತವಾದ ಬೆಳಕು ಪ್ರಜ್ವಲಿಸುತ್ತದೆ. ಹೆಣ್ಣನ್ನು ಆಕರ್ಷಿಸುವ ವಿಶೇಷ ಗುಣ ಈ ಪ್ರಕಾಶವಾದ ಬೆಳಕನ್ನವಲಂಬಿಸಿರುತ್ತದೆ. ಗಂಡು ಮಿಣುಕು ಹುಳು ಹಾರುತ್ತ ಹಾರುತ್ತ ಪ್ರಣಯಸೂಚೀ ಸಂಕೇತವನ್ನು ತನ್ನ ಪ್ರಜ್ವಲ ಬೆಳಕಿನ ಮೂಲಕ ಪ್ರಚುರಪಡಿಸುತ್ತದೆ. ಹೆಣ್ಣು ಮಿಣುಕು ಹುಳು ಸಾಮಾನ್ಯವಾಗಿ ಸೋಮಾರಿ; ಅದು ಮರದ ಕೊಂಬೆಯ ಮೇಲೆ ಇನಿಯನ ದರ್ಶನಾಕಾಂಕ್ಷಿಯಾಗಿ ಕುಳಿತಿರುತ್ತದೆ. ಕುಳಿತಲ್ಲಿಂದಲೇ ಗಂಡಿಗೆ ತನ್ನ ಇರುವನ್ನು ಅಷ್ಟು ಪ್ರಕಾಶವಲ್ಲದ ಬೆಳಕಿನ ಸಂಕೇತದಿಂದ ಸೂಚಿಸಿ ಪ್ರಣಯಾಹ್ವಾನ ನೀಡುತ್ತದೆ. ಈ ಮಂದ ಬೆಳಕಿನ ಜಾಡನ್ನನುಸರಿಸಿ ಗಂಡು ಹೆಣ್ಣು ಮಿಣುಕು ಹುಳುವನ್ನು ಕಂಡು ಕೂಡುತ್ತದೆ. ಜ್ಯೋತಿಃ ಸಂಕೇತದಿಂದ ಪ್ರಣಯ ಸಮಾಗಮವೆಂದರೆ ಸೃಷ್ಟಿವೈಚಿತ್ರ್ಯವೇ ಸರಿ!

ಪ್ರಾಣಿಗಳಲ್ಲಿನ ಪ್ರಣಯಾಚರಣೆಯನ್ನು ವಿಕಸನದ ನಾಲ್ಕು ಹಂತಗಳಲ್ಲಿ ವಿಶದೀಕರಿಸಬಹುದು. ಮೊದಲನೆಯದಾಗಿ, ಲೈಂಗಿಕ ಪ್ರವೃತ್ತಿ, ಎರಡನೆಯದಾಗಿ, ಲಿಂಗಭೇದ; ಮೂರನೆಯದಾಗಿ ಸ್ವಯಂ ಗರ್ಭಮೂಡಿಸುವಿಕೆ ಅಥವಾ ಗಂಡು ಹೆಣ್ಣಿನ ಸಾಮ್ಯ ಮತ್ತು ಕೊನೆಯದಾಗಿ ಮಿದುಳು ಮತ್ತು ಇಂದ್ರಿಯಗಳ ಉತ್ತಮ ವಿಕಸನ. ಇವುಗಳಲ್ಲಾವುದರ ಕೊರತೆಯಿದ್ದರೂ ಪ್ರಾಣಿಪ್ರಪಂಚದ ವೈವಿಧ್ಯಪೂರ್ಣ ಪ್ರಣಯಾಚರಣೆ ಊನವಾಗುತ್ತಿತ್ತು. ಏಕೆ ಮೇಲಂತಸ್ತಿನ ಪ್ರಾಣಿಯೆನಿಸಿದ್ದ ಮಾನವನೂ ಹೆಚ್ಚಿನ ಬದಲಾವಣೆಗಳಿಲ್ಲದೆ, ಈ ವಿಂಗಡಣೆಗೊಳಗಾಗಿದ್ದಾನೆ.





ಲೇಖಕರು:
**ಶ್ರೀ. ಬಿ. ವಿ. ಸುಬ್ಬರಾಯಪ್ಪ.**
(ಕೇಂದ್ರ ಆಹಾರ ಸಂಶೋಧನಾಲಯ)
ಮೈಸೂರು

# ಆಹಾರ ವಿಜ್ಞಾನದಲ್ಲಿ ಭಾರತದ ಮುನ್ನಡೆ



**ಭಾರತದಲ್ಲಿ ಆಹಾರಧಾನ್ಯ ಉತ್ಪಾದನೆಯು ಕಡಿಮೆ ಇದ್ದು ಎಲ್ಲರಿಗೂ ಅವಶ್ಯವಿರುವ ಪೌಷ್ಟಿಕ ಆಹಾರವು ದೊರೆಯುತ್ತಿರುವುದಿಲ್ಲ. ಲಭ್ಯವಿರುವ ಆಹಾರ-ಪದಾರ್ಥಗಳಿಂದಲೇ ಪೂರ್ಣ ಪ್ರಯೋಜನವನ್ನು ಪಡೆಯಬೇಕಿದೆ. ಈ ದೃಷ್ಟಿಯಿಂದ ಆಹಾರ-ವಿಜ್ಞಾನದ ಪಾತ್ರ ತುಂಬ ಮಹತ್ವದ್ದು. ಮೈಸೂರಲ್ಲಿಯ ಕೇಂದ್ರ ಆಹಾರ ಸಂಶೋಧನೆ ಸಂಸ್ಥೆ ಈಗಾಗಲೇ ಈ ದಿಸೆಯಲ್ಲಿ ವಿಶೇಷ ಕಾರ್ಯ ಮಾಡಿದೆ. ಇಂದು ಈ ರಂಗದಲ್ಲಿ ನಡೆದ ಕಾರ್ಯ-ಪ್ರಯೋಗಗಳನ್ನು ಈ ಲೇಖನದಲ್ಲಿ ನಿರೂಪಿಸಲಾಗಿದೆ.**

ನಮ್ಮ ದೇಶದಲ್ಲಿ ಕಾರ್ಯಪಟು—ಮುಂದಾಳುಗಳ ಗುರಿ; ಸಾರ್ವಜನಿಕರ ಉದ್ಧಾರದಿಂದ ಸಮಾಜದ ಉನ್ನತಿಯಾಗಬೇಕೆಂಬುದು. ಈ ಗುರಿಯನ್ನು ಮುಟ್ಟಲು ವಿಜ್ಞಾನ ಮತ್ತು ಯಂತ್ರಶಾಸ್ತ್ರಗಳ ಸಾಧನೆಗಳನ್ನು ಅನುಸರಿಸಬೇಕೆಂದು, ಆ ದಾರಿಯಲ್ಲಿ ಎಲ್ಲ ಪ್ರಯತ್ನಗಳೂ ನಡೆಯುತ್ತಿವೆ. ತಿನ್ನಲು ಸಾಕಷ್ಟು ಆಹಾರ, ಉತ್ತಮ ರೀತಿಯಲ್ಲಿ ಉಡಲು ಬಟ್ಟೆ, ವಾಸಿಸಲು ಮನೆ, ಸಂಚಾರಸೌಕರ್ಯಗಳು— ಇವೇ ಮೊದಲಾದವು ಯಂತ್ರಶಾಸ್ತ್ರಮಾರ್ಗದಲ್ಲಿ ಸಾಗುತ್ತಿವೆ.

ವಿಜ್ಞಾನ ಹಾಗೂ ಯಂತ್ರಜ್ಞಾನದಿಂದ ನಮ್ಮ ದೇಶದಲ್ಲಿ ಸಾಮಾಜಿಕಪರಿವರ್ತನೆಯಾಗುತ್ತಿದೆ; ಜೀವನ ನಡೆಸುವ ವೈಖರಿಯೂ ಬದಲಾವಣೆಯಾಗುತ್ತಿದೆ. ನಾನಾಬಗೆಯ ಕೈಗಾರಿಕೆಗಳು, ಔದ್ಯೋಗಿಕ ಅವಕಾಶಗಳು ಅಲ್ಲಲ್ಲೇ ಕೇಂದ್ರೀಕೃತವಾಗಿ ನಗರಗಳು ಉತ್ಪನ್ನವಾಗುತ್ತಿವೆ, ಇಲ್ಲವೆ ಹಳೆಯ ಪಟ್ಟಣಗಳು ಬೃಹದಾಕಾರವಾಗಿ ಬೆಳೆಯುತ್ತಿವೆ. ಇದರಿಂದ ಜೀವನವಿಧಾನವೂ ಪಾಶ್ಚಿಮಾತ್ಯ ದೇಶಗಳಲ್ಲಿರುವಂತೆಯೇ ರೂಪುಗೊಳ್ಳಲು ಆರಂಭಿಸಿದೆ. ಜೀವನ ವಿಧಾನದಲ್ಲಿ ನಿತ್ಯವೂ ಸೇವಿಸುವ ಆಹಾರ ಮತ್ತು ಆಹಾರ ಪದ್ಧತಿ ಮುಖ್ಯ ಪಾತ್ರವನ್ನು ವಹಿಸುತ್ತದೆ.

## ಪಾಶ್ಚಿಮಾತ್ಯ ದೇಶಗಳಲ್ಲಿ

ಪಾಶ್ಚಿಮಾತ್ಯ ದೇಶಗಳಲ್ಲಿ ಗೃಹಿಣಿಯು ತನ್ನ ಮನೆಯಲ್ಲಿ ಸೇವಿಸಬೇಕಾದ ಆಹಾರ ವಿಷಯಗಳನ್ನು ವೈಜ್ಞಾನಿಕವಾಗಿ ತಿಳಿದುಕೊಂಡಿರುತ್ತಾಳೆ; ಮಕ್ಕಳು, ವೃದ್ಧರು, ಶ್ರಮವಹಿಸಿ ಕೆಲಸಮಾಡುವವರು, ರೋಗಿಗಳು—ಇಂತಹವರ ಪೋಷಣೆಯಲ್ಲಿ ಎಂತಹ ಆಹಾರವನ್ನು ಎಷ್ಟು ಮತ್ತು ಯಾವ ರೀತಿ ಉಪಯೋಗಿಸಬೇಕು ಎಂಬುದರ ಅರಿವು ಆಕೆಗೆ ಇರುತ್ತದೆ. ಅಲ್ಲದೆ, ಹೊಸ ಹೊಸ ಆಹಾರಪದಾರ್ಥಗಳು ರುಚಿಕರವಾಗಿ, ಆಕರ್ಷಕವಾಗಿ, ಆಹ್ಲಾದಕರವಾಗಿರುವಂತೆ ಸಿದ್ಧಮಾಡುವ ನೂತನ ವಿಧಾನಗಳನ್ನೂ ಕಂಡುಹಿಡಿಯುವ ಕುತೂಹಲ, ಪ್ರಯತ್ನಗಳು ಆ ದೇಶಗಳಲ್ಲಿ ಒಂದೇ ಸಮನೆ ನಡೆಯುತ್ತಿವೆ.

ಇನ್ನೂ ಒಂದು ಮುಖ್ಯ ವಿಚಾರವೇನೆಂದರೆ, ಆ ದೇಶಗಳಲ್ಲಿ ಆಹಾರಕೈಗಾರಿಕೆಯು ಬಹುಮುಖಗಳಲ್ಲಿ ಮುಂದುವರಿದು ಹಿರಿಯ ಸ್ಥಾನವನ್ನು ಗಳಿಸಿಕೊಂಡಿವೆ. ಸಾಮಾಜಿಕ ಪರಿವರ್ತನೆಗಳಿಗೆ ಹೊಂದಿಕೊಂಡು, ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ, ಆಹಾರ ಸೇವನೆ, ದೇಹಪೋಷಣೆಗೆ ನೆರವಾಗುವ ಅಂಶಗಳು, ಸಂಗ್ರಹಣವಿಧಾನಗಳು, ಪ್ಯಾಕೇಜ್‌ಗಳು, ಮಾರಾಟ— ಇವೇ ಮುಂತಾದವು. ಎಲ್ಲ ಮಟ್ಟಗಳಲ್ಲೂ ಯಥಾವಿಧಿ, ಸಮರ್ಪಕವಾಗಿ ನಡೆಯುತ್ತಿವೆ. ಎರಡನೆಯ ಮಹಾಯುದ್ಧಕಾಲದಲ್ಲಿ ಸೈನಿಕರಿಗೆ ಹಾಗೂ ಸಾರ್ವಜನಿಕರಿಗೆ ಒದಗಿಸಬೇಕಾದ ಆಹಾರದ ಬಗೆಗೆ ಅಪಾರಸಂಶೋಧನೆಗಳು ನಡೆದವು. ಆಹಾರವಿಜ್ಞಾನವು ಆ ದೃಷ್ಟಿಯಿಂದ ಒಂದು ಹೊಸ ರೂಪವನ್ನೇ ತಾಳಿತು.

## ನಮ್ಮ ದೇಶದಲ್ಲಿ

ಆದರೆ, ನಮ್ಮ ದೇಶದಲ್ಲಿ ಜನರು ಇಂದಿನ ನಾಗರಿಕಜೀವನದ ಇತರ ವೈಖರಿಗಳನ್ನು ಅನುಕರಣೆಮಾಡಲು ಮುಂದೆ ಬರುತ್ತಿದ್ದರೂ ಅದರ ಆಹಾರ ಸೇವಿಸುವ ರೀತಿ ಹಾಗೂ ನಿತ್ಯ ಊಟದ ರಚನೆಗಳು ಇನ್ನೂ ಸಂಪ್ರದಾಯಬದ್ಧವಾಗಿಯೇ ಉಳಿದಿವೆ. ಧಾನ್ಯಗಳ ಬೆಳೆ, ಹವಾಗುಣ, ಮತೀಯ ಸಂಬಂಧ ಕಲ್ಪನೆಗಳು ಮತ್ತು ಆಯುರ್ವೇದ ಹಾಗೂ

ಯುನಾನಿ ಔಷಧಪದ್ಧತಿಗಳಲ್ಲಿ ಉಕ್ತವಾಗಿರುವ ಗುಣಗಳು ಈ ಸಂಪ್ರದಾಯವನ್ನು ಪೋಷಿಸಿಕೊಂಡುಬಂದಿವೆ. ಜೊತೆಗೆ ಹಿಂದಿನ ಕಾಲದ ಜಮೀನದಾರಿ ವ್ಯವಹಾರ, ಊಳಿಗದವರಿಂದ ಅಡಿಗೆಮಾಡಿಸುವುದು, ಸಾಮೂಹಿಕ ಊಟ ವ್ಯವಸ್ಥೆಗಳು ಸಹ ಈ ಸಂಪ್ರದಾಯಕ್ಕೆ ನೆರವಾಗಿವೆ. ನಮ್ಮ ದೇಶದಲ್ಲಿ ಇಂದು ಕ್ರಾಂತಿಕಾರಕಗಳೆನ್ನುವಷ್ಟರ ಮಟ್ಟಿಗೆ ಮಹತ್ತರ ಬದಲಾವಣೆಗಳಾಗುತ್ತಿದ್ದರೂ ಸಂಪ್ರದಾಯದ ಸಂಕೋಲೆಗೆ ಸಿಲುಕಿರುವ ನಮ್ಮ ಊಟಪದ್ಧತಿಯನ್ನು ಮರೆಯಬಾರದು.

ಹೀಗೆಂದಮಾತ್ರಕ್ಕೆ, ನಮ್ಮ ದೇಶದಲ್ಲಿ ಆಹಾರವಿಜ್ಞಾನ ಮತ್ತು ಅದರ ತಂತ್ರಜ್ಞಾನಗಳನ್ನು ಕುರಿತ ಸಂಶೋಧನೆಗಳು ನಡೆಯುತ್ತಿಲ್ಲ ಎಂದು ಭಾವಿಸಬಾರದು. ಕಳೆದ ಮೂವತ್ತು ವರ್ಷಗಳಿಂದಲೂ ಕೂನೂರಿನಲ್ಲಿದ್ದ (ಈಗ ಇದು ಹೈದರಾಬಾದಿನಲ್ಲಿದೆ) ಪರಿಶೋಧನಮಂದಿರವು (ನ್ಯೂಟ್ರಿಷನ್ ರಿಸರ್ಚ್ ಲ್ಯಾಬೊರೇಟರಿ) ಆಹಾರ ವಸ್ತುಗಳ ಪೌಷ್ಟಿಕ ಗುಣಗಳನ್ನು ಕಂಡುಹಿಡಿದಿದೆ. ಆಗಿಂದಾಗ್ಗೆ, ಕೆಲವು ಪ್ರದೇಶಗಳಲ್ಲಿ ಸರ್ವೆ ನಡೆಸಿ ಜನರ ಆಹಾರಗಳಲ್ಲಿರುವ ಪೌಷ್ಟಿಕಾಂಶಗಳ ಕೊರತೆ, ಅವುಗಳ ನಿವಾರಣೆ ಅವರಿಗೆ ಆಹಾರವಿಜ್ಞಾನದ ಅರಿವು ಉಂಟುಮಾಡಿಕೊಡುವ ಬಗೆ—ಇವುಗಳ ವಿಷಯವಾಗಿಯೂ ಪ್ರಯತ್ನಗಳನ್ನು ಆ ಪರಿಶೋಧನಮಂದಿರವು ನಡೆಸಲು ಕೈಕೊಂಡಿದೆ. ಆ ಪರಿಶೋಧನಮಂದಿರವಲ್ಲದೆ, ಕೆಲವು ವಿಶ್ವವಿದ್ಯಾನಿಲಯಗಳು, ಪಂಜಾಬ, ಉತ್ತರ ಪ್ರದೇಶ, ಪಶ್ಚಿಮ ಬಂಗಾಲ ಸರ್ಕಾರಗಳು ಸಹ ಆಹಾರವಿಜ್ಞಾನ ಸಂಶೋಧನೆಗಳಿಗೆ ಸಾಕಷ್ಟು ಉತ್ತೇಜನವನ್ನು ಕೊಟ್ಟಿವೆ.

### ಕೇಂದ್ರ ಆಹಾರ ಸಂಶೋಧನಾಲಯ

ಕಳೆದ ಹತ್ತು ವರ್ಷಗಳಲ್ಲಿ, ಆಹಾರ ವಿಜ್ಞಾನ ವಿಷಯವಾಗಿ ದೇಶದ ಪ್ರಮುಖ ಪರಿಶೋಧನ ಮಂದಿರವೆಂದರೆ ಮೈಸೂರಿನಲ್ಲಿರುವ ಕೇಂದ್ರ ಆಹಾರ ಸಂಶೋಧನಾಲಯ. ಇಲ್ಲಿಯ ಪರಿಶೋಧನೆಗಳಿಗೆ ಅಂತಾರಾಷ್ಟ್ರೀಯ ಖ್ಯಾತಿ ಹಾಗೂ ವ್ಯಾಪ್ತಿ ಇದೆ. ಎರಡು ತಿಂಗಳುಗಳ ಹಿಂದೆ, ಈ ಸಂಶೋಧನಾಲಯದ ಡೈರೆಕ್ಟರ್ ಅವರಿಗೆ 'ಬ್ಯಾಬ್‌ಕಾಕ್ ಹಾರ್ಟ್' ಪಾರಿತೋಷಕವನ್ನು ಅಮೇರಿಕಾದಲ್ಲಿರುವ ಅಂತಾರಾಷ್ಟ್ರೀಯಸಂಸ್ಥೆಯೊಂದು ಕೊಟ್ಟಿತು. ಆಹಾರವಿಜ್ಞಾನದಲ್ಲಿ ವಿಶೇಷ ಸಂಶೋಧನೆಗಳನ್ನು ನಡೆಸಿ, ಅವುಗಳ ಮೂಲಕ ಜನರ ಆರೋಗ್ಯವು ಉತ್ತಮಗೊಳ್ಳಲು ಶ್ರಮಿಸಿದ ಖ್ಯಾತವಿಜ್ಞಾನಿಗಳಿಗಾಗಿ ಈ ಸನ್ಮಾನನನ್ನು ಕೊಡಲಾಗುವದು. ಭಾರತೀಯರೊಬ್ಬರಿಗೆ ಇಂತಹ ಪಾರಿತೋಷಕವು ದೊರೆತಿರುವುದು. ಇದೇ ಮೊತ್ತಮೊದಲು.

ಕೇಂದ್ರ ಆಹಾರಸಂಶೋಧನಾಲಯವು ರಾಷ್ಟ್ರೀಯ. ಪ್ರಯೋಗಮಂದಿರಗಳಲ್ಲೊಂದು ಆಹಾರವಿಜ್ಞಾನದಲ್ಲಿ ನಮ್ಮ ದೇಶ ಮುಂದುವರಿಯಬೇಕು, ಜನರ ಪೌಷ್ಟಿಕಮಟ್ಟವನ್ನು ಉತ್ತಮಗೊಳಿಸಬೇಕು ಎಂಬ ನಮ್ಮ ಕೇಂದ್ರ ಸರ್ಕಾರದ ಇಚ್ಛೆಯ ಪರಿಣಾಮವೇ ಈ ಸಂಶೋಧನಾಲಯ.

ನಿತ್ಯದ ಊಟದಲ್ಲಿರುವ ನ್ಯೂನತೆಗಳನ್ನು ಹೋಗಲಾಡಿಸುವ ಪೋಷಕಆಹಾರ ಪದಾರ್ಥಗಳು, ಆವಶ್ಯಕ ಸತ್ವಯುತ ಆಹಾರ ವಸ್ತುಗಳು ದೊರೆಯದಿದ್ದಲ್ಲಿ, ಅವುಗಳಿಗೆ ಪ್ರತಿಯಾಗಿ ಪುಷ್ಟಿಕರ ಆಹಾರಪದಾರ್ಥಗಳನ್ನು ಸುಲಭವಾಗಿ ದೊರೆಯುವ ಬೇರೆ ಮೂಲಗಳಿಂದ ಪಡೆಯುವುದು; ಆಹಾರ ಪದಾರ್ಥಗಳನ್ನು ಸೂಕ್ತರೀತಿಯಲ್ಲಿ ಸಂಸ್ಕರಿಸುವುದು, ದಾಸ್ತಾನು ಮಾಡುವುದು; ಹಣ್ಣುಗಳು ವ್ಯರ್ಥವಾಗದಂತೆ ಕಾಪಾಡಿಡುವ ಹಾಗು ಉಪಯೋಗಿಸುವ ಬಗೆ; ಸುರಕ್ಷಿತವಾಗಿ ಪ್ಯಾಕ್ ಮಾಡುವ ರೀತಿ, ಕಾಫಿ, ಟೀ, ತೆಂಗಿನಕಾಯಿ, ಅಡಿಕೆ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಪರಿಶೋಧನೆಗಳನ್ನು ಆಹಾರ ಸಂಶೋಧನಾಲಯದಲ್ಲಿ ಪರಿಣಾಮಕರವಾಗಿ ಕೈಗೊಳ್ಳಲಾಗಿದೆ.

ಆಹಾರ ಪದಾರ್ಥಗಳನ್ನು ಹೆಚ್ಚುಪ್ರಮಾಣದ ತಯಾರಿಕೆಯ ಮಟ್ಟದಲ್ಲಿ ಸಂಸ್ಕರಿಸಬಹುದಾದ ಸಾಧ್ಯಾಸಾಧ್ಯತೆಗಳನ್ನುಕುರಿತು ಅಭಿವೃದ್ಧಿಕಾರ್ಯಗಳಿಗೂ ಗಮನಕೊಡಲಾಗುತ್ತಿದೆ. ಆಹಾರ ಕೈಗಾರಿಕೋದ್ಯಮಿಗಳು ಅಳವಡಿಸಿಕೊಳ್ಳಲು ಅನುಕೂಲವಾಗುವಂತಹ ಹಲವು ಯಂತ್ರಗಳ ಮಾದರಿಯನ್ನೂ ನಿರ್ಮಿಸಲಾಗಿದೆ.

### ವಿವಿಧೋಪಯೋಗಿ ಆಹಾರ

ಈಗಾಗಲೇ ಸಂಶೋಧನಾಲಯವು ಗಮನಾರ್ಹ ಪ್ರಗತಿಯನ್ನು ಸಾಧಿಸಿದೆ. ಮಲ್ಟಿಪರ್‌ಪಸ್ ಫುಡ್ (ವಿವಿಧೋಪಯೋಗಿ ಆಹಾರ) ಎಂಬುದು ಜನಪ್ರಿಯವಾಗಿದೆ. ನಮ್ಮ ದೇಶದಲ್ಲಿ ಬಹುತರ ಜನರು ಪ್ರೋಟೀನ್ (ದೇಹ ಬೆಳವಣಿಗೆಗೆ ಬೇಕಾಗುವ ಆಹಾರಾಂಶ), ವಿಟಮಿನ್ ಮತ್ತು ಲವಣಾಂಶಗಳು ಕೊರತೆ ಇರುವ ಆಹಾರವನ್ನೇ ಸೇವಿಸುತ್ತಾರೆ. ಇದರ ಪರಿಣಾಮವಾಗಿ ಅವರು ರೋಗರುಜಿಗಳಿಗೆ ತುತ್ತಾಗುವ ಪರಿಸ್ಥಿತಿ ಒದಗುತ್ತದೆ. ಮಲ್ಟಿಪರ್‌ಪಸ್ ಫುಡ್‌ನಲ್ಲಿ ಶೇಕಡ ೪೨ ಭಾಗ ಪ್ರೋಟೀನ್, ವಿಟಮಿನ್ 'ಎ' 'ಬಿ' ಮತ್ತು 'ಡಿ' ಗಳು ಹಾಗು ಲವಣವಸ್ತುಗಳು ದೇಹಕ್ಕೆ ದಕ್ಕುವ ರೀತಿಯಲ್ಲಿವೆ. ಇದರ ಬಳಕೆಯಿಂದ ನಮ್ಮ ಊಟಪದ್ಧತಿಯನ್ನು ಬದಲಾಯಿಸಿಕೊಳ್ಳಬೇಕಾಗಿಲ್ಲ. ನಿತ್ಯದ ಅಡಿಗೆ, ತಿಂಡಿವಿಶೇಷಗಳ ಜೊತೆಗೆ ಇದನ್ನೂ ಸೇರಿಸಿಕೊಳ್ಳಬಹುದು. ಇದರ ಬೆಲೆಯೂ ಸುಲಭ (೧ ಪೌಂಡಿಗೆ ೭೫ ನ. ಪೈ.).

ಮದರಾಸ್ ಮತ್ತು ಮೈಸೂರು ರಾಜ್ಯಗಳಲ್ಲಿರುವ ಶಾಲಾಮಕ್ಕಳಿಗೆ ಕೊಡುವ ಮಧ್ಯಾಹ್ನದ ಉಪಹಾರದಲ್ಲಿಯೂ ಕೆಲವು ಕೈಗಾರಿಕಾಕೇಂದ್ರಗಳ ಕ್ಯಾಂಟೀನ್‌ಗಳಲ್ಲಿಯೂ ಸಮಾಜಕಲ್ಯಾಣ ಕೇಂದ್ರಗಳಲ್ಲಿಯೂ ವಿವಿಧೋಪಯೋಗಿ ಆಹಾರವನ್ನು ಉಪಯೋಗಿಸುತ್ತಿದ್ದಾರೆ.

ಮದರಾಸ್ ರಾಜ್ಯದಲ್ಲಿನ ಆವಶ್ಯಕತೆಯನ್ನು ಪೂರಯಿಸುವ ಸಲುವಾಗಿ, ಕೊಯಿಮತ್ತೂರಿನಲ್ಲಿನ ಕೈಗಾರಿಕೋದ್ಯಮಿಯು ನೆರವಿನಿಂದ ದಿನಕ್ಕೆ ೪ ಟನ್ ವಿವಿಧೋಪಯೋಗಿ ಆಹಾರವನ್ನು ತಯಾರಿಸುವ ಯಂತ್ರವನ್ನು ಸ್ಥಾಪಿಸ-

ಲಾಗಿದೆ. ಈ ರೀತಿ ಅಗ್ಗದ ಬೆಲೆ ಸತ್ವಯುತ ಆಹಾರವನ್ನು ಹೆಚ್ಚು ಪ್ರಮಾಣದಲ್ಲಿ ತಯಾರಿಸಿ ಜನರಿಗೆ ಒದಗಿಸುವ ಆವಶ್ಯಕತೆ ಇಂದು ಹೆಚ್ಚಾಗಿದೆ. ದಿನಕ್ಕೆ ೩ ಟನ್ ಆಹಾರವನ್ನು ತಯಾರಿಸುವ ಯಂತ್ರವೊಂದು ಸಂಶೋಧನಾಲಯದಲ್ಲಿದೆ. ಇಲ್ಲಿ ಉತ್ಪನ್ನವಾದ ವಿವಿಧೋಪಯೋಗಿ ಆಹಾರವು ಸಿಲೋನ್, ಇಂಡೋನೇಷಿಯಾ, ಬರ್ಮಾ ಮುಂತಾದ ಹೊರದೇಶಗಳಿಗೂ ಸರಬರಾಜಾಗುತ್ತಿದೆ.

## ಮಕ್ಕಳಆಹಾರದ ತಯಾರಿಕೆ

ಪ್ರತಿವರ್ಷವೂ ಹಾಲಿನಿಂದಾದ ಮಕ್ಕಳ ಆಹಾರವನ್ನು ನಮ್ಮ ದೇಶವು ಇಂಗ್ಲೆಂಡ್, ಆಸ್ಟ್ರೇಲಿಯಾ ಮೊದಲಾದ ದೇಶಗಳಿಂದ ಅಧಿಕ ಪ್ರಮಾಣದಲ್ಲಿ ಆಮದು ಮಾಡಿಕೊಳ್ಳುತ್ತಿದೆ. ನಮ್ಮ ದೇಶದಲ್ಲಿಯೇ ಮೊದಲಬಾರಿಗೆ ಎಮ್ಮೆಯ ಹಾಲಿನಿಂದ ಸಿದ್ಧಗೊಳಿಸಿದ ಮಕ್ಕಳ ಆಹಾರವನ್ನು ತಯಾರಿಸುವ ವಿಧಾನವನ್ನು ಕಂಡುಹಿಡಿಯಲಾಗಿದೆ. ಗುಜರಾತ್ ರಾಜ್ಯದ ಆನಂದ್‌ನಲ್ಲಿರುವ ಖೇಡಾ ಡಿಸ್ಟ್ರಿಕ್ಟ್ ಹಾಲು ಉತ್ಪಾದಕರ ಸಹಕಾರ ಸಂಸ್ಥೆಯು ಈ ವಿಧಾನವನ್ನು ಅನುಸರಿಸಿ, ದಿನಂಪ್ರತಿ ೧೧ ಟನ್ನಿನಷ್ಟು ಮಕ್ಕಳ ಆಹಾರವನ್ನು ತಯಾರಿಸುತ್ತಿದೆ. ಇದಕ್ಕೆ 'ಅಮುಲ್' ಮಕ್ಕಳ ಆಹಾರ ಎಂದು ಹೆಸರು.

ವೈದ್ಯಕೀಯ ಮೇಲ್ವಿಚಾರಣೆಯಲ್ಲಿ ಕೈಗೊಂಡ ಪ್ರಯೋಗಗಳಿಂದ, ಈ ಆಹಾರವು ಮಕ್ಕಳಲ್ಲಿ ಸುಲಭವಾಗಿ ಪಚನವಾಗುವುದೆಂದು ತಿಳಿದುಬಂದಿದೆ. ಇಂತಹ ವಿಧಾನವನ್ನು ರೂಪಗೊಳಿಸಲು ಸಂಶೋಧನಾಲಯದಲ್ಲಿ ಪ್ರಯತ್ನಿಸಿದ ನಾಲ್ವರು ವಿಜ್ಞಾನಿಗಳಿಗೆ "ರಫಿ ಅಹಮದ್ ಕಿಡ್ವಾಯಿ ಸ್ಮಾರಕ" ಬಹುಮಾನವು ದೊರೆತಿದೆ.

## ನ್ಯೂಟ್ರೋ ಬಿಸ್ಕಟ್‌ಗಳು

ಸಿಹಿಯಾಗಿರುವ, ಪ್ರೊಟೀನ್ ಮತ್ತು ಕೆಲವು ವಿಟಮಿನ್ನಗಳನ್ನೊಳಗೊಂಡ ಪುಷ್ಟಿಕರ ಬಿಸ್ಕಟ್‌ಗಳನ್ನು ತಯಾರಿಸುವ ವಿಧಾನವೊಂದನ್ನು ಕಂಡುಹಿಡಿಯಲಾಗಿದೆ. ಇಂತಹ ಬಿಸ್ಕತ್ತಿನಲ್ಲಿ, ಸಾಧಾರಣ ಬಿಸ್ಕತ್ತಿನಲ್ಲಿರುವುದಕ್ಕಿಂತಲೂ ಪ್ರೋಟೀನ್ ಪ್ರಮಾಣವು ಮೂರರಷ್ಟಿರುತ್ತದೆ. ವಿಶೇಷ ವಿಧಾನದಿಂದ ತಯಾರಿಸಿದ ಕಡಲೆಕಾಯಿ ಬೀಜದ ಹಿಟ್ಟನ್ನು ಗೋಧಿ ಹಿಟ್ಟಿಗೆ ಬದಲಾಗಿ ಶೇಕಡ ೪೦ ರಷ್ಟು ಪ್ರಮಾಣದಲ್ಲಿ ಈ ಬಗೆಯ ಬಿಸ್ಕಟ್ ತಯಾರಿಕೆಗೆ ಬಳಸಲಾಗುತ್ತದೆ.

ಪ್ರಧಾನ ಮಂತ್ರಿಯವರ ಪರಿಹಾರನಿಧಿಯ ಸಲಹೆಗನುಗುಣವಾಗಿ, ಭಾರಿ ಪ್ರಮಾಣದಲ್ಲಿ ನ್ಯೂಟ್ರೋ ಬಿಸ್ಕಟ್‌ಗಳನ್ನು ತಯಾರಿಸಿ, ರೆಡ್ ಕ್ರಾಸ್ ಸಂಸ್ಥೆ, ಹಲವಾರು ಆಸ್ಪತ್ರೆಗಳು, ಸಮಾಜಕಲ್ಯಾಣ ಸಂಸ್ಥೆಗಳು, ಭೂಕಂಪಪೀಡಿತ ಪ್ರದೇಶಗಳಿಗೆ ಹಂಚಲಾಗಿವೆ.

## ಹಣ್ಣು, ತರಕಾರಿಗಳ ಸಂಸ್ಕರಣೆ ಮತ್ತು ಸಂಗ್ರಹಣೆ

ಬೇಗ ಕೆಟ್ಟು ಹೋಗುವ ಹಣ್ಣು, ತರಕಾರಿಗಳನ್ನು ಹೆಚ್ಚು ಕಾಲ ಕಾಪಾಡುವುದಕ್ಕೆ ಶೀತಾಗಾರಗಳಲ್ಲಿರಬೇಕಾದ ಉಷ್ಣತೆಮತ್ತುತೇವಾಂಶಗಳನ್ನೂ ಅವಧಿಗಳನ್ನೂ ನಿರ್ಧರಿಸಲಾಗಿದೆ. ಗಿಡಗಳಿಂದ ಕೊಯ್ಯುವುದಕ್ಕೆ ಮುಂಚಿತವಾಗಿ ಆ ಮೇಲೆ, ಇಲ್ಲವೆ ಸಾಗಾಣಿಕೆಯ ಸಮಯದಲ್ಲಿ ಮೇಣದ್ರವ್ಯದಿಂದ ಉಪಚರಿಸಿ ಹೆಚ್ಚು ಕಾಲ ಕೆಡದಂತೆ ಇರುವ ವಿಧಾನಗಳನ್ನು ಪರಿಶೀಲಿಸಲಾಗಿದೆ. ಮೇಣದ್ರವ್ಯವನ್ನು ತಯಾರಿಸುವ ಹಾಗೂ ಉಪಚರಿಸುವ ಯಾಂತ್ರಿಕ ಮಾದರಿಗಳನ್ನು ರಚಿಸಲಾಗಿದೆ. ಮೇಣದ್ರವ್ಯಕ್ಕೆ ಕೋರಿಕೆಯು ಬಂದಲ್ಲಿ ಸೂಕ್ತ ಬೆಲೆಗೆ ಅದನ್ನು ಒದಗಿಸಲಾಗುವುದು.

ಹಣ್ಣು ಮತ್ತು ತರಕಾರಿಗಳನ್ನು ಲಾಭದಾಯಕವಾಗಿ ಬಳಸಲು ಸುಲಭಮಾರ್ಗಗಳನ್ನು ನಿಯೋಜಿಸಲಾಗಿದೆ. ಮಾವಿನಹಣ್ಣು ಗೋದಿಹಿಟ್ಟಿನ ಮಿಶ್ರಪದರಗಳು, ಹಣ್ಣಿನ ತಿರುಳಿನ ಸಾರವಸ್ತುವನ್ನೊಳಗೊಂಡ ಮಕ್ಕಳ ಆಹಾರ, ಗೇರುಹಣ್ಣಿನ ಉತ್ಪನ್ನಗಳು, ಹಣ್ಣಿನ ರಸದ ಪುಡಿಗಳು— ಇವೇ ಮೊದಲಾದವುಗಳನ್ನು ಕೈಗಾರಿಕಾಮಟ್ಟದಲ್ಲಿ ಹೇಗೆ ತಯಾರಿಸಬಹುದು ಎಂಬುದಾಗಿ ಯಾಂತ್ರಿಕಪರಿಶೋಧನೆಗಳನ್ನು ನಡೆಸಿದ್ದಾರೆ. ಇವು ಶೀಘ್ರವಾಗಿ ಕೈಗಾರಿಕಾಪ್ರಮಾಣವನ್ನು ಮುಟ್ಟಬಹುದೆಂದು ನಿರೀಕ್ಷಿಸಲಾಗಿದೆ.

## ಆಹಾರಧಾನ್ಯಗಳು ಕೆಡದಂತೆ ಸಂಗ್ರಹಿಸಿಡುವುದು

ದೇಶದಲ್ಲಿ ಬೆಳೆಯಾಗುವ ಧಾನ್ಯಗಳಲ್ಲಿ ಶೇ. ೩.೫ ರಷ್ಟು ಈಗ ನಷ್ಟವಾಗುತ್ತಿದೆ. ಆಹಾರಧಾನ್ಯಗಳನ್ನು ಸುರಕ್ಷಿತವಾಗಿಡಲು ಎರಡು ದಾರಿಗಳುಂಟು : (೧) ಕೀಟಗಳಿದ್ದರೆ, ಅವುಗಳನ್ನು ನಿರ್ಮೂಲಮಾಡುವುದು, (೨) ಹೊಸದಾಗಿ ತುಂಬಿದ ಚೀಲಗಳಿಂದಾಗಲಿ ಪಕ್ಕದ ಉಗ್ರಾಣಗಳಿಂದಾಗಲಿ ಕೀಟಗಳು ಮತ್ತೆ ಪ್ರವೇಶಿಸದಂತೆ ತಡೆಗಟ್ಟುವುದು. ಮೊದಲನೆಯದು ಕೀಟಪೀಡೆಯ ನಿರ್ಮೂಲನೆಯಾದರೆ, ಎರಡನೆಯದು ನಿವಾರಣಾಕ್ರಮ ಎನ್ನಬಹುದು. ಈ ಎರಡೂ ಗುಣಗಳುಳ್ಳ ವಿಧಾನವೊಂದನ್ನು ಸಂಶೋಧನಾಲಯದಲ್ಲಿ ಕಂಡುಹಿಡಿಯಲಾಗಿದೆ. ಇದಕೆ 'ಡ್ಯೂರೊಫ್ಯೂಮ್' ವಿಧಾನ ಎಂದು ಹೆಸರು. ಈ ವಿಧಾನವನ್ನು ಕೆಲವರು ಆಹಾರಧಾನ್ಯ ದಾಸ್ತಾನುಮಾಡುವವರು ಆಗಲೆ ಅನುಸರಿಸುತ್ತಿದ್ದಾರೆ. ಇದಕ್ಕೆ ತರಬೇತಿ ಸಂಶೋಧನಾಲಯದಲ್ಲಿ ಕೊಡುವ ವ್ಯವಸ್ಥೆಯನ್ನೂ ಮಾಡಲಾಗಿದೆ.

### ಇತರ ಹಲವು ಮುಖ್ಯ ಸಂಶೋಧನೆಗಳು ಅಥವಾ ಉತ್ಪನ್ನಗಳು

ಅಗ್ಗದ ಬೆಲೆಯ ಮಾಲ್ಟ್ ಆಹಾರ, ಪುಷ್ಟಿಕರ ಸಂಮಿಶ್ರ ಆಹಾರ, ಇಡ್ಲಿ ಹಿಟ್ಟುಗಳು, ಮೀನಿನ ಹಿಟ್ಟು, ಬ್ರೆಡ್ ತಯಾರಿಕೆಯಲ್ಲಿ ಬೇಕಾಗುವ ಯೀಸ್ಟ್, ಬೆಳ್ಳುಳ್ಳಿಯ ಪುಡಿ, ಅರಿಸಿನಕ್ಕೆ ಬಣ್ಣ ಕಟ್ಟುವುದು, ಸುಲಭವಾಗಿ ಅರಗುವ ಸಸಾರಜನಕ ಆಹಾರಪದಾರ್ಥಗಳು, ಪಾನೀಯಗಳು, ಸಂಬಾರ ವಸ್ತುಗಳಿಂದ ಉತ್ಪನ್ನಗಳು, ಕುಸುಬಲಕ್ಕಿಯನ್ನು ಉತ್ತಮ ರೀತಿಯಲ್ಲಿ ಪಡೆಯಲು ಸುಧಾರಿಸಿದ ವಿಧಾನ, ಅಕ್ಕಿಯ ತೌಡಿನಿಂದ ಎಣ್ಣೆಯನ್ನು ಪಡೆಯುವ ಬಗೆ, ಆಹಾರ ವಸ್ತುಗಳನ್ನು ಪ್ಯಾಕ್ ಮಾಡಲು ಅನುಕೂಲವಾಗುವ ವಸ್ತುಗಳು, ಸಾಸಿವೆಪುಡಿ, ಬಾಳೆಯ ದಿಂಡಿನಿಂದ ಪಿಷ್ಟವಸ್ತುವನ್ನು ಪಡೆಯುವುದು, ಮರಗೆಣಸಿನ ಮ್ಯಾಕರೋನಿ, ಕಡಲೆಕಾಯಿ, ಹುಣಸೆಹಣ್ಣು, ಪರಂಗಿಹಣ್ಣು ಮೊದಲಾದವುಗಳನ್ನು ಲಾಭಕರವಾಗಿ, ಏಕೀಕೃತವಾಗಿ ಸಂಸ್ಕರಿಸುವುದು ಮತ್ತು ಅವುಗಳಿಂದ ಹಲವಾರು ವಸ್ತುಗಳನ್ನು ಪಡೆಯುವುದು- ಇವೇ ಮೊದಲಾದವುಗಳನ್ನು ಕುರಿತ ಉತ್ತಮ ಮಟ್ಟದ ಪರಿಶೋಧನೆಗಳು ನಡೆದಿವೆ.

### ಯಾಂತ್ರಿಕ ಜೋಡಣೆಗಳು

ಪ್ರಯೋಗಶಾಲೆಯಲ್ಲಿ ನಡೆಯುವ ಕೆಲವು ಒಂದು ಪರೀಕ್ಷಾರ್ಥಕ ಕ್ರಮ ಎನ್ನಬಹುದು. ಆದರೆ, ತಾಂತ್ರಿಕ ದೃಷ್ಟಿಯಿಂದ ಈ ಪ್ರಯೋಗವನ್ನು ಹೆಚ್ಚು ಪ್ರಮಾಣದಲ್ಲಿ ಕೈಗೊಳ್ಳಬಹುದೇ ಎನ್ನುವುದನ್ನು ತಿಳಿಯಲು ಯಾಂತ್ರಿಕ ಸಾಧನಗಳ ಮಾದರಿಗಳನ್ನು ರಚಿಸಿಕೊಳ್ಳಬೇಕಾಗುತ್ತದೆ. 'ಫುಡ್ ಇಂಜಿನಿಯರಿಂಗ್' ಒಂದು ವಿಶಿಷ್ಟರೀತಿಯ ಯಂತ್ರಜ್ಞಾನ, ಆಹಾರದ್ರವ್ಯಗಳನ್ನು ಸಾಂದ್ರೀಕರಿಸುವುದು, ಇಂಗಿಸುವುದು, ಚೆನ್ನಾಗಿ ಮಿಶ್ರಮಾಡುವುದು, ಶೈತ್ಯಕ್ಕೊಳಪಡಿಸುವುದು—ಮುಂತಾದ ವಿಧಾನಗಳಿಗಾಗಿ ಜಟಿಲವಾದ ಯಾಂತ್ರಿಕಜೋಡಣೆಗಳನ್ನು ಮಾಡಬೇಕಾಗುತ್ತದೆ. ಈ ಮಾರ್ಗದಲ್ಲಿ ಈಗಾಗಲೇ ಸಂಶೋಧನಾಲಯವು ಆಹಾರ ಕೈಗಾರಿಕೋದ್ಯಮಿಗಳಿಗೆ ಪರಿಣಾಮಕಾರಿಯಾಗಿ ನೆರವಾಗಿದೆ.

ಒಟ್ಟಿನಲ್ಲಿ ನಮ್ಮದೇಶದ ಆಹಾರವಿಜ್ಞಾನಿಗಳು ಯಶಸ್ವಿಯಾಗಿ ಮುಂದುವರಿಯುತ್ತಿದ್ದಾರೆ. ದೇಶದ ಸಾಮಾಜಿಕ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು, ಪ್ರಕೃತಿಸಂಪತ್ತಿಗೆ ಹೊಂದಿಸಿಕೊಂಡು ಪ್ರಯೋಗಫಲಿತಾಂಶಗಳನ್ನು ಪಡೆದಿದ್ದಾರೆ. ಸೈನಿಕರ ಆಹಾರದ ವಿಚಾರವಾಗಿಯೂ ಡಿಫೆನ್ಸ್ ಫುಡ್ ರಿಸರ್ಚ್ ಲ್ಯಾಬೋರೇಟರಿಯೊಂದು ಮೈಸೂರಿನಲ್ಲಿ ಕೆಲಸಮಾಡುತ್ತಿದೆ. ಎಂದಿಗಿಂತ ಇಂದು ನಮ್ಮ ದೇಶದಲ್ಲಿ ಆಹಾರವಿಜ್ಞಾನದ ಅರಿವು ಜನರಿಗೆ ಹೆಚ್ಚಾಗಿದೆ ಎಂದರೆ ತಪ್ಪಲ್ಲ. ಆದರೆ, ಆಹಾರವಿಜ್ಞಾನದ ಮುನ್ನಡೆಯು ತನ್ನ ಪ್ರಭಾವವನ್ನು ಬೀರಬೇಕಾದರೆ, ಪ್ರತಿಯೊಬ್ಬನಿಗೂ ತನ್ನ ಆಹಾರದ ವಿಷಯದಲ್ಲಿ ಆಸ್ಥೆ ಇರಬೇಕು, ಸ್ವಾಭಾವಿಕವಾಗಿ, ಅನೇಕರು ತಮ್ಮ ಊಟಕ್ರಮದಲ್ಲಿ ಶ್ರದ್ಧೆ ಇಟ್ಟುಕೊಂಡಿರುವುದಿಲ್ಲ. ಆ ಶ್ರದ್ಧೆ ಹುಟ್ಟಲು, ತರುವಾಯ ದೃಢಗೊಳ್ಳಲು ಆಹಾರವಿಜ್ಞಾನದ ಶಿಕ್ಷಣವಿರಬೇಕು. ಈ ಬಗೆಯ ಶಿಕ್ಷಣವ್ಯವಸ್ಥೆಯನ್ನು ಸರಕಾರ ಹಾಗೂ ಸಮಾಜಕಲ್ಯಾಣ ಸಂಸ್ಥೆಗಳು ಕೈಕೊಳ್ಳುತ್ತಿರುವುದು ಶುಭ ಸೂಚಕವಾಗಿದೆ.



## ನೆಲ – ಮುಗಿಲು

ಕಣಕಣದ ಗತಿ-ಮತಿಯ ಗುರುತಿಸು, ಆದರೀಗಲೆ
ಆದರ ಇತಿವೃತ್ತವನು ಬರೆಯದಿರು. ನೀನಾಗಿ
ಕೊರೆಯದಿರು ದಾರಿಯನು. ಬಯಲು ಬಿಡುಗಡೆ ನುಂಗಿ
ನೀರು ಹಿಡಿಯ, ವಿಶ್ವವೆಲ್ಲವು ತೆರೆದ ಬಾಗಿಲೆ.
ಹಾರಿ ಹಕ್ಕಿಯಾಗಲಿ, ತುತ್ತತುದಿಗಿದೆ ಚುಕ್ಕಿ
ಮೀರಿ ಹರಿಯಲಿ ದಡವನೆರಡೂ ಕಡೆಗೆ ಬಾಚಿ
ಬತ್ತಿತೋ? ಚಿಮ್ಮುವದು ಒರತೆ ನಾಲಗೆ ಚಾಚಿ!
ಆಕಾಶ ಕೈಹಿಡಿದು ಎತ್ತುವದು, ಮುತ್ತಿಕ್ಕಿ
ಭೂಮಿಗಿಳಿಸುವ,—ತೊಡೆಯಮೇಲಾಡುವದು ಮಗು.
ತಾಯ ಮೊಗ ಸೂರ್ಯಪಾನವು ಹೊರಳೆ ಹೊಂಬೆಳಗು
ಎಲ್ಲೆಡೆಗು ಏಕಕಾಲಕೆ ಬಹುದೆ ಮಳೆ? ಹರಗು
ಒಳಹೊರಗು ಸಿದ್ಧವಿರು. ಹೊಸನೀರು ನಿಚ್ಚೆರಗು
ಗುರುತ್ವಾಕರ್ಷಣ-ಕರುಣೆ-ಕೇಂದ್ರ ನೆಲದೊಡಲು
ಚಾನತೀಂದ್ರಿಯ ಸ್ಪರ್ಶ, ತುಂಬಿ ತೇಲಿವೆ ಮುಗಿಲು.

—ಚೆನ್ನವೀರ ಕಣವಿ

# ಗೌಡನ ಮನೆಯ ದೀಪಾವಳಿ



ಲೇಖಕಿ :

**ಕುಮಾರಿ ಯಮುನಾ ಶೇಣೈ**

ದೀಪಾವಳಿ ಬಂದಿತು ಎಂದಾಗ ಜನರಿಗೆ ಶ್ರೀ ಕೃಷ್ಣನ ಕಥೆಯೋ, ನರಕಾಸುರನ ಇತಿಹಾಸವೋ, ಬಲೀಂದ್ರನ ಚರಿತ್ರೆಯೋ ನೆನಪಾಗುವದು. ಎಲ್ಲ ಊರಿನಲ್ಲಿಯೂ ಇದು ಸಾಮಾನ್ಯವೇ! ಆದರೆ ಕೊಡ್ಲೂರಿನಲ್ಲಿ ಮಾತ್ರ ಈ ನೆನಪುಗಳೊಂದಿಗೆ ಗೌಡನ ಮನೆಯ ದೀಪಾವಳಿ ಕತೆಯೂ ಸೇರಿರುವದು.

ಕೊಡ್ಲೂರು ಸುಮಾರು ಎರಡು ನೂರು ಮನೆಗಳ ಹಳ್ಳಿ. ಸಿಂಗಗೌಡನೇ ಊರ ಹಿರಿಯ. ಕಮ್ಮಾರ, ಬಡಿಗ, ಅಗಸ, ಕೆಲಸಿ, ಉಪ್ಪಾರ, ಗಾಡೀಕಾರ, ಅಂಗಡಿಕಾರ, ಪೂಜಾರಿ, ಇವರನ್ನು ಬಿಟ್ಟರೆ, ರೂಪಾಯಿಗೆ ಹದಿನೈದಾಣೆ ವಸತಿ ಗೌಡರದು. ಹಾಲಕ್ಕಿ ಒಕ್ಕಲೆಂದು ಅವರ ಅಭಿಧಾನ. ಕಸಬು ಬೇಸಾಯ.

ಜಾತಿಗೆ ಜಾತಿಗೌಡನೂ ಸಮಾಜದ ಬದಲೈ ಪ್ರಧಾನಗೌಡನೂ ಅವನೇ ಆದರೂ ನಯ, ವಿನಯ, ನೀತಿ, ನಡಾವಳಿಗೆ ಮಾದರಿಯಾಗಿದ್ದನು. ಗುಣಗಳೇ ಅವನಿಗೆ ಈ ಹಿರಿತನ ಒದಗಿಸಿದ್ದವು.

ಅವನದು ಸಣ್ಣ ಸಂಸಾರ. ಮಾಟವಾದದ್ದು. ಅವ, ಅವನ ಸಹಧರ್ಮಿಣಿ ನಿಂಗಿ, ಮಗ ಮಾದ, ಇಷ್ಟೇ! ಮಾದನಿಗೆ ಹತ್ತು ವರುಷ. ಅವನ ಹಿಂದೆ ವಂಶದ ಬಳ್ಳಿ ಫಲಿಸಲಿಲ್ಲ. ನಿಂಗಿಯ ಒಡಲು ಅರಳಲಿಲ್ಲ. ಬೆಳೆದರಾಗುತ್ತಿತ್ತಲ್ಲ ಬಳಗ— ಎಂದು ಒಳಗೊಳಗೆ ಆಸೆ ಆಗುತ್ತಿದ್ದರೂ— ಸಿಂಗಗೌಡ ಹೊರಗೆ— "ಬೇಡಿಬಂದದ್ದೇ ಅಪ್ಪು" ಎಂದು ಹೇಳುತ್ತ ತೃಪ್ತನಾಗಿದ್ದ.

**ದೀಪಾವಳಿಯಂದೇ ತಂದೆಗೆ ಮೃತ್ಯುವನ್ನು ತರುವ ರೀತಿಯಲ್ಲಿ ಮಗಳ ಜನನವಾಯಿತು. ಅವಳನ್ನು ತೂರೆದು ಆ ಘಟನೆಯನ್ನು ಮರೆಯಬೇಕೆನ್ನುವಷ್ಟರಲ್ಲಿ ಅಂದು ನಡೆಯುವ ನೊಲದ ಬೇಟೆಯ ಕಾಲಕ್ಕೆ ಮಗನು ದುರ್ಘಟನೆಗೊಳಗಾಗಿ ಸಾವನ್ನಪ್ಪಿದ್ದ. ಗೌಡನ ಮಟ್ಟಿಗೆ ದೀಪಾವಳಿ ಕೆಟ್ಟ ಹೆಸರೇ ಪಡೆದಂತಾಗಿತ್ತು. ಆದರೆ ಮುಂದೊಂದು ದಿನ ದೀಪಾವಳಿಯಂದೇ ಅವನ ಜೀವವೂ ಉಳಿಯಿತು. ಮಗಳೂ ದೊರಕಿದಳು. ದೀಪಾವಳಿ ಪವಿತ್ರ ಹಬ್ಬವೆನಿಸಿತು. ಇದೊಂದು ಹೃದಯಂಗಮವಾದ ಕತೆ.**

ದೇವರ ಕೃಪೆ ಅವನಿಗಾಯಿತು. ನಿಂಗಿ ಅನಿರೀಕ್ಷಿತವಾಗಿ ಮೈತುಂಬಿದಳು. ಊರಿಗೂ ಅಚ್ಚರಿ. ಆದರೆ ಬೇಡಿದ್ದೇ ಸಾಧಿಸಿದ್ದರಿಂದ ಅದನ್ನೇ ಹಾರೈಸಿ ನಿಂತರು.

ನಿಂಗಿಗೆ ದಿನ ತುಂಬುವಷ್ಟಕ್ಕೆ ದೀಪಾವಳಿಯೂ ಬಂದಿತು— ಬಂದಿತೇನು? ಬಂದ ದೀಪಾವಳಿ ಸುಮ್ಮಗೆ ಬರಲಿಲ್ಲ. ಗೌಡನ ಮನೆ ತುಂಬಿಸಿತು. ನಿಂಗಿ ಅದೇ ದಿನ ಹೆಣ್ಣು ಹೆತ್ತಳು. ಸಿಂಗಗೌಡನಿಗೆ ಮುಗಿಲು ಕೈಗೆ ಬಂದಂತಾಯಿತು. "ಮಗಾ"* (ಹೆಣ್ಣು) ಹುಟ್ಟಿತೆಂದು ಊರಿಗೇ ಪಾಯಸದ ಸಮಾರಾಧನೆ ಉಣಿಸಿದ. ದೀಪಾವಳಿಗೂ ಪಾಯಸದ ದೀಪಾವಳಿ ಎಂದು ಹೆಸರಾಯಿತು.

ಮೂರನೆಯ ದಿನ ಹೊಲೆ ತೆಗೆಯಲೆಂದು (ಸೂತಕನಿವೃತ್ತಿ) ಸಂತನೀರು (ತೀರ್ಥ) ಬೇಡಲು ಪೂಜಾರಿಯಲ್ಲಿ ಹೋದಾಗ ಆ ಜೋಯಿಸ ಎಂದಿನದೋ ಸಿಟ್ಟನ್ನು ಅವನ ಮೇಲೆ ತೆಗೆದೇ ಬಿಟ್ಟ.



"ಗೌಡಾ! ಹುಡುಗೆ ಹುಟ್ಟಿದ್ದು ಪೂರ್ಣ ಅಮಾವಾಸ್ಯೆ. ಅದೊಂದೇ ಆಗಿದ್ದರೆ ಚಿಂತೆ ಇದ್ದಿಲ್ಲ. ಜೊತೆಗೆ ಅಭುಕ್ತ ಮೂಲವೂ ಸೇರಿದೆ. ಮಹಾದೋಷ, ದೃಷ್ಟಿಕ್ಷೇಪ ತಂದೆಗೆ ಸಾವು ತರುತ್ತದೆ. ಖಂಡಿತ ಕೂಡದು. ಶಿಸುವನ್ನು ತ್ಯಜಿಸಲೇಬೇಕು."

* ಗೌಡರಲ್ಲಿ ಮಗಳಿಗೆ "ಮಗಾ" ಎಂದೂ ಮಗನಿಗೆ "ಕೂಚಾ" ಎಂದೂ ಹೇಳುತ್ತಾರೆ. ಮಾತೃಪ್ರಧಾನವಂಶಿಕತೆಯೇ ಇದರ ಕಾರಣ. ಆದರೆ ಡಾ. ಉಮರ್ಜಿ ಅವರು ಕಂಡುಕೊಂಡಂತೆ ಇವರ ಮಾತಿನಲ್ಲಿ ಭಾಷೆಯ ಮೂಲ ಹೊಳಹು ಇರುವದರಿಂದ, ಈ ಶಬ್ದದಲ್ಲಿಯೂ ಭಾಷೆಯ ಪ್ರಾಕ್ ಸಂಕೇತವಿದೆ ಎಂದೆನಿಸಿ ಶಬ್ದ ಹಾಗೇ ಉಳಿಸಿದೆ.

ಕೇಳಿದ ಗೌಡ, " ಅಯ್ಯೋ ದೀಪಾವಳೀ ನನ್ನ ಮನೆ ತೊಳೆದೆಯಾ?" ಎಂದು ಭೂವಿಂ ಗೊರಗಿದ.

ಪ್ರಾಯಶಃ ದೀಪಾವಳಿಗೆ ಮೂಲಾನಕ್ಷತ್ರ ಬರುವದೇ ಇಲ್ಲ. ಜ್ಯೋತಿಷಶಾಸ್ತ್ರಕ್ಕೇ ಇದು ವಿರುದ್ಧ. ಬಲ್ಲವನೆಂಬ ಜೋಯಿಸ ಹೇಳಿದ. ಭಾವಿಕ ಗೌಡರೆಲ್ಲ ನಂಬಿದರು. ದೈವದಾಟ ವೆಂದು ಅಳುತ್ತಳುತ್ತ ಮೂರು ದಿನದ ಶಿಶು ವನ್ನು ತ್ಯಜಿಸಿದರು.

ತೆಂಕಣಕಡೆ ಗುಡ್ಡದ ಮೇಲೆ ಎರಡು ಮೈಲುಗಳಾಚೆ ಬೇಣಗದ್ದೆ ಎಂಬ ಕುಮರೀ ಪೊಲವೊಂದಿದೆ. ಅಲ್ಲಿ ಸಾಗುವಳಿ ಇಲ್ಲ. ದನ ಮೇಯಿಸಲು ಅಲ್ಲಿಡುತ್ತಾರೆ. ದನ ಮೇಯಿಸಿ ಹೊಟ್ಟೆಹೊರೆಯುವ ಸಂಣಿ, ಎಂಬ ಮುದುಕಿ ಅಲ್ಲಿ ವಾಸಿಸಿದ್ದಳು. ಮಕ್ಕಳು ಪಡೆಯದಿದ್ದ ಆಕೆಗಿದ್ದ ಮಕ್ಕಳ ಹಂಬಲ ಹೇಳಲಾಸಲ್ಲ. ಗೌಡನ ಮನೆಯ ರಾದ್ಧಾಂತ ಆಕೆಗೆ ಹೇಗೋ ತಿಳಿದು, ಓಡಿಬಂದು ಆಕೆ ಶಿಶುವನ್ನು ಬೇಡಿಪಡೆದಳು. ಕೊಡುವಾಗ ಆಕೆಗೆ ಕೂಡಿದ ಜನ ಹೆದರಿಸಿದ್ದು ಲೆಕ್ಕ ವಿಲ್ಲ. "ನೋಡು ಮತ್ತೆ! ಈ ಬಾಲೆ ಸಿಂಗ ಗೌಡನ ದೃಷ್ಟಿಗೆ ಬಿದ್ದರೆ ನಿಮ್ಮ ಇಬ್ಬರ ಆಯುಸ್ಸೂ ಮುಗಿದೀತು."



ಒಪ್ಪಿ, ಆಣೆಮಾಡಿ ಆಕೆ ದೂರವಾದಳು. ಇದೆಲ್ಲ ಮುಗಿಯುವ ತನಕವೂ ಸಿಂಗಗೌಡ ಸ್ಮೃತಿಯಲ್ಲೇ ಇರಲಿಲ್ಲ. ಕೆಲದಿನಬಳಿಕ ಸುಧಾರಿಸಿದನಾದರೂ ಅತ್ತುಕರೆದು ದಿನ ದೂಡುತ್ತಲಿದ್ದ.

ವರುಷವರುಷವೂ ದೀಪಾವಳಿ ಬರುತ್ತಿತ್ತು, ಹೋಗುತ್ತಿತ್ತು. ಆದರೆ ಅಲ್ಲಿಂದ ಏಳುವರು ಷದ ನಂತರ ಬಂದ ದೀಪಾವಳಿ ಮಾತ್ರ ಸಿಂಗಗೌಡನಿಗೆ ಮತ್ತೊಂದು ಉಡುಗೊರೆ ಯನ್ನು ತಂದಿತು. ಉಡುಗೊರೆಯೇನು? ಸಾಯುತಿದ್ದವನಿಗೆ ಮತ್ತೊಂದು ಬಲವಾದ ಪೆಟ್ಟುಕೊಟ್ಟು ನೆಲಕ್ಕೇ ಉರುಳಿಸಿತು.

ಹಾಲಕ್ಕಿ ಒಕ್ಕಲರಲ್ಲಿ ದೀಪಾವಳಿ ದಿನದ ವಿಚಿತ್ರ ಪ್ರಭಾತವೊಂದುಂಟು. ಗಂಡಸರೆಲ್ಲ ಹರೆಗೆದ್ದು ಎಣ್ಣೆಪೂಸಿ ಎರೆದುಕೊಳ್ಳುತ್ತಾರೆ. ನಂತರ ಬಲೆ ತಕ್ಕೊಂಡು ಮೊಲದ ಬೇಟೆ ಯಾಡಲು ಹೋಗುತ್ತಾರೆ. ಎಲ್ಲ ಗಂಡಸರೂ ಸಾಮಾನ್ಯವಾಗಿ ಹೋಗುತ್ತಾರಾದರೂ ಮನೆ-ಗೊಬ್ಬನಾದರೂ ಹೋಗಲೇ ಬೇಕೆಂದು ಸಮಾಜದ ಕಟ್ಟಳೆ. ಹೋಗಿ ಕಾಡೆಬ್ಬಿಸಿ ಮೊಲ ಓಡಿಸಿತಂದು ಬಲೆಯಲ್ಲಿ ಹಿಡಿಯು ತ್ತಾರೆ. ಬರುವಾಗ ಮೊಲದ ರಕ್ತದ ತಿಲಕ ವಿಟ್ಟುಕೊಂಡು ಮನೆಗೆ ಬರುತ್ತಾರೆ. ನಂತ ರವೇ ಬಾಗಿಲಲ್ಲಿ ಆರತಿ, ಬೆಲ್ಲದವಲಕ್ಕಿ ತಿನ್ನುವರು. ಇದೇ ಅವರ ಹಬ್ಬದ ಮುಖ್ಯ ಭಾಗ. ಊಟದ ಜೊತೆ ಮೊಲದ ಮಾಂಸ ತಿಂದರೆ ಅವರ ಹಬ್ಬ ಮುಗಿಯಿತು. ಮಾಂಸ ದೂಟ ಬಹುಹಿಂದೆ ಸಾಮೂಹಿಕವಾಗಿತ್ತಂತೆ. ಈಗ ಮನೆಮನೆಗೆ ಅಡುತ್ತಾರೆ. ಇದೊಂದು ಸಂಪ್ರದಾಯ.

ಹಬ್ಬದ ಹೊತ್ತಿನಲ್ಲಿ ಜೀವಹತ್ಯೆ ಹೇಗೆ? ಎನ್ನುವವರುಂಟು. ಬಹುಶಃ ದುಷ್ಟ ರಾಕ್ಷ ಸನ ವಧೆಸಂಕೇತವಾಗಿ ಕಾಡುಮೃಗ ಕೊಲ್ಲು ತ್ತಾರಾಗಿರಬೇಕು. ಮೊಲ ಸಾಧುಪ್ರಾಣಿ, ಅದರ ಬಲಿ ಯಾಕೆ?

ಒಕ್ಕಲು ಜನರಲ್ಲಿ ಬಳ್ಳಿಗಳಿವೆ. ಬಳ್ಳಿ ಎಂದರೆ ಗೋತ್ರವೆಂದಂತೆ ವಂಶಾನುಕ್ರಮದ ಸೂಚಿ. ಕಡದಬಳ್ಳಿ, ಜಿಂಕೆಬಳ್ಳಿ, ಹಂದಿ ಬಳ್ಳಿ ಇತ್ಯಾದಿ ಪ್ರಭೇದಗಳುಂಟು. ಆ ಅನನ್ಯ ಪಶುಗಳನ್ನು ಅವರವರು ವಂಶಮೂಲ ಪುರುಷರಷ್ಟೇ ಭಕ್ತಿಯಿಂದ ಕಾಣುತ್ತಾರೆ. ಅವನ್ನು ಪೀಡಿಸುವದಿಲ್ಲ. ಯಾರೊಬ್ಬ ಮಾಂಸಭಕ್ಷಕ ಕೊಂದರೂ ನೋಡದೆ ಕಣ್ಣು ಮುಚ್ಚಿಕೊಳ್ಳುತ್ತಾರೆ. ಅದರಿಂದ ಸಾಮೂ ಹಿಕ ಊಟಕ್ಕೆ ಅನುಕೂಲವಾಗಲೆಂದು ಯಾರ ಬಳ್ಳಿಗೂ ಸೇರದ ಮೊಲವನ್ನು ಆರಿಸಿ ದರು. ರಕ್ತದ ತಿಲಕ ಕೃಷ್ಣನು ಹಚ್ಚಿಕೊಂಡಿ ದ್ದನೆಂಬುದರ ನೆನಪು. ಈ ಆಚರಣೆ ಅವರಲ್ಲಿ ಪ್ರತಿ ವರುಷವೂ ನಡೆಯುತ್ತಲೇ ಇದೆ.

ಆ ದೀಪಾವಳಿ ದಿನ ಗೌಡರೆಲ್ಲರೂ ಮೊಲದ ಬೇಟೆಗೆ ಹೊರಟರು. ಸಿಂಗಗೌಡನ ಮಗ ಮಾದನೇ ಮುಂದಾಳು. ಹೊಸ ರಕ್ತದ ತರುಣ, ಹುಮ್ಮಸ್ಸಿನಿಂದ ನಡೆದಿದ್ದ. ಹಿಂದಿ ನಿಂದ ಎಲ್ಲರೂ ಬೆಟ್ಟ ಸೇರಿದರು. ಬಲೆ ಒಡ್ಡುವದು ಆರಂಭವಾಯಿತು.

ಆದರೆ, ಬೆಟ್ಟದ ಹಾದಿಯಲ್ಲಿ ಮೊದಲೇ ಒಂದು ಅಕೃತ್ಯ ನಡೆದಿತ್ತು. ಮುನ್ನಾ ದಿನ ಯಾರೋ ಮಾಂಸಕ್ಕಾಸೆಪಟ್ಟವರು, ಹಂದಿ ಗಾಗಿ ಕೋವಿತೋಣಿಸಿ ಇಟ್ಟಿದ್ದರು.

ತೋಣಿಸುವದೆಂದರೆ, ಕೋವಿಯನ್ನು ಗುಂಡು ಹಾರುವಷ್ಟು ಸಿದ್ಧಪಡಿಸಿ, ಕುದುರೆ ಏರಿಸಿ, ಮೂರು ಗೂಟದ ಮೇಲೆ ಕಟ್ಟು

ತ್ತಾರೆ. ಜಾಪಿಗೆ ಬಳ್ಳಿ ಕಟ್ಟಿ ಅದನ್ನು ಮೃಗ ಬರುವ ಹಾದಿಯಲ್ಲಿ ಹಾಯಿಸುತ್ತಾರೆ. ರಾತ್ರಿ ಸಮಯ ನಿರ್ಭೀತಿಯಿಂದ ಬರುವ ಮೃಗಕ್ಕೆ ಆ ಬಳ್ಳಿ ಸೋಕಿದ ಕ್ಷಣ ಗುಂಡು ಹಾರುತ್ತದೆ. ಕಟ್ಟಿದವರ ಕೌಶಲ್ಯ ಗುರಿತಪ್ಪದಿರುವವರಲ್ಲಿದೆ. ಈ ರೀತಿ ಗಂಡಾಂತರದ್ದು. ಕಾನೂನಿನಿಂದ ಪ್ರತಿಬಂಧಿತವೂ ಹೌದು. ಆದರೆ ದೂರ ಕೊಂಪೆಗಳಲ್ಲಿ ತಪ್ಪಿ ಎಂದಾದರೂ ಈ ಪ್ರಯೋಗ ನಡೆಯುತ್ತದೆ. ಅಂದೂ ಹಾಗೇ ಆಗಿತ್ತು. ಹಂದಿ ಮಾತ್ರ ಆ ಹಾದಿಗೆ ಬಂದಿರಲಿಲ್ಲ. ಗುಂಡೂಹಾರಿರಲಿಲ್ಲ. ಬೆಳಗ್ಗೆ ಬಿಚ್ಚಿಕೊಂಡು ಹೋಗುವವರೂ ಬಂದಿರಲಿಲ್ಲ.

ಬೆಟ್ಟ ಸೇರುವ ಗುಂಪಿಗೆ ಮುಂದಾಗಿದ್ದ ಮಾದನ ಕಾಲಿಗೆ ಬಳ್ಳಿ ಸೋಕಿತು. ಗುಂಡು ಹಾರಿತು. ಬಲ ತೊಡೆ ಸೀಳಿ ಪಾರುಗಂಡಿತು. 'ಅಯ್ಯೋ' ಎಂದವನು ಭೂಮಿಗೊರಗಿದ.

ಹೌಹಾರಿದ ಜನಕ್ಕೆ ಈ ಅಕೃತ್ಯ ಕಂಡಿತು. ಕಾರ್ಯ ಕೈಮೀರಿತ್ತು. ರಕ್ತದ ಧಾರೆ ನಿಲ್ಲಿಸುವದೂ ಅಸಾಧ್ಯವಾಗಿತ್ತು. ಆದರೂ ತಿಳಿದ ಸೊಪ್ಪು ಜಪ್ಪಿ ತುಂಬಿದರು. ಸೋತಾಗ ರಕ್ತದಲ್ಲಿ ಮಿಂದ ಮಾದನನ್ನು ಹೊತ್ತುಕೊಂಡು ಮನೆಗೆ ಬಂದರು.

ನಿತ್ರಾಣನಾಗುತ್ತ ನಡೆದ ಮಾದ ಸಂಜೆ ಹೊತ್ತಿನಲ್ಲಿ ಕಣ್ಣು ಮುಚ್ಚಿದ. ಸಿಂಗಗೌಡ ಕೊರಡಾದ, ಯಾರೇನು ಮಾಡಬಲ್ಲರು? ಅವನ ಅವಸ್ಥೆ ಶೋಚನೀಯವಾಗಿತ್ತು.

ಮೊದಲೊಮ್ಮೆ ಮನೆ ತೊಳೆದೀತೆಂದೆನಿಸಿಕೊಂಡ ದೀಪಾವಳಿ ಇಂದು ಮನೆಯನ್ನೇ ನೆಕ್ಕಿತು. ಊರಿಗೇ ಸೂತಕದ ದೀಪಾವಳಿಯಾಯಿತು.

೨

ಕೂಸನ್ನು ಎತ್ತಿಕೊಂಡು ಸಂಣಿ ನೆಟ್ಟಗೆ ಬೇಣಗದ್ದೆ ಸೇರಿದ್ದಳು. ತನ್ನ ಗುಡಿಸಲಲ್ಲಿ ಏನೆಲ್ಲ ಮಾರ್ಪಾಟು ಮಾಡಿ ಕೂಸಿಗೆ ಅನುಕೂಲಪಡಿಸಿದಳು. ಭಿಕ್ಕಿ ಎಂದು ಹೆಸರನ್ನಿಟ್ಟಳು. ಮನೆಯಲ್ಲಿದ್ದ ಹಸುವಿನ ಹಾಲು ರಾಗಿ ಅಂಬಲಿಗಳು ಜಡವಾಗುವದು ತಿಳಿದು ಶಿಸುವಿಗಾಗಿ ಒಂದು ಕುರಿಯನ್ನು ತಂದಳು. ಪಡಬೇಕಾದ ಕಷ್ಟಗಳೆಲ್ಲವನ್ನು ಪಟ್ಟು, ಜೀವ ಕಾದಳು. ಕಾಪಾಡಿದಳು. ಬೆಳೆಸಿದಳು.

ಈಗ ಆ ಮಗು ಬೆಳೆದಿದ್ದಾಳೆ. ದನದ ಕಾವಲಿಗೆ ಸಾಕುತಾಯಿಗೆ ನೆರವಾಗುತ್ತಾಳೆ. ಒಂದು ಕುರಿಯಿಂದಾಗಿ ಬೆಳೆದ ಕುರಿಯ ಹಿಂಡೂದೊಡ್ಡದಾಗಿದೆ. ಅದನ್ನು ಕಾಯುವದು ಭಿಕ್ಕಿಯ ಪಾಲಿಗೇ! ಆದರೆ ಬೇಣಗದ್ದೆ ಗಡಿ ದಾಟಿಲ್ಲ. ಅಲ್ಲಿ ನೆಲಸಿದ್ದ ಮತ್ತೆರಡು ಮನೆಯವರ ದೃಷ್ಟಿಗೆ ಬೀಳುವದು ಸಹ ಅಪರೂಪ. ಕೆಳಗೊಂದು ಊರು ಇದೆ ಎಂಬುದನ್ನು ಆಕೆ ಅರಿಯಳು.

ಕೆಳಗೆ ಊರಲ್ಲಿ ಆಗಾಗ ಜಾತ್ರೆಗಳಾಗುತ್ತವೆ. ಬಯಲಾಟಗಳಾಗುತ್ತವೆ. ಅವುಗಳ ರಸಭರಿತ ವರ್ಣನೆಗಳು ಆಕೆಯ ಕಿವಿಗೆ ಬೀಳುತ್ತವೆ. ವಾದ್ಯವೂ ಕೇಳುತ್ತದೆ. ಆಗೆಲ್ಲ ಆಕೆಗೆ ತಾನೂ ನೋಡಬಾರದೇಕೆ? ಎಂದು ಆಸೆಯಾಗುತ್ತದೆ. ತಾಯಿ ಕೇಳಿದರೆ ಏನಾದರೂ ಹೇಳಿ ಹಾರಿಸಿಬಿಡುತ್ತಾಳೆ. ಭಿಕ್ಕಿ ಸಿಂಗಗೌಡನ ಕಣ್ಣಿಗೆ ಬಿದ್ದರೆ? ಎಂದು ಸಂಣಿಗೆ ದಿಗಿಲು, ಇದು ತಾಯಿಯ ನೈಷ್ಠುರ್ಯ, ಎಂದು ಭಿಕ್ಕಿಗೆ ಎನಿಸುತ್ತದೆ.

ಒಮ್ಮೊಮ್ಮೆ ಮಗಳ ಒತ್ತಾಯ, ಹಟ ಮೀರಿದಾಗ, ಸಂಣಿಗೂ ನಿರುಪಾಯವಾಗುತ್ತಿತ್ತು. ಅದಕ್ಕೊಂದು ಉಪಾಯವನ್ನಾಕೆ ಹುಡುಕಿದಳು. ಮಗಳಿಗೆ ಹೇಳಿದಳು.

"ಮಗಳೇ! ನಿನ್ನ ಆಸೆ ಆಕಾಂಕ್ಷೆ ನಾನೂ ಬಲ್ಲೆ. ನೀನು ಮೈಚಳಿಬಿಟ್ಟು ತಿರುಗಿದ್ದು ನೋಡುವದೇ ನನ್ನ ಕಂಣಹಬ್ಬ. ಆದರೆ ಏನು ಮಾಡಲಿ? ಕೆಳಗಿನ ಊರಲ್ಲಿ ಸಿಂಗಗೌಡನೆಂಬುವನಿದ್ದಾನೆ. ಅವನಿಗೂ ನಮಗೂ ಬದ್ಧವೈರ. ಅವ ನಿನ್ನನ್ನು ಸಜೀವ ಕೊಲ್ಲಬೇಕೆಂದು ಹೊಂಚಿದ್ದಾನೆ. ಕಣ್ಣಿಗೆ ಬಿದ್ದರೆ ಕತ್ತರಿಸದೆ ಬಿಡನು. ಹೆಂಣು ಹೆಂಗಸು ಏನು ಮಾಡಬಲ್ಲೆ!" ಎಂದೆಲ್ಲ ಹೇಳಿಬಿಂಬಿಸಿ ಗೌಡನ ಭೀತಿಯನ್ನು ಬಾಲಹೃದಯದಲ್ಲಿ ಹುಟ್ಟಿಸಿದಳು. ಬೆಳಸಿದಳು.



ಒಂದು ದಿನ ರಾತ್ರೆ ಬಯಲಾಟಕ್ಕೆ ಮಗಳನ್ನು ಕರೆದುಕೊಂಡು ಹೋಗಿ ದೂರದಿಂದ ಗೌಡನನ್ನು ತೋರಿಸಿ, ಇವನೇ "ನಿನ್ನ ವೈರಿ; ಇವನ ಕಣ್ಣಿಗೆ ಮಾತ್ರ ಎಂದೂ ಬೀಳಬೇಡ. ಗುರುತು ನೆನಪಿರಲಿ!" ಎಂದು ಹೇಳಿ ತನ್ನ ಕರ್ತವ್ಯ ಪೂರೈಸಿದಳು.

ಸಂಣಿ ಈಗ ಮುದುಕಿಯಾಗಿದ್ದಾಳೆ. ತನ್ನ ಪಾಡು ಮುಗಿಯಬಂದಿದೆಯೆಂದು ಕನವರಿಸತೊಡಗಿದ್ದಾಳೆ. ಅಂಥ ಸಮಯ ಭಿಕ್ಕಿ ಒಂಟಿಯಾಗಬಾರದೆಂದು, ತನ್ನಣ್ಣನ ಮಗ ಬೀರನನ್ನು ಕರೆಸಿಕೊಂಡಿದ್ದಾಳೆ. ಅವನೂ ತಾಯ್ತಂದೆ ಕಳಕೊಂಡ ಅನಾಥ, ಯಾರಲ್ಲಿಯೋ ದನಕಾವಲಿಗಿದ್ದ. ಅಲ್ಲಿಂದ ಬಿಡಿಸಿತಂದು ತನ್ನಲ್ಲಿರಿಸಿಕೊಂಡಿದ್ದಾಳೆ. ಭಿಕ್ಕಿಗೆ ಜೊತೆಸಿಕ್ಕಿದೆ. ಹೋದಲ್ಲಿ ಬಂದಲ್ಲಿ ಜೊತೆಯಾಗಿನಿಂತಿದ್ದಾರೆ. ಅದು ಕಂಡ ಸಂಣಿಯ ಕಂಣು ಬಾಷ್ಪತುಂಬುತ್ತವೆ.

ಸಂಣಿಯ ಅನಿಸಿಕೆ ನಿಜವಾಗಲು ತಡವಾಗಲಿಲ್ಲ. ಒಂದಿರುಳು ಮಲಗಿದಲ್ಲಿಯೇ ಅಸುನೀಗಿದಳು. ಬೇಣಗದ್ದೆಯ ಬಹು ದಿವಸದ ಸಂಗಾತಿ ಆ ಮಣ್ಣಿನಲ್ಲಿ ಸೇರಿ ಒಂದಾದಳು. ಮನೆ ತರುಣರ ವಶಕ್ಕೆ ಬಂದರೂ ವ್ಯವಸಾಯ ಸರಿಯಾಗಿ ನಡೆಯಿತು. ಭವಿಷ್ಯಜೀವನದ ಹೊಂಗನಸು ಮೆಲಕುತ್ತ ಸಾಗಿದ್ದರವರು.

ಮತ್ತೆ ವರುಷದ ದೀಪಾವಳಿ ಬಂದಿತು. ಮುನ್ನಾದಿನ ಹಬ್ಬಕ್ಕೆ ತರಬೇಕಾದ ಸಾಮಾನು ಎಣಿಕೆ ಹಾಕುತ್ತಿದ್ದಾಗ ಬೀರನಿಗೊಂದು ಯೋಚನೆ ಬಂದಿತು. ಹಬ್ಬದ ದಿನ ಉಭಯತರೂ ಕೆಳಊರಿಗೆ ಹೋಗಿ ಸರಕುಕೊಂಡು ಬರಬೇಕೆಂದು ಅವನಾಸೆಯಾಗಿತ್ತು. ಹೇಳಿದಾಗ ಭಿಕ್ಕಿ ಸಮ್ಮತಿಸಲಿಲ್ಲ. ಖಂಡಿತ ಕೂಡದೆಂದಳು. ಯಾಕೆ ಹಾಗೆಂದು ಮಾತ್ರ ಹೇಳಲಿಲ್ಲ. ಬೀರನಿಗೆ ವಿಚಿತ್ರವೆನಿಸಿತು. ಅವ ಬಿಡಲಿಲ್ಲ. ಕಡೆಗೂ ಆಕೆ ಎಂದಳು. "ಅದೊಂದು ಗುಟ್ಟಿನ ಸುದ್ದಿ. ಅಲ್ಲಿ ಸಿಂಗಗೌಡನೆಂಬವನುಂಟು. ಅವ ನಮ್ಮ ವೈರಿ, ಕಂಡರೆ ನನ್ನನ್ನು ಕೊಚ್ಚಿಹಾಕಲು ಹೊಂಚಿದ್ದಾನೆ. ಅದಕ್ಕಾಗಿ ನಾನೆಂದೂ ಕೆಳಊರಿಗೆಹೋಗಿಲ್ಲ. ಹೋಗುವದಿಲ್ಲ."

ಬೀರ ಸಿಂಗಗೌಡನನ್ನು ಬಲ್ಲವನಾದರೂ ಈ ವಾರ್ತೆ ಅವನಿಗೆ ಹೊಸದು. ರೇಗಿತು ಮುದುಕನಿಗೆ ಏನು ಕಾಲ ಬಂದಿದೆ? ಎಂದುಕೊಂಡ. ಮತ್ತು "ನಾಳೆಗೆ ಆ ಭಯ ತೀರಿದರೆ ನಾನೆಂದದ್ದಕ್ಕೆ ಒಪ್ಪಿಗೆಯಷ್ಟೆ?" ಎಂದ; ಭಿಕ್ಕಿ "ಹೂಂ" ಎಂದಳು.

ಇರುಳು ಕಳೆದಿತು. ನಸುಕಿನಲ್ಲಿದ್ದಾಗ ಬೀರ ಮನೆಯಲ್ಲಿ ಕಾಣಲಿಲ್ಲ. ಭಿಕ್ಕಿಗೆ ನಿನ್ನೆಯ ಸಂವಾದ ನೆನಪಾಗಿ ಸಂಶಯ ಬಂತು. ದುಷ್ಟ ಆಭಾಸ ಕಣ್ಣ ಮುಂದೆ ಸುಳಿದಂತಾಯಿತು. ಅಯ್ಯೋ? ಹಾಗಿರಬಹುದೇ! ಪಾಪ.

ತನಗೇನೊ ಸಿಂಗಗೌಡನ ಭೀತಿ ಕಾಣು ವದು ನಿಜ. ಆದರೆ ಇಂದಿಗೂ ಅದು ಸಜೀವ ವಾಗಿದ್ದಿರಬಹುದೇ ಅವನು ಹಾಗೇ ಹೊಂಚುತ್ತಿದ್ದರೆ, ಅನುಕೂಲವಿದ್ದ ಅವನು ಈ ನಿರ್ಜನ ಜಾಗೆಗೆ ಬಂದು ತನ್ನಾಸೆ ತೀರಿಸ ಬರುತ್ತಿದ್ದಿಲ್ಲವೇ? ಅದು ಭ್ರಮೆಯೇಕಿರ ಬಾರದು? ಏನೇ ಇದ್ದರೂ ಮೋಸದಿಂದ ಎದುರಿಸುವದು ನ್ಯಾಯವೇ? ಬೀರ ಆ ಹಾದಿಗೆ ಹೋಗದಿರಲಿ ದೇವಾ! ಪರರ ಕೆಡಕನ್ನೆಸಗಿ ಬಾಳುವವರುಂಟೇ? ಹೀಗೆ ಏನೆಲ್ಲ ನೆನೆದಳು. ಯಾವದೂ ಖಂಡಿತವಿಲ್ಲ.

ಕಡೆಗೂ ಒಂದು ನಿರ್ಣಯಕ್ಕೆ ಬಂದಳೇನೋ? ದನ ಬೈಲಿನಲ್ಲಿ ಮೇಯಬಿಟ್ಟು ತಾನೊಂದು ಕಂಬಳಿ ಎಳೆದುಕೊಂಡು ಕುರಿಗಳೊಡನೆ ಬೆಟ್ಟದಲ್ಲಿ ಮರೆಯಾದಳು.

ಅದು ದೀಪಾವಳಿಯ ಬೆಳಗು, ವಾಡಿಕೆ ಯಂತೆ ಗೌಡರೆಲ್ಲ ಮೊಲದ ಬೇಟೆಗೆ ಸಿದ್ಧ ರಾಗಿದ್ದರು. ಕೆಲವರ್ಷದಿಂದ ಮನೆಯಿಂದ ಹೊರಗೇ ಬೀಳದ ಸಿಂಗಗೌಡ ಯಾರೋ ಕರೆದು ಒತ್ತಾಯ ಮಾಡಿದರೆಂದು ಹೊರಟು ನಿಂತಿದ್ದ. ಮುದುಕ ಜೀವ ಕಾಲೆತ್ತಿ ಮುಂದಿಡುವಾಗ ಕಂಪಿಸುತ್ತಿದ್ದವು. ಗೌಡರು ಜೊತೆಗೆ ಬಂದದ್ದೇ ಒಂದು ಸಂಭ್ರಮವಾದ, ಉಳಿದವರು ಕೈಹಿಡಿದು ಕರಕೊಂಡು ಹೋದರು. ಬೆಟ್ಟದಡಿಯ ಕಲ್ಲೊಂದರಲ್ಲಿ ಕೂಡ್ರಿಸಿದರು. ಅಲ್ಲಿಂದಲೇ ಗೂಟು ನೆಟ್ಟು ಬಲೆ ಒಡ್ಡಿದರು.

ಮೊಲದ ಬೇಟೆಗೆ ಅಂಚಿಗುಂಟ ಬಲಿ ಒಡ್ಡುತ್ತಾರೆ. ಕೆಲವರು ನಿಶ್ಯಬ್ದರಾಗಿ ಒಳ ಸೇರಿ, ಅಲ್ಲಿಂದ ಕೂಗೆಬ್ಬಿಸಿ, ಪೊದೆಗಳಲ್ಲಿ ಕಲ್ಲುತೂರಿ ಮೊಲ ಎಬ್ಬಿಸುತ್ತಾರೆ. ಕೆಳ ಮುಖವಾಗಿ ಓಡಿಬಂದ ಮೊಲಗಳು ಬಲೆ ಯಲ್ಲಿ ಸಿಕ್ಕುಬೀಳುತ್ತವೆ. ಅಡ್ಡಹಾದಿಗಳರು ವಲ್ಲಿ ಒಬ್ಬೊಬ್ಬರು ಕಾವಲು ನಿಂತಿರುತ್ತಾರೆ.

ಹಾಗೇ ವ್ಯವಸ್ಥೆ ಮಾಡಿ ಮಧ್ಯದಿಂದ ಕೂಗುವದು ಆರಂಭವಾಗಿತ್ತು. ಅದೇ ಸಮಯ ಸಿಂಗಗೌಡನಿದ್ದ ಕಲ್ಲಿನ ಸುತ್ತ ಕುರಿಯ ಹಿಂಡೊಂದು ಬಂದಿತು. ಗದ್ದಲ ಹಾಕುತ್ತಸುತ್ತಲ ಪೊದೆಗಳ ಸೊಪ್ಪು ಮೇಯ ಹತ್ತಿತು. ಗೌಡನಿಗೆ ಇದೇನೆಂದು ರೇಗಿತು.

"ಯಾರವಯ್ಯಾ? ಈ ಕುರಿಗಳು. ಕಾವ ಲಿಲ್ಲದೆ ಹೀಗೆ ಬಿಟ್ಟವರುಂಟೇ? ಅಥವಾ ಅವುಗಳ ಆಯುಷ್ಯಮುಗಿದಿದೆಯೇ?"

ಮಾತು ಕೇಳದಂತೆ ಬಳಿಯ ಪೊದೆ ಯಿಂದ ಒಂದು ಕುರಿ "ಮೇ" ಎಂದು ಕೂಗಿತು. ಸುತ್ತಲೂ ಬೀರಿನಿಂತ ಹಾರುವ ಕುರಿಗಳೆಲ್ಲ ಪೊದೆಯೆಡೆ ಗುಂಪಾದವು. ಇದು ಕಂಡ ಗೌಡನಿಗೆ ಮೋಜೆನಿಸಿತು. "ಕುರಿ ಗಳೇ ನಿಯಂತ್ರಿಸುವ ಈ ಹಿಂಡೇ ಹೊಸ ಬಗೆಯಲ್ಲ! ಕಲಿಕಾಲ, ಮತ್ತೇನು?" ಎಂದನು.

ಪೊದೆಯಲ್ಲಿದ್ದ ಕುರಿ-ಕಂಬಳಿಹೊತ್ತ ಭಿಕ್ಕಿಯಾಗಿದ್ದಳು. ಗೌಡನ ಕಣ್ಣಿಗೆ ಬೀಳ ಕೂಡದೆಂದು ಕರಿಗಂಬಳಿ ಹೊತ್ತು ಅವಳೂ ಒಂದು ಕುರಿಯಾಗಿದ್ದಳು. ಪೊದೆ ಹೊಕ್ಕಿ ದ್ದಳು. ಅವಶ್ಯವೆಂದಾಗ, ಕುರಿಕರೆಯಲು ಅವುಗಳಂತೆಯೇ ಕೂಗುತ್ತಿದ್ದಳು.

ಬೆಟ್ಟದಲ್ಲಿ ಮೇಲೆ ಬೇಟೆಗಾರರ ಆರ್ಭಟ ಹೆಚ್ಚಿತು.



ದೂರದಿಂದ ಗಂಡಸೊಬ್ಬ ಓಡಿಬರುತ್ತಿದ್ದ. ಅವನ ಕೈಯಲ್ಲಿ ಮಸೆದ ಭರ್ಜಿ ಇತ್ತು. ಅದರ ಅಲಗು ಸೂರ್ಯಪ್ರಕಾಶದಲ್ಲಿ ಮಿಂಚು ತ್ತಿತ್ತು.

ಅವ ಬೀರನಾಗಿದ್ದ. ಪೊದೆಯಿಂದ ಕಂಡ ಭಿಕ್ಕಿಗೆ ಅರ್ಥವಾಯಿತು. ಶಂಕೆ ನಿಜ ರೂಪ ಧರಿಸಿ ನಿಂತಿತ್ತು. ಅವಳ ಹೆಂಡೆದೆ ನಡು ಗಿತು. ಅಯ್ಯೋ! ಎಂತಹ ಕೀಳು ಮನುಷ್ಯ ನಿವ! ರಾಕ್ಷಸ! ಮನಹೇಸಿತು.

ಆದರೆ, ಮನದಾಸೆಯ ಹುಚ್ಚಿಗೆ ಗೌಡನ ಬಲಿಯಾಕೆ? ಕೂಡದು!! ಓಡುತ್ತ ಬಂದ ಬೀರನ ಭರ್ಜಿ ಹಿಂದಿನಿಂದ ಗೌಡನ ಬೆನ್ನಿಗೆ ಗುರಿಯಿಟ್ಟು ತೂರಿತು.

ಇನ್ನೇನು ನಿಮಿಷಮಾತ್ರದಲ್ಲಿ ನಿರಪರಾಧಿ ಗೌಡನನ್ನು ಸೀಳುತ್ತದೆ.

ಕಂಬಳಿ ಹೊತ್ತ: ಕುರಿ ಪೊದೆ ಬಿಟ್ಟಿತು. ಕಂಬಳಿ ಮುದ್ದೆಯಾಗಿ ಹಿಡಿದ ಕೈಗಳೆರಡು ಗಬಕ್ಕನೆ ತೂರಿ ಬಂದು ಭರ್ಜಿಯಲಗನ್ನು ಹಿಡಿದುಬಿಟ್ಟವು.

ತೂರಿದ ಆಘಾತಕ್ಕೆ ಹೆಣ್ಣುಮಗಳೊಬ್ಬಳು ಸಿಂಗಗೌಡನ ಬೆನ್ನ ಮೇಲೆ ಅಪ್ಪಳಿಸಿದಳು. ಸಾವರಿಸಿಕೊಂಡಳು. ಆದರೂ ಭರ್ಜಿಯನ್ನು ಬಿಡಲಿಲ್ಲ.

ವೀರಾವೇಶ ತುಂಬಿದ್ದ ಬೀರ ಹುಚ್ಚನಾಗಿ ಬಿಟ್ಟಿದ್ದ. ಭಿಕ್ಕಿಯನ್ನೂ ಲಕ್ಷಿಸಲಿಲ್ಲ. "ಬಿಡು! ಖೂಳನನ್ನು ತೀರಿಸಿಬಿಡುತ್ತೇನೆ" ಎಂದನು.

"ಕೂಡದು! ಕೊಲೆಗಾರ ಪಾತಕಿ!! ಸರೆ ದೂರ!!!"

ಭಿಕ್ಕಿಯ ಮಾತು ಗುರುತು ತಿಳಿಸಿತು. ಹೀಗೇನಿದು. ಬೀರ ಕೈ ತಡೆದ. ಸೆಣೆಸಾಟ ದಲ್ಲಿ ಭರ್ಜಿ ಏನು ಮಾಡಿತ್ತು? ಯಾರೂ ನೋಡಲಿಲ್ಲ.

ಭಿಕ್ಕಿಯೂ ಆವೇಶಭರಿತಳಾಗಿ ಎಂದಳು, "ಕೊಲೆಯಿಂದ ಬಾಳು ಕಟ್ಟಲೆಳಸುವ ರಾಕ್ಷಸಾ! ಸರೆ ಹಿಂದೆ! ನಿನ್ನಂತಹ ಹಿಂಸ್ರ ಪಶುವಿನ ಜೊತೆ ನನಗೆ ಬೇಡಾ!"

ಬೀರ ಸ್ತಂಭಿತನಾದ! ಭರ್ಜಿ ಹಿಂದಾಗಿ ಹೆಗಲೇರಿತು.

ಸಿಂಗಗೌಡನಿಗೆ ಆಕಸ್ಮಾತ್ತಾದ ಈ ಘಟನೆ ಅರ್ಥವಾಗಲಿಲ್ಲ. ಹಿಂದೆ ಹೊರಳಿ ತರುಣ ತರುಣಿಯರ ಜಗಳ ಕಣ್ದೆರೆದು ನೋಡುತ್ತ ನಿಂತ. ಸಾಧಾರಣ ಅರ್ಥವಾದಾಗ, ತನ್ನ ಜೀವಕ್ಕೆ ಬಂದ ಕುತ್ತು ಕಾಯ್ದ ಹುಡುಗೆ ಗಾಗಿ ಕುತೂಹಲ ಪಟ್ಟ, ಆದೇ ಆಗ ಕಂಬಳಿ ಮುದ್ದೆಯಿಂದ ಕೆಳಗುರುಳಿದ ರಕ್ತದ ಹನಿ ಗಳೆರಡನ್ನು ಕಂಡ. ರಕ್ತ ಕಂಡದ್ದೇ ಹಿಂದಿನದೊಂದು ನೆನಪುಮಿಡಿದು ಹೆದರಿದ. ಬಳಿಯ ಗೌಡರನ್ನು ಕೂಗಿದ.

ಭಿಕ್ಕಿ ಕಂಬಳಿ ಬಿಚ್ಚಿ ನೋಡಿದಳು. ಅಲ್ಲಲ್ಲಿ ಕೊಯ್ದು ಅದು ಹೂರಾಗಿತ್ತು. ಎಡಗೈ ಗೊಂದಾದ ಘಾಯ ರಕ್ತ ಕಾರುತ್ತಿತ್ತು.

ಇದೆಲ್ಲ ಕಂಡಾಗ ಬೀರ ನುಡಿದ. ಅಷ್ಟರಲ್ಲಿ ಗೌಡನ ಕರೆ ಕೇಳಿ ಓಡಿಬಂದ ಜನರು ಹೊಸ ಬನಾದ ಅವನನ್ನು ಹಿಡಿದರು. ಭರ್ಜಿ ಸೆಳೆದು ಕೊಂಡರು. ತೆಕ್ಕೆ ಬಿದ್ದು ಕೂಡ್ರಿಸಿದರು.

ಗೌಡನ ಅಪ್ಪಣೆಯಂತೆ ಭಿಕ್ಕಿಯ ಕೈಗೆ ಶುಶ್ರೂಷೆ ನಡೆದಿತು. ಸೊಪ್ಪು ಜಜ್ಜಿ ತಂದು ತುಂಬಿ ರಕ್ತ ತಡೆದರು. ದೂರದಿಂದ ಓಡುತ್ತ ಬರುವ ಇನ್ನೊಬ್ಬ ಕೂಗುತ್ತಿದ್ದ "ಗೌಡರೇ ಕಣ್ಣು ಮುಚ್ಚಿಕೊಳ್ಳಿ, ಕಣ್ಣು ಮುಚ್ಚಿಕೊಳ್ಳಿ."

ಕೇಳಿದವರಿಗಾರಿಗೂ ಇದು ಅರ್ಥವಾಗ ಲಿಲ್ಲ. ಆದರೆ ಆ ಹಳಬ ಹಿಂದಿನ ಇತಿಹಾಸ

ಬಲ್ಲವನೂ ಭಿಕ್ಕಿಯನ್ನು ಗುರುತಿಸುವವನೂ ಆಗಿದ್ದ.

"ಜೀವದ ಕುತ್ತು ನಿವಾರಣೆಯಾದಾಗ, ಮತ್ತೆ ಕಣ್ಣು ಮುಚ್ಚಲು ಹೇಳುವೆಯಾ ಮೂರ್ಖ." ಸಿಂಗಗೌಡ ಚೇಷ್ಟೆಮಾಡಿ ನಗುತ್ತಿದ್ದ.

ಹಿಂದಿನಿಂದ ಕಾಡೆಬ್ಬಿಸುವವರೂ ಬಂದು ತಲುಪಿದರು. ಅಂದಿನ ಲಕ್ಷಣವೇ ಏನೋ ತುಂಬಾ ಮೊಲಗಳು ಬಲೆಯಲ್ಲಿ ಒದ್ದಾಡ ತೊಡಗಿದ್ದವು.

ಬೇಟೆಗಾರರ ಆನಂದಕ್ಕೆ ಪಾರವಿಲ್ಲ. ಎಲ್ಲ ಭರ್ಜಿಗಳು ನೆತ್ತರು ಹೀರತೊಡಗಿದ್ದವು. ರಕ್ತ ಕಾರಂಜಿಯಾಗಿ ಪುಟಿದಿತ್ತು.

ಕೊಲೆ ಕಂಡ ಭಿಕ್ಕಿಯ ಹೆಂಗರಳು ಕರಗಿತು. ಕಂಬನಿ ತುಂಬಿ ಬಂದವು. ಆದರೆ ಏನು ಮಾಡಬಲ್ಲಳು. ಕೈನೋವು ಮರೆತು ಮುನ್ನಡೆದು ನೋಡುತ್ತ ನಿಂತಳು. ಮರುಗಿದಳು.

ಒಂದು ಬಿಳೀ ವರ್ಣದ ಮುದ್ದು ಮೊಲದ ಮರಿಯು ಸರದಿ ಬಂದಿತು. ಅದಕ್ಕೂ ಭಲ್ಲೆ ಎತ್ತಿದಾಗ ತಡೆಯಲಾಗಲಿಲ್ಲ. ಹಾರಿ ಮುಂದಾಗಿ ಭರ್ಜಿ ಎತ್ತಿದವನ ಕಾಲಿಗೆ ಬಿದ್ದಳು. ತಡೆದಳು. ಅವನಿಂದ ಅದನ್ನು ಬೇಡಿಪಡೆದಳು. ಸಜೀವ ಎತ್ತಿ ಪ್ರೀತಿಯಿಂದ ಮುದ್ದಿಟ್ಟಳು. ಮುದ್ದಾದ ಮರಿ; ಯಾರಿಗೂ ಹಾಗೆ ಅನಿಸುವದೆ! ಉಡಿಯಲ್ಲಿಟ್ಟುಕೊಂಡು ಮರಳಿದಳು.

ಅವಳ ಬಗೆ ಕಂಡ ಉಳಿದ ಭರ್ಜಿಗಳು ಆವೇಶದಿಂದಲ್ಲ— ನಡುಗುತ್ತ ತಮ್ಮ ಕಾರ್ಯ ಮುಂದರಿಸಿದ್ದವು.

ಮಾಂಸದ ಮೊಟ್ಟೆಕಟ್ಟಿ ಒಂದೆಡೆ ಸೇರಿದಾಗ ಎಲ್ಲರಿಗೂ ಗೌಡ ಆದ ಸಂಗತಿಯನ್ನು ವಿವರಿಸಿದ; ಎಲ್ಲರ ಮುಷ್ಟಿಗಳೂ ಮೇಲೆದ್ದು ಬೀರನತ್ತ ತೂರಿದವು. ಆದರೆ ಗೌಡನೇ ತಡೆದ.

ಹಳಬ ಒಕ್ಕಲುಗೌಡ ಭಿಕ್ಕಿಯ ಹುಟ್ಟನ್ನು ವಿವರಿಸಿದಾಗ ಸಿಂಗಗೌಡನಿಗೆ ಹೋದ ಜೀವ ಬಂದಂತಾಯಿತು. ಜೀವದಾಸೆಗಾಗಿ, ಯಾವ ಹಸುಗೂಸನ್ನು ಬಲಿ ಇತ್ತಿದ್ದೆವೋ ಅದೇ ಇಂದು ತಾನಾಗಿ ನಿಂತು ಜೀವ ಉಳಿಸಿದ್ದು ಹೆಮ್ಮೆಯಾಗಿ ಬತ್ತಿದ ಪ್ರೀತಿಯ ಸೆಲೆ ಪುಟಿಸಿತು. "ಬಾರವ್ವ ಮಗಳೇ! ನಿನ್ನ ಪಾಪಿ ತಂದೆಯನ್ನು ಕ್ಷಮಿಸಿ ಕಾಪಾಡು" ಎಂದು ಅವಳನ್ನಪ್ಪಿದ.



ಭಿಕ್ಕಿಗಂತೂ ಇದು ಹೊಸ ತಿಳಿವು, ಹೊಸ ಅನುಭವ. ಮರುಮಾತಿಲ್ಲದೆ ಆಕೆ ಸಿಂಗಗೌಡನ ಮಗಳಾಗಿಯೇ ಬಿಟ್ಟಳು. ಊರಿಗೆ ಹೋಗಲು ಕರೆದಾಗ ಮಾತ್ರ ಮೊಲದ ಬೇಟೆ ಬಿಡಬೇಕಾಗಿ ಕರಾರು ಮುಂದಿಟ್ಟಳು. ಸಿಂಗಗೌಡ ಒಪ್ಪಿದ.

ಬೀರನೊಡನೆ ಎಲ್ಲರೂ ಆನಂದಾವೇಶದಲ್ಲಿ ಊರಿಗೆ ಮರಳಿದರು. ಬರಿದಾದ ಗೌಡರ ಮನೆಗೆ ಹೆಣ್ಣು ಗಂಡು ಎರಡು ಜೀವ ತುಂಬಿದರು.

ಕೆಟ್ಟಹೆಸರು ಹೊತ್ತ ದೀಪಾವಳಿ, ಪವಿತ್ರ ಹಬ್ಬವಾಯಿತು. ಊರ ದೇವಾಲಯದಲ್ಲೆಲ್ಲ ಪೂಜೆ ವಿನಿಯೋಗಗಳಾಗಿ ಊರಿಗೇ ಜಾತ್ರೆಯ ಕಳೆಕಟ್ಟಿತು.

ಭಿಕ್ಕಿಯ ದರ್ಶನದಿಂದ ಗೌಡನಿಗೆ ಮೃತ್ಯುವಿನ ಕರೆ ಬರಲೇ ಇಲ್ಲ.

ಊರಲ್ಲಿ ಅಂದಿನಿಂದ ನಿಂತುಹೋಯಿತು, ಮೊಲದ ಬೇಟೆ. ದೀಪಾವಳೀ ದಿನವಂತೂ— ಒಂದು ದಿನ-ಯಾರೂ ಆಡುವದಿಲ್ಲ; ಮೊಲಕ್ಕೆ ಜೀವದಾನವಿತ್ತವಳೆಂದು ಭಿಕ್ಕಿಯನ್ನು ಎಲ್ಲರು ಹಾಡಿಹರಿಸುತ್ತಾರೆ. ವಿಚಿತ್ರವೆಂದರೆ, ಸಿಂಗಗೌಡನ ಮನೆಯಲ್ಲಿ ಹಿಟ್ಟಿನ ಮೊಲಕ್ಕೆ ಆದಿನ ಪೂಜೆ ಮಾಡುತ್ತಾರೆ.



# ನಮ್ಮ ಪೂರ್ವಜರ ಕಾಲದ ಆಡಳಿತ ಪದ್ಧತಿ

ಇಂದು ಪ್ರಜಾಸತ್ತೆಯ ಆಡಳಿತಪದ್ಧತಿಯಲ್ಲಿರುವ ನಮಗೆ ನಮ್ಮ ಪೂರ್ವಜರ ಕಾಲದ ಆಡಳಿತಪದ್ಧತಿಯನ್ನು ಅರಿತುಕೊಳ್ಳುವ ಕುತೂಹಲ ಸ್ವಾಭಾವಿಕವಾಗಿಯೇ ಇರುವುದು. ಆಗ ಏಕಸತ್ತಾತ್ಮಕ ಇಲ್ಲವೆ ನಿರಂಕುಶ ಪ್ರಭುತ್ವವಿದ್ದರೂ ಕಾಯದೆ- ಕಾನೂನುಗಳು ಇದ್ದವು. ಹಳ್ಳಿಯ ಮಹಾಜನರ ಸಭೆಗಳು ಆಡಳಿತ ನಿರ್ವಹಣದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು. ಅನೇಕ ಪ್ರಸಂಗಗಳಲ್ಲಿ ರಾಜನು ಈ ಸಭೆಗಳ ಅಭಿಪ್ರಾಯ ಪಡೆಯುತ್ತಿದ್ದನು. ಹಳ್ಳಿಗಳು ಆಡಳಿತದ ಮಹತ್ವದ ಘಟಕಗಳಾಗಿದ್ದವು. ಈ ಆಡಳಿತ ಪದ್ಧತಿಯ ಸ್ಥೂಲ ವಿವರಣೆಯನ್ನು ಈ ಲೇಖನದಲ್ಲಿ ಕಾಣಬಹುದಾಗಿದೆ.



ಲೇಖಕರು :
**ಶ್ರೀನಿವಾಸ ರಿತ್ತಿ, ಉದಕಮಂಡಲ**

ಇಂದಿನ ಕಾಲದ ಪ್ರಜಾಪ್ರಭುತ್ವದ ಪ್ರಣಾಳಿಕೆಗನುಗುಣವಾಗಿ ಅಂದು ಅಂದರೆ ಮಧ್ಯಯುಗದ ನಮ್ಮ ಪೂರ್ವಜರ ಕಾಲದಲ್ಲಿ 'ಪ್ರಜೆಗಳಿಂದಲೇ ರಾಜ್ಯ ಎಂಬದಿರದಿದ್ದರೂ ಪ್ರಜೆಗಳಿಗಾಗಿ ರಾಜ್ಯ ಎಂಬ ತತ್ವವು ಅನುಸರಿಸಲ್ಪಡುತ್ತಿತ್ತೆಂದು ಮಾತ್ರ ಧಾರಾಳವಾಗಿ ಹೇಳಬಹುದು. 'ರಾಜಾ ಪ್ರಕೃತಿ ರಂಜನಾತ್' ಎಂದು ಕಾಳಿದಾಸನು ನುಡಿದಾಗ ಅರಸನ ಆದ್ಯಕರ್ತವ್ಯವೇನೆಂಬದನ್ನು ಅವನು ಹೇಳಿದನು. 'ದುಷ್ಟನಿಗ್ರಹ' ಮತ್ತು 'ಶಿಷ್ಟ ಪ್ರತಿಪಾಳನ' ಇವು ಅರಸನ ಮುಖ್ಯ ಕರ್ತವ್ಯಗಳೆಂದು ಶಾಸನಗಳು ಹೇಳುತ್ತವೆ. ಪ್ರಜೆಗಳು ಸುಖದಿಂದಿದ್ದಾಗಲೇ ಅರಸನೂ 'ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿ'ರಲು ಸಾಧ್ಯವಾಗುತ್ತಿದ್ದಿತು. ಈ ಸಂಬಂಧದಲ್ಲಿ ಪ್ರಸಿದ್ಧ ಇತಿಹಾಸತಜ್ಞರಾದ ಎಸ್. ಕೃಷ್ಣಸ್ವಾಮಿ ಅಯ್ಯಂಗಾರರು ಈ ರೀತಿ ನುಡಿದಿದ್ದಾರೆ :

"ಹಿಂದೂ ರಾಜ್ಯಪದ್ಧತಿಯು ಏಕಸತ್ತಾತ್ಮಕವಾದುದು ಅಥವಾ ನಿರಂಕುಶ ಪ್ರಭುತ್ವವೆಂದೂ ಹೇಳಬಹುದು ಮತ್ತು ಅಗತ್ಯವಾದ ಪ್ರಸಂಗಗಳಲ್ಲಿ ಉಪಯೋಗಿಸಲು ನಿರಂಕುಶ ಅಧಿಕಾರಗಳೂ ಇದ್ದವು. ಆದರೆ ಇಂಥ ಅಧಿಕಾರಗಳು, ಬರಿ ಹೊರರೂಪದಲ್ಲಷ್ಟೇ ಅಲ್ಲ, ನಿಜವಾಗಿಯೂ ಶುದ್ಧವಾದ ಹಾಗೂ ಪರಿಪೂರ್ಣವಾದ ಪ್ರಜಾಸತ್ತೆಯ ತತ್ವಗಳಿಗನುಗುಣವಾಗಿ ಉಪಯೋಗಿಸಲ್ಪಡುತ್ತಿದ್ದವು. ವಸ್ತುತಃ ಬೇಕಾದದ್ದೂ ಅದೇ, ಬರಿ ರೂಪವಲ್ಲ."

ಅಂದಿನ ಕಾಲದ ಆಡಳಿತಪದ್ಧತಿಯ ಕೆಲವು ಅಂಶಗಳನ್ನು ಗಮನಿಸಿದಾಗ ಈ ವಿದ್ವಾಂಸರ ಮಾತಿನ ತಥ್ಯ ಹೊಳೆಯದಿರಲಾರದು.

ಪ್ರಾಚೀನ ರಾಜತಂತ್ರಜ್ಞರು ರಾಜಸತ್ತೆಯನ್ನು ಒಂದು ದೇಹಕ್ಕೆ ಹೋಲಿಸಿ ಅರಸನು ಸಿರಸ್ಸೆಂದೂ ಮಂತ್ರಿಗಳು, ಕೋಶ, ಸೈನ್ಯ ಮುಂತಾದವುಗಳು ಇತರ ಅವಯವಗಳೆಂದೂ ಬಣ್ಣಿಸಿದ್ದಾರೆ. ಕೆಲವು ಶಾಸನಗಳೂ ಇದೇ ಮಾತನ್ನೇ ಹೇಳುತ್ತವೆ. ದೇಹದಲ್ಲಿ ತಲೆಯು ಮುಖ್ಯವಾದ ಅವಯವವಿದ್ದಂತೆ ರಾಜ್ಯದಾಡಳಿತದಲ್ಲಿ ಅರಸನೇ ಮುಖ್ಯ. ಆದರೆ ದೇಹದ ನಿರ್ವಹಣೆಗೆ ಇತರ ಅವಯವಗಳು ಸರಿಯಾಗಿ ಕೆಲಸಮಾಡುವದು ಅಷ್ಟೇ ಮುಖ್ಯವಾದಂತೆ ರಾಜ್ಯದಾಡಳಿತದಲ್ಲಿಯೂ ಇತರ ಅಂಗಗಳ ಪಾತ್ರವೂ ಗಣ್ಯವಾದುದು. ಈ ವಿವಿಧ ಅಂಗಗಳ ಬಗೆಗೆ ಕೆಲವು ಅಂಶಗಳನ್ನು ಇಲ್ಲಿ ವಿವರಿಸಿ ತಿಳಿಸಲಾಗಿದೆ.

## ಅರಸು

ಹಿಂದೂ ರಾಜ್ಯತಂತ್ರತತ್ವದಂತೆ ದೇಶಕ್ಕೆ ಅರಸನೇ ಅಧಿಪತಿ. ಅವನೇ ರಾಜ್ಯದ ಅತ್ಯುಚ್ಚ ಅಧಿಕಾರಿ. ಅರಸೊತ್ತಿಗೆ ಆನುವಂಶಿಕವಾಗಿ ಬರುತ್ತಿದ್ದರೂ ಅವನಿಗೆ ತನ್ನ ಒಡೆತನವನ್ನು ನಿರ್ವಹಿಸಲು ಯೋಗ್ಯತೆ, ಮತ್ತಿತರ ಅವಶ್ಯಕವಾದ ಗುಣಗಳು ಅನಿವಾರ್ಯವಾಗಿದ್ದವು. ಇಲ್ಲವಾದರೆ ಅವನು ಅಧಿಕಾರವನ್ನು ನಡೆಸುವದೇ ದುಸ್ತರವಾಗುತ್ತಿತ್ತು. ಅಂದಿನ ಕಾಲದಲ್ಲಿ, ಒಂದು ರಾಜ್ಯವುರುಳಿ ಇನ್ನೊಂದು ಅಧಿಕಾರಕ್ಕೆ ಬರಲು, ಇತರ ಕಾರಣಗಳ ಜೊತೆಗೆ, ಅರಸನ ದೌರ್ಬಲ್ಯವೂ ಮುಖ್ಯ ಕಾರಣವಾಗಿದ್ದಿತು ಎಂಬುದು ಇತಿಹಾಸದಿಂದ ಕಂಡುಬಂದ ವಿಷಯವಾಗಿದೆ.

ಶೌರ್ಯ ಅರಸನಲ್ಲಿರಬೇಕಾಗಿದ್ದ ಅತಿ ಮುಖ್ಯ ಗುಣ. ಅಂದಿನ ಕಾಲದಲ್ಲಿ, ನೆರೆಯ ರಾಜ್ಯಗಳೊಂದಿಗೆ ಮೈತ್ರಿಗಿಂತ ಹೆಚ್ಚಾಗಿ ವೈರತ್ವವಿದ್ದುದೇ ಹೆಚ್ಚು. ಯಾವ ದಿಕ್ಕಿನಿಂದಲೂ ದಾಳಿಯ ಭಯವಿದ್ದೇ ಇರುತ್ತಿತ್ತು. ಅಲ್ಲದೆ ದೇಶದ ಒಳಗೂ ಆಗಾಗ ದಂಗೆಗಳಾಗುವ ಶಕ್ಯತೆಯೂ ಇರುತ್ತಿದ್ದಿತು. ಪ್ರಜಾರಕ್ಷಣೆ ಅರಸನ ಕರ್ತವ್ಯವಾಗಿದ್ದು ತನ್ನ ರಾಜ್ಯವನ್ನು ವಿಸ್ತರಿಸುವದು ನೀತಿಯಾಗಿದ್ದಿತು. ಇಂಥ ಪ್ರಸಂಗದಲ್ಲಿ ಅರಸನ ಶೌರ್ಯ, ಧೈರ್ಯಗಳಿಗೆ ಅತಿ ಮಹತ್ವವಿದ್ದುದರಲ್ಲಿ ಆಶ್ಚರ್ಯವೇನಿಲ್ಲ.

ಶೌರ್ಯ, ಧೈರ್ಯಗಳೊಂದಿಗೆ ಔದಾರ್ಯ, ಹೃದಯವೈಶಾಲ್ಯ, ಸಹನಶೀಲತೆ ಇವೂ ಅರಸನಲ್ಲಿ ಅಪೇಕ್ಷಿಸಲ್ಪಡುತ್ತಿದ್ದ ಮುಖ್ಯಗುಣಗಳು. ಸಾಮ್ರಾಟ್ ಅಶೋಕನು ಪ್ರಜೆಗಳು ತನ್ನ ಮಕ್ಕಳು; ಅವರೆಲ್ಲರ ಸುಖವನ್ನು ಗಮನಿಸುವದೇ ತನ್ನ ಕರ್ತವ್ಯ ಎಂದು ಸಾರಿದನು. ಈ ಸತ್ಪರಂಪರೆ ನಂತರವೂ ಮುಂದರಿಯುತ್ತ ಬಂತು. ಸಮಾಜದಲ್ಲಿ ನಾನಾ ವರ್ಣಗಳಿಗೆ ಸೇರಿದ, ನಾನಾ ವೃತ್ತಿಗಳನ್ನವಲಂಬಿಸಿದ, ನಾನಾ ಧರ್ಮಗಳನ್ನು ಅನುಸರಿಸುವ ಜನರಿರುವಾಗ, ಅರಸನು, ತಾನು ಯಾವದೇ ಮತದ ಅನುಯಾಯಿಯಾಗಿರಲಿ, ನಿಷ್ಪಕ್ಷಪಾತದಿಂದ ಎಲ್ಲರ ಹಿತಗಳನ್ನು ಲಕ್ಷಿಸುತ್ತಿದ್ದನು. ಅಂತೆಯೇ ಅಂದು, ಜೈನ, ಬೌದ್ಧ, ಶೈವ ಮೊದಲಾದ ಧರ್ಮಗಳು ಪರಸ್ಪರ ಸ್ನೇಹದಿಂದ ಬೆಳೆಯುವದು ಸಾಧ್ಯವಾಯಿತು. ಧಾರ್ಮಿಕತೆ ಅರಸನಲ್ಲಿರಬೇಕಾಗಿದ್ದ ಇನ್ನೊಂದು ಗುಣ. ಧರ್ಮಕಾರ್ಯವನ್ನು ಎಸಗುವದರ ಜೊತೆಗೆ ಇತರರು ಮಾಡಿದ ಧರ್ಮಕಾರ್ಯಗಳನ್ನು—ಅವನ್ನು ವೈರಿಗಳೇ ಮಾಡಿರಲಿ—ಮುಂದುವರಿಸುವದೂ ಅವನ ಕರ್ತವ್ಯವಾಗಿದ್ದಿತು. ಯಾವನೊಬ್ಬ ವೈರಿಯಾದರೇನಾಯಿತು? ಧರ್ಮ ವೈರಿಯಲ್ಲವಷ್ಟೆ? ಧರ್ಮಕ್ಕೆ ಶತ್ರುವಾರು? ಈ ಉದಾತ್ತ ತತ್ವವನ್ನು ಉಪದೇಶಿಸುವ ಶ್ಲೋಕವೊಂದು ನಮಗೆ ಅನೇಕ ಶಾಸನಗಳಲ್ಲಿ ಸಿಗುತ್ತದೆ.

ಶತ್ರುಣಾಪಿ ಕೃತೋ ಧರ್ಮಃ ಪಾಲನೀಯಃ
ಪ್ರಯತ್ನತಃ ।

ಶತ್ರುರೇವ ಹಿತ್ರುಸ್ಸ್ಯಾತ್ ಧರ್ಮಃ
ಶತ್ರುರ್ನ ಕಸ್ಯಚಿತ್ ॥

ಸನಾತನ ಧರ್ಮದ ರಕ್ಷಣೆ ಅರಸನ ಹೊಣೆ ಸೇವುಣ ಮನೆತನದ ಸಿಂಹಣನಿಗೆ 'ವೇದ ಪ್ರತಿಷ್ಠಾಪಕ' ಎಂಬ ಬಿರುದಿದ್ದಿತು. ಅವನ ಮೊಮ್ಮಗ ಕನ್ನಡ 'ವೇದೋದ್ಧಾರಕ' ಎಂದು ಕರೆಯಲ್ಪಡುತ್ತಿದ್ದನು. ಅವನ ಸ್ಥೂಲಪರವಾದ ಶಾಸನವೊಂದು ಅರಸನಲ್ಲಿರಬೇಕಾದ ಗುಣಗಳನ್ನು ಹೀಗೆ ಬಣ್ಣಿಸುತ್ತದೆ.

ಶ್ರೀಮತ್ಕಂಧರ ಚಕ್ರವರ್ತಿಜಸಮಂ
ವಿಶ್ವಂಭರಾಭಾಗದೊಳ್
ಪ್ರೇಮಂ ಪ್ರಾರ್ತ್ಥಿಜನಂಗಳೊಳ್ ವಚನಮಂ
ನ್ಯಾಯಿಕಾನೀಕದೊಳ್ ।
ಕ್ಷೇಮಂ ಬಾಹುಲತಾವೃತಾವನಿಯೊಳಂ
ವೀರಾರಿಯೊಳ್ ವೀರಮಂ
ಭೂಮೀಶಂ ಸಲೆ ಬಣ್ಣಿಸಲ್ ನೆರೆದಪಂ
ಪ್ರೌಢಪ್ರತಾಪೋದಯಂ ॥

ಇಂಥ ಉದಾತ್ತ ಗುಣಗಳನ್ನು ಪಡೆಯಲು ಅವನಿಗೆ ಅಗತ್ಯವಾದ ತರಬೇತಿಯು ಅವಶ್ಯವಿದ್ದಿತು. ಅರಸೊತ್ತಿಗೆ ಆನುವಂಶಿಕವಾಗಿದ್ದುದು ಒಂದು ರೀತಿಯಿಂದ ಉಪಯುಕ್ತವೇ ಇದ್ದಿತ್ತು. ಇದರಿಂದ ಅರಸನಾಗುವವನು ಚಿಕ್ಕಂದಿನಿಂದಲೇ ಯೋಗ್ಯವಾದ ತರಬೇತಿಯನ್ನು ಪಡೆಯಲು ಶಕ್ಯವಾಗುತ್ತಿದ್ದಿತು. ಅವನು ವಯಸ್ಸಿಗೆ ಬಂದಾಕ್ಷಣ ಯುವರಾಜನೆಂದು ಕರೆಯಲ್ಪಟ್ಟು, ರಾಜಕಾರಣದಲ್ಲಿ ಪ್ರತ್ಯಕ್ಷ ಅನುಭವ ಪಡೆಯುತ್ತಿದ್ದನು. ರಾಜಗುರುಗಳು, ಮಂತ್ರಿಗಳು, ಸೈನ್ಯಾಧಿಕಾರಿಗಳು ಅವನಿಗೆ ಬೇರೆ ಬೇರೆ ಶಾಸ್ತ್ರಗಳಲ್ಲಿ ಶಿಕ್ಷಣವನ್ನೀಯುತ್ತಿದ್ದರು. ಅರಸನ ಅಧೀನನಾಗಿ ಯುವರಾಜನು ಕೆಲವೊಮ್ಮೆ ಪ್ರಾಂತಗಳ ಮೇಲೆ ಅಧಿಕಾರ ನಡೆಸುತ್ತಿದ್ದನು ಮತ್ತು ಎಷ್ಟೋ ಸಲ ಯುದ್ಧದಲ್ಲಿಯೂ ಭಾಗವಹಿಸುತ್ತಿದ್ದನು.

## ಮಂತ್ರಿಗಳು

ರಾಜ್ಯದಾಡಳಿತದಲ್ಲಿ ಮಂತ್ರಿಗಳ ಪಾತ್ರ ಎಷ್ಟು ಮಹತ್ವದ್ದಿದ್ದಿತೆಂದರೆ, ಅರಸನು ರಾಜ್ಯರಥದ ಒಂದು ಗಾಲಿಯಾದರೆ, ಮಂತ್ರಿಗಳು ಇನ್ನೊಂದು ಎಂದು ಕೌಟಿಲ್ಯನು ಹೇಳಿದ್ದಾನೆ. ಅರಸನೆಷ್ಟೇ ನಿಪುಣನಿದ್ದರೂ ಅವನಿಗೆ ಮಂತ್ರಿಗಳ ಸಹಾಯ ಅತ್ಯಗತ್ಯ ಎಂದು ಶುಕ್ರನೀತಿಯಲ್ಲಿ ಹೇಳಿದೆ. ಶಾಸ್ತ್ರಗಳಲ್ಲಿಯೂ ಮಂತ್ರಿಗಳ ಬಗೆಗೆ ಅನೇಕ ಉಲ್ಲೇಖಗಳಿವೆ. ಆದರೂ ಬೇರೆ ಬೇರೆ ಮಂತ್ರಿಗಳ ನಿಜವಾದ ಉಪಾಧಿ ( designation ) ಅವರವರ ಕರ್ತವ್ಯಗಳು, ಹೊಣೆಗಳು ಇವುಗಳ ವಿಷಯವಾಗಿ ಖಚಿತವಾದ ವಿವರಗಳು ದೊರೆಯುವದಿಲ್ಲ. ಬೇರೆ ಬೇರೆ ಮಂತ್ರಿಗಳು ಬೇರೆ ಬೇರೆ ಖಾತೆಗಳನ್ನು ನೋಡಿಕೊಳ್ಳುತ್ತಿದ್ದುದು ಸಂಭಾವ್ಯವಿದ್ದರೂ ಆ ಬಗ್ಗೆ ನಿಶ್ಚಿತವಾಗಿ ಹೇಳಲು ಬರುವದಿಲ್ಲ. ಹಾಗೆ ನೋಡಿದರೆ, ಮಂತ್ರಿಗಳ ಕಾರ್ಯದಲ್ಲಿ, ಹೊಣೆಗಳಲ್ಲಿ ನಿರ್ದಿಷ್ಟ ವಿಭಜನೆ ಇರಲಿಲ್ಲವೆಂದು ತೋರುತ್ತದೆ. ಉದಾಹರಣೆಗೆ, ಮಹಾಪ್ರಧಾನರಾಗಿದ್ದ ಅನೇಕ ಅಧಿಕಾರಿಗಳು ದಂಡನಾಯಕರು ಅಂದರೆ ಸೈನ್ಯಾಧಿಕಾರಿಗಳು ಆಗಿರುತ್ತಿದ್ದರಲ್ಲದೆ ಸುಂಕಾಧಿಕಾರಿಗಳೂ ಆಗಿರುತ್ತಿದ್ದರು. ಮಂತ್ರಿಗಳು ಅವರವರ ಯೋಗ್ಯತೆಗನುಗುಣವಾಗಿ ಹೊಣೆಗಳನ್ನು ನಿರ್ವಹಿಸುತ್ತಿದ್ದರೆಂದು ಹೇಳಬಹುದಾಗಿದೆ. ಡಾ. ಮಹಾಲಿಂಗಂ ಅವರ ಅಭಿಪ್ರಾಯದಂತೆ ಅಂದಿನ ರಾಜ್ಯಪದ್ಧತಿಯಲ್ಲಿ ರಾಜಕೀಯ ಮತ್ತು ಸೈನಿಕ ಅಧಿಕಾರಿಗಳಲ್ಲಿ ಸ್ಪಷ್ಟವಾದ ಅಂತರವಿದ್ದಿರಲಿಲ್ಲ.

ಇನ್ನು ಮಂತ್ರಿಪದಕ್ಕೆ ಬೇಕಾದ ಅರ್ಹತೆಗಳ ಸಂಬಂಧವಾಗಿಯೂ ವಿಶೇಷ ಮಾಹಿತಿ ದೊರೆಯುವದಿಲ್ಲ. ಅರಸನಲ್ಲಿ ಭಕ್ತಿ, ವಿಧೇಯತೆ ಇವು ಅವರಲ್ಲಿರಬೇಕಾಗಿದ್ದ ಮುಖ್ಯ ಗುಣಗಳು. ರಾಜ್ಯದಾಡಳಿತದಲ್ಲಿ ನೈಪುಣ್ಯ (ಪ್ರಭಂ-ಮಂತ್ರೋತ್ಸಾಹ-ಶಕ್ತಿತ್ರಯಸಂಪನ್ನರು) ಕಲೆ, ಸಾಹಿತ್ಯಗಳ ಪೋಷಣೆ (ಕವಿ-ಗಮಕಿ-ವಾದಿ-ವಾಗ್ಮಿ-ವಿದ್ವಜ್ಜನ ಸನಾಥರು) ದೀನ, ದಲಿತರಲ್ಲಿ ಕರುಣೆ, ಔದಾರ್ಯ (ದೀನಾನಾಥ ಸಾಧು ಬುಧಜನ ಸ್ವಾಶ್ರಿತಾಶಾಭರಣರು) ಅರಸನ ಹಿತಚಿಂತನೆ (ಪತಿಹಿತಾಚರಣೆ) ಇವು ಮಂತ್ರಿಗಳಲ್ಲಿ ಅಪೇಕ್ಷಣೀಯವಾದ ಗುಣಗಳಾಗಿದ್ದವು.

ಸಾಮಾನ್ಯವಾಗಿ ಮಂತ್ರಿಗಳಿಗೆ ದೇಶದ ಯಾವದೊಂದು ಭಾಗದ ಅಥವಾ ಪ್ರಾಂತದ ಆಳಿಕೆಯು ವಹಿಸಿಕೊಡಲ್ಪಡುತ್ತಿದ್ದಿತು. ಆಡಳಿತ ನಿರ್ವಹಣೆಗೆ ಅವರ ಕೈಕೆಳಗೆ ಅನೇಕ ಅಧಿಕಾರಿಗಳಿರುತ್ತಿದ್ದರು. ತಮ್ಮ ಆಳಿಕೆಗೆ ಸೇರಿದ ಪ್ರಾಂತದಲ್ಲಿ ಪ್ರವಾಸ ಕೈಕೊಂಡು ಅಲ್ಲಿ ಶಾಂತಿ ಸುವ್ಯವಸ್ಥೆಗಳನ್ನು ನೆಲಸುವದು ಅವರ ಕರ್ತವ್ಯವಾಗಿದ್ದಿತು. ತಮ್ಮ ಕೈಕೆಳಗಿನ ಅಧಿಕಾರಿಗಳನ್ನು ನೇಮಿಸಿಕೊಳ್ಳುವ ಅಧಿಕಾರ ಅವರಿಗಿದ್ದಿತು. ಉದಾಹರಣೆಗೆ ಸೇವುಣ ಭಿಲ್ಲಮನ ಮಂತ್ರಿಯಾದ ಮಾಯಿದೇವನೆಂಬವನು ಮೂವತ್ತಾರು ಬಾಡವೆಂಬ ಚಿಕ್ಕ ವಿಭಾಗಕ್ಕೆ ಬೊಪ್ಪಣನೆಂಬವನನ್ನು ಅಧಿಕಾರಿಯಾಗಿ ನೇಮಿಸಿದನು. ತಮ್ಮ ಅಧಿಕಾರದಲ್ಲಿದ್ದ ಪ್ರದೇಶದಲ್ಲಿ ಭೂಮಿದಾನಾದಿಗಳನ್ನು ಮಾಡುವ ಅಧಿಕಾರವೂ ಇದ್ದಿತು. ಸಾಮಾನ್ಯವಾಗಿ ಇಂಥ ಪ್ರಸಂಗಗಳಲ್ಲಿ ಅವರು ಅರಸನ ಅನುಮತಿಯನ್ನು ಪಡೆಯುತ್ತಿದ್ದರು. ಮಲ್ಲಿಶೆಟ್ಟಿಯೆಂಬ ಮಂತ್ರಿಯೊಬ್ಬನು ಭೀಮಾ ನದಿಯ ದಂಡೆಯ ಮೇಲಿನ ಪಂಡರಿಕ ಕ್ಷೇತ್ರಕ್ಕೆ ಬಂದು ಅಲ್ಲಿ ಬ್ರಾಹ್ಮಣರಿಗೆ ತಾಂಬ್ರಪುರಿಯೆಂಬ ಗ್ರಾಮವನ್ನು ದಾನಮಾಡಿದನು. ಆಗ ತನ್ನ ಮಗನ ಮೂಲಕ ಅರಸನ ಅನುಮತಿಯನ್ನು ಪಡೆದನು. ತಮ್ಮ ಅಧೀನವಿದ್ದ ಪ್ರದೇಶಗಳಲ್ಲಿ ರಕ್ಷಣಾಕ್ರಮವನ್ನೂ ಕೈಕೊಳ್ಳುವ ಹೊಣೆಯೂ ಇವರದೇ ಇದ್ದಿತು. ಬೆಳಗುತ್ತಿಯ ಸಿಂದ ಮನೆತನದ ನಾಯಕನೊಬ್ಬನು ಒಮ್ಮೆ ದಂಗೆಯೆದ್ದಾಗ ಅವನನ್ನು ಸದೆಬಡೆಯಲು ಹೊನ್ನ ಬಮ್ಮಾನಾಯಕನೆಂಬ ಮಂತ್ರಿಯು ಸೈನ್ಯದೊಡನೆ ಸಾಗಿದನು.

ಮಂತ್ರಿಗಳ ಸೇವೆಗೆ ಮೆಚ್ಚಿ ಅರಸನು ಅವರಿಗೆ ಹೆಚ್ಚಿನ ಅಧಿಕಾರಗಳನ್ನು, ಗೌರವಪೂರ್ಣವಾದ ಬಿರುದುಗಳನ್ನು ಕೊಡುತ್ತಿದ್ದನು. ಮಂತ್ರಿಯ ದಕ್ಷತೆಯನ್ನು ಕಂಡು ಅವನಿಗೆ ರಾಜ್ಯದ ಬಹುಭಾಗದ ಆಡಳಿತಭಾರವನ್ನು ವಹಿಸಿದ ಉದಾಹರಣೆಗಳೂ ಶಾಸನಗಳಲ್ಲಿ ದೊರಕುತ್ತವೆ. ಪ್ರಭಾವಯುತವಾದ ಮಂತ್ರಿಗಳು ಅರಸನ ಬಲಗೈ ಎಂದು ಕರೆಯಲ್ಪಡುತ್ತಿದ್ದರು. ಅಂಥವರು 'ರಾಜ್ಯಸಮುದ್ಧರಣ' 'ರಾಜ್ಯಾಭಿವೃದ್ಧಿಕಾರಣ' ಎಂಬ ಪ್ರಶಂಸೆಗೆ ಪಾತ್ರರಾಗುತ್ತಿದ್ದರು. ಇಂಥ ಕೆಲವರು ಅರಸನೆ 'ಪರಮವಿಶ್ವಾಸಿ' ಎಂದೂ ಹೆಸರಾಗಿರುತ್ತಿದ್ದರು.

## ಪ್ರಾಂತಿಕ ಆಡಳಿತ

ಆಡಳಿತದ ಅನುಕೂಲಕ್ಕಾಗಿ ದೇಶವನ್ನು ಚಿಕ್ಕ ಚಿಕ್ಕ ವಿಭಾಗಗಳಾಗಿ ವಿಭಜಿಸುವ ರೂಢಿ ಎಂದಿನಿಂದಲೂ ಇದೆ. ಇಂದಿನಂತೆ ಹಿಂದಿನ ಕಾಲದಲ್ಲಿಯೂ ಈ ವಿಭಾಗಗಳಿಗೆ ಆ ಆ ವಿಭಾಗದ ಮುಖ್ಯ ಪಟ್ಟಣದ ಹೆಸರೇ ಇರುತ್ತಿತ್ತು. ಉದಾ: ಬನವಾಸಿನಾಡು, ಕರಹಾಡ ದೇಶ, ಪಳಿಯುಂಡ ದೇಶ, ಮಾಸವಾಡಿನಾಡು ಇತ್ಯಾದಿ. ಅಂದಿನ ಕಾಲದ ವೈಶಿಷ್ಟ್ಯವೆಂದರೆ ಇಂಥ ವಿಭಾಗಗಳ— ಹೆಸರಿನಲ್ಲಿ ಆ ವಿಭಾಗದಲ್ಲಿ ಅಡಕವಾದ ಗ್ರಾಮಗಳ ಸಂಖ್ಯೆಯೂ ನಿರ್ದಿಷ್ಟವಾಗಿರುತ್ತಿದ್ದಿತು[೧]— ಬನವಾಸಿ ಪನ್ನಿಚ್ಛಾಸಿರ, ಹಲಸಿಗೆ ಹನಿಚ್ಛಾಸಿರ, ಪಳಿಯುಂಡನಾಲ್ಸಾಸಿರ, ತರ್ದವಾಡಿ ಸಾಸಿರ, ಕುಕ್ಕನೂರು ಮೂವತ್ತು ಇತ್ಯಾದಿಯಾಗಿ ದೊಡ್ಡಭಾಗಗಳಲ್ಲಿ ಚಿಕ್ಕ ಚಿಕ್ಕ ವಿಭಾಗಗಳು ಅಡಕವಾಗಿರುತ್ತಿದ್ದವು.

ಮೇಲೆ ಉಲ್ಲೇಖಿಸಿದಂತೆ ಪ್ರಾಂತಗಳ ಆಡಳಿತಕ್ಕೆ ಮಂತ್ರಿಗಳು ನೇಮಿಸಲ್ಪಡುತ್ತಿದ್ದರು. ಅನೇಕ ಸಲ ಒಬ್ಬ ಮಂತ್ರಿಯ ಅಧೀನದಲ್ಲಿ ಒಂದಕ್ಕಿಂತ ಹೆಚ್ಚು ಪ್ರಾಂತಗಳು ಇರುತ್ತಿದ್ದವು. ಮತ್ತು ಇಂಥ ಅಧಿಕಾರಿಗಳು ಒಂದು ಪ್ರಾಂತದಿಂದ ಇನ್ನೊಂದಕ್ಕೆ ವರ್ಗಾಯಿಸಲ್ಪಡುತ್ತಿದ್ದ ಉದಾಹರಣೆಗಳೂ ದೊರೆಯುತ್ತವೆ.

ಅರಸನಿಂದ ನೇರವಾಗಿ ನೇಮಕವಾದ ಅಧಿಕಾರಿಗಳ ಪ್ರಾಂತಗಳ ಆಡಳಿತೆ ನಡೆಯುತ್ತಿದ್ದುದು ಒಂದು ವಿಧವಾದರೆ ಇನ್ನೂ ಒಂದು ವಿಧವಾದ ಪದ್ಧತಿ ಆಗ ಪ್ರಚಲಿತವಿದ್ದಿತು. ಅದೆಂದರೆ ಅರಸನಿಗೆ ವಿಧೇಯರಾದ ಸಾಮಂತರಿಂದ ಆಳಲ್ಪಡುತ್ತಿದ್ದುದು. ಇಂಥ ಪ್ರಾಂತಗಳ ಆಡಳಿತಾಧಿಕಾರ ಸಾಮಂತ ಮನೆತನದವರಲ್ಲಿ ವಂಶಪರಂಪರೆಯಾಗಿ ಬರುತ್ತಿದ್ದಿತೇ ವಿನಾ ಅರಸನು ಅದರಲ್ಲಿ ಕೈ ಹಾಕುತ್ತಿರಲಿಲ್ಲ. ಅವರಿಗೆ ಹೆಚ್ಚು ಕಡಿಮೆ ಸಂಪೂರ್ಣ ಸ್ವಾಯತ್ತತೆಯಿದ್ದೂ ಅವರು ಆಳರಸರಿಗೆ ತಮ್ಮ ಅಧೀನತೆಯನ್ನು ಒಪ್ಪಿಕೊಳ್ಳುವುದು ಮಾತ್ರ ಅನಿವಾರ್ಯವಿದ್ದಿತು. ಬನವಾಸಿ, ಹಾನಗಲ್‌ಗಳ

---

೧ ಈ ವಿಭಾಗಗಳ ಹೆಸರಿನ ಜೊತೆಗಿರುವ ಸಂಖ್ಯೆ ಗ್ರಾಮಗಳನ್ನೇ ನಿರ್ದೇಶಿಸುತ್ತದೆ ಎಂಬ ಬಗ್ಗೆ ಒಮ್ಮತವಾದ ಅಭಿಪ್ರಾಯವಿಲ್ಲ. ಈ ಸಂಖ್ಯೆ, ಅಲ್ಲಿಯ ಆದಾಯವನ್ನು ಸೂಚಿಸುತ್ತದೆ ಎಂದು ಒಬ್ಬರ ಅಭಿಪ್ರಾಯವಿದ್ದರೆ, ಅಲ್ಲಿಯ ಜನಸಂಖ್ಯೆಯನ್ನು ಸೂಚಿಸುತ್ತದೆ ಎಂದು ಇನ್ನೊಬ್ಬರ ಮತವಿದೆ. ಅಲ್ಲಿಯ ಭೂಮಿಗಳನ್ನು ಸೂಚಿಸುವ ಸಂಖ್ಯೆಯಿದು ಎಂದೂ ಒಬ್ಬರಮತ. ಆದರೆ ಈ ಸಂಖ್ಯೆಯ ಜೊತೆಗೆ ಕೆಲಸಾರೆ ಗ್ರಾಮ ಎಂಬ ಶಬ್ದವೂ ಸಿಗುವದರಿಂದ ( ಉದಾ:— 'ತ್ರಿಂಶದ್ ಗ್ರಾಮಾಧಿಪತಿ' ಕುಕ್ಕನೂರು ) ಇದು ಗ್ರಾಮಸೂಚಕ ಶಬ್ದವೇ ಎಂದು ಹೇಳಬೇಕಾಗುತ್ತದೆ. ಆದರೂ ಒಂದೊಂದು ಭಾಗದಲ್ಲಿ ೧೨೦೦೦, ೯೬೦೦೦ ಹಳ್ಳಿಗಳಿರುತ್ತಿದ್ದವೇ ಎಂಬ ಸಂಶಯಕ್ಕೆ ಮಾತ್ರ ಖಚಿತ ಪರಿಹಾರ ದೊರೆತಿಲ್ಲ.

ಕದಂಬರು, ಸವದತ್ತಿಯ ರಟ್ಟರು, ಎಲಬುರ್ಗಿಯ ಸಿಂದರು, ಮೊರಟ, ಅರಳುಗಳ ಹೈಹಯರು, ಕರಡಕಲ್, ರಟ್ಟಿಹಳ್ಳಿಗಳ ಕದಂಬರು ಮುಂತಾದ ಸಾಮಂತರು ಕಲ್ಯಾಣದ ಚಾಲುಕ್ಯರಿಂದ ಹಿಡಿದು ತದನಂತರ ಕರ್ನಾಟಕದ ಅರಸುಮನೆತನಗಳಿಗೆ ವಿಧೇಯರಾಗಿ ಆಳುತ್ತಿದ್ದರು.

## ಹಳ್ಳಿಗಳ ಆಡಳಿತ

ಪ್ರಾಚೀನ ಕರ್ನಾಟಕದ ಆಡಳಿತಪದ್ಧತಿಯಲ್ಲಿ ಹಳ್ಳಿಗಳ ಆಡಳಿತ ಒಂದು ವೈಶಿಷ್ಟ್ಯವೆನ್ನಬಹುದು. ಅರಸನಿಂದ ನೇಮಕವಾದ ಅಧಿಕಾರಿಗಳ ಜೊತೆಗೆ ಊರಿನ ಗಣ್ಯವ್ಯಕ್ತಿಗಳು ವಿವಿಧ ವೃತ್ತಿಗಳನ್ನನುಸರಿಸುವ ಜನರ ಪ್ರತಿನಿಧಿಗಳು ಊರಿನ ಆಡಳಿತದಲ್ಲಿ ಪ್ರಮುಖಪಾತ್ರವನ್ನು ವಹಿಸುತ್ತಿದ್ದು, ಊರಿನಲ್ಲಿಯ ಸುವ್ಯವಸ್ಥೆಗೆ ಹೊಣೆಯಾಗುತ್ತಿದ್ದರು. ಇಂಥ ಪ್ರತಿನಿಧಿಗಳು ಮಹಾಜನರು ನಖರಗಳು ಮುಮ್ಮುರಿದಂಡಗಳು ಎಂದು ಮುಂತಾಗಿ ಹೆಸರಾಗಿದ್ದರು.

ಗ್ರಾಮಕ್ಕೆ ಮುಖ್ಯಸ್ಥನಾದ ಸರಕಾರಿ ಅಧಿಕಾರಿಯೆಂದರೆ ಗಾವುಂಡ. ಹೆಗ್ಗಡೆ, ಪ್ರಭು, ಊರೊಡೆಯ ಎಂದೂ ಅವನು ಕರೆಯಲ್ಪಡುತ್ತಿದ್ದನು. ಊರಿನ ರಕ್ಷಣೆ ಗಾವುಂಡನ ಹೊಣೆಯಾಗಿದ್ದಿತು. ದೇವಾಲಯಗಳು, ಶಿಕ್ಷಣಸಂಸ್ಥೆಗಳು ಮುಂತಾದವುಗಳಿಗೆ ಕೊಡಲಾದ ದತ್ತಿಗಳು ವ್ಯತ್ಯಯವಿಲ್ಲದೆ ಮುಂದರಿಯುವಂತೆ ಇವನು ನೋಡಿಕೊಳ್ಳುತ್ತಿದ್ದನು. ಎಂತಲೇ ಶುಕ್ರಾಚಾರ್ಯರು ಇವನನ್ನು ಹಳ್ಳಿಯ ತಾಯಿತಂದೆಯೆಂದು ಕರೆದುದು ಯಥಾರ್ಥವಾಗಿದೆ. ಗಾವುಂಡ ಪದವಿಯು ಆನುವಂಶಿಕವಾಗಿದ್ದಿತು. ಕರಣ ಅಥವಾ ಸೇನಬೋವ ಹಳ್ಳಿಯ ಇನ್ನೊಬ್ಬ ಅಧಿಕಾರಿ. ಊರಿನ ರಕ್ಷಣೆ ಗಾವುಂಡನ ಕರ್ತವ್ಯವಾದರೆ ಸೇನಬೋವನು ಲೆಕ್ಕಪತ್ರಗಳನ್ನು ನೋಡಿಕೊಳ್ಳುತ್ತಿದ್ದನು. ಇತರ ಕೆಲಸಗಳ ಜೊತೆಗೆ ಶಾಸನಗಳನ್ನು ಬರೆಯುವುದೂ ಇವನ ಕೆಲಸವಾಗಿದ್ದಿತು. ಸೇನಬೋವನಿಂದ ಬರೆಯಲ್ಪಟ್ಟ ಅನೇಕ ಶಾಸನಗಳು ಉಪಲಬ್ಧವಿವೆ. ರಕ್ಕಾಪಾಲನೆಂಬ ಇನ್ನು ಒಬ್ಬ ಅಧಿಕಾರಿಯ ಹೆಸರು ಕೆಲವು ಶಾಸನಗಳಲ್ಲಿ ದೊರೆಯುತ್ತಿದೆ. ಹೆಸರೇ ಸೂಚಿಸುವಂತೆ ಊರಿನಲ್ಲಿ ಶಾಂತಿ-ಸುವ್ಯವಸ್ಥೆಗಳು ನೆಲೆಸುವಂತೆ ಮಾಡುವುದು ಇವನ ಕಾರ್ಯವಾಗಿದ್ದಿತು. ನಿಡಗುಂದಿಯ ಶಾಸನವೊಂದರಲ್ಲಿ ಇಂಥ ಒಬ್ಬ ರಕ್ಕಾಪಾಲನ ಉಲ್ಲೇಖವಿದೆ.

ಮೇಲೆ ಹೇಳಿದಂತೆ ಊರಿನ ಆಗುಹೋಗುಗಳಲ್ಲಿ ಅಲ್ಲಿನ ವರಿಷ್ಠರು ಜನರ ಪ್ರತಿನಿಧಿಗಳು ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತಿದ್ದರು. ಇಂಥ ಪ್ರತಿನಿಧಿಗಳ ಗುಂಪುಗಳಲ್ಲಿ ಮಹಾಜನರು ಮುಖ್ಯರು. ಊರಿನ ಅಳತೆಗೆ ತಕ್ಕಂತೆ ಅಲ್ಲಿ ಮಹಾಜನರಿರುತ್ತಿದ್ದರು. ಉದಾಹರಣೆಗೆ ಲಕ್ಕುಂಡಿಯಲ್ಲಿ ಸಾವಿರ ಮಹಾಜನರಿದ್ದರೆ ಹಾವೇರಿಯಲ್ಲಿ ನಾಲ್ಕುನೂರು ಇದ್ದರು. ಮಹಾಜನರು ವಿದ್ವಾಂಸರು; ಸರ್ವಶಾಸ್ತ್ರಗಳಲ್ಲಿ ನಿಪುಣರು. ಇವರ ನೆರವಿಗೆ ಸಾಮಾನ್ಯವಾಗಿ 'ಸಭೆ' ಎಂದು ಹೆಸರಿದ್ದಿತು. ಇವರು 'ಸಭಾಮುಂಟಪದಲು( ಮಹಾಸಭೆಯಾಗಿ ನೆರೆದಿರ್ದು' ಅಥವಾ 'ಮಹಾನಾಡಾಗಿ ನೆರೆದು' ಊರಿಗೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸುತ್ತಿದ್ದರು. ಊರಿನಲ್ಲಿಯ ಭೂಮಿಗಳನ್ನು ದಾನಮಾಡುವ ಅಧಿಕಾರ ಇವರಿಗಿದ್ದಿತು. ಅನೇಕ ಸಲ ಊರಿನ ಮುಖ್ಯಸ್ಥನನ್ನು ಇವರೇ ನೇಮಿಸುತ್ತಿದ್ದರು. ಅರಸರಿಂದ ಹಿಡಿದು ಅಧಿಕಾರಿಗಳ ವರೆಗೆ ಯಾರಾದರೂ ದಾನಾದಿಗಳನ್ನು ಮಾಡುವಾಗ ಮೊದಲು ಇವರ ಅನುಮತಿ ಪಡೆಯುತ್ತಿದ್ದರು. ಇಂಥ ದತ್ತಿಗಳು ಅವ್ಯಾಹತವಾಗಿ ನಡೆಯುವಂತೆ ಇವರು ನೋಡಿಕೊಳ್ಳುತ್ತಿದ್ದರು. ಊರಿನಲ್ಲಿಯ ವ್ಯಾಜ್ಯಗಳನ್ನು ಪರಿಹರಿಸಿ ನ್ಯಾಯದಾನಮಾಡುವದರಲ್ಲಿಯೂ ಇವರ ಪಾತ್ರ ಹಿರಿದಾಗಿದ್ದಿತು. ಹಾವೇರಿಯ ಒಂದು ಶಾಸನ ಅಲ್ಲಿಯ ಮಹಾಜನರ ಸಭೆಯನ್ನು ಹೀಗೆ ಬಣ್ಣಿಸುತ್ತದೆ.

ಬ್ರಹ್ಮಾವಾಸಮಶೇಷವೇದನಿಲಯಂ
ವಿದ್ಯಾಧರೈರಾವೃತಂ
ಪೃಥ್ವೀಮಂಡಲಮಂಡನಂನಳಪುರೀ
ರಾಜದ್ವಿಜಾನಾಂ ಮಹತ್ ॥
ಪ್ರಖ್ಯಾತಪ್ರತಿಭಾಪರಪ್ರವಿಬುಧ
ಪ್ರಾಮಾಣಿಕಪ್ರಾಶ್ನಿಕ-
ಪ್ರಸ್ತುತ್ಯಂ ಪ್ರತಿವಾಸರ-ಪ್ರತಿಮುಹಃ
ಪ್ರೋದ್ಯತ್ಸಭಾಮಂಡಲಂ ॥

ಮಹಾಜನರಂತೆ ವ್ಯಾಪಾರವೃತ್ತಿಯನ್ನು ಕೈಕೊಂಡವರ ಮುಖಂಡರೂ ಬೇಸಾಯಗಾರರ ಪ್ರತಿನಿಧಿಗಳೂ ಊರಿನ ಆಡಳಿತ, ನ್ಯಾಯದಾನ ಮೊದಲಾದವುಗಳಲ್ಲಿ ಭಾಗವಹಿಸುತ್ತಿದ್ದರು. ಇಂಥ ಗುಂಪುಗಳಿಗೆ ನಖರ, ಒಕ್ಕಲು ಎಂದು ಹೆಸರಿದ್ದಿತು. ಮಹಾಜನರ ಸಂಖ್ಯೆ ನಿರ್ದಿಷ್ಟವಾದಂತೆ 'ಅಯ್ವತ್ತೊಕ್ಕಲು', 'ಅರುವತ್ತೊಕ್ಕಲು' ಎಂದು ಮುಂತಾಗಿ ಒಕ್ಕಲುಗಳ ಸಂಖ್ಯೆಯೂ ಒಮ್ಮೊಮ್ಮೆ ನಿರ್ದಿಷ್ಟವಾಗಿರುತ್ತಿತ್ತು. ತೆಲ್ಲಿಗರು, ಗಾತ್ರಿಗರು ಎಂದು ಮುಂತಾದ ಇನ್ನೂ ಅನೇಕ ಗುಂಪುಗಳ ಹೆಸರುಗಳು ಶಾಸನಗಳಲ್ಲಿ ಉಕ್ತವಾಗಿವೆ. ಇಂಥ ಪ್ರಾತಿನಿಧಿಕ ನೆರವಿಗಳು ಗ್ರಾಮಗಳ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದುದರಿಂದಲೇ ಎಲ್‌ಫಿನ್‌ಸ್ಟನ್ ಎಂಬವನು ಗ್ರಾಮಗಳನ್ನು 'little republics' ಎಂದು ಕರೆದಿದ್ದಾನೆ.

## ಕಾನೂನು ಮತ್ತು ನ್ಯಾಯ

ಇಂದಿನ ಪ್ರಜಾಸತ್ತಾತ್ಮಕಪದ್ಧತಿಯಲ್ಲಿ ಕಾಯ್ದೆಗಳನ್ನು ರಚಿಸಲು ವಿಧಾನಮಂಡಲಗಳಿವೆ. ಆದರೆ ಇಂಥ ಮಂಡಳಗಳು ಅಂದಿನ ಏಕಸತ್ತಾತ್ಮಕವಾದ ರಾಜ್ಯಪದ್ಧತಿಯಲ್ಲಿ ಇರಲಿಲ್ಲ. ಅಂದರೆ ಆಗ ಕಾನೂನುಗಳೇ ಇರಲಿಲ್ಲವೆಂದರ್ಥವಲ್ಲ. ಈಗಿನಂತೆ ಚುನಾಯಿತಪ್ರತಿನಿಧಿಗಳ ಮಂಡಳಗಳಾಗಲಿ ಯಾವದೊಂದು ವಿಷಯದ ಮೇಲೆ ಲಿಖಿತ ಕಾನೂನಾಗಲಿ ಇರಲಿಲ್ಲ. ಧರ್ಮ ಎಂಬದರಲ್ಲಿ ಎಲ್ಲ ಕಾನೂನುಗಳೂ ಅಡಕವಾಗಿದ್ದವು. ಧರ್ಮದಂತೆ ನಡೆಯುವದೇ ಅರಸನ ಮತ್ತು ಪ್ರಜೆಗಳ ಕರ್ತವ್ಯವಾಗಿದ್ದಿತು. ಧರ್ಮಶಾಸ್ತ್ರಗಳು, ಮಹಾಭಾರತ ರಾಮಾಯಣಗಳು, ಪರಂಪರೆ, ನೀತಿ-ನಡವಳಿಕೆ ಇವೇ ಈ ದಿಶೆಯಲ್ಲಿ ಮಾರ್ಗದರ್ಶಕವಾಗಿರುತ್ತಿದ್ದವು. ಅದಕ್ಕಾಗಿ ಹೊಸದಾಗಿ ಕಾನೂನುಗಳನ್ನು

ರಚಿಸುವ ಅಗತ್ಯವಿರಲಿಲ್ಲ. ಆದರೂ ಅಗ್ರಹಾರ ಮುಂತಾದ ಸಂಸ್ಥೆಗಳು, ದತ್ತಿಗಳು ನಿರಂತರವಾಗಿ ನಡೆಯುವದಕ್ಕೆ ಅಗತ್ಯವಾದ ನಿಯಮಗಳನ್ನು ಅಧಿಕಾರಿಗಳು ರೂಪಿಸುತ್ತಿದ್ದರು ಎಂಬುದನ್ನೂ ಗಮನಿಸಬಹುದಾಗಿದೆ.

ಅಂದಿನ ನ್ಯಾಯದಾನದ ಪದ್ಧತಿಯ ವಿಷಯವಾಗಿ ಸಾಕಷ್ಟು ಮಾಹಿತಿ ದೊರೆಯುವದಿಲ್ಲ. ದೇಶದ ಅಧಿಪತಿಯಾದ ಅರಸನೇ ನ್ಯಾಯದಾನದ ಅತ್ಯುಚ್ಚ ಅಧಿಕಾರಿಯಾಗಿದ್ದರೂ ಈ ಅಧಿಕಾರವು ದೇಶದ ಬೇರೆ ಬೇರೆ ವಿಭಾಗಗಳಲ್ಲಿಯ ನ್ಯಾಯಾಲಯಗಳಿಗಿರುತ್ತಿದ್ದಿತು. ಒಂದು ಗಮನಿಸಬೇಕಾದ ಅಂಶವೆಂದರೆ, ಸರಕಾರದ ಅಧಿಕಾರಿಗಳ ಜೊತೆಗೆ ಮೇಲೆ ಉಲ್ಲೇಖಿಸಲಾದ ಮಹಾಜನರು, ನಖರರು, ಸೆಟ್ಟಿಗುತ್ತರು ಮುಂತಾದವರು ನ್ಯಾಯಾಧೀಶರಾಗಿ ವ್ಯಾಜ್ಯಗಳನ್ನು ಬಗೆಹರಿಸುತ್ತಿದ್ದರು. ಇವರಿಗೆ ಧರ್ಮಾಧ್ಯಕ್ಷರೆಂದು ಹೆಸರಿದ್ದಿತು. ಹೀಗೆ ನ್ಯಾಯದಾನ ಮಾಡಿದ ಅನೇಕ ಘಟನೆಗಳು ಶಾಸನಗಳಲ್ಲಿ ಉಕ್ತವಾಗಿದ್ದು ಅಂಥದೊಂದನ್ನು ಇಲ್ಲಿ ಮಾದರಿಗಾಗಿ ಉದಾಹರಿಸಲಾಗಿದೆ.

ಬನವಾಸಿ ದೇಶದ ನಾಗರಖಂಡದ ವಿಭಾಗದಲ್ಲಿಯ ಎರೆಬಳ್ಳಿ ಎಂಬ ಗ್ರಾಮದಲ್ಲಿ ಭೂಮಿಯೊಂದರ ಖರೀದಿಯ ಬಗ್ಗೆ ಕಾಳಗಾವುಂಡ, ಕೆರೆಯಮಸೆಟ್ಟಿ ಎಂಬಿಬ್ಬರ ನಡುವೆ ವ್ಯಾಜ್ಯವುಂಟಾಯಿತು. ಜಗಳವು ಸರ್ವಾಧಿಕಾರಿ ಕಡುವ ಮಹಂತ, ಸೇನಬೋವ ಚಂದರಸ, ಅಧಿಕಾರಿ ರಾಮಯ್ಯ ಮುಂತಾದ ಅಧಿಕಾರಿಗಳ ವರೆಗೆ ಹೋಯಿತು. ಕೆರೆಯಮಸೆಟ್ಟಿಯು, ತಾನು ಕಾಳಗಾವುಂಡನ ಅಜ್ಜ ಜಕ್ಕಿಗೌಡಿಗೆ ಹಣ ತೆತ್ತು ಭೂಮಿಯನ್ನು ಪಡೆದುದಾಗಿ ವಾದಿಸಿದನು, ಕಾಳಗೌಡನು ಅದನ್ನು ಅಲ್ಲಗಳೆದನು. ಜಗಳವು, ಬಂದಳಿಕೆ ಮತ್ತು ತಾಣಗುಂದೂರಗಳ ಮಹಾಜನರು, ಪಂಚಮಠಗಳು, ನಖರ-ಮುಮ್ಮುರಿದಂಡಗಳು ಮತ್ತು ನಾಳ್ಪ್ರಭು ಬೊಮ್ಮಿಸೆಟ್ಟಿ ಮೊದಲಾದ ಅಧಿಕಾರಿಗಳಿದ್ದ ನ್ಯಾಯಸ್ಥಾನಕ್ಕೆ ಹೋಯಿತು. ಇಬ್ಬರ ವಾದಗಳನ್ನು ಕೇಳಿಕೊಂಡ ನಂತರ, ದಿವ್ಯವನ್ನು ಹಿಡಿಯುವದರ ಮೂಲಕ ನಿರ್ಣಯಿಸಬೇಕೆಂದಾಯಿತು. ಬಹುಶಃ ಕೈಯಲ್ಲಿ ಬೆಂಕಿಯನ್ನು ಹಿಡಿಯುವ ದಿವ್ಯಪರೀಕ್ಷೆಯಲ್ಲಿ ಕಾಳಗಾವುಂಡನು ಯಶಸ್ವಿಯಾದನು. ಕೆರೆಯಮಸೆಟ್ಟಿಯ ವಾದ ಹುರಳಿಲ್ಲದ್ದೆಂದು ತೀರ್ಮಾನವಾಯಿತು. ಈ ಸುಳ್ಳು ಸಾಧನೆಗಾಗಿ ಅವನಿಗೆ ಯಾವ ಶಿಕ್ಷೆಯು ವಿಧಿಸಲ್ಪಟ್ಟಿತೋ ಬಹುಶಃ ನೆರೆದ ಜನರಲ್ಲಿ, ಆದ ಅವಹೇಳನೆಯೇ ಸಾಕಾಗಿರಬೇಕು. ಈ ಶಾಸನಕ್ಕೆ 'ಜಯಪತ್ರ' ಎಂದು ಕರೆಯಲಾಗಿದೆ.

## ಸೈನ್ಯ

ದೇಶದ ರಕ್ಷಣೆಗಾಗಿ ಸೈನ್ಯದ ಮಹತ್ವ ಎಷ್ಟೆಂಬದನ್ನು ಬೇರೆ ಹೇಳಬೇಕಾಗಿಲ್ಲ. ಅದೂ ಆಗಿನ ಕಾಲದಲ್ಲಿ, ನೆರೆ ರಾಜ್ಯಗಳೊಡನೆ ವೈರವೇ ಹೆಚ್ಚಾಗಿದ್ದ ಪರಿಸ್ಥಿತಿಯಲ್ಲಿ ಸೈನ್ಯ ರಾಜ್ಯದ ಅತ್ಯಗತ್ಯವಾದ ಅಂಗವಾಗಿದ್ದಿತು. ಆನೆಗಳು, ಕುದುರೆಗಳು ಕಾಲ್ದಳ ಮತ್ತು ರಥಗಳು, ಚತುರಂಗಬಲವೆಂದು ಕರೆಯಲ್ಪಡುವ ಅಂದಿನ ಸೈನ್ಯದ ಮುಖ್ಯ ಘಟಕಗಳು. ಯುದ್ಧಗಳಲ್ಲಿ ಆನೆಗಳನ್ನು ಧಾರಾಳವಾಗಿ ಬಳಸಲಾಗುತ್ತಿತ್ತೆಂಬ ಬಗ್ಗೆ ಶಾಸನಗಳಲ್ಲಿ ಅನೇಕ ಉಲ್ಲೇಖಗಳಿವೆ. ಸೇವುಣ ಭಿಲ್ಲಮ ಮತ್ತು ಹೊಯ್ಸಳ ಬಲ್ಲಾಳರ ನಡುವೆ ಸೊರಟೂರಬಳಿ ನಡೆದ ಯುದ್ಧದಲ್ಲಿ ಭಿಲ್ಲಮನ ಸೈನ್ಯದಲ್ಲಿ ಅನೇಕ ಆನೆಗಳಿದ್ದವು. ಬಲ್ಲಾಳನೂ ಆನೆಯ ಮೇಲೆ ಕುಳಿತೇ ಯುದ್ಧಮಾಡಿದನು. ಇದೇ ಯುದ್ಧದಲ್ಲಿ ಭಿಲ್ಲಮನು ತನ್ನ ಸೈನ್ಯದಲ್ಲಿ, ಹನ್ನೆರಡು ಸಾವಿರ ಕುದುರೆಗಳನ್ನು ಇಟ್ಟಿದ್ದನೆಂದು ಶಾಸನವೊಂದು ಬಣ್ಣಿಸುತ್ತದೆ. ಕಾಲಾಳುಗಳು ಸೈನ್ಯದ ಬಹು ಮುಖ್ಯ ಅಂಗವಾದರೂ ಅವುಗಳ ಭರತಿ, ತರಬೇತಿ ಮುಂತಾದವುಗಳ ವಿಷಯವಾಗಿ ವಿವರಗಳಿಲ್ಲ. ಪ್ರತಿಯೊಬ್ಬ ದೇಶಭಕ್ತ ತರುಣನೂ ತನ್ನ ದೇಶಕ್ಕಾಗಿ ಹೋರಾಡಲು ಸಿದ್ಧನಿರುತ್ತಿದ್ದನು. ನಾಡಿಗಾಗಿ ಹೋರಾಟ ಧರ್ಮವೆನಿಸಿದ್ದಿತು. ಅದರಲ್ಲಿ ಮರಣವೂ ಗೌರವವೇ. ನಾಡಿನ ರಕ್ಷಣೆ ಮೊದಲು ವೈಯಕ್ತಿಕ ಹಿತ ಅನಂತರ. ವೀರಯೋಧನೊಬ್ಬನು ತನ್ನ ನಾಡಿನ ರಕ್ಷಣೆಗಾಗಿ, ಅದೇ ನಡೆಯಲಿದ್ದ ತನ್ನ ಮದುವೆಯನ್ನೇ ಕಡೆಗಣಿಸಿ ರಂಗಕ್ಕಿಳಿದ ಹೃದಯಸ್ಪರ್ಶಿ ಘಟನೆಯೊಂದು ಹಾಂಸಭಾವಿಯಲ್ಲಿಯ ಶಾಸನವೊಂದರಲ್ಲಿ ಉತ್ಕೀರ್ಣವಾಗಿದೆ. ವೀರನೊಬ್ಬನು ಮಡಿದಾಗ ಅವನ ನೆನಹಿಗಾಗಿ ವೀರಗಲ್ಲುಗಳನ್ನು

ನಿಲ್ಲಿಸಲಾಗುತ್ತಿತ್ತಲ್ಲದೆ ಅವನ ಕುಟುಂಬದವರ ನಿರ್ವಹಣೆಗಾಗಿ ಭೂಮಿ ಮೊದಲಾದವುಗಳನ್ನು ಕೊಡಲಾಗುತ್ತಿತ್ತು.

ಸೈನ್ಯದ ಆಡಳಿತಕ್ಕಾಗಿ ಇದ್ದ ಅಧಿಕಾರಿಗಳಲ್ಲಿ ಮಹಾದಂಡನಾಯಕ ಅಥವಾ ಸಮಸ್ತಸೈನ್ಯಾಧಿಪತಿ ಮುಖ್ಯನು. ದಂಡನಾಯಕ, ದಳವಾಯಿ ಇವರು ಅಧೀನ ಅಧಿಕಾರಿಗಳು ಸೈನ್ಯದ ಬೇರೆ ಬೇರೆ ಭಾಗಗಳಿಗೆ ಬೇರೆ ಬೇರೆ ಅಧಿಕಾರಿಗಳಿರುತ್ತಿದ್ದರೆಂಬುದು 'ಹಸ್ತಿಸಾಧನಿಕ' (ಆನೆಗಳ ದಳದ ಮುಖ್ಯಸ್ಥ) 'ಕರಿತುರಗಪಟ್ಟಸಾಹಣ' (ಆನೆ, ಕುದುರೆಗಳ ದಳಗಳ ಮುಖ್ಯಸ್ಥ) ಎಂದು ಮುಂತಾದ ಪದಗಳಿಂದ ಸೂಚಿತವಾಗುತ್ತದೆ. ಸಾಮಾನ್ಯ ಸೈನಿಕನಿಗೆ ಆಳು ಎಂಬ ಹೆಸರಿದ್ದು ಬಿಲ್ಲು ಬಾಣಗಳನ್ನುಪಯೋಗಿಸುವವನು ಬಿಲ್ಲಾಳು ಎಂದು ಕರೆಯಲ್ಪಡುತ್ತಿದ್ದನು.

## ಹಣಕಾಸು

ನಮ್ಮ ಪ್ರಾಚೀನ ಶಾಸ್ತ್ರಕಾರರು, ಕೋಶವು ರಾಜ್ಯದ ಬಹುಮುಖ್ಯ ಅಂಗವೆಂದು ಪರಿಗಣಿಸಿದ್ದಾರೆ. ದೇಶದ ಮುನ್ನಡೆಗೆ ಆರ್ಥಿಕ ಸುಭದ್ರತೆ ಅಗತ್ಯವೆಂಬುದು ತಿಳಿದಮಾತೇ ಆಗಿದೆ. ಕೋಶಕ್ಕೆ ಹಣ ಸಂದಾಯವಾಗುವದು ಮುಖ್ಯವಾಗಿ ಪ್ರಜೆಗಳಿಂದಲೇ—ಅಂದರೆ ತೆರಿಗೆಯಿಂದಲೇ. ತಪ್ಪಿತಸ್ಥರಿಗೆ ವಿಧಿಸಲಾದ ದಂಡದಿಂದ ಅಥವಾ ನೆರೆರಾಜ್ಯಗಳೊಡನೆ ಆದ ಯುದ್ಧಗಳಲ್ಲಿ ಪಡೆದ ಧನಧಾನ್ಯಗಳು, ಬಂದ ಕಪ್ಪ ಕಾಣಿಕೆಗಳು ಕೋಶಕ್ಕೆ ಸೇರುತ್ತಿದ್ದವಾದರೂ ಇವು ನಿಯತವಾದ ಆದಾಯದ ಮಾರ್ಗಗಳು ಎಂದು ಹೇಳಲಾಗದು.

ಸ್ಮೃತಿಕಾರರು ಕರಾಕರಣೆಯ ಸಂಬಂಧದಲ್ಲಿ ಕೆಲವು ನಿಯಮಗಳನ್ನು ವಿಧಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುದೆಂದರೆ ಕರವು ಪ್ರಜೆಗಳಿಗೆ ಭಾರವಾಗಿರಬಾರದು ಎಂಬುದು. ದುಂಬಿಯು ಹೂವಿಗೆ ನೋವಾಗದಂತೆ ಜೇನನ್ನು ಹೀರುವಂತೆ ಅರಸನು ಜನರಿಂದ ಕರವನ್ನು ಪಡೆಯಬೇಕು ಎಂದು ಮನುಸ್ಮೃತಿಯಲ್ಲಿದೆ. ಈ ತತ್ವ ಸಾಮಾನ್ಯವಾಗಿ ಎಲ್ಲ ಮಧ್ಯಯುಗೀನ ಅರಸರಿಂದ ಅನುಸರಿಸಲ್ಪಡುತ್ತಿತ್ತು ಎಂದು ಹೇಳಬಹುದು.

ಕೃಷಿಪ್ರಧಾನವಾದ ನಮ್ಮ ದೇಶದಲ್ಲಿ ಭೂಮಿಯಿಂದಲೇ ಆದಾಯ ಹೆಚ್ಚು. ಎಂದಿನಂತೆ, ಆಗಿನ ಕಾಲದಲ್ಲಿಯೂ ಭೂಕಂದಾಯದ ದರ ಭೂಮಿಯ ಪ್ರಕಾರಗಳನ್ನವಲಂಬಿಸಿದ್ದಿತು. ಗದ್ದೆ ಮಕ್ಕಿ, ಎರೆ, ಬೆದ್ದಲೆ, ಕೆಂಗಾಡು ಎಂಬ ಭೂಮಿಯ ವಿವಿಧ ಪ್ರಕಾರಗಳು ಶಾಸನಗಳಿಂದ ತಿಳಿದು ಬರುತ್ತವೆ. ಇಂದು ಎಕರೆ, ಗುಂಟೆ, ಕೂರಿಗೆ ಎಂದಾಗಿ ಭೂಮಿಯ ಅಳತೆಯ ಪ್ರಮಾಣಗಳಿದ್ದಂತೆ ಆಗ ಮತ್ತರು, ಹಾದಕಮ್ಮ, ನಿವರ್ತನ ಎಂಬ ಪ್ರಮಾಣಗಳು ಪ್ರಚಾರದಲ್ಲಿದ್ದವು. ಇಂದಿನ ಪ್ರಮಾಣದಲ್ಲಿ ಇವುಗಳ ಅಳತೆ ಎಷ್ಟು ಎಂದು ಹೇಳುವದು ದುಸ್ತರವಾದರೂ ೨೫ ಕಮ್ಮಗಳೆಂದರೆ ಒಂದು ಹಾದ, ೪ ಹಾದಗಳೆಂದರೆ ಒಂದು ಮತ್ತರು ಎಂದು ಶಾಸನಗಳ ಅಭ್ಯಾಸದಿಂದ ವ್ಯಕ್ತವಾಗುತ್ತದೆ. ಭೂಮಿಯ ಅಳತೆ ದೇಶದಾದ್ಯಂತವೂ ಒಂದೇ ರೀತಿಯದಿರಲಿಲ್ಲ. ಅಂದರೆ ಮತ್ತರು ಎಂಬ ಪದ ಸಾಮಾನ್ಯವಾಗಿದ್ದರೂ ದೇಶದ ಒಂದು ಭಾಗದಲ್ಲಿಯ ಮತ್ತರು ಇನ್ನೊಂದು ಭಾಗದಲ್ಲಿಯ ಮತ್ತರಿನಷ್ಟೇ ಇರುತ್ತಿತ್ತೆಂದು ಹೇಳಲಾಗುವದಿಲ್ಲ. ಆಯಾ ಪ್ರದೇಶಗಳಲ್ಲಿ ಪ್ರಚಲಿತವಿದ್ದ ಅಳತೆಗೋಲುಗಳಿಂದ ( ತದ್ದೇಶಪ್ರಸಿದ್ಧ ದಂಡೇನ ) ಭೂಮಿಯನ್ನು ಅಳೆಯಲಾಗುತ್ತಿದ್ದಿತು. ಅಳತೆಗೋಲು ಸಹ ಒಂದೇ ತೆರನಾಗಿರುತ್ತಿರಲಿಲ್ಲ. ಒಂದು ೪೮ ಗೇಣಿನದಾದರೆ, ಇನ್ನೊಂದು ೫೨ರದು, ಮತ್ತೊಂದು ೩೨ ಗೇಣಿನದು. ಹೀಗೆ ವಿವಿ ಅಳತೆಗಳ ಕೋಲುಗಳು ಇದ್ದುದೂ ಕಂಡುಬರುತ್ತದೆ. ಒಂದು ಶಾಸನದಲ್ಲಿ ೧೪ ಬೆರಳಿನ ಗೇಣು ಘಳೆಯ ಉಲ್ಲೇಖವಿದೆ. ಅಳತೆಗೋಲಿಗೆ ಗಳೆ ಅಥವಾ ಘಳೆ ಎನ್ನುತ್ತಿದ್ದರು. ಇದನ್ನು ದೇವರ ಹೆಸರಿನಿಂದ ( ಮಾಣಿಕೇಶ್ವರದ ಕೋಲು, ಕನ್ನೇಶ್ವರದ ಗೋಲು ), ಅರಸನ ಹೆಸರಿನಿಂದ (ಧರಣಿದೇವನ ಕೋಲು ) ಊರುಗಳ ಹೆಸರಿನಿಂದ ( ಕಚ್ಚವಿಯ ಘಳೆ ) ಜನರ ಗುಂಪುಗಳ ಹೆಸರಿನಿಂದ ( ಪಾರ್ವರ ಕೋಲು, ತಿಗುಳರ ಘಳೆ ) ಎಂದು ಮುಂತಾಗಿ ಬೇರೆ ಬೇರೆ ವಿಧವಾಗಿ ಕರೆಯಲಾಗುತ್ತಿದ್ದಿತು.

ಭೂಮಿಯ ಮೇಲಿನ ಕಂದಾಯ ಹಣ ಮತ್ತು ಧಾನ್ಯದ ರೂಪವಾಗಿ ಸಂದಾಯವಾಗುತ್ತಿತ್ತು. ಅರುವಣ, ಸಿದ್ಧಾಯ ಎಂಬವು ಎರಡು ವಿಧವಾದ ತೆರಿಗೆಗಳು. ಬಹುಶಃ ಅರುವಣ ಹಣದ ರೂಪದ್ದೂ ಸಿದ್ಧಾಯವು ಧಾನ್ಯರೂಪದ್ದೂ ಇದ್ದವೆಂದು ಊಹಿಸಲವಕಾಶವಿದೆ. ಶಾಸನವೊಂದರಲ್ಲಿ, ಕಲ್ಕುಟಿಗನೊಬ್ಬನಿಗೆ ಭೂಮಿಯನ್ನು ಕೊಟ್ಟು ಅವನು ಮತ್ತರೊಂದಕ್ಕೆ ೧ ಹಣ ( ಇದು ಒಂದು ನಾಣ್ಯ ) ವನ್ನು ಕೊಟ್ಟು ಅದನ್ನು ಅನುಭವಿಸಬೇಕೆಂದು ಹೇಳಿದೆ.

' ಮನೆದೆರೆ ' ಇಂದಿನ ಮನೆಪಟ್ಟಿಯನ್ನು ಹೋಲುತ್ತದೆಯೆನ್ನಬಹುದು. ಬೇಸಾಯದ ಭೂಮಿಗಳನ್ನು ಕೋಲುಗಳಿಂದ ಅಳೆದರೆ; ಮನೆಯ ನಿವೇಶನಗಳನ್ನು ಕೈಯ ಅಂದರೆ ಮೊಳ ಅಥವಾ ಮಾರುಗಳ ಲೆಕ್ಕದಲ್ಲಿ ಅಳೆಯುವ ಪದ್ಧತಿಯಿದ್ದಿತು. ಇಂತಿಷ್ಟು ಕೈನೀಳ ಇಂತಿಷ್ಟು ಕೈಅಗಲವೆಂದು ನಿರ್ದಿಷ್ಟವಾದ ನಿವೇಶನಗಳ ಉಲ್ಲೇಖ ಅನೇಕ ಶಾಸನಗಳಲ್ಲಿದೆ.

ಭೂಮಿಯಂತೆ ವ್ಯಾಪಾರದ ಮೇಲೂ ಕರವನ್ನು ವಿಧಿಸಲಾಗುತ್ತಿತ್ತು ' ಸಂಥೆಯಾಯ ' ಸಂತೆಗೆ ಬರುವ ವಸ್ತುಗಳ ಮೇಲೆ ಹೇರುವ ಕರವಾದರೆ 'ಪಸಾರದೆರೆ' ಅಂಗಡಿಮಳಿಗೆಗಳ ಮೇಲಿನ ಸುಂಕವೆಂದು ತೋರುತ್ತದೆ. ಶಾಸನಗಳಲ್ಲಿ ಹೇರಳವಾಗಿ ಬರುವ 'ಕೊಂಡಲ್ಲಿ ಹಣ, ಕೊಟ್ಟಲ್ಲಿ ಹಣ' ಎಂದು ಮುಂತಾದ ಉಕ್ತಿಗಳಿಂದ ವಸ್ತುಗಳ ಮಾರಾಟದ ಮತ್ತು ಖರೀದಿಯ ಹಂತಗಳೆರಡರಲ್ಲಿಯೂ ಕರವನ್ನು ವಿಧಿಸಲಾಗುತ್ತಿತ್ತೆಂದು ತೋರುತ್ತದೆ. ' ಕ್ರಯ ವಿಕ್ರಯಗಳ ಸಮಸ್ತ ಸುಂಕ ' ಎಂಬ ಮಾತೂ ಇದನ್ನೇ ಸೂಚಿಸುತ್ತದೆ. ಒಂದು ಪ್ರದೇಶದ 'ಹೊರಗಣಿಂ ಬಂದು ಮಾರಿದ' ವಸ್ತುಗಳ ಮೇಲೂ ಒಂದು ಪ್ರದೇಶದಿಂದ ಹೊರಗೆ ಹೋದ ಮಾರಾಟದ ವಸ್ತುಗಳ ಮೇಲೂ ಕರವನ್ನು ಹೇರಲಾಗುತ್ತಿದ್ದಿತು.

ಮದುವೆ, ಮುಂಜಿಗಳಂತಹ ಧಾರ್ಮಿಕ-ಸಾಮಾಜಿಕ ಕಾರ್ಯಗಳ ಮೇಲೆಯೂ ಸುಂಕವಿದ್ದಿತೆಂದು ಹೇಳಲು ಖಚಿತ ಆಧಾರಗಳಿಲ್ಲದಿದ್ದರೂ ' ಮದುವೆಯ ಹಣ ' ' ಹಂದರ ಹಣ ' ' ಮದುವೆಯಾಯ ' ಎಂಬ ಪದಗಳಿಂದ ಹಾಗೆಂದು ಸೂಚಿತವಾಗುತ್ತದೆ. ಇಂಥ ಪ್ರಸಂಗಗಳಲ್ಲಿ ಜನರು ತಾವೇತಾವಾಗಿ ಧಾರ್ಮಿಕ ಕಾರ್ಯಗಳಿಗಾಗಿ ಕೆಲವೊಂದು ಹಣವನ್ನು ಕೊಡಬೇಕೆಂದು ವಿಧಿಸುತ್ತಿದ್ದರೆಂಬ ಬಗ್ಗೆ ಅನೇಕ ಉಲ್ಲೇಖಗಳಿವೆ. ಕರಡಿಕಲ್ಲಿನ ನಖರಗಳು, ಅಲ್ಲಿಯ ನಖರೇಶ್ವರ ದೇವರಿಗೆ, ಮದುವೆಯ ಪ್ರಸಂಗದಲ್ಲಿ ವರ-ವಧೂ



" ನೋಡಿದಿರಾ. ಈಗ ಜ್ಞಾಪಕವಾಯ್ತು. ಮನೇಲಿ ಜರಡಿ ತಗೊಂಬಾ ಅಂದಿದ್ರು."

ಪಕ್ಷಗಳೆರಡರಿಂದ, ಕನ್ಯೆ ವಯಸ್ಕಳಾದಾಗ, ಮಗುವಿನ ಜನನವಾದಾಗ, ಮಗುವಿನ ವಿದ್ಯಾಭ್ಯಾಸ ಆರಂಭವಾದಾಗ, ಹೊಸ ಮನೆಗೆ ಹೋಗುವಾಗ ಕೆಲವೊಂದು ಹಣವನ್ನು ಕೊಡಬೇಕೆಂದು ನಿರ್ಧರಿಸಿದರೆಂದು ಅಲ್ಲಿಯ ಶಾಸನವೊಂದರಲ್ಲಿ ವಿವರಿಸಲಾಗಿದೆ.

ತೆರಿಗೆಯನ್ನು ವಸೂಲು ಮಾಡುವ ಅಧಿಕಾರ ಪ್ರಾಂತದ ಅಧಿಕಾರವಿದ್ದಿತು. ಅವನ ಕೈಕೆಳಗಿನ ಅಧಿಕಾರಿಗಳಿಂದ ಅವನು ಕಾರ್ಯವನ್ನು ನಿರ್ವಹಿಸುತ್ತಿದ್ದನು. ತೆರಿಗೆಯ ಮುಖ್ಯ ಆಧಿಕಾರಿಗೆ ಸುಂಕಾಧಿಕಾರಿ ಎಂದು ಹೆಸರು. ಇವನಿಗೆ ತನ್ನ ಆಧೀನದಲ್ಲಿದ್ದ ಪ್ರದೇಶದಲ್ಲಿಯ ಸುಂಕವನ್ನು ಸಂಗ್ರಹಿಸಲು ಅಧಿಕಾರವಿದ್ದಂತೆ ಧರ್ಮಕಾರ್ಯಗಳಿಗೆ ತೆರಿಗೆಯನ್ನು ಸೂಟು ಬಿಡುವ ಅಧಿಕಾರವೂ ಇದ್ದಿತು. ಸುಂಕವೆರ್ಗಡೆ ಇವನ ಕೆಳಗಿನವ. ಇವನ ಕಕ್ಷೆಯಲ್ಲಿ ಒಂದು ಗ್ರಾಮವೋ, ಪಟ್ಟಣವೋ ಸೇರಿರುತ್ತಿದ್ದಿತು. ದೇಶದ ಹಣಕಾಸಿನ ವ್ಯವಸ್ಥೆಯನ್ನು ನೋಡಿಕೊಳ್ಳುವ ಕೋಶಾಧ್ಯಕ್ಷನಿಗೆ 'ಮಹಾಭಾಂಡಾರಿ' ಎನ್ನಲಾಗುತ್ತಿದ್ದಿತು ನಾಣ್ಯಪದ್ಧತಿ.

ತೆರಿಗೆಯು ಹಣದ ರೂಪದಲ್ಲಿ ಸಂಗ್ರಹಿಸಲ್ಪಡುತ್ತಿತ್ತು ಎಂದಾಗ ಆಗ ನಾಣ್ಯಗಳು ಚಲಾವಣೆಯಲ್ಲಿದ್ದವು; ಎಂದು ಬೇರೆ ಹೇಳುವ ಅಗತ್ಯವಿಲ್ಲ. ಶಾಸನಗಳಲ್ಲಿ ಟಂಕಸಾಲೆಗಳು, ವಿವಿಧವಾದ ನಾಣ್ಯಗಳ ಹೆಸರುಗಳು, ಹೇರಳವಾಗಿ ಸಿಗುತ್ತವೆ. ಕರಡಿಕಲ್ಲಿನ ಕಮ್ಮಟಕ್ಕೆ 'ಬೆಳ್ಳಿಬಂಗಾರ' ಸಂದಾಯವಾಗುತ್ತಿತ್ತು. ಲಕ್ಕುಂಡಿ ದೇಶಪ್ರಸಿದ್ಧ ಟಂಕಸಾಲೆಯಾಗಿದ್ದಿತು. ಶಾಸನಗಳಿಂದ ಕಂಡುಬರುವ ನಾಣ್ಯಗಳಲ್ಲಿ ನಿಷ್ಕ, ಗದ್ಯಾಣ, ದ್ರಮ್ಮ, ಹಾಗು ಹಣ, ಬೇಳೆ, ವೀಸ ಎಂಬವು ಮುಖ್ಯ. ನಿಷ್ಕ, ಗದ್ಯಾಣ ಬಂಗಾರದವು. ಗದ್ಯಾಣಕ್ಕೆ ಹೊನ್ನು ಅಥವಾ ಪೊಂಗದ್ಯಾಣ ಎಂಬುದು ಇನ್ನೊಂದು ಹೆಸರು. ಇದರಲ್ಲಿ ಲೊಕ್ಕಿಗದ್ಯಾಣ, ಜಗದಳ ಗದ್ಯಾಣ, ರಾಯಗದ್ಯಾಣ ಮುಂತಾದ ಬೇರೆ ಬೇರೆ ಪ್ರಕಾರಗಳಿದ್ದವು. ದಮ್ಮ ಬಂಗಾರ ಮತ್ತು ಬೆಳ್ಳಿ ಇವೆರಡರಲ್ಲಿಯೂ ಇದ್ದವೆಂದುತೋರುತ್ತದೆ. ಪಣ ಗದ್ಯಾಣಕ್ಕಿಂತ ಸಣ್ಣದು. ೧೦ ಪಣಗಳೆಂದರೆ ೧ ಗದ್ಯಾಣ ಎಂಬುದು ಶಾಸನಗಳ ಅಭ್ಯಾಸದಿಂದ ತಿಳಿದ ವಿಷಯ. ಕಾಣಿ, ಬೇಳೆ, ವೀಸಗಳ ವಿಷಯವಾಗಿ ಹೆಚ್ಚು ಅಂಶಗಳು ತಿಳಿದುಬಂದಿಲ್ಲ. ಕರ್ನಾಟಕದ ಪ್ರಮುಖ ಅರಸುಮನೆತನಗಳಾದ ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ಸೇವುಣರು ಮೊದಲಾದವರ ಕಾಲದ ಕೆಲವು ನಾಣ್ಯಗಳು ನಮಗೆ ದೊರೆತಿವೆ.

* * *

ಇದಿಷ್ಟು, ನಮ್ಮ ಪೂರ್ವಜರ ಕಾಲದ ರಾಜ್ಯದಾಡಳಿತದ ಕೆಲವು ಅಂಶಗಳ ಸ್ಥೂಲ ನಿರೂಪಣೆ. ಈ ವಿಷಯಕ ಸಾಮಗ್ರಿ ವಿಪುಲವಾದುದು. ಅವೆಲ್ಲವುಗಳ ಕೂಲಂಕಷ ಚರ್ಚೆ ಇಲ್ಲಿ ಅಸಾಂಪ್ರತ.

---

ಅಪ್ರಕಟಿತ ಶಾಸನಗಳನ್ನು ಬಳಸಿಕೊಂಡು ಈ ಲೇಖನವನ್ನು ಬರೆದು ಅದನ್ನು ಪ್ರಕಟಿಸಲು ಅನುಮತಿಯಿತ್ತ ಶ್ರೀ. ಎಚ್. ಕೆ. ನರಸಿಂಹಸ್ವಾಮಿ, Government Epigraphist for India ಇವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.





ಲೇಖಕರು : ಡಾ|| ಎನ್. ಆರ್. ರಾಜಾರಾಮರಾವ,
ಎಮ್. ಬಿ., ಬಿ. ಎಸ್.
ಮುಂಬಯಿ

# ವೈದ್ಯಕೀಯರಂಗದ ಹೊಸ ಸಂಶೋಧನೆಗಳು

**ವೈದ್ಯಕೀಯರಂಗದಲ್ಲಿ ಇಂದು ಭರದಿಂದ ಪ್ರಗತಿಯಾಗುತ್ತಿದೆ. ದಿನದಿನಕ್ಕೆ ಹೊಸ ಹೊಸ ಸಂಶೋಧನೆಗಳು ನಡೆದು ಹೊಸ ಔಷಧಿಗಳು ಹೊರಬರುತ್ತಿವೆ. ಕೆಲ ದಿವಸಗಳ ಹಿಂದೆ ಯಾವ ಕಾಯಿಲೆಗಳಿಗೆ ಔಷಧಿಗಳು ಇರಲಿಲ್ಲವೊ ಇಂದು ಆ ಕಾಯಿಲೆಗಳಿಗೆಲ್ಲ ಔಷಧಿಗಳನ್ನು ಕಂಡುಹಿಡಿಯುಲಾಗಿದೆ. ವೈದ್ಯಕೀಯ ನಿದಾನ ಪದ್ಧತಿಯಲ್ಲಿಯೂ ಬದಲಾವಣೆಗಳಾಗತೊಡಗಿವೆ. ಈ ಸಂಶೋಧನೆ ಹಾಗೂ ಬದಲಾವಣೆಗಳನ್ನು ಕುರಿತು ಈ ಲೇಖನದಲ್ಲಿ ವಿವರಿಸಲಾಗಿದೆ.**

ಹೆನ್ರಿ ಮಾರಿಯಾ ಅವರ "ಮೆಡಿಕಲ್ ಮೈಲ್ ಸ್ಟೋನ್ಸ" ಎಂಬ ಗ್ರಂಥದ ಮುನ್ನುಡಿಯಲ್ಲಿ "ಪೆನಿಸ್ಲಿಲಿನ" ಸಂಶೋಧಕ, ಸರ್ ಅಲೆಗ್ಸಾಂಡರ್ ಫ್ಲೆಮಿಂಗ್‌ರು ಹೀಗೆ ಬರೆದಿದ್ದಾರೆ : "ನನ್ನ ಪೆನಿಸಿಲ್ಲಿನ್ ಸಂಶೋಧನೆಯನ್ನು ಮುಂದುವರಿಸಿ ತಮ್ಮ ಅನ್ವೇಷಣದ ಫಲಿತಾಂಶಗಳನ್ನು ಸರ್ ಹೋವಾರ್ಡ್ ಫ್ಲಾರೆ ಮತ್ತು ಇತರರು ಪ್ರಕಟಿಸಿದಾಗ ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ ಅದರ ಬಗ್ಗೆ ಅನೇಕ ಉತ್ಪ್ರೇಕ್ಷೆಯ ಲೇಖನಗಳು ಹುಟ್ಟಿ ಜನರಿಗೆ ಪೆನಿಸಿಲ್ಲಿನ್ ಎಂದರೆ ಎಲ್ಲಾ ರೋಗಗಳನ್ನು ವಾಸಿ ಮಾಡುವ ರಾಮಬಾಣ ಎಂಬ ತಪ್ಪು ಅಭಿಪ್ರಾಯ ಹುಟ್ಟಿತು. ಸಾವಿರಾರು ರೋಗಿಗಳಿಂದ ಪ್ರತಿದಿನವೂ ನನಗೆ ಕಾಗದಗಳು ಬರಲಾರಂಭಿಸಿದುವು. ಆದರೆ ಅವರಿಗೆ ನನ್ನ ಉತ್ತರವನ್ನು ಓದಿ ಎಷ್ಟು ನಿರಾಶೆಯಾಯಿತೊ ? ಪೆನಿಸಿಲ್ಲಿನ್ ಕೆಲವೇ ರೋಗಗಳಿಗೆ ಉಪಯೋಗಕರವಾದ ಔಷಧಿ..."

ಈ ಕೋಲಾಹಲ ನಡೆದದ್ದು ೧೯೪೪ರಲ್ಲಿ. ಆಗ ಹಿಟ್ಲರನ ಏರೋಪ್ಲೇನ್‌ಗಳು ಬಾಂಬುಗಳನ್ನು ಸುರಿದು ಇಂಗ್ಲೆಂಡಿನ ಪಟ್ಟಣಗಳನ್ನು ಪುಡಿ ಪುಡಿ ಮಾಡುತ್ತಿದ್ದುವು. ಆಸ್ಪತ್ರೆಗಳಲ್ಲಿ ಸ್ಥಳವಿಲ್ಲದೆ ಶಾಲೆಗಳಲ್ಲಿ, ಚರ್ಚುಗಳಲ್ಲಿ ಗಾಯಗೊಂಡವರನ್ನು ತುಂಬಿದ್ದರು. ಗಾಯಗಳಿಂದ ಕೀವು ಹರಿದು ಕೊಳೆತು ಸತ್ತ ಜನರೆಷ್ಟೊ! ಕೊಳೆತಿದ್ದರಿಂದ ಕತ್ತರಿಸಿ ತೆಗೆದು ಹಾಕಿದ ಕೈಕಾಲುಗಳೆಷ್ಟೊ! ಯುದ್ಧ ಭೂಮಿಯ ಗತಿಯೊ ? ಉತ್ತಮವಾದ ಔಷಧಿಗಳಿಲ್ಲದೆ ಎಲ್ಲೆಲ್ಲೂ ಹಾಹಾಕಾರವೆದ್ದಿದ್ದಿತು.

ಪೆನಿಸಿಲ್ಲಿನ್ ಹುಟ್ಟಿದುದು ಆವಾಗ. ಕೀವು ತುಂಬಿದ ಗಾಯಗಳು ಪೆನಿಸಿಲ್ಲಿನ್ ಇನ್‌ಜಕ್ಷನ್‌ಗಳಿಂದ ಎರಡು, ಮೂರು ದಿನದಲ್ಲೇ ಹತೋಟಿಗೆ ಬಂದುದನ್ನು ಕಂಡು ವೈದ್ಯರಿಗೆ ಆದ ಆನಂದ ಹೇಳತೀರದು. ಆಗ ಇದಕ್ಕೆ ಎಂ. ಆ್ಯಂಡ್ ಬಿ. ೬೯೩, ಮತ್ತು ಸಲ್ಫೆನಾಮೈಡ್ (Sulfonamide) ಎಂಬವನ್ನು ಬಿಟ್ಟರೆ ಬೇರೆ ಔಷಧಿಗಳು ಇರಲಿಲ್ಲ.

ಆದರೆ ಪೆನಿಸಿಲ್ಲಿನ್ ಇನ್‌ಜಕ್ಷನ್ ಕೊಟ್ಟ ಮೂರು ಗಂಟೆಗಳಲ್ಲಿ ಪೂರ್ತಿ ಮೂತ್ರದಲ್ಲಿ ಹೋಗಿಬಿಡುತ್ತಿತ್ತು. ಪೆನಿಸಿಲ್ಲಿನ್ನನ್ನು ತಯಾರಿಸಲು ದೊಡ್ಡ ಕಾರ್ಖಾನೆಗಳು ಇನ್ನೂ ಹುಟ್ಟಿರಲಿಲ್ಲ. ಆದ್ದರಿಂದ ಆಗ ಪೆನಿಸ್ಸಿಲ್ಲಿನ ಕೊಟ್ಟ ರೋಗಿಗಳ ಮೂತ್ರದಿಂದ ಅದನ್ನು ಮತ್ತೆ ತೆಗೆದು ಉಪಯೋಗಿಸುತ್ತಿದ್ದರು. ೧೯೪೨ ರಲ್ಲಿ ಪೆನಿಸಿಲ್ಲಿನ ಮಾರಾಟಕ್ಕೆ ಬಂದಾಗ ೧ ಲಕ್ಷ ಯುನಿಟ್ಟಿನ ಒಂದು ಶೀಶೆಗೆ ೩೬ ರೂಪಾಯಿ ! ಅಷ್ಟು ಒಂದು ದಿನಕ್ಕೆ ಸಾಲುತ್ತಿರಲಿಲ್ಲ. ಈಗ ೪ ಲಕ್ಷ ಯೂನಿಟ್ಟಿನ ಶೀಶೆಗೆ ೧೧ ಆಣೆ. ಪೆನಿಸಿಲ್ಲಿನ್ ಬೇಡವಾದರೆ ಸ್ಟ್ರೇಪ್ಟೋಮೈಸೆನ್, ಕ್ಲೋರೋಮೈಸೆಟಿನ್, ಆರಿಯೋಮೈಸಿನ್ ಇತ್ಯಾದಿ ಹಲವು ಔಷಧಿಗಳು ಸಿದ್ಧವಾಗಿವೆ. ಆದರೆ ವೈದ್ಯಕೀಯ ರಂಗದಲ್ಲಿ ಇಷ್ಟೆಲ್ಲಾ ಸಂಶೋಧನೆ ನಡೆದು ಉತ್ತಮವಾದ ಔಷಧಿಗಳು ಬರುತ್ತಿರುವುದು ೧೯೩೫ ರಿಂದ ಈಚೆಗೆ. ಅದಕ್ಕೆ ಮೊದಲೊ ?

ಅದಕ್ಕೂ ಹಿಂದಿನ ದಿನಗಳನ್ನು ನೆನೆಸಿಕೊಂಡರೆ ಈಗಲೂ ಮೈ ಜುಂ ಎನ್ನುತ್ತದೆ. ಆಗ ಯಾವ ಆಧಾರದ ಮೇಲೆ ವೈದ್ಯರು ಚಿಕಿತ್ಸೆ ಮಾಡುತ್ತಿದ್ದರು? ಟೈಫಾಯ್ಡ್ ರೋಗಿಗಳಿಗೆ ಆಸ್ಪತ್ರೆಗಳಲ್ಲಿ ಒಂದು ಬೇರೆ ವಾರ್ಡ್ ಇತ್ತು. ಇಪ್ಪತ್ತೊಂದು ದಿನದ ಜ್ವರದಲ್ಲಿ ಬೆಂದು ಬೂದಿಯಾದವರೇ ಹೆಚ್ಚು. ಜ್ವರ ಸ್ವಲ್ಪ ತಗ್ಗಲೆಂದು Diaphoretic mixture ಕೊಡುತ್ತಿದ್ದರು. ಇನ್ನಾವ ಔಷಧಿಯೂ ಇರಲಿಲ್ಲ. ಈಗ ಕ್ಲೋರೋಮೈಸಟನ್ ಕೊಟ್ಟ ೩ ದಿನಗಳಲ್ಲಿ ರೋಗ ಹತೋಟಿಗೆ ಬಂದಿರುತ್ತದೆ. ನ್ಯುಮೋನಿಯಾ ರೋಗಕ್ಕೆ anti-phlogestin ಪಟ್ಟಿಯನ್ನು ಎದೆಗೆ ಕಟ್ಟುತ್ತಿದ್ದರು. ಮುದುಕರು ಸಾಧಾರಣವಾಗಿ ಸಾಯುತ್ತಿದ್ದುದೇ ನ್ಯುಮೋನಿಯಾದಿಂದ. ಮಕ್ಕಳಲ್ಲಿ ನೂರಕ್ಕೆ ಅರವತ್ತು ಸಾಯುತ್ತಿದ್ದರು. ಈಗ ( ಪೆನಿಸಿಲ್ಲಿನ್ ಚಿಕಿತ್ಸೆ ಬಂದ ಮೇಲೆ) ನೂರಕ್ಕೆ ಎರಡೋ ಮೂರೋ "ಸೀರಿಯಸ್ ಕೇಸ್"ಗಳು ಸಾಯುತ್ತವೆ, ಅಷ್ಟೆ. ಫರಂಗಿ ರೋಗಕ್ಕೆ (Syphilis) ವಾರಕ್ಕೆ ಎರಡು ಇನ್‌ಜಕ್ಷನ್‌ನಂತೆ ಎರಡು ವರ್ಷಗಳ ಚಿಕಿತ್ಸೆ ಇತ್ತು. ಯಾರೂ ಪೂರ್ಣ ಚಿಕಿತ್ಸೆ ತೆಗೆದುಕೊಳ್ಳುತ್ತಿರಲಿಲ್ಲ. ಆದ್ದರಿಂದ ರೋಗ ಸುಲಭವಾಗಿ ಹರಡುತ್ತಿತ್ತು. ಕೆಲವು ದೇಶಗಳಲ್ಲಿ ಶೇಕಡಾ ಹತ್ತು ಜನಕ್ಕೆ ಈ ರೋಗವಿತ್ತು. ಈಗ ಹತ್ತು ದಿನದ ಪೆನಿಸಿಲ್ಲಿನ್ ಚಿಕಿತ್ಸೆ ಸಾಕು. ರಷ್ಯ, ಜಪಾನ್ ಇತ್ಯಾದಿ ದೇಶಗಳಲ್ಲಿ ಈಗ ಈ ರೋಗದ ಹೆಸರೇ ಇಲ್ಲವಂತೆ. (ಭಾರತದಲ್ಲಿ ಈಗಲೂ ಎರಡು ಕೋಟಿ ರೋಗಿಗಳಿದ್ದಾರೆ). ಕ್ಷಯರೋಗಕ್ಕೆ ಆಗ ಇದ್ದ ಚಿಕಿತ್ಸೆಯೆಂದರೆ ಸ್ಯಾನಿಟೋರಿಯಂಲ್ಲಿನ ತಿಂಗಳಗಟ್ಟಲೆ ಮಲಗಿರುವುದು, 'ಕಾಡ್-ಲಿವರ ಎಂಣೆ, ಕ್ಯಾಲ್ಸಿಯಂ ಗ್ಲುಕೋನೇಟ ಇಂಜಕ್ಶನ್ನು ಮತ್ತು ಸೂರ್ಯ ಸ್ನಾನ'ಗಳು, ರೋಗ ಹೆಚ್ಚಿದರೆ ಆಪರೇಷನ್, ಇತ್ಯಾದಿ ಅಷ್ಟೆ. ರೋಗವಾಸಿಯಾಗಿ ಹಿಂದಿರುಗುತ್ತಿದ್ದವರು ಕಮ್ಮಿ. 'ವಾಸಿ'ಯಾದರೂ ಮತ್ತೆ ಯಾವಾಗಲಾದರೂ ರೋಗ ಮರಕಳಿಸುತ್ತಿತ್ತು. ಈಗ ಸ್ಟ್ರೆಪ್ಟೊಮಿಸಿನ್ ಪಿ.ಏ.ಎಸ್. ಆಸೊನಿಯಾಜಿಡ್, ಇತ್ಯಾದಿ ಔಷಧಿಗಳು ಬಂದಮೇಲೆ ಪಾಶ್ಚಾತ್ಯ ದೇಶಗಳಲ್ಲಿ ಸ್ಯಾನಿಟೋರಿಯಂಗಳನ್ನು ಒಂದೊಂದಾಗಿ ಮುಚ್ಚುತ್ತಿದ್ದಾರಂತೆ. ಭಾರತದಲ್ಲಿ ೫೦ ಲಕ್ಷ ಕ್ಷಯರೋಗಿಗಳಿದ್ದಾರೆ. ವರ್ಷಕ್ಕೆ ೫ ಲಕ್ಷ ಸಾಯುತ್ತಾರೆ. ಸ್ಯಾನಿಟೋರಿಯಂಗಳಲ್ಲಿ ೨೬ ಸಾವಿರ ಹಾಸಿಗೆಗಳು ಮಾತ್ರ ಇವೆ. ದೇಶದ ವರಮಾನವನ್ನೆಲ್ಲಾ ವೆಚ್ಚ ಮಾಡಿದರೂ ಉಳಿದವರ ಚಿಕಿತ್ಸೆಗೆ ಸಾಕಾಗುವ ಹಾಗಿಲ್ಲ !

ಮಲೇರಿಯಾದಿಂದ ೩೦ ಕೋಟಿ ಜನ ಅನುಭವಿಸುತ್ತಿದ್ದರು. ವರ್ಷಕ್ಕೆ ೩೦ ಲಕ್ಷದಂತೆ ಸಾಯುತ್ತಿದ್ದರು. ಭಾರತದಲ್ಲೇ ವರ್ಷಂಪ್ರತಿ ೧೨ ಲಕ್ಷ ಸಾಯುತ್ತಿದ್ದರು. (ಈಗಲೂ ಮೂರು ಲಕ್ಷ ಸಾಯುತ್ತಿದ್ದಾರೆ.) ಕ್ವಿನೀನ್ ಔಷಧಿ ತಿಂದು ಕಿವುಡಾದ ಜನರೆಷ್ಟೊ ! ಪಾಲಾಡ್ರಿನ್, ಕಾಮಾಕ್ವಿನ್, ಕ್ಲೊರೊಕ್ವಿನ್, ಡಾರಾಪ್ರಿಮ್, ಪೆಂಟಾಕ್ವಿಮ್ ಇತ್ಯಾದಿ ಔಷಧಿಗಳು ಬಂದಿರುವುದರಿಂದ ೧೯೬೫ರ ಹೊತ್ತಿಗೆ ಭಾರತದಲ್ಲಿ ಮಲೇರಿಯಾ ಸಂಪೂರ್ಣವಾಗಿ ಮಾಯವಾಗಬಹುದು ಎಂಬ ಅಭಿಪ್ರಾಯವಿದೆ.

ಹೀಗೆಯೇ ಪ್ರತಿಯೊಂದು ರೋಗಕ್ಕೂ ಹಲವಾರು ಹೊಸ ಔಷಧಿಗಳಿವೆ. (ಅಮೇರಿಕಾದಲ್ಲಿ ರಜಿಸ್ಟರ ಆದ ಔಷಧಿಗಳ ಸಂಖ್ಯೆ ಲಕ್ಷಕ್ಕಿಂತ

ಹೆಚ್ಚು !) ವಿಜ್ಞಾನದ ದೃಷ್ಟಿಯಿಂದ ನೋಡಿದರೆ ಎರಡನೆಯ ಮಹಾಯುದ್ಧ ಒಂದು ದೊಡ್ಡ ಸಹಾಯವನ್ನೇ ಮಾಡಿತೆನ್ನಬಹುದು. ಅದಕ್ಕೆ ಮೊದಲು ಅನ್ವೇಷಣಗಳು ಕೆಲವು ಕಾಲೇಜಗಳಲ್ಲಿ ಮತ್ತು ಕೆಲವು ದೊಡ್ಡ ಕೈಗಾರಿಕೆಯ ಕೇಂದ್ರಗಳಲ್ಲಿ ಮಾತ್ರ ಸ್ವಲ್ಪ ಸ್ವಲ್ಪವಾಗಿ ನಿಧಾನವಾಗಿ ಸಾಗುತ್ತಿದ್ದುವು. ಯಾವ ಮಾರ್ಗದಲ್ಲಿ ಅನ್ವೇಷಣ ನಡೆಸಬೇಕೆಂಬುದೇ ಆಗಿನ ಪ್ರಶ್ನೆಗಳಾಗಿದ್ದುವು. ಅನ್ವೇಷಣಕ್ಕಾಗಿ ಸಿಗುತ್ತಿದ್ದ ಅಲ್ಪಸ್ವಲ್ಪ ಹಣವನ್ನು ಬಹಳ ಎಚ್ಚರಿಕೆಯಿಂದ ಉಪಯೋಗಿಸಬೇಕಾಗಿತ್ತು. ಹೊಸ ದಾರಿಗಳಲ್ಲಿ ಹೆಜ್ಜೆಯಿಡಲು ಹಿಂದೆಗೆಯುವಂತಾಗುತ್ತಿತ್ತು. ಯುದ್ಧ ಸುರುವಾದೊಡನೆ ಹಣದ ಪ್ರಶ್ನೆ ಮರೆಯಿತು. ಪ್ರತಿ ದಿನವೂ ನೂರಾರು ಕೋಟಿ ರೂ. ಗಳು ಯುದ್ಧಕ್ಕೆ ವೆಚ್ಚವಾಗುತ್ತಿದ್ದುದರಿಂದ ಅನ್ವೇಷಣಗಳಿಗೆ ಕೇಳಿದಷ್ಟು ಹಣ ದೊರಕಿತು. "ಎಷ್ಟಾದರು ವೆಚ್ಚ ಮಾಡಿರಿ, ಆದರೆ ಬೇಗ ಹೊಸ ಔಷಧಿಗಳನ್ನು ಕೊಡಿರಿ" ಎಂಬ ಸರಕಾರದ ಅಪ್ಪಣೆ ದೇಶಾದ್ಯಂತ, ಪ್ರತಿ ದೇಶದಲ್ಲೂ ಹೊರಟಿತು.

ಜಪಾನೀಯರು ವಿಷ್ಯದ ಬಹುಭಾಗವನ್ನು ಆಕ್ರಮಿಸಿದ್ದರು. ಕ್ವಿನೀನಗೆ ಬೇಕಾದ ಸಿಂಕೋನ ಮರ ಬೆಳೆಯುವ ಸುಮಾತ್ರ ಜಾವಾದ್ವೀಪಗಳು ಜಪಾನಿಯರ ವಶವಾಗಿದ್ದುವು. ಅವರೊಡನೆ ಯುದ್ಧಕ್ಕೆ ಹೋದ ಅಮೇರಿಕನ್, ಬ್ರಿಟಿಷ ಮತ್ತು ಭಾರತೀಯ ಸೈನಿಕರಲ್ಲಿ ಬಹುಮಂದಿ ಮಲೇರಿಯಾ, ಮತ್ತು ಫೈಲೇರಿಯಾ (ಆನೆಕಾಲು ರೋಗ) ಗಳಿಗೆ ತುತ್ತಾದುದರಿಂದ ಯುದ್ಧದ ವೇಗ ತಗ್ಗಿತು. ಅಟೆಬ್ರಿನ್ ( Atebrin ) ಮತ್ತು ಕ್ವಿನೀನಗಳೆರಡೂ ಮಲೇರಿಯಾಕ್ಕೆ ಅಷ್ಟು ಒಳ್ಳೆಯ ಔಷಧಿಗಳಾಗಿರಲಿಲ್ಲ. ಆದರೆ ಇದ್ದುದೇ ಅವೆರಡು. ಆನೆಕಾಲು ರೋಗಕ್ಕೆ ಸರಿಯಾದ ಔಷಧಿಯೇ ಇರಲಿಲ್ಲ. ಹಾಗೆಯೇ ಆಮಶಂಕೆಗೆ Emetine injection ಬಿಟ್ಟರೆ ಬೇರೆ ಇರಲಿಲ್ಲ. ಆ ಔಷದಿ ಕೊಟ್ಟವರಲ್ಲಿ ಬಹುಮಂದಿಗೆ ಇನ್-ಜಕ್ಷನ್ ಕೊಟ್ಟ ಜಾಗ ಕೊಳೆತುಹೋಗುತ್ತಿತ್ತು. ಇನ್ನು ಟೈಫಸ್, ಟೈಫಾಯ್ಡ್, ಫರಂಗಿರೋಗ ಇತ್ಯಾದಿಗಳಿಂದ ಹಾಸಿಗೆ ಹಿಡಿದ ಸಿಪಾಯಿಗಳ ಸಂಖ್ಯೆಯೆಷ್ಟೊ! ಬಂದೂಕ ಹಿಡಿದು ಮುಂದೆ ನುಗ್ಗುವವರ ಸಂಖ್ಯೆ ದಿನದಿನಕ್ಕೆ ಕಡಿಮೆಯಾಗುತ್ತ ಬಂತು.

ಆಗಿನ ವಿಜ್ಞಾನಿಗಳ ಆತುರ ವರ್ಣಿಸತೀರದು. ರಸಾಯನಶಾಸ್ತ್ರಜ್ಞರು ಮನಸ್ಸಿಗೆ ತೋಚಿದ್ದನ್ನೆಲ್ಲಾ ಸಂಯೋಜಿಸಿದರು. ಸಾವಿರಾರು ಹೊಸ "ಔಷಧಿ" ಗಳನ್ನು ಪರೀಕ್ಷೆಗಾಗಿ ಪ್ರಾಣಿಗಳ ಮೇಲೆ ಪ್ರಯೋಗಿಸಿದರು. ಕೋಳಿಮರಿಗಳಿಗೆ ಮಲೇರಿಯಾ ಕಾಯಿಲೆ ಉಂಟುಮಾಡಿ ಅವುಗಳ ಮೇಲೆ ನಾಲ್ಕೈದು ಸಾವಿರ "ಔಷಧಿ" ಗಳನ್ನು ಪ್ರಯೋಗ ಮಾಡಿದ ಮೇಲೆ ಪಾಲಾಡ್ರಿನ್ ಮತ್ತು ಕ್ಲೋರೋಕ್ವಿನ್‌ಗಳು ಸಿಕ್ಕಿದುವು. ಒಂದು ಜಾತಿಯ ಇಲಿ ( Cotton rat ) ಗೆ ಆನೆಕಾಲು ರೋಗ ಉಂಟುಮಾಡಿ ಅದರ ಮೇಲೆ ಸಾವಿರಾರು "ಔಷಧಿ" ಗಳನ್ನು ಪ್ರಯೋಗಿಸಿದ ಮೇಲೆ ಹೆಟ್ರಾಝಾನ್ ಸಿಕ್ಕಿತು. ಈ ಔಷಧಿಗಳನ್ನು ಮನುಷ್ಯರ ಮೇಲೆ ಪ್ರಯೋಗಿಸಲು ಮೊದಲು ರೋಗಪೀಡಿತರಾದ ಸ್ವಯಂಸೇವಕ ಸೈನಿಕರ ತಂಡಗಳ ಮೇಲೆಯೇ ಉಪಯೋಗಿಸಿದರು. ರೋಗವಿಲ್ಲದ ಸೈನಿಕರಿಗೆ ರೋಗವನ್ನು ಮೊದಲು ಕೊಟ್ಟು ನಂತರ ಔಷಧಿ ಕೊಡಲಾಯಿತು. ವಿಜ್ಞಾನಿಗಳು ಯುದ್ಧಭೂಮಿಗೇ ಹೋಗಿ ಅಲ್ಲಿಯ ಸೈನಿಕರಿಗೆ ಕೊಡುತ್ತಿದ್ದ ಚಿಕಿತ್ಸೆಯ ಮೇಲೆ ಅನ್ವೇಷಣ ನಡೆಸಿದರು. ಆಗಿನ ಅನ್ವೇಷಣದ ಉತ್ಸಾಹವನ್ನು ವರ್ಣಿಸಲು ಸಾಧ್ಯವಿಲ್ಲ. ಜಪಾನೀಯರನ್ನು ಹಿಮ್ಮೆಟ್ಟಿಸಲು ಈ ಔಷಧಿಗಳೂ ಬಹಳ ಸಹಾಯ ಮಾಡಿದುವು ಎಂಬ ಹೆಮ್ಮೆ ವಿಜ್ಞಾನಿಗಳಿಗಿದೆ.

ಯುದ್ಧಕಾಲದಲ್ಲಿ ಸಾಗುತ್ತಿದ್ದ ಅನ್ವೇಷಣೆಯ ವೇಗ ಯುದ್ಧ ಕಳೆದನಂತರ ತಗ್ಗಲೇ ಇಲ್ಲ. ನೂರಾರು ಹೊಸ ಮಾರ್ಗಗಳು ವಿಜ್ಞಾನಿಗಳನ್ನು ಆಕರ್ಷಿಸಿದುವು. ದೊಡ್ಡ ಔಷಧಿಯ ಕಂಪೆನಿಗಳು ಕೋಟ್ಯಂತರ ರೂಪಾಯಿಗಳ ವೆಚ್ಚಮಾಡಲು ಸಿದ್ಧವಾದುವು. ಇನ್‌ಶೂರೆನ್ಸ ಕಂಪನಿಗಳು, ಧರ್ಮಸಂಸ್ಥೆಗಳು ಅನ್ವೇಷಣಗಳಿಗೆ ಸಹಾಯ ಮಾಡಿದುವು. ವೈದ್ಯಕೀಯ ವಿಜ್ಞಾನದ ಎಲ್ಲಾ ಅಂಗಗಳಲ್ಲೂ ಒಟ್ಟಿಗೆ ಮುನ್ನಡೆ ಸಾಗಿತು.

ಒಂದೊಂದು ಕಾಹಿಲೆಗೂ ನಾಲ್ಕಾರು ಔಷಧಿಗಳು ತಯಾರಾಗಿವೆ. ಆದರೆ ಆ ನಾಲ್ಕಾರು ಔಷಧಿಗಳು ಮುಂದೆ ಬರಲು ಯೋಗ್ಯವಲ್ಲವೆಂದು ನಿರಾಕೃತವಾದ ಔಷಧಿಗಳ ಸಂಖ್ಯೆಯೆಷ್ಟು ? ಅಮೇರಿಕಾದಲ್ಲಿ ಪ್ರತಿಯೊಂದು ಉಪಯುಕ್ತವಾದ ಔಷಧಿಯ ಚರಿತ್ರೆಯಲ್ಲೂ ಸರಾಸರಿ ನಾಲ್ಕು ಸಾವಿರ ನಿರಾಕೃತ ಔಷಧಿಗಳ ಚರಿತ್ರೆಯಿದೆ. ಕ್ಷಯಕ್ಕೆ ಸಿದ್ಧೌಷಧಿಯಾದ ಸ್ಟ್ರೆಪ್ಟೋಮಿಸಿನ್ ಒಂದು ಜಾತಿಯ ಮುಗ್ಗಲು, ಅಥವ ಬೂರಸು ( Mold ), ಅದು ಮಣ್ಣಿನಲ್ಲಿರುತ್ತದೆ. ಆದರೆ ಅದನ್ನು ಪತ್ತೆ ಹಚ್ಚಲು ನಾಲ್ಕು ಸಹಸ್ರ ಸ್ಥಳಗಳಿಂದ (ಭೂಮಿಯ ಎಲ್ಲಾ ಕಡೆಗಳಿಂದಲೂ) ಮಣ್ಣನ್ನು ತರಿಸಿ ಅದರಲ್ಲಿರುವ ಎಲ್ಲಾ ಜಾತಿಯ ಬೂರಸುಗಳನ್ನೂ ಪರೀಕ್ಷಿಸಿ ಕೊನೆಗೆ, ಆರು ವರ್ಷಗಳು ಒಂದೇ ಸಮನೆ ದುಡಿದ ಮೇಲೆ, ಪತ್ತೆ ಮಾಡಲಾಯಿತು. ಕ್ಲೋರೋಮೈಸೆಟಿನ್ (Chloromycetin), ಆರೊಮಿಸಿನ್, ಟೆರಾಮಿಸಿನ್‌ಗಳೂ ನೆಲದಲ್ಲಿ ಬೆಳೆಯುವ ಬೂರಸಿನಿಂದ ತಯಾರಾದುವು. ಆದರೆ ಅವುಗಳನ್ನು ಪತ್ತೆಹಚ್ಚಲು ೮-೧೦ ವರ್ಷ ಪ್ರಪಂಚದ ಎಲ್ಲಾ ಕಡೆಗಳಿಂದಲೂ ಒಂದೊಂದು ಚಮಚ ಮಣ್ಣನ್ನು ತರಿಸಿ ಪರೀಕ್ಷಿಸಬೇಕಾಯಿತು. ಆದ ವೆಚ್ಚವೆಷ್ಟು ! ಆದರೆ ಈಗ ಟೈಫಾಯ್ಡ್, ಟೈಫಸ್, ಟ್ರಾಕೋಮಾ (ಕಣ್ಣಿನ ರೋಗ) ಇತ್ಯಾದಿ ನೂರಾರು ಕ್ರಿಮಿಗಳಿಂದಾದ ರೋಗಗಳಿಗೆ ಇವು ಸಿದ್ಧೌಷದಗಳಾಗಿವೆ. ಟ್ರಾಕೋಮಾ ಒಂದರಿಂದಲೇ ಲಕ್ಷಾಂತರ ಮಂದಿಗೆ ಕಣ್ಣು ಹೋಗಿದೆ. ಭಾರತದ ಇಪ್ಪತ್ತು ಲಕ್ಷ ಕುರುಡರಲ್ಲಿ ಬಹುಮಂದಿಗೆ ಟ್ರಾಕೋಮಾದಿಂದಲೇ ಕಣ್ಣುಹೋಗಿದೆ. ಈಗ ಆರಿಯೋಮೈಸಿನ್ ಮಲಾಮನ್ನು ಕಣ್ಣಿಗೆ ಹಾಕುವುದರಿಂದ ಪ್ರತಿವರ್ಷ ಭಾರತದಲ್ಲೇ ನಾಲ್ಕೈದು ಸಾವಿರ ಜನರು ಕುರುಡರಾಗುವುದು ತಪ್ಪುತ್ತಿದೆ. ಟೈಫಾಯ್ಡ್‌ದಿಂದ ಈಗ ಸಾಯುವವರು ಕಡಿಮೆ.

ಹೀಗೆ ಬಂದಿರುವ ಹೊಸ ಔಷಧಿಗಳ ಚರಿತ್ರೆಯನ್ನು ಸೂಕ್ಷ್ಮವಾಗಿ ನೋಡಿದರೆ ಅವುಗಳನ್ನು ಸಂಯೋಜಿಸುವ ಕಲ್ಪನೆ ಹುಟ್ಟಿದುದು ಅನೇಕ ವೇಳೆ ಗಿಡಮೂಲಿಕೆಗಳಲ್ಲಿರುವ ಔಷಧಿಗಳ ಮಾದರಿಯ ಮೇಲೆ ಎಂಬ ಆಶ್ಚರ್ಯದ ಸಂಗತಿ ತಿಳಿಯುತ್ತದೆ. ಮಲೇರಿಯಾಕ್ಕೆ ಇರುವ ಮುಖ್ಯ ಔಷಧಿಗಳೆಲ್ಲಾ ಕ್ವಿನೀನ್‌ನ ಮೂಲರೂಪವನ್ನು ಹೊಂದಿಯೇ ಇವೆ. ಕ್ವಿನೀನ್ ಒಂದು ಮರದ ಚಕ್ಕೆಯ ಔಷಧಿ. ಹೊಟ್ಟೆನೋವಿಗೆ ದತ್ತೂರಿಗಿಡದ ( ಉಮ್ಮತ್ತಿಗಿಡ ) ಔಷಧಿ ಎಟ್ರೋಪೀನ್ ಎಂಬುದು ಈಗಲೂ ಚಾಲತಿಯಲ್ಲಿದೆ. ಆದರೆ ಅದರ ಆಧಾರದ ಮೇಲೆ ಸಂಯೋಜಿತವಾಗಿ ಅದಕ್ಕಿಂತಲೂ ಬಹುಮಟ್ಟಿಗೆ ಉತ್ತಮವೆನಿಸಿಕೊಂಡಿರುವ ಔಷಧಿಗಳೆಷ್ಟೊ! ಮನುಷ್ಯನ, ಮತ್ತು ಪ್ರಾಣಿಗಳ ದೇಹದಲ್ಲಿ ಎಡ್ರೀನಲ್ ಎಂಬ ಗ್ರಂಥಿಯಲ್ಲಿ ಕಾರ್ಟಿರೋನ್ ಎಂಬ ದ್ರವ ತಯಾರಾಗುತ್ತದೆ. ಅದರ ಆಧಾರದ ಮೇಲೇ ತಯಾರಾದವು ಕೀಲುನೋವಿಗೆ ಹೆಸರುವಾಸಿಯಾದ ಇಂದಿನ milli-corten, prednisone ಇತ್ಯಾದಿ.

ಭಾರತದ ಪ್ರಖ್ಯಾತ ಸರ್ಪಗಂಧಿ ಮೂಲಿಕೆಯಿಂದ ತಯಾರಾದ ರಿಸರ್ಪಿನ್ ಎಂಬ ಔಷಧಿ ರಕ್ತದ ಒತ್ತಡಕ್ಕೂ ಹುಚ್ಚಿಗೂ ಸಿದ್ಧೌಷಧಿಯೆಂದು ತಿಳಿದು ಇನ್ನೂ ಹತ್ತು ವರ್ಷವಾಗಿದೆ. ಆಗಲೆ ಅದಕ್ಕಿಂತ ಉತ್ತಮವಾದ ಔಷಧಿಗಳು ಮಾರಾಟಕ್ಕೆ ನೂರಾರು ಬಂದಿವೆ. ಹುಚ್ಚಿಗಲ್ಲದೆ ಕೇವಲ ಭಯ, ಕಾತರತೆ, ಜಿಗುಪ್ಸೆ, ಇತ್ಯಾದಿ ಭಾವೋದ್ರಿಕ್ತ ಪರಿಸ್ಥಿತಿಗಳಿಗೂ ಇವು ಒಳ್ಳೆಯ ಔಷಧಿಗಳಾಗಿವೆ. ಇವುಗಳಲ್ಲಿ ಮೆಪ್ರೊಬಮೇಟ ( meprobamate ) ಮೆಲೇರಿಯಲ್ ( mel-leril ) ಅಟ್ರಾಕ್ಸ ( atarax ) ಇತ್ಯಾದಿಗಳು ಪ್ರಖ್ಯಾತವಾಗಿವೆ.

ಅನೇಕ ದೈಹಿಕ ರೋಗಗಳಿಗೆ ಮಾನಸಿಕ ಕಾರಣಗಳೇ ಮುಖ್ಯವೆಂದು ( ರಕ್ತದಒತ್ತಡ, ಹೊಟ್ಟೆಶೂಲೆ, ದಮ್ಮು, ಇಸಬು, ಅರೆದಲೆನೋವು, ಇತ್ಯಾದಿ) ತಿಳಿದಾಗಿನಿಂದ ಆ ರೋಗಗಳಿಗೆ ಬೇಕಾದ ಔಷಧಿಗಳ ಜೊತೆಗೆ ಮನಃಶಾಂತಿಯನ್ನು ತರುವ ಔಷಧಿಗಳನ್ನು ಕೆಲವರು ಪ್ರಯೋಗಿಸಿದ್ದಾರೆ.

ಸಿಹಿಮೂತ್ರ ರೋಗಕ್ಕೆ (Diabetes) ಇದುವರೆಗೆ Insulin ಎಂಬ ಔಷಧಿ (ಪ್ರಾಣಿಗಳಿಂದ ಬಂದುದು) ಒಂದೇ ಇತ್ತು. ಈ ಔಷಧಿಯನ್ನು ಇನ್‌ಜಕ್ಷನ್ ಮೂಲಕವೇ ಕೊಡಬೇಕಾಗಿತ್ತು. ಈಗ ಬೇರೆ ಜಾತಿಯ ಔಷಧಿಗಳು ಬಂದಿವೆ. ಅವನ್ನು ಮಾತ್ರೆಯ ರೂಪದಲ್ಲಿ ತಿನ್ನಬಹುದು. ದಕ್ಷಿಣ ಅಮೇರಿಕಾದ ಜನರು ಹಾಗಲುಕಾಯಿಯ ರಸವನ್ನು ಈ ರೋಗಕ್ಕೆ ಉಪಯೋಗಿಸುತ್ತಿದ್ದರು. ಈಗ ಭಾರತದಲ್ಲೂ ಬಹುಮಂದಿ ಇದನ್ನು ಉಪ-ಯೋಗಿಸುತ್ತಿದ್ದಾರೆ. (ಇದರಲ್ಲಿರುವ ಮುಖ್ಯವಾದ ಔಷಧಿಯನ್ನು ಈ ಲೇಖಕರೇ ಈಚೆಗೆ ಸಂಶೋಧಿಸಿದ್ದಾರೆ.) ಭಾರತದ ಇನ್ನೊಂದು ಮೂಲಿಕೆಯನ್ನು ಈ ರೋಗಕ್ಕೆ ಬಹುಮಂದಿ ಪ್ರಯೋಗಿಸಿ ನೋಡಿ ಕೈಬಿಟ್ಟಿದ್ದರು. ಅದನ್ನು ಕಣಿಗಿಲೆ ಗಿಡ (Vinca rosea) ಎನ್ನುತ್ತಾರೆ. ಆದರೆ ಅಮೇರಿಕಾದ Lilly ಕಂಪೆನಿಯವರು ಅದರಿಂದ ಪದಗಳಲೆಗಳ ಕ್ಯಾನ್ಸರ್ ರೋಗಕ್ಕೆ (Hodgkin's disease) ಒಳ್ಳೆಯ ಔಷಧಿಯನ್ನು (Velban) ತಯಾರಿಸಿದ್ದಾರೆ. ಅದರಿಂದ ಇತರ ಜಾತಿಯ ಕ್ಯಾನ್ಸರ್‌ಗಳಿಗೂ ಉಪಯೋಗವಾಗಹುದೆಂಬ ನಿರೀಕ್ಷೆಯಿದೆ. ಒಂದು ವೇಳೆ ಅದೇ ಆಗದಿದ್ದರೆ ಅದರ ಮೂಲರೂಪದ ಆಧಾರದ ಮೇಲೆ ಹೊಸ ಔಷಧಿಗಳನ್ನು ಸಂಯೋಜಿಸಿ ಉತ್ತಮ ಜಾತಿಯ ಔಷಧಿಗಳನ್ನು ಕ್ಯಾನ್ಸರಗಾಗಿ ತಯಾರಿಸಲು ಸಾಧ್ಯವಿದೆ.

ಗರ್ಭವತಿಯರ ಗರ್ಭವನ್ನು ಕಾಪಾಡಲು ಗರ್ಭ ಜನಕಾಂಗದಲ್ಲಿ Progesterone ಎಂಬ ದ್ರವ ತಯಾರಾಗುತ್ತದೆ. ಅದರ ಇನ್‌ಜಕ್ಶನ್ ಕೊಟ್ಟರೆ ಹೊಸ ಮೊಟ್ಟೆಯು ತಯಾರಾಗುವುದು ನಿಲ್ಲ ಬಹುದೆಂಬ ಕಲ್ಪನೆಯ ಮೇಲೆ ಅನ್ವೇಷಣ ನಡೆಸಿ, ಅದರ ಆಧಾರದ ಮೇಲೆ ಹೊಸ ಔಷಧಿ ಗಳನ್ನು ತಯಾರಿಸಿದ್ದಾರೆ. ಈ ಔಷಧಿಗಳನ್ನು ಆಗಾಗ್ಗೆ ತಿನ್ನುವುದರಿಂದ ಮಕ್ಕಳಾಗುವುದನ್ನು ನಿಲ್ಲಿಸಲು ಸಾಧ್ಯವಿದೆ. ಪಾಶ್ಚಾತ್ಯ ದೇಶದಲ್ಲಿ ಸಂತಾನನಿರೋಧಕ್ಕೆ ಆಗಲೆ ಈ ಔಷಧಿ ಉಪ ಯೋಗವಾಗುತ್ತಿದೆ. ಕಲಕತ್ತೆಯ ವಿಜ್ಞಾನಿಯೊ ಬ್ಬರು ಈಚೆಗೆ ಸಂತಾನನಿರೋಧಕ್ಕೆ ಒಂದು ಜಾತಿಯ ಗಿಡದ ಬೀಜಗಳಿಂದ ಔಷಧಿಯನ್ನು ತಯಾರಿಸಿದ್ದಾರೆ. ಒಂದು ಮಾತ್ರೆಯನ್ನು ಒಂದು ಸಲ ತಿಂದರೆ ವರ್ಷದ ವರೆಗೆ ಮಕ್ಕಳಾಗುವುದಿಲ್ಲ ವಂತೆ! ಆದರೆ ಈ ಔಷಧಿ ಇನ್ನೂ ಅನ್ವೇಷಣೆಯ ಅವಸ್ಥೆಯಲ್ಲೇ ಸಾಗಿದೆ.

ಇನ್ನೂ ನೆಗಡಿ, ಸಿಡುಬು, ಕ್ಯಾನ್ಸರ್‌ಗಳಿಗೆ ಔಷಧಿಗಳು ತಯಾರಾಗಬೇಕಾಗಿದೆ. ಪೋಲಿಯೋ, ಹಾವಿನವಿಷ, ನಾಯಿಕೆಮ್ಮು, ಇತ್ಯಾದಿಗಳಿಗೆ ವ್ಯಾಕ್ಸಿನ್‌ಗಳು, ಸೀರಂಗಳು ಸಿದ್ಧವಾಗಿವೆ. ದಡಾ ರಕ್ಕೂ ಈಗ ವ್ಯಾಕ್ಸಿನ್ ಇದೆ. ನೆಗಡಿಗೆ ವ್ಯಾಕ್ಸಿನ್ ಇದ್ದರೂ ಅಷ್ಟು ಯಶಸ್ವಿಯಾಗಿಲ್ಲ. ಆದರೆ ಮುಪ್ಪಿಗೆ, ಬಟ್ಟತಲೆಗೆ, ಕೂದಲು ನರೆಯುವು ದಕ್ಕೆ ಔಷಧಿಯೇ ಇಲ್ಲ!

ವೈದ್ಯಕೀಯ ರಂಗದಲ್ಲಿ ಔಷಧಿಯ ಭಾಗ ಮುಂದುವರೆದಂತೆಯೇ ಇತರ ಭಾಗಗಳೂ ಮುಂದುವರೆದಿವೆ. ರೋಗಗಳನ್ನು ಪರೀಕ್ಷಿಸುವ ಬಗೆ, ಆಪರೇಷನ್‌ಗಳು, ಆಹಾರದ ಸಮಸ್ಯೆ, ಸಾಮಾಜಿಕ ಆರೋಗ್ಯದ ಸಮಸ್ಯೆ, ಮಾನಸಿಕ ರೋಗಗಳು ಇತ್ಯಾದಿಗಳೂ ಹೊಸ ದಾರಿಗಳಲ್ಲಿ ಬೆಳಕನ್ನು ಕಂಡಿವೆ.

೧೯೪೪ ರಲ್ಲಿ ಡಾ. ಬ್ಲಾಲಾಕ ಮತ್ತು ಡಾ. ಟಾಸಿಗ್ಗರು ಶುರುಮಾಡಿದ ಹೃದಯದ ಮೇಲಣ ಆಪರೇಷನಗಳು ಈಚೆಗೆ ಬಹುಮಟ್ಟಿಗೆ ಮುಂದು ವರೆದಿವೆ. ಈ ಆಪರೇಷನ್ನುಗಳು ಬಹಳ ಕಠಿಣ ವಾದ್ದರಿಂದ ಇದನ್ನು ಕಲಿಯುವವರು ಮೊದಲು ನೂರಾರು ನಾಯಿಗಳ ಮೇಲೆ ಆಪರೇಷನ ಮಾಡಿ ಕಲಿಯುತ್ತಾರೆ. ಹೃದಯದ ರೋಗಗಳಲ್ಲಿ ಅನೇಕ ಜಾತಿಯವು ಇವೆ. ಕೆಲವು ಮಕ್ಕಳಿಗೆ ಹುಟ್ಟಿ ದಾಗಿನಿಂದ ಹೃದಯದಲ್ಲಿ ಎಡಬಲ ಹೃತ್ಕರಣಗಳ ನಡುವೆ ಇರುವ ಗೋಡೆಯಲ್ಲಿ ಸಣ್ಣ ರಂಧ್ರವಿದ್ದು ಮಲಿನ ಮತ್ತು ಶುದ್ಧರಕ್ತಗಳು ಬೆರೆಯುತ್ತವೆ. ಆದ್ದರಿಂದ ಈ ಮಕ್ಕಳ ಶುದ್ಧರಕ್ತದಲ್ಲೂ ಮಲಿನ ರಕ್ತ ಯಾವಾಗಲೂ ಬೆರೆದು ಪ್ರಾಣವಾಯುವಿನ ಸರಬರಾಜು ಅಷ್ಟಾಗಿ ಇರುವದಿಲ್ಲ. ಈ ಮಕ್ಕಳಿಗೆ ಆಟವಾಡಲೂ ಶಕ್ತಿ ಇರುವದಿಲ್ಲ. ಇನ್ನೂ ಕೆಲವು ಮಕ್ಕಳಿಗೆ ಹೃದಯದಿಂದ ಹೊರಡುವ ಮೂಲ ರಕ್ತನಾಳವೇ ಶುರುವಿನಲ್ಲಿ ಸಂಕುಚಿತವಾಗಿ ಬಿಟ್ಟಿರುತ್ತದೆ. 'ರುಮ್ಯಾಟಿಸಂ' ಎಂಬ ಜ್ವರ ಬಂದ ಮಕ್ಕಳಿಗೆ ಹೃದಯದೊಳಗೇ ವ್ಯತ್ಯಾಸವಾಗಿ ಹೃದಯದ ಕೆಲಸಕ್ಕೆ ಅಡ್ಡಿಬರುತ್ತದೆ. ಇನ್ನು ಕೆಲ ವರಿಗೆ ದೊಡ್ಡ ರಕ್ತನಾಳ ಒಂದು ಕಡೆ ತೆಳ್ಳಗಾಗಿರು ತ್ತದೆ— ಆ ಜಾಗ ಬಲೂನಿನಂತೆ ಊದಬಹುದು, ಮತ್ತು ಯಾವಾಗಲಾದರೂ ಒಡೆಯಬಹುದು. ಈ ರೋಗಗಳ ಆಪರೇಶನ್ ಮಾಡುವಾಗ ಕೆಲ ವರು ಹೃದಯದಂತೆ ಕೆಲಸ ಮಾಡುವ ಒಂದು ಪಂಪನ್ನೇ (pump) ಉಪಯೋಗಿಸುತ್ತಾರೆ.

ಹೃದಯದ ಆಪರೇಷನ್‌ಗಳಿಗೆ ಅನುಕೂಲವಾದ ಒಂದು ಹೊಸಪ್ರಯೋಗ (hypothermia) ಬಂದಿದೆ. ಜ್ಞಾನಹೋಗಿಸುವ ಇನ್‌ಜಕ್ಷನ್ ಕೊಟ್ಟು ರೋಗಿಯನ್ನು ಮಂಜುಗಡ್ಡೆಯ ಮಧ್ಯೆ ಇಟ್ಟು, ಅವನ ದೇಹದ ಶಾಖವನ್ನು ಇಳಿಸುತ್ತಾರೆ (26° c) ಆಗ ದೇಹದ ಎಲ್ಲಾ ವ್ಯಾಪಾರವೂ ತಗ್ಗಿನವೇಗದಲ್ಲಿ ನಡೆಯುತ್ತದೆ. ಮೆದುಳಿಗೂ ಹೆಚ್ಚು ರಕ್ತ ಬೇಕಾಗುವದಿಲ್ಲ. ಆದ್ದರಿಂದ ಹೃದಯದೊಳಕ್ಕೆ ಬೆರಳುಗಳನ್ನು ಹಾಕಿ ಆಪರೇಷನ್ ಮಾಡಲು ಸಾಧ್ಯವಾಗುತ್ತದೆ.

ಹಿಂದಿನ ಕಾಲದಲ್ಲಿ ಪ್ಲಾಸ್ಟಿಕ್ ಶಸ್ತ್ರಚಿಕಿತ್ಸೆಯೇ ಆಶ್ಚರ್ಯಕರವಾದ ಸಂಗತಿಯಾಗಿತ್ತು. ಮುಖದ ಮೇಲೆ ಯಾವುದಾದರೂ ಗಾಯದ ಕಲೆಯಿದ್ದರೆ ತೊಡೆಯ ಮೇಲಿನ ಚರ್ಮವನ್ನು ತೆಗೆದು ಆ ಜಾಗಕ್ಕೆ ಹಾಕುತ್ತಿದ್ದರು. ಈಗ ಸಿಡುಬು ಕಲೆ ಗಳನ್ನು ತೆಗೆದುಹಾಕಲು ಕೇವಲ ಉಪ್ಪು ಕಾಗದ ದಂತಹ ಒರಟು ಪದಾರ್ಥದಿಂದ ಮುಖದ ಕಲೆ ಗಳನ್ನೆಲ್ಲಾ ಉಜ್ಜಿ ಹಾಕುತ್ತಾರೆ. ಹೊಸ ಚರ್ಮ ಬೆಳೆದಾಗ ಕಲೆಗಳೆಲ್ಲಾ ಮಾಯವಾಗಿರುತ್ತವೆ. ಹೆಣದ ಕಣ್ಣುಗಳನ್ನು, ರಕ್ತನಾಳಗಳನ್ನು ಮೂಳೆ ಗಳನ್ನು ಇತರ ರೋಗಿಗಳ ಚಿಕಿತ್ಸೆಗೆ ಉಪಯೋಗಿ-ಸುತ್ತಾರೆ. ಇದಕ್ಕಾಗಿ "ಕಣ್ಣಿನ ಬ್ಯಾಂಕ್"ಗಳನ್ನೇ ತೆಗೆದಿದ್ದಾರೆ. ಇಷ್ಟಾದರೂ ಸಾಲದೆ ನಾಯಿಯ ಕಣ್ಣುಗಳನ್ನೂ ಈಗ ಉಪಯೋಗಿಸಲು ಆರಂಭಿಸಿ ದ್ದಾರೆ.

ಈಗ ರೋಗಿಗಳನ್ನು ಪರೀಕ್ಷೆ ಮಾಡುವ ರೀತಿ ಯೇ ಬದಲಾಯಿಸಿದೆ. ಹಿಂದಿನ ಕಾಲದಲ್ಲಿ ನಾಡಿ ಪರೀಕ್ಷೆ, ಶ್ವಾಸಕೋಶ-ಹೃದಯದ ಪರೀಕ್ಷೆ, x-Ray ಇಷ್ಟರಲ್ಲೇ ಎಲ್ಲಾ ಪರೀಕ್ಷೆಯೂ ಮುಗಿದು ರೋಗದ ಪತ್ತೆ ಹಚ್ಚಬೇಕಾಗಿತ್ತು. ಮಲೇರಿಯಾ, ಕ್ಷಯ, ಟೈಫಾಯ್ಡ್, ಇತ್ಯಾದಿ ಕೆಲವು ರೋಗಗಳಿಗೆ ಮಾತ್ರ ರಕ್ತ, ಮಲ, ಮೂತ್ರ, ಕಫಗಳ ಪರೀಕ್ಷೆ ಮಾಡುತ್ತಿದ್ದರು. ಆದರೆ ಈಗ ರಕ್ತಪರೀಕ್ಷೆಯೇ ದೊಡ್ಡ ಭಾಗವಾಗಿದೆ. ಪ್ರತಿಯೊಂದು ರೋಗಕ್ಕೂ ರಕ್ತಪರೀಕ್ಷೆಯಿದೆ. ಚಿಕಿತ್ಸೆ ಮಾಡುತ್ತಿರುವಾಗ ರೋಗದ ಸ್ಥಿತಿಯನ್ನೂ ಆಗಾಗ್ಗೆ ರಕ್ತದ ಪರೀಕ್ಷೆ ಯಿಂದಲೇ ತಿಳಿಯುತ್ತಾರೆ. ದೇಹದ ಇತರ ಅಂಗ ಗಳ ಪರೀಕ್ಷೆಗಳಿಗೂ ಈಗ ಹೆಚ್ಚಿನ ಪ್ರಾಶಸ್ತ್ಯವಿದೆ. ಮೂತ್ರಕೋಶ, ಪಿತ್ಥಕೋಶ ಇತ್ಯಾದಿಗಳ ರೋಗ ಗಳಿಗೆ, ಕ್ಯಾನ್ಸರ್, ಕೀಲುನೋವು, ಇತ್ಯಾದಿ ರೋಗಗಳಿಗೂ ರಕ್ತ ಪರೀಕ್ಷೆಯಾಗಲೇಬೇಕು. ಹಿಂದಿನ ಪರೀಕ್ಷೆಯ ರೀತಿಗೆ ಶರೀರಲಕ್ಷಣ ನಿದಾನ ಪದ್ಧತಿ (anatamo clinical method) ಎಂದು ಕರೆದರೆ ಈಗಿನ ರೀತಿಯನ್ನು ರಾಸಾಯನಿಕ ಲಕ್ಷಣ ನಿದಾನ ಪದ್ಧತಿ (chemo clinical method) ಎನ್ನುತ್ತಾರೆ. ಆದರೆ ಇವಕ್ಕೆಲ್ಲಾ ಒಳ್ಳೆಯ ಸಲಕರಣೆಗಳಿರುವ ಆಸ್ಪತ್ರೆಗಳಿರಬೇಕು.

ಯುದ್ಧ ಕಾಲದಲ್ಲಿ ಯುದ್ಧ ವೈದ್ಯಕೀಯ (War-medicine) ಎಂಬ ಹೊಸ ವೈದ್ಯವನ್ನೇ ಆರಂಭಿಸಿದ್ದರು. ಆಟಂಬಾಂಬು ಸಿಡಿದಾಗ ಅಣು ವಿಸರಣದಅಪಾಯಗಳು(radiation hazards) ಎಂಬ ಅಧ್ಯಾಯ ಸುರುವಾಗಿತ್ತು. ಈಗಿನ ಸ್ಪುಟ್ನಿಕ



"ಕಂಣ್ಣು ಕಾಣೊಲ್ವೆ ! ಡಿಕ್ಕಿ ಹೊಡಿತೀರಲ್ಲ"

ಯುಗದಲ್ಲಿ Space-medicine ಬೇರೆ ಸುರುವಾಗಿದೆ.

ಇಷ್ಟೆಲ್ಲಾ ಮುಂದುವರೆದಿದ್ದರೂ ವಿಜ್ಞಾನಿಗಳಿಗೆ ಯಾವ ರೋಗವನ್ನು ಭೂಮಿಯಿಂದ ನಿರ್ಮೂಲ ಮಾಡಲು ಏಕಾಗಿಲ್ಲ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಇದಕ್ಕೆ ಅನೇಕ ಉತ್ತರಗಳಿವೆ.

ಎಲ್ಲಾ ರಾಷ್ಟ್ರಗಳೂ ನಾಗರಿಕ, ಆರ್ಥಿಕ ಅಥವಾ ಸಾಂಸ್ಕೃತಿಕ ಮಾರ್ಗಗಳಲ್ಲಿ ಒಂದೇ ಮಟ್ಟಕ್ಕೆ ಮತ್ತು ಒಂದೇ ದಾರಿಯಲ್ಲಿ ಸಾಗಿಲ್ಲ. ಆರ್ಥಿಕ ಸ್ಥಿತಿಯಲ್ಲಿ ಹಿಂದುಳಿದಿರುವ ರಾಷ್ಟ್ರಗಳಲ್ಲಿ ಜನರ ಆರೋಗ್ಯ ಸ್ಥಿತಿ ಶೋಚನೀಯವಾಗಿದೆ. ಭಾರತದಲ್ಲಿ ಈಗಲೂ ೫೦ ಲಕ್ಷ ಕ್ಷಯರೋಗಿಗಳೂ ೨೦ ಲಕ್ಷ ಕುರುಡರೂ ೩ ಕೋಟಿ ಮಲೇರಿಯಾ ರೋಗಿಗಳೂ ೨ ಕೋಟಿ ಫರಂಗಿ ರೋಗಪೀಡಿತರೂ ೨೦ ಲಕ್ಷ ಕುಷ್ಠರೋಗಿಗಳೂ ಇದ್ದಾರೆ. ಆಹಾರದ ಕೊರತೆಯ ರೋಗ-ಗಳಿಂದ ೧೦೦ಕ್ಕೆ ೮೦ ಮಂದಿ ಒಂದಲ್ಲ ಒಂದು ರೀತಿಯಲ್ಲಿ ಅನುಭವಿಸುತ್ತಿದ್ದಾರೆ. ಸಾವಿರಾರು ಮಕ್ಕಳು ಪ್ರತಿವರ್ಷ ವಿಟಾಮಿನ್ ಏ (ಹಾಲು ಬೆಣ್ಣೆಗಳಲ್ಲಿದೆ) ಇಲ್ಲದೆ ಕುರುಡರಾಗುತ್ತಿದ್ದಾರೆ. ಕೊಕ್ಕೆ ಹುಳುವಿನ ರೋಗದ ಹಾವಳಿ ಇನ್ನೂ ಕಮ್ಮಿಯಾಗಿಲ್ಲ. ಸಿಡುಬು, ಕಾಲರಾಗಳು ತಪ್ಪಿಯೇ ಇಲ್ಲ.

ಆದರೆ ಆರ್ಥಿಕ ಸ್ಥಿತಿಯಲ್ಲಿ ಮುಂದುವರೆದ ರಾಷ್ಟ್ರಗಳಲ್ಲಿ ರೋಗಪೀಡಿತರ ಸಂಖ್ಯೆ ಕಮ್ಮಿಯೇನೂ ಇಲ್ಲ. ಕ್ಯಾನ್ಸರ್, ಹೃದಯರೋಗ, ರಕ್ತದ ಒತ್ತಡಗಳಿಗೆ ತುತ್ತಾಗದವರಿಲ್ಲ. ಮನಃಶಾಂತಿಯಿಲ್ಲದೆ ಮಾನಸಿಕ ವೈದ್ಯರನ್ನು ನೋಡುವವರ ಸಂಖ್ಯೆ ೧೦೦ಕ್ಕೆ ೩೦ಕ್ಕಿಂತ ಹೆಚ್ಚು! ಇಷ್ಟು ಸಾಲದೆಂದು ಅವರು ಬೇಕಾಬಿಟ್ಟಿ ಔಧಿಗಳನ್ನು ಉಪಯೋಗಿಸಿರುವುದರಿಂದ ಕೆಲವು ರೋಗದ ಕ್ರಿಮಿಗಳಿಗೆ ಮದ್ದುಗಳು ಒಗ್ಗಿಹೋಗಿವೆಯಂತೆ. ಇಟಲಿಯಲ್ಲಿ ಗನೋರಿಯಾ (gonorrhoea) ರೋಗಬಂದರೆ ಯಾವ ಔಷಧಿಗೂ ಜಗ್ಗುವುದಿಲ್ಲವಂತೆ. ಭಾರತದಲ್ಲೂ ಕ್ಷಯರೋಗ ಹೀಗೆಯೇ ಔಷಧಿಗಳನ್ನೂ ಒಗ್ಗಿಸಿಕೊಂಡರೆ ಮುಂದೆ ಗತಿಯೇನು ಎಂದು ಕೇಳುವವರಿದ್ದಾರೆ.

ಔಷಧಿಗಳು, ವಿಜ್ಞಾನಿಗಳು, ವೈದ್ಯರು ಹೆಚ್ಚಿದಂತೆಲ್ಲ ರೋಗಿಗಳ ಸಂಖ್ಯೆ ಹೆಚ್ಚುತ್ತಲೇ ಇದೆ. ರೋಗವಿಲ್ಲದಿದ್ದರೂ ಔಷಧಿಯನ್ನು ಸೇವಿಸುವವರ ಸಂಖ್ಯೆ ಎಲ್ಲರಿಗಿಂತಲೂ ಹೆಚ್ಚಾಗಿದೆಯೆಂದು ಮನಃಶಾಸ್ತ್ರಪಂಡಿತರು ಹೇಳುತ್ತಿದ್ದಾರೆ. ರೋಗಕ್ಕೆ ಕೇವಲ ಕ್ರಿಮಿಗಳೇ ಕಾರಣವಲ್ಲ. ಅವುಗಳಿಗೆ ಆಹ್ವಾನ ಕೊಟ್ಟು ದೇಹದಲ್ಲಿ ಬೆಳೆಸಲು ಮನಸ್ಸೇ ಕಾರಣ ಎಂದು ಅವರ ಮತ.

ಈ ವಿಜ್ಞಾನಿಗಳ ಕೂಗಾಟದ ಹಿಂದೆ ಒಂದು ಹೊಸದಾದ ಸಣ್ಣ ಧ್ವನಿ ಈಗ ಕೇಳಬರುತ್ತಿದೆ. ಆ ಧ್ವನಿ ಪುರಾತನ ಕಾಲದ್ದು. ಆದರೆ ಈಗ ಅದನ್ನು ವಿಜ್ಞಾನಿಗಳು ಕೂಗುತ್ತಿರುವುದರಿಂದ ಹೊಸದಾಗಿ ಕೇಳುತ್ತಿದೆ. ಅದೇನೆಂದರೆ ನಮ್ಮ ಮುಕ್ಕಾಲು ರೋಗಗಳಿಗೆಲ್ಲಾ ನಾವು ಉಪಯೋಗಿಸುತ್ತಿರುವ ಸೀಮೆಗೊಬ್ಬರವೇ— ರಾಸಾಯನಿಕ ಗೊಬ್ಬರ (fertilizers) ಕಾರಣವೆಂಬುದು. ಇವರು ಪ್ರಪಂಚದ ನಾನಾ ಜನಾಂಗಗಳ ಆರೋಗ್ಯಸ್ಥಿತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಹೇಳುತ್ತಿದ್ದಾ-ರಂತೆ. ಸೀಮೆಗೊಬ್ಬರವನ್ನು ಉಪಯೋಗಿಸದ ಪುರಾತನ ಸಂಸ್ಕೃತಿಯ ಜನಾಂಗದಲ್ಲಿ ರೋಗಗಳು ಬಹಳ ಕಡಿಮೆಯಂತೆ.

ಆದರೆ ಇವೆಲ್ಲಾ ಧ್ವನಿಗಳನ್ನು ಕೇಳಿಯೂ ಒಂದು ಆಸೆಯಿಟ್ಟುಕೊಂಡಿರಬಹುದು. ಈ ವೈದ್ಯಕೀಯರಂಗದ ಮುನ್ನಡೆಯೆಲ್ಲಾ ಕೇವಲ ೨೫ ವರ್ಷಗಳಿಂದ ವೇಗವಾಗಿ ನಡೆದಿದೆ. ಇದು ಇನ್ನೂ ಬಾಲ್ಯಾವಸ್ಥೆಯಲ್ಲೇ ಇದೆಯೆನ್ನುವವರೂ ಇದ್ದಾರೆ. ಮುಂದೆ ಇನ್ನಾವ ಅಮೃತಗಳು ನಮಗಾಗಿ ಕಾದಿವೆಯೋ!

---

## ಇರುಳ ಕಳವಳ

ಬೀದಿ ಕೊಳಚೆಯ ಮೇಲೆ ಮೆಲ್ಲನೊರಗಿದೆ ಇರುಳು
ಚರಂಡಿ ಕಲ್ಲಿನ ದಿಂಬನೊರಗಿಕೊಂಡು
ಅದರ ಸೆರಗಿನ ಮರೆಗೆ
ಕೊರೆ ಬೀಡಿ ಸಿಗರೇಟು ಚಿಂದಿಗಳ
ಹಂಸತೂಲಿಕಾತಲ್ಪದಲಿ
ಇಂದ್ರವನ ಮೂಲೆಯಲಿ, ಜೇಡಬಲೆ ಲತಾಮಂಟಪದಿ
ಒಂದನೊಂದನು ಹೊಸೆದ ಎರಡು ಮಾಂಸದ ಮುದ್ದೆ,
ರಾಜ-ರಾಣಿಯರು;
ಎದ್ದೆದ್ದು ಬಿದ್ದೇಳ್ತ ಹೊದ್ದೆರೆಯ ಚಲ್ಲಾಟ
ನಡುನಡುವೆ ಪಿಸುಮಾತು, ನಸುಹಾಡು
“ನಾನೊಂದು ಮಾಮರ ನೀ ಮಲ್ಲಿಗೆಯ ಬಳ್ಳಿ
. . . . . . . .”
ಎದೆಯೊಡೆದ ಬಾಟ್ಲಿಗಳ ತುಂಡುಗಳ ರಾಶಿಯಲಿ
ಎಡವುತ್ತೆ ಮುಗ್ಗರಿಸಿ
ಕಸದಲ್ಲಿ ಹೊರಳಾಡಿ, ಬೆರಳಾಡಿ ಹಾಡುತಿದೆ
ಕಂಠಮಟ ಕುಡಿದಿರುವ ಮೆಲ್ಲೆಲರು.
“ಜಿಂದಗಿ ಖ್ವಾಬ ಹೈ”
ಪ್ರಶ್ನಾರ್ಥ ಚಿಹ್ನದೊಲು, ನಾಯಿಬಾಲವು ಅಲುಗಿ
“ಹೌದೆ?” ಎಂದಿರುಳನ್ನು ಕೇಳುತ್ತಿದೆ.

೨

ಉತ್ತರವನರಸಲಿಕೆ
ಮೈದಾಸರರಮನೆಯ ಕುತನಿಗಾದಿಯ ಮೇಲೆ
ಮೈಯ್ಯಚಲ್ಲಿತು ಇರುಳು—
ಹೊನ್ನಹರಿಣಗಳ ಮರುಮರೀಚಿಕೆಯಾಗಿ!
ಹಸಿದ ಮೂಗಿಗೆ ಇತ್ತು ಅತ್ತರಿನ ಪೀಯೂಷ,
ಗಾಜು ಬಟ್ಟಲಿನ ಕಲಕಲಾಟ,
ಝಾಜ್‌ಗೀತಲಯದೊಡನೆ ಮೆಯ್ಯದಾಸರ ಕುಣಿತ
ವ್ಯಾಲೋಲ ವ್ಯಾಲಗಳ ಮದಿರೆ ಮಾತು
ಹೊಂಗನಸ ಜಾತರೂಪವ ನೋಡೆ
ಮೃದು ಫ್ಲೋರಸೆಂಟ್ ದೀಪ
ತುಟಿಗೆ ತುಟಿ-ತಟ್ಟಲು
ಕಟಿಗೆ ಕಟಿ ತಟ್ಟಲು
ಬಳಿಗೊಂದು ಅರೇಬಿಯನ್ ನೈಟ್ಸನಾ ಬುಕ್ಕಿರಲು
‘Paradise enow’ ಎನುತ
ವಸಂತಸಂತಸಕೆ ಬಾಯ್ಬಿಡುವ ಕೋಕಿಲೆಯ ಹಾಡು
ಮೈದಾಸನೆಳೆತಂದ ಸಾಟರನು ಬಿಸುಸುಯ್ದ.
“ಇಂಥ inferno ದಿಂದ paradise ಗೆ ದಾರಿ?
ಹಾಯ್ ದುರ್ದೈವಿ ಮರ್ತ್ಯರಿರ!”

೩

ಸಾಟರನ ಬಳಿಸಾರಿ ಇರಳು ಕೇಳಿತು ಇಂತು
ಇಂಥ ಮರ್ತ್ಯರಿಗಿನ್ನು ಶಾಂತಿಯೆಂತು?
ಸಾಟರನು ಬಿಕ್ಕಿದನು—
“ಗಾಳವನು ನುಂಗಿರುವ ಮೀನುಗಳ ಅಳವಿಗದ
ಇನ್ನಿಲ್ಲ ಮುನ್ನಿಲ್ಲ
ಎಂದೆಂದಿಗೂ ಇಲ್ಲ”
ಬೆಳ್ಳನೇ ಬಿಳಿಚಿತೋ ಬೆಚ್ಚಿದಿರುಳಿನ ಮೊಗವು
ಕಳಚಿದವು ಪಿತೃಗಳ ಕಣ್ಣೀರು,
—ಚಿಕ್ಕೆ ಚಿಕ್ಕೆಯಾಗಿ
ಕಿರಣಪೊರಕೆಯ ಹಿಡಿದುಕಸಗುಡಿಸಬೇದವನು
ಕಸವತೊಳೆವನೆ? ಎಂದು
ಹಿಂದಿರುಗಿ ನೋಡುತ್ತ ಹೆಜ್ಜೆ ಹಾಕಿತು ಇರುಳು
ನಾಯಿಬಾಲದ ಡೊಂಕು, ಪದಾರ್ಥಚಿಹ್ನೆಯ ಬಿಂಕ
ಇನ್ನು ಹಾಗೆಯೆ ಇತ್ತು
‘ಅಹುದು.
ಡೊಂಕು ಬಾಲಕೆ ಚಂದ, ಬಾಲ ನಾಯಿಗೆ ಚಂದ,
ಅವರವರಿಗವರವರದೇ ಅಂದ-’
ಎಂದೇನೊ ಧೇನಿಸುತ ಹಕ್ಕಿ ದನಿಯಲಿ ಬಿಕ್ಕಿ
ಮರೆಯಾಯ್ತು ಇರುಳು

— ಪಶುಪತಿ ರೆಡ್ಡಿ
ಯಾದಗಿರಿ



# ಮಹಿಳಾಲೋಕದ ಸಮಸ್ಯೆಗಳು

ಲೇಖಕಿ :
ಶ್ರೀಮತಿ ಸುಶೀಲಾ ಕೊಪ್ಪರ,
ಬೆಂಗಳೂರು



## ಆಗ → ← ಈಗ



**"ಹೆಣ್ಣು ಹೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು" ಎಂದು ಹೊನ್ನಮ್ಮ ಹಾಡುವ ಮೊದಲಿನಿಂದಲೂ ಮಹಿಳಾಲೋಕದ ಸಮಸ್ಯೆಗಳು ಬೆಳೆಯುತ್ತಲೇ ಬಂದಿವೆ. ಇಂದು ಅವರ ಪರಿಸ್ಥಿತಿ, ಸ್ಥಾನ-ಮಾನ ಸುಧಾರಿಸಿದೆಯೆಂದು ಕಂಡುಬರುತ್ತಿದ್ದರೂ ಈ ಹೊಸಪರಿಸ್ಥಿತಿಯೇ ಅವರಿಗೆ ಹಲವಾರು ಸಮಸ್ಯೆಗಳನ್ನು ಉಂಟುಮಾಡಿದೆ. ಮಹಿಳಾಲೋಕದ ಸ್ಥಿತಿಗತಿ ಆಗ ಹೇಗಿತ್ತು ! ಈಗ ಹೇಗಿದೆ ಎಂಬುದನ್ನು ಲೇಖಿಕೆಯರು ಇಲ್ಲಿ ಮನೋಜ್ಞವಾಗಿ ಚಿತ್ರಿಸಿರುವರು.**

ಹಣವಿದ್ದವರ ಮನೆಯಲ್ಲಿ ಸಾಲಾಗಿ ಗಂಡು ಮಕ್ಕಳೇ ಹುಟ್ಟಿ 'ಹೆಣ್ಣು ಹುಟ್ಟಲಿಲ್ಲವಲ್ಲ' ಎಂದುಕೊಳ್ಳುವ ಹೊತ್ತಿಗೆ ಸುಂದರರೂಪದ ಒಂದು ಹೆಣ್ಣುಮಗು ಹುಟ್ಟಬೇಕು. ಬಾಲ್ಯದಲ್ಲಿ ಸ್ವೇಚ್ಛೆಯಾಗಿ ಎಲ್ಲ ಆಸೆಗಳು ತೀರಿ ಸಮಯಾನುಸಾರ ಪ್ರೇಮದ ಪತಿ ದೊರೆಯಬೇಕು. ಸುಖದಾಂಪತ್ಯದಲ್ಲಿ ಸುಪುತ್ರ ಪುತ್ರಿಯರು ಜನಿಸಬೇಕು. ಪತಿಗೆ ಪೆನ್‌ಶನ್ ಅಥವಾ ಆಸ್ತಿ ಇರುವಾಗಲೇ ಪತಿಗಿಂತ ಸ್ವಲ್ಪ ಸಮಯ ಮೊದಲು ಅಥವಾ ಅವನ ಮರಣದ ವಾರ್ತೆ ಕೇಳಿದಾಕ್ಷಣ ಜಯದೇವನ ಪದ್ಮಾವತಿಯಂತೆ ಪ್ರಾಣನೀಗಬೇಕು. ಆಗ ಸ್ತ್ರೀಜೀವನದಲ್ಲಿ ' ಸಮಸ್ಯೆ ' ಎಂಬ ಶಬ್ದ ಸಾಮಾನ್ಯವಾಗಿ ಬಳಕೆಯಲ್ಲಿ ಬರಲಾರದೇನೊ !

ಆದರೆ ಇಷ್ಟು ಸರಳವಾಗಿ ಜೀವನವಿದ್ದರೆ ಆ ಸೃಷ್ಟಿಕರ್ತನ ಸೃಷ್ಟಿಯಲ್ಲಿ ವೈಚಿತ್ರ್ಯವೇನಿದ್ದೀತು ? ಭಗವಂತನ ಲೀಲೆಯಲ್ಲಿ ಸ್ತ್ರೀಜೀವನದ ಸಮಸ್ಯೆಯೂ ಒಂದಾಗಿ ಅದು ಒಡೆಯಲಾರದ ಒಗಟವಾಗಿ ಅವಳ ಜೀವನವನ್ನು ಬೆನ್ನಟ್ಟಿದೆ ಭೂತದಂತೆ. ಅವಳು ಎಚ್ಚತ್ತು ಹಿಂದಿರುಗಿ ನೋಡಿದಾಗ ರೂಪ ಬಣ್ಣ ಬದಲಾಯಿಸಿಕೊಳ್ಳುತ್ತದೆ. ಎದುರಿಗೆ ಬಂದು ನಿಲ್ಲುತ್ತದೆ !

ಯೋಗಿಗೂ ಭೋಗಿಗೂ ಸಮಸ್ಯೆಗಳಿರುವಾಗ ಮಹಿಳಾಜೀವನ ಅದಕ್ಕೆ ಹೊರ್ತಾಗಿಲ್ಲ. ಆದರೆ ಮಹಿಳೆಯಜೀವನದಲ್ಲಿ ಸಮಸ್ಯೆ ಬರುವದು, ಸಿಡಿಲಿನಂತೆ ಅಕಸ್ಮಾತ್ತಾಗಿ ಅಷ್ಟೇ ಪ್ರಕಾಶಮಾನವಾಗಿ. ' ಕುಂಕುಮಭಾಗ್ಯ ' ಒಂದಿದ್ದರೆ ಹಿಂದಕಿನ ಮಹಿಳೆ ಸಮಸ್ಯೆಯನ್ನು ಅದಕ್ಕೆ ಮರೆಮಾಡಿ ಎಲ್ಲ ಕಷ್ಟಗಳನ್ನೂ ಸಹಿಸುತ್ತಿದ್ದಳು. ಪತಿ ಅಗಲಿದಾಗ ಅವಳಿಗೆ ಜೀವನದಲ್ಲಿ ಮೊದಲ ಸಮಸ್ಯೆ ಎದುರಾಗುತ್ತಿತ್ತು. ಅಂದಿನಿಂದ ಅವಳು 'ಅಶುಭ' ಹಿರಿಸೊಸೆಯಾಗಿ ಆರತಿ ಎತ್ತುವ ಅವಳ ಕೈಗಳು ಸಮಾರಂಭದಲ್ಲಿ ಚಟ್ನಿ ಕೋಸಂಬರಿಗಳನ್ನು ಮಾಡಲು ಮಾತ್ರ ಅರ್ಹ. ಅವಳು ಮಾಡಿದ ಮಂಡಿಗೆ ಮಾತ್ರ ಅಶುಭವಲ್ಲ ! ಇಂಥ ಈ ' ಅಶುಭ ' ವ್ಯಕ್ತಿಗೆ ಗಂಡುಮಗು ಒಂದಿದ್ದರೆ ಮಾತ್ರ ಗಂಡನ ಮನೆಯಲ್ಲಿ ಅವಳಿಗೆ ಅಧಿಕಾರ, ಆಸ್ತಿಯಲ್ಲಿ ಪಾಲು ದೊರೆಯುತ್ತಿತ್ತು. ಇಲ್ಲವಾದರೆ ಹೊಟ್ಟೆ ಬಟ್ಟೆಗೆ ಹಣವನ್ನು ಪತಿಯ ಮನೆಯವರಿಂದ ಪಡೆದು ತವರಿನಲ್ಲಿ ಇರುತ್ತಿದ್ದಳು. ಆ ಹಣವೂ ಅವಳಿಗೆ ಸುಖವಾಗಿ ದೊರೆಯುತ್ತಿರಲಿಲ್ಲ. ಕೋರ್ಟು ಕಚೇರಿಗಳ ಸಹಾಯ ಪಡೆಯಬೇಕಾಗುತ್ತಿತ್ತು. ಇಷ್ಟಾದ ನಂತರ ಕೊಂಚ ಹಣ ವರ್ಷಕ್ಕೆ ದೊರೆಯುವಂತಾದರೂ ಅದು ಅವಳ ಕೈ ಸೇರುತ್ತಿರಲಿಲ್ಲ. ಆಶ್ರಯದಾತರು ಅದನ್ನು ಗಿಟ್ಟಿಸುತ್ತಿದ್ದರು. ಹಾಕಿದ್ದನ್ನು ಹಾಕಿದಷ್ಟು ಉಂಡು ದುಡಿಯುವದೊಂದೇ ಅವಳ ಜೀವನವಾಗುತ್ತಿತ್ತು. ಪಾಲಿಗೆ ಬಂದದ್ದು ಪಂಚಾಮೃತವೆಂದು ಅವಳು ಸಹಿಸುತ್ತಿದ್ದಳು. ಅವಳಿಗೆ ಗಂಡು ಮಕ್ಕಳಿದ್ದರೆ ಆ ಮಕ್ಕಳು ಆಶ್ರಯದಾತರ ಆಳಿಗಿಂತಲೂ ಕಡೆಯಾಗಿರಬೇಕಾಗುತ್ತಿತ್ತು. ಹೆಣ್ಣು ಮಗುವೊಂದಿದ್ದರೆ ಅವಳ ಮದುವೆಯನ್ನು ಎಂಥವರೊಡನೆಯೊ ಮಾಡಿ ತಮ್ಮ ಹೊಣೆ ಕಡಿಮೆ ಮಾಡಿಕೊಳ್ಳುವವರು ಇದ್ದರು. ಆಶ್ರಯದಾತರು ಒಳ್ಳೆಯವರಾಗಿದ್ದರೆ ಆಶ್ರಿತರ ಪೂರ್ವದ ಪುಣ್ಯ ಎಂತಲೇ ಎನ್ನಬೇಕು. ಅವಳು ಚಲುವೆಯಾಗಿದ್ದರೆ-ತರುಣಿಯಾಗಿದ್ದರೆ ಗೋಳು ಹೇಳತೀರದು. ಶೀಲವನ್ನು ಕಾಪಾಡಿಕೊಳ್ಳುವದಕ್ಕಾಗಿ ತನ್ನ ಜೀವವನ್ನೂ ಅವಳು ಕೊಡುತ್ತಿದ್ದಳು. ಆದರೂ ಸಮಾಜದ ದೃಷ್ಟಿಯಲ್ಲಿ ಅವಳೇ ದೋಷಿಯಾಗಿರುತ್ತಿದ್ದಳು. ಸತ್ತನಂತರವೂ ಕಷ್ಟಕೊಟ್ಟ ಜನವೇ " ಏನಿತ್ತು ಯಾರು ಬಲ್ಲರು ? " ಎಂಬ ಕುಹಕ ನುಡಿಯುವದನ್ನು ಅವಳಾತ್ಮ ಕೇಳಿದರೆ " ಅಯ್ಯೋ ಸುಮ್ಮನೆ ಸತ್ತೆ— ಜೀವದಿಂದಿದ್ದು ಇವರ ಕತ್ತು ಹಿಚುಕಬೇಕಿತ್ತು " ಎನ್ನಬಹುದೇನೋ !

ಅನೇಕ ತರದ ಕಷ್ಟದಿಂದ ಪಾರಾಗಲು ಮನೆ ಬಿಟ್ಟು ಎಲ್ಲಿಯಾದರೂ ಕೆಲಸಕ್ಕೆ ( ಆಗಿನ ಕಾಲಕ್ಕೆ ಅಡಿಗೆ ನೀರುತುಂಬುವ ಕೆಲಸಕ್ಕೆ ಮಾತ್ರ ) ಸೇರಿದರೆ ಅಲ್ಲಿಯೂ ಅವಳಿಗೆ ಅದೇ ಗತಿಯಾಗುತ್ತಿತ್ತು. ಯಾರು ಮಾಡಿದ ತಪ್ಪಿಗೂ ಕಳವಿಗೂ ಅವಳೇ ಹೊಣೆ.

ಮಕ್ಕಳಿದ್ದರೆ ಅವರಿಗಾಗಿ ತರತರದ ಕಷ್ಟ ಅನುಭವಿಸಿ ಅವರನ್ನು ಬೆಳಿಸಿ ಸುಶಿಕ್ಷಿತರನ್ನಾಗಿ ಮಾಡಿದರೆ ತನ್ನ ಕಷ್ಟ ನೀಗಿತೆಂದು ಭಾವಿಸುತ್ತಾಳೆ. ಆದರೆ ಅಲ್ಲಿಯೂ ಅವಳಿಗೆ ಸುಖವಿದೆ ಎಂದು ಹೇಳಲುಬಾರದು. ಸುಶಿಕ್ಷಿತ ಮಗನಿಗೆ ಹೆಂಡತಿ ಸ.ಗುಣಿ ಬಂದಾಳೆಂಬ ಭರವಸೆ ಇಲ್ಲ. ಇಬ್ಬರು ಮೂರು ಮಕ್ಕಳಿದ್ದರೂ " ಯಾವಾಗಲೂ ನಮ್ಮ ಹತ್ತಿರವೇ ಏಕೆ ? ಆ ಮಗನ ಹತ್ತಿರವೇಕೆ ಇರಬಾರದು?" ಹೀಗೆ ಪ್ರತಿ ಸೊಸೆಯೂ ಹೇಳಿದರೆ....

" ಅಯ್ಯೊ ಅವರಿದ್ದರೆ " ಎಂದು ರಂಭಾಟ ಮಾಡುವ ಸ್ತ್ರೀಯರು ಕೆಲವರಾದರೆ " ದೈವ " ಎಂದು ಸಹಿಸುವವರು ಮತ್ತೆ ಕೆಲವರು.

'ಅವರು' ಎನ್ನುವವರು ಇದ್ದ ಎಲ್ಲ ಸ್ತ್ರೀಯರೂ ಸುಖವಾಗಿದ್ದವರೆಂದು ಹೇಳುವಂತಿಲ್ಲ. ಆ 'ಅವರು' ಒಳ್ಳೆಯವರಾಗಿದ್ದು ಅವಳ ಭಾವನೆಯನ್ನು ಅರಿಯುವಂಥವರಾಗಿದ್ದರೆ ಸರಿ; ಅವರು ಸ್ವೇಚ್ಛಾಚಾರಿಯಾಗಿದ್ದರೆ ವ್ಯಭಿಚಾರಿಯಾಗಿದ್ದರೆ ಅವಳೊಂದು

ಮೂಕಪಶು ಮನೆಯಲ್ಲಿ. ಭೋಗ್ಯವಸ್ತು ಅಷ್ಟೆ. 'ಅವರ'ನ್ನು ಅವಳು ಸಹಿಸಲೇಬೇಕು. ಬಂದಾಗ ಉಣಬಡಿಸಿ ಅನಿವಾರ್ಯದ ಮಕ್ಕಳನ್ನು ಹೆತ್ತು ಸೋತು ಅನೇಕ ಸಲ ರೋಗಕ್ಕೆ ತುತ್ತಾಗಬೇಕು. ಹಾಗಾದಾಗ ಅವರು ಅವಳನ್ನು ತಿರಸ್ಕರಿಸಿದರೂ ಒಪ್ಪಿಕೊಳ್ಳಬೇಕು. ತಪ್ಪು ತನ್ನದೇ ಇದ್ದವರಂತೆ.

ಅವಳು 'ಅವರಿಗೆ' ಬೇಡವಾದರೆ ಬರಡುದನವನ್ನು ಬಂದ ಹಣಕ್ಕೆ ಮಾರಿಬಿಡುವಂತೆ "ಬಿಟ್ಟುಬಿಡುವದೂ" ಉಂಟು. ಆಗಲೂ ಅವಳಿಗೆ ಸಮಾಜದಲ್ಲಿ ಗೌರವದ ಸ್ಥಾನವಿಲ್ಲ. "ಗಂಡನಿಗೆ ಬೇಡಾದವಳು ಗುಂಡುಕಲ್ಲಿಗೂ ಬೇಡ" ಎನ್ನುವಂತೆ ಯಾರೂ ಅವಳನ್ನು ಕರೆಯುವದಿಲ್ಲ. ಅದೇ ಸಮಯದಲ್ಲಿ ಅನಿವಾರ್ಯವಾಗಿ ಕೆಲಸಕ್ಕೊಬ್ಬ ಸ್ತ್ರೀ ( ಸಂಬಂಧಿಕರ ಮನೆಯಲ್ಲಿಯೇ, ಮತ್ತೆಲ್ಲಿಯಾದರೂ ದುಡಿದರೆ ಸಂಬಂಧಿಕರ ಮರ್ಯಾದೆಗೆ ಕುಂದು ) ಬೇಕಾಗಿದ್ದರೆ ಅಂಥವರ ಮನೆಯಲ್ಲಿ ಬಾಯಿಮುಚ್ಚಿಕೊಂಡು ಶಕ್ತಿಮೀರಿ ದುಡಿಯಬೇಕು. ಒಂದು ಕಟುಶಬ್ದವೂ ಅವಳ ಬಾಯಿಂದ ಹೊರಡಬಾರದು. ಹಾಗಾದರೆ 'ಇವಳೇ ಇಂಥವಳು. ಒಳ್ಳೆಯವಳಾಗಿದ್ದರೆ ಬಿಟ್ಟುಬಿಡುತ್ತಿದ್ದರೆ?' ಎಂದೋ ಅಥವಾ 'ನಡತೆ' ಸರಿಯಾಗಿರಲಿಲ್ಲ ಎಂಬ ಮಾತನ್ನೋ ಅವಳು ಕೇಳಿಕೊಳ್ಳಬೇಕು. ಅವಳ ದುಡಿತಕ್ಕೆ ಬೆಲೆ ಇಲ್ಲ. ಕಲಾಕೌಶಲ್ಯಕ್ಕೆ ಮರ್ಯಾದೆ ಇಲ್ಲ.

ಅವಳಿಗೆ ತನ್ನ 'ಅವರ'ನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವಿರಲಿಲ್ಲ. ಪಾಲಕರು ಹೇಳಿದಂತೆ ನಡೆಯಲೇಬೇಕು. 'ಅಕ್ಕಿ ಇದ್ದಲ್ಲಿ ಆನೆ ಕಟ್ಟುವದು' ಎಂದು ನುಡಿಯುತ್ತ ಎಷ್ಟೋ ಸಲ ವರಸಾಮ್ಯವಿಲ್ಲದೆ ಚಿಕ್ಕವಯಸ್ಸಿನ ಮಗಳನ್ನು ಮುದಿವಯಸ್ಸಿನವನೊಂದಿಗೆ ಅಥವಾ ಶಾರೀರಿಕವಾಗಿ ವ್ಯಂಗವಿದ್ದವನಿಗೆ ಐಶ್ವರ್ಯದ ಆಸೆಗಾಗಿ ಮದುವೆ ಮಾಡುತ್ತಿದ್ದರು. ಅವಳು ಪ್ರಾಯಕ್ಕೆ ಬಂದಾಗ ಅವಳ ಬಾಳು ಕಾಡು ಕುಸುಮವಾಗಿ ಜೀವನವೆಲ್ಲ ಅವಳಿಗೆ ನಿರಾಶೆಯಾದರೂ ಆಗುತ್ತಿತ್ತು. ಇಲ್ಲವೆ ಅವಳು ಅನೈತಿಕ ಕೃತಿಗಾದರೂ ಇಳಿಯುತ್ತಿದ್ದಳು. ಆಗಲೂ ಸಮಾಜ ಸಂಯಮವನ್ನು ಅವಳಿಂದಲೇ ಬಯಸುತ್ತಿತ್ತು.

ಹೀಗೆ ತಲೆತಲಾಂತರಗಳಿಂದ ಹೆಣ್ಣು ಅನ್ಯಾಯಗಳನ್ನು ಮೂಕ ಪಶುವಿನಂತೆ ಸಹಿಸುತ್ತ ಬಂದಳು. ತನಗಾಗುವ ಅನ್ಯಾಯವನ್ನು ಚೀರಿ ಹೇಳಲು ಸಹ ಅವಳಿಗೆ ಸ್ವಾತಂತ್ರ್ಯವಿರಲಿಲ್ಲ, ಚೈತನ್ಯವಿರಲಿಲ್ಲ.

ಅವಳಿಗಾಗಿ ರಾ ಜಾ ರಾ ಮ, ಗಾಂಧೀಜಿ, ಮಹರ್ಷಿ ಕರ್ವೆಯವರಂಥ ಮಹಾವ್ಯಕ್ತಿಗಳು ಕೂಗಿದರು. ಸ್ವತಃ ಕಷ್ಟಸಹಿಸಿದರು— ಅವಳ ದಾಸ್ಯದ ಶೃಂಖಲೆಯನ್ನು ಶಿಕ್ಷಣದಿಂದ ಮಾತ್ರ ಕತ್ತರಿಸಲು ಸಾಧ್ಯವೆಂದರು— ಅದಕ್ಕಾಗಿ ಹೆಣಗಿದರು— ಶಿಕ್ಷಣದ ಸೌಕರ್ಯವನ್ನು ಒದಗಿಸಿದರು. ಅನ್ಯಾಯಗಳನ್ನು ಕಾನೂನಿನಿಂದ ತಿದ್ದುಪಡಿ ಮಾಡಿಸಿದರು. ಸ್ವತಂತ್ರ ಜೀವನವನ್ನು ನಡೆಸಲು ಸ್ತ್ರೀ ಶಕ್ತಳಾದಾಗಲೇ ಸಮಸ್ಯೆ ತೀರುವದೆಂದುಕೊಂಡರು.

ಪುರುಷರಿಗೆ ಸಿಗುವ ಸವಲತ್ತುಗಳು ಸ್ತ್ರೀಯರಿಗೂ ದೊರೆತವು. ಸ್ತ್ರೀ ಎಲ್ಲ ರಂಗಗಳಲ್ಲಿಯೂ ಪುರುಷನಿಗೆ ಸಮನಾಗಿ ಶಿಕ್ಷಣ ಪಡೆಯತೊಡಗಿದಳು. ಯಾವುದರಲ್ಲಿಯೂ 'ಕಡಿಮೆ' ಎನ್ನಿಸದಂತಾದಳು. ಹೀಗೆ ಶಿಕ್ಷಣವು ಸ್ತ್ರೀಗೆ ಮೊದಲು ಸ್ವತಂತ್ರ ಜೀವನವನ್ನು ನಡೆಸಲು ಒಂದು ಆಸ್ತಿಯಾಗಿ ಪ್ರಸಂಗಕ್ಕೆ ಜೀವನಿಮೆಯಂತೆ ಉಪಯುಕ್ತವಾಗತೊಡಗಿತು. ಶಿಕ್ಷಣದಿಂದ—ಬಾಹ್ಯ ಜಗತ್ತಿನ ಸಂಪರ್ಕದಿಂದ ಅವಳ ಜ್ಞಾನವಿಕಾಸವಾಯಿತು. ಅವಳು ತನ್ನ ಕರ್ತೃತ್ವಶಕ್ತಿಯಿಂದ ಅವಕಾಶ ಸಿಕ್ಕರೆ ಏನನ್ನೂ ಮಾಡಬಲ್ಲೆ ಎಂಬ ಆತ್ಮವಿಶ್ವಾಸವನ್ನು ತಳೆಯತೊಡಗಿದಳು. ಅವಳ ವಿಶ್ವಾಸಕ್ಕೆ ಯಂತ್ರಗಳೂ ಸಹಾಯಕವಾಗಿ ಬಂದವು. ಹಿಂದೆ ಮನುಷ್ಯ ಶಕ್ತಿಯಿಂದಾಗುವ ಕೆಲಸ ಇಂದು ಸುಲಭವಾಯಿತು.

ಮೊದಮೊದಲು 'ಶಿಕ್ಷಣ' ಎಂದರೆ 'ಶಾಲಾ ಶಿಕ್ಷಣಕ್ಕೆ' ಮಾತ್ರ ಮಿತಿ ಇತ್ತು. ಅದನ್ನು ಪಡೆದವರು ಮಾತ್ರ ಸುಶಿಕ್ಷಿತರೆನ್ನಿಸಿಕೊಳ್ಳುತ್ತಿದ್ದರು. ಇಂಥ ಅನೇಕ ಸುಶಿಕ್ಷಿತರು ತಮ್ಮ ಭಗಿನಿವರ್ಗಕ್ಕಾಗಿ ಮಂಡಳ ಸಂಸ್ಥೆಗಳನ್ನು ಸ್ಥಾಪಿಸಿದರು. ಗೃಹಕೈಗಾರಿಕೆಗಳಿಂದ ವೃತ್ತಿಗಳನ್ನು ಕಲ್ಪಿಸಿದರು. ಸಾರ್ವಜನಿಕರಿಂದಲೂ ಸರಕಾರದಿಂದಲೂ ಒತ್ತಾಯದಿಂದ ಹಣಪಡೆದು ಹಳ್ಳಿಯಲ್ಲಿಯ ಸ್ತ್ರೀಯೂ ಅಕ್ಷರಸ್ಥಳಾಗುವಂತೆ ಪ್ರಯತ್ನಿಸಹತ್ತಿದರು.

ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಮೇಲೆ ದೇಶದ ಜನಸಂಖ್ಯೆಯಲ್ಲಿ ಅರ್ಧ ಮಹಿಳೆಯರಿರುವದರಿಂದ ಇಡೀ ದೇಶವನ್ನೆ ಸಾಕ್ಷರಮಾಡುವ ಪ್ರಯತ್ನದಲ್ಲಿ ಅವರ ವಿಷಯದಲ್ಲಿಯೂ ವಿಶೇಷ ಆಸ್ಥೆವಹಿಸಲಾಯಿತು. ಅದರ ಸಂಪೂರ್ಣ ಉಪಯೋಗವನ್ನು ಸ್ತ್ರೀ ಸಮಾಜ ಪಡೆಯಿತು. ಇದರಿಂದ ಸ್ತ್ರೀಪುರುಷರಲ್ಲಿ ಒಂದು ಸ್ಪರ್ಧೆಯೆ ನಡೆದಂತೆ ಅನೇಕ ಪುರುಷರಿಗೆ ಭಾಸವಾಗಹತ್ತಿತು.

ದೇಶದ ಸ್ವಾತಂತ್ರ್ಯದಲ್ಲಿ ಭಾಗವಹಿಸಿದ ಮಹಿಳೆಯರು ಅಟ್ಟುವ ಕೈ ರಾಜ್ಯವಾಳುವದನ್ನು ತೋರಿಸಿಕೊಟ್ಟರು. ಎಲ್ಲ ಸ್ತ್ರೀಯರೂ ಅಷ್ಟು ಪ್ರಗತಿ ಹೊಂದದಿದ್ದರೂ ಅವರಿಗೆ ವಿಕಾಸದ ಮಾರ್ಗ ನಿಚ್ಚಳವಾಗಿ ತೋರಹತ್ತಿತು. ಚಂದ್ರಲೊಕದತ್ತ ಹೊರಟಿರುವ ಇಂದಿನ ವೈಜ್ಞಾನಿಕಯುಗದಲ್ಲಿ ಸ್ತ್ರೀಯರ ಸಮಸ್ಯೆಗಳನ್ನು 'ದೈವ' ಎಂದು ನಂಬಲು ಅವಳಿಗೆ ಅಸಾಧ್ಯವಾಯಿತು. ಪಶ್ಚಿಮ ದೇಶಗಳಲ್ಲಿ ಗಗನಯಾತ್ರೆಯ ಸ್ಪರ್ಧೆ ನಡೆದಂತೆಯೇ ಶಿಕ್ಷಣದಿಂದ ದೈವವನ್ನು ಗೆದ್ದು ಅದರ ಮೇಲೆ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನ ನಡೆಯಿತು. ಸಿರಿವಂತ ಗಂಡನನ್ನು ಪಡೆಯಲು—ಸ್ವತಂತ್ರವಾಗಿ ಬಾಳಲು—ತಂದೆತಾಯಿಗಳನ್ನು ಸಾಕಲು—ಬಡತನವನ್ನು ಹಿಂಗಿಸಲು—ಇನ್ನೊಬ್ಬರ ಗರ್ವವನ್ನು ಇಳಿಸಲು ಹೀಗೆ ಎಲ್ಲದಕ್ಕೂ 'ಶಿಕ್ಷಣ' ಎಂಬ ಅಸ್ತ್ರವನ್ನು ಪಡೆಯತೊಡಗಿದರು. ಯೋಗ್ಯತೆ, ಉಪಯುಕ್ತತೆ—ಯಾವ ವಿಚಾರವೂ ಇಲ್ಲದೆ.

"ಏನು ಹುಟ್ಟಿತು?"

"ಹೆಣ್ಣು"

"ಹೆಣ್ಣSSSS—" ಒಬ್ಬರೆಂದರೆ,

"ಈಗಿನ ದಿವಸದಲ್ಲಿ ಎರಡೂ ಅಷ್ಟೆ. ಏನು ಗಂಡುಮಗ ಹುಟ್ಟಿ ಹೊಟ್ಟೆಗೆ ಹಾಕುತ್ತಿದ್ದ ಅಥವಾ ಸ್ವರ್ಗಕಾಣಿಸುತ್ತಿದ್ದ". ಇಂಥ ಮಾತು ಸಾಮಾನ್ಯ. ಆದರೆ ಅದರ ಹಿಂದೆ ಆಸೆ—ನಿರಾಸೆ ಎರಡೂ ಇರುತ್ತವೆ.

ಒಟ್ಟು ಕುಟುಂಬ ಒಡೆದು ತಮ್ಮ ಹೊಟ್ಟೆ ಹೊರೆಯಲು ಊರೂರು ಅಲೆಯುವ ಗಂಡುಮಗ ಹಿಂದಿನಂತೆ ತಂದೆಯ ಕೆಲಸದಲ್ಲಿ ಸಹಾಯಕನೂ ಆಗಲಾರ. ಏರುತ್ತಿರುವ ಜೀವನಮಟ್ಟದ ಮೂಲಕ ಹಣವನ್ನೂ ಕಳಿಸಲಾರ. ಆಸ್ತಿಕಭಾವನೆಯೂ ಇಂದು ಜನತೆಯಲ್ಲಿ ಕಡಿಮೆಯಾಗಿ ಶ್ರಾದ್ಧದ ದಿವಸ ಬ್ರಾಹ್ಮಣನಿಗೆ ಎರಡು ರೂಪಾಯಿ ಕೈಯಲ್ಲಿಟ್ಟು ಕೈಮುಗಿದರೆ ಕರ್ಮತೀರಿತೆಂದು ಭಾವಿಸುವ ಇಂದಿನ ಪೀಳಿಗೆಯಿಂದ ಅವರು ಸ್ವರ್ಗದ ಆಸೆಯನ್ನೂ ಬಿಡಬೇಕಾಗಿದೆ. ಈ ಕಾರಣದಿಂದ, ಮಗಳು ಮದುವೆಯಾಗಿ ಇನ್ನೊಬ್ಬರ ಮನೆಗೆ ಹೋಗುವಂತೆ ಮಗನೂ ಮದುವೆಯಾದ ನಂತರ

ದೂರವಾಗುವದರಿಂದ "ಈಗಿನ ದಿವಸದಲ್ಲಿ ಮಗನೂ ಮಗಳೂ ಒಂದೇ" ಎಂಬ ಮಾತುಗಳು ಬರುವವು. ಆದರೂ ಮುಪ್ಪಿನಕಾಲದಲ್ಲಿ ಮಗನೇ ಆಧಾರವೆಂಬ ಮೃಗಜಲದ ಆಸೆಯಂತೆ ಅವರು ಅವನನ್ನು ನಂಬುತ್ತಾರೆ. ಮಗಳು ಆಸ್ತಿಗೆ ಸಮಾನ ಅಧಿಕಾರಸ್ಥಳಾದರೂ ಅವಳ ಮನೆಯಲ್ಲಿರುವ ಕನಸನ್ನು ಸಹ ಅವರು ಕಾಣುವದಿಲ್ಲ. ಸಂಪ್ರದಾಯದಿಂದ ಬಂದ ಸಂಸ್ಕಾರ ಅವರಿಗೆ ಹಾಗೆ ಮಾಡಗೂಡುವದಿಲ್ಲ. ಅದಕ್ಕಾಗಿಯೇ ಮಗ ಮತ್ತು ಮಗಳು ಎಂಬ ಭೇದಭಾವ ಈ ಕಾಲದಲ್ಲಿಯೂ ನಮ್ಮಲ್ಲಿ ಉಳಿದಿದೆ.

ಮಗ ಮಗಳು ಇಬ್ಬರೂ ಶಿಕ್ಷಣ ಪಡೆಯುವಾಗ ತಪ್ಪಿಸುವ ಪ್ರಸಂಗ ಬಂದಾಗ ಆ ಪಾಲು ಮಗಳಿಗೇ ಕಟ್ಟಿಟ್ಟದ್ದು. ವೇಳೆ ಇಲ್ಲದಿದ್ದರೂ ತಾಟು ಬಟ್ಟಲನ್ನಿಟ್ಟುಕೊಳ್ಳುವದು ತೆಗೆಯುವದು ತಾಯಿಯ ಕೆಲಸದಲ್ಲಿ ಸಹಾಯಮಾಡುವದು ಮಗಳೇ ಮಾಡುವಾಗ, ಮಗ ರೆಡಿಓ ಹಾಕಿಕೊಂಡು ಮಿತ್ರರಿಗಾಗಿ ಒಳಗೆ ಟೀಗಾಗಿ 'ಆರ್ಡರ' ಮಾಡಬಹುದು. ನಮ್ಮ ಮನೆಯಲ್ಲಿ ಗಂಡಸರಿಗೆ ಕೆಲಸಮಾಡಿ ಗೊತ್ತಿಲ್ಲ, ಇದು ಹೆಂಗಸರಿಗೆ ಹೆಮ್ಮೆಯ ಮಾತು.

ಹಬ್ಬ ಹರಿದಿನ—ತಾಯಿಯದೋ ಅಕ್ಕನದೋ ಬಾಣಂತಿತನ. ತಂದೆಯ ಕೆಮ್ಮಿಗೆ ಔಷಧಿ--ಅಣ್ಣನ ಸ್ನಾನಕ್ಕೆ ನೀರು, ತಂಗಿಯನ್ನು ಬಗಲಲ್ಲಿಟ್ಟುಕೊಂಡು, ಒಂದು ಮಗುವಿಗೆ ಕೈಯಿಂದ ಚಮಚೆಯಿಂದ ಪಾತ್ರೆಬಾರಿಸುತ್ತ ಕೆಳಗಡೆ ಪುಸ್ತಕ ಇಟ್ಟು ಮಗಳ ಶಾಲೆಯ ಅಭ್ಯಾಸವಾಗಬೇಕು. ಇಷ್ಟೆಲ್ಲ ಕಸರತ್ತುಮಾಡಿ ಶಿಕ್ಷಣ ಪೂರೈಸಿದಾಗ ಎದುರಾಗುತ್ತದೆ ಮದುವೆಯ ಸಮಸ್ಯೆ.

ಇಂದು ಮಹಿಳೆ ಸುಶಿಕ್ಷಿತಳಾದರೂ ಸಮಸ್ಯೆ...ಅಶಿಕ್ಷಿತಳಾದರೂ ಸಮಸ್ಯೆ. ಅವಳಿಂದ ಅನೇಕ ತರದ ಅಪೇಕ್ಷೆಗಳನ್ನು ಆಶಿಸುತ್ತಾರೆ. 'ವರ' ಮತ್ತು ಅವನ ಸಂಬಂಧಿಕರು.

"ಇವಳೇನು ನಮ್ಮ ಮನೆಯಲ್ಲಿ ಹೊಂದಿಕೊಳ್ಳಲು ಸಾಧ್ಯ...." (ಹೆಚ್ಚು ಶಿಕ್ಷಿತಳಿಗೆ).

"ಅಶಿಕ್ಷಿತಳನ್ನು ಕಟ್ಟಿಕೊಂಡು ಈಗಿನ ದಿವಸದಲ್ಲಿ ಹೇಗೆ ಬಾಳುವದು. ನಮ್ಮ ಹುಡುಗ ಅಮೇರಿಕೆಗೆ ಹೋಗಿ ಬಂದವ...." (ಡಿಗ್ರಿ ಅಥವಾ ಸರ್ಟಿಫಿಕೇಟ ಇಲ್ಲದವಳಿಗೆ).

"ಈಗಿನ ದಿವಸದಲ್ಲಿ ಬಿ. ಎ. ಅಂದರೆ ಏನೂ ಅಲ್ಲ. ಹಿಂದಕಿನ ಮೆಟ್ರಿಕ್, ಇನ್ನು ಮೆಟ್ರಿಕ್ ಅಂದರೆ...." (ಇದು S. L. C. ಪಾಸಿಗೆ).

ಹೀಗೆ ಶಿಕ್ಷಣದ ವಿಷಯಕ್ಕೆ ತರತರದ ಚೌಕಸಿಗಳಾಗಿ (ಶಾಲಾ ಶಿಕ್ಷಣದೊಂದಿಗೆ ವೃತ್ತಿ ಶಿಕ್ಷಣ ಒಂದಿದ್ದರೆ ಸರಿ ಎಂದುಕೊಂಡು) ಅದು ಹೇಗೋ ಕನ್ಯೆಯನ್ನು ನೋಡಲು ಒಪ್ಪುತ್ತಾರೆ. ಇಂದು ಬಾಹ್ಯರೂಪಕ್ಕೆ ಅತಿಯಾದ ಮಹತ್ವ ಬಂದಿರುವದರಿಂದ 'ನೋಡಲು' ಬಂದ ಪ್ರತಿ ವ್ಯಕ್ತಿಯಿಂದಲೂ ಅವಳ ದೇಹದ ವಿಷಯ ಚರ್ಚೆಯಾಗುವದು. ಅನಂತರ ಅವಳ ತಂದೆಯಿಂದ ಹಣ ಎಷ್ಟು ದೊರೆಯಬಹುದೆಂಬ ವಿಷಯ. (ಎಷ್ಟೋ ಸಲ ಅದನ್ನು ಮೊದಲು ತಿಳಿದೇ 'ಹುಡಿಗೆ'ಯನ್ನು ನೋಡಲು ಬರುವದು) ಹಣ-ರೂಪ-ವಿದ್ಯೆ- ಎಲ್ಲವೂ ಸರಿಯಾಗಿ ಹೊಂದಿ (ವರನ ಕಡೆಯವರಿಗೆ) ಕನ್ಯೆಯ ಮದುವೆಯಾಗುವದೆಂದರೆ ಅಶ್ವಮೇಧಯಜ್ಞ.

ತನ್ನ ಅನೇಕ ಆಶೆಗಳನ್ನು ಬದಿಗಿರಿಸಿ ತಂದೆ ತಾಯಿಗಳನ್ನು 'ಮುಕ್ತ'ರನ್ನಾಗಿ ಮಾಡಲು ಕನ್ಯೆ ವರಿಸಿದ 'ವರ' ಅವಳಿಂದ ಅನೇಕ ಅಪೇಕ್ಷೆಗಳನ್ನಿಟ್ಟುಕೊಂಡಿರುತ್ತಾನೆ. ಅವಳ ಶಿಕ್ಷಣದಿಂದ ಅವನಿಗೆ ಲಾಭವಾಗಬೇಕು. (ಆರ್ಥಿಕವಾಗಿ) ಅವಳ ಸೌಜನ್ಯದಿಂದ ಅವನ ಸಂಬಂಧಿಕರೆಲ್ಲ ಸಂತುಷ್ಟರಾಗಬೇಕು. ಸೀತೆಯ ತ್ಯಾಗ-ರುಕ್ಮಿಣಿಯ ಪ್ರೇಮ-ಸಾವಿತ್ರಿಯ ಸೇವೆ- ಎಲ್ಲವನ್ನೂ ಅವನು ಅವಳಿಂದ ಅಪೇಕ್ಷಿಸುತ್ತಾನೆ. ಅವಳು 'ನನ್ನ ಡಿಗ್ರಿ ಕೋರ್ಸ ಮುಗಿಸಲಾ' ಎಂದಾಗ 'ಏನು ನೀನು ಗಳಿಸಿ ನನ್ನ ಹೊಟ್ಟೆ ತುಂಬವನಳಿದ್ದೀಯಾ" "ಸಂಗೀತ ಕಲಿಯಲಾ" "ತೊಟ್ಟಲ ಜೋಗಳ ಹಾಡಲಿಕ್ಕೆ— ಅಥವಾ "ಅದು ಸಿರಿವಂತರ ಸೊತ್ತು" ಎಂಬ ಕೊಂಕು ನುಡಿಗಳು ಅವಳಿಗೆ ಉತ್ತರವಾಗಿ ಸಿಗುತ್ತವೆ. ಅವಳ ಯಾವ ಕಲೆಗೂ ಪ್ರೋತ್ಸಾಹ ದೊರೆಯುವದಿಲ್ಲ. ನಮ್ಮ ಬಾಳು ಕೇವಲ ಅಡುಗೆ ಮಾಡುವದಕ್ಕಾಗಿ ಎಂದು ಅವಳು ನಿರಾಶಳಾಗಿ ಉತ್ಸಾಹವನ್ನೆ ಕಳೆದುಕೊಳ್ಳುತ್ತಾಳೆ. ಕೆಲವೆಡೆ ಪತಿಯ ಮಾತನ್ನು ಮೀರಿ ತನ್ನ ಆಸೆಗಳನ್ನು ಪೂರೈಸಿಕೊಳ್ಳುತ್ತಾಳೆ. ಪತಿಯನ್ನು ಪ್ರತಿಮಾತಿಗೆ ದಬಾಯಿಸುತ್ತಾಳೆ. ಜನ ಆಗ ಅವಳಿಗೆ ತರತರದ ಹೆಸರಿಡುತ್ತದೆ. ಆದರೆ ಅವಳ ಆಂತರಿಕ ಅಪೇಕ್ಷೆಯ ಭಂಗ ಕಾಣಬರುವದಿಲ್ಲ. ಒಬ್ಬ ಸುಶಿಕ್ಷಿತ ಸ್ತ್ರೀಯ ನಡೆನುಡಿಯಲ್ಲಿ. ಸ್ವಲ್ಪ ಹೆಚ್ಚು ಕಡಿಮೆಯಾದರೆ, ಇಡೀ ಸುಶಿಕ್ಷಿತ ಸ್ತ್ರೀಸಮಾಜವೇ ನಿಂದೆಗೆ ಗುರಿಯಾಗುತ್ತದೆ.

ಅನೇಕ ಆಫೀಸುಗಳಲ್ಲಿ ಇಂದು ಮಹಿಳೆಯರು ಕೆಲಸಮಾಡುವರು. ಅವರಲ್ಲಿ ಹೆಚ್ಚಾಗಿ ಶಿಕ್ಷಣವನ್ನು ಮುಗಿಸಿ (ಮದುವೆಯಾಗುವ ವರೆಗೆ ಅನಿವಾರ್ಯವಾಗಿ) ಮುಂದೆ ಮದುವೆಯಾಗದಿದ್ದರೆ, ಮನೆಯಲ್ಲಿದ್ದೇನು ಮಾಡುವದೆಂದು ಎಂಬಂಥವರೂ ಮತ್ತು ಅನೇಕರು ಆರ್ಥಿಕ ಮುಗ್ಗಟ್ಟಿಗಾಗಿ—ಕೆಲಸ ಸೇರಿದವರೂ ಹೆಚ್ಚಾಗಿರುವರು. ಈ ನೋಕರಿ ಮಾಡುವ ಮಹಿಳೆಗೆ ಪುರುಷನಿಗಿದ್ದ ಸೌಕರ್ಯಗಳು ಮನೆಯಲ್ಲಿ ಸಿಗುವದಿಲ್ಲ. ಅವಳಿಗಾಗುವ ಅನನುಕೂಲತೆಗಳಿಗೆ ಸಹಾನುಭೂತಿಯೂ ಮನೆಯಲ್ಲಿಯ ಇತರ ವ್ಯಕ್ತಿಗಳಿಂದ ಸಿಗುವದಿಲ್ಲ. ನೋಕರಿಯನ್ನು 'ಫ್ಯಾಶನ್' ಎಂದು ತಿಳಿಯುವವರೂ ಅನೇಕರಿದ್ದು, ಅವರಿಂದ ಅವಳು ಯಾವಾಗಲೂ ಟೀಕೆಗೆ ಗುರಿಯಾಗುತ್ತಿರುತ್ತಾಳೆ. ಒಟ್ಟು ಕುಟುಂಬವಿದ್ದರೆ— ಅದರಲ್ಲಿಯ ಸದಸ್ಯರಿಂದ— "ಇವಳು ಮೆರೆಯಬೇಕು? ಮನೆ ಯಾರು ನೋಡಬೇಕು? ಇವಳ ಮಕ್ಕಳನ್ನು ಯಾರು ನೋಡಬೇಕು" ಎಂಬ ಮಾತುಗಳೂ ಕೇಳಬರುವವಲ್ಲದೆ ಅವಳ ಕೆಲಸ ಮತ್ತು ಮಕ್ಕಳಕಡೆಗೆ ಹೆಚ್ಚಾಗಿ ಸಹಾಯಕ್ಕಿಂತ ದುರ್ಲಕ್ಷ್ಯ ಮತ್ತು ಅಪಹಾಸ್ಯವೇ ಹೆಚ್ಚಾಗಿರುತ್ತದೆ. 'ರಾಜಾ ರಾಣೀ' ಸಂಸಾರವಿದ್ದರೂ ಮಕ್ಕಳ ಮತ್ತು ಮನೆಗೆಲಸದ ಪ್ರಶ್ನೆ ಬಂದೇ ಬರುತ್ತದೆ. ಮಕ್ಕಳನ್ನು ನೋಡಿಕೊಳ್ಳುವಂಥ ಸಂಸ್ಥೆಗಳು ಇನ್ನೂ ನಮ್ಮಲ್ಲಿ ಇರದ್ದರಿಂದ ಹೆಚ್ಚಾಗಿ ಬಳಗದವರನ್ನು, ನೆರೆಹೊರೆಯವರನ್ನು, ಆಳುಗಳನ್ನು ನಂಬಿ ಮಕ್ಕಳನ್ನು ಮನೆಯಲ್ಲಿ ಬಿಡಬೇಕಾಗುತ್ತದೆ. ಇದರಿಂದ ಮಕ್ಕಳ ಮನಸ್ಸಿನ ಮೇಲಾಗುವ ಸಂಸ್ಕಾರ ಮತ್ತು ಪರಿಣಾಮ ಒಮ್ಮೊಮ್ಮೆ ಬಹಳ ಘಾತುಕವಾಗಿರುತ್ತದೆ. ಇದಲ್ಲದೆ ಪತ್ನಿಯ ದುಡ್ಡಿನಿಂದ ಮನೆಗೆ ಸಹಾಯವಾದರೂ ಪತಿ ಇದರಿಂದ ಸಂಪೂರ್ಣ ಸಂತುಷ್ಟನಿರುವದಿಲ್ಲ. ಅವಳ ಗಳಿಕೆ ಅವನಿಗೆ ಒಂದು ತರದ ನ್ಯೂನಭಾವವನ್ನು ತರುತ್ತದೆ. ಇದೇ ಕಾರಣದಿಂದ ಎಷ್ಟೇ ಕಷ್ಟವಿದ್ದರೂ ತನ್ನ ಪತ್ನಿಯನ್ನು ಯೋಗ್ಯತೆ ಇದ್ದರೂ ಅವನು ಕೆಲಸಕ್ಕೆ ಕಳಿಸುವದಿಲ್ಲ. ಮನೆಗೆಲಸದಲ್ಲಿ ಸಹಾಯಮಾಡುವ ಪತಿಗಳಿದ್ದರೂ ಅವರಿಗೆ ಅದು ಸಾಮಾಜಿಕವಾಗಿ ಅಪಮಾನಕರವಾಗಿರುತ್ತದೆ. ಒಮ್ಮೆ ಕೆಲಸಕ್ಕೆ ಸೇರಿದನಂತರ ಅವಳ ಜಗತ್ತೂ ಪುರುಷರಂತೆಯೇ ವಿಶಾಲವಾಗು

ತ್ತದೆ. ಅನೇಕರೊಡನೆ ಸಂಪರ್ಕ ಬೆಳೆದು ಸ್ನೇಹಿತ ವರ್ಗವೂ ಬೆಳೆಯುತ್ತದೆ. ಆಗ ಪುರುಷರೊಂದಿಗೆ ಕಲೆಯುವದು ನಮ್ಮ ಸಮಾಜದಲ್ಲಿ ಅಷ್ಟಾಗಿ ಬಳಕೆಯಲ್ಲಿರದ್ದರಿಂದ ಅವಳು ಟೀಕೆಗೆ ಗುರಿಯಾಗುತ್ತಾಳೆ. ಜತೆಗಾರನೊಬ್ಬನೊಡನೆ ಸಹಜವಾಗಿ ನಕ್ಕರೂ ಅದು ಪ್ರಣಯರೂಪವಾಗಿ ತೋರುತ್ತದೆ. ಮಕ್ಕಳ ಹುಟ್ಟುಹಬ್ಬ ಎಂದು ಆತನನ್ನು ಮನೆಗೆ ಆಮಂತ್ರಿಸಿದರೂ ಅದು ಅಸಹ್ಯವಾಗಿ ತೋರುತ್ತದೆ. ಇಂಥ ಚಿಕ್ಕ ಘಟನೆಗಳಿಗೆ ಭೂತಗನ್ನಡಿ ಹಿಡಿದಾಗ ಅನೇಕ ಸಲ ಅದು ಅವಳ ಜೀವನವನ್ನೆ ಹಾಳುಮಾಡುವಂತಾಗುತ್ತದೆ.

ವಿವಾಹವಿಚ್ಛೇದನ ಪಡೆಯುವ ಹಕ್ಕು ಇಂದು ಸ್ತ್ರೀಗೆ ಇದ್ದರೂ ಎಂಥ ಕಷ್ಟದಲ್ಲಿಯೂ ಅವಳು ಅದನ್ನು ಹೆಚ್ಚಾಗಿ ಪಡೆಯಲು ಅಪೇಕ್ಷಿಸುವದಿಲ್ಲ. ಕಾರಣ ಆ ಸ್ತ್ರೀಗೆ ಸಮಾಜದಲ್ಲಿ ಉಚ್ಚಸ್ಥಾನವಿಲ್ಲ. ವಿಚ್ಛೇದನ ಪಡೆಯುವಾಗ ದೋಷ ಪತಿಯದಾಗಿದ್ದರೂ ಸಾಮಾಜಿಕವಾಗಿ ಅವನಿಗೆ ಯಾವ ಮರ್ಯಾದೆಯೂ ಕಡಿಮೆಯಾಗುವದಿಲ್ಲ. ಅವನು ಸಹಜವಾಗಿ ಮರುಮದುವೆಯಾಗುವಂತೆ ಅವಳದು ಆಗುವದು ಸಾಧ್ಯವಿರುವದಿಲ್ಲ. ಕನ್ಯೆಯರ ಮದು-ವೆಯೇ ಅಷ್ಟು ಕಷ್ಟಕರವಾಗಿರುವಾಗಇಂಥ ಸ್ತ್ರೀ-ಯರ ಮದುವೆ ಕನಸಿನಲ್ಲಿಯೆ. ಹೀಗಾಗಿ ಅವಳು ಸಮಾಜದಲ್ಲಿ ಗಂಡನನ್ನು ಬಿಟ್ಟವಳು ಅಥವಾ ಗಂಡ ಬಿಟ್ಟವಳು ಎಂದು ಬೊಟ್ಟುಮಾಡಿತೋರಿಸಿಕೊಳ್ಳುವಾಗ ಅವಳಿಗಾಗುವ ವೇದನೆಯನ್ನು ಸ್ತ್ರೀಯರೇ ಅರಿಯರು. (ಟೀಕೆ ಮಾಡುವವರು ಸ್ತ್ರೀಯರೇ) ಇನ್ನು ಇಂಥ ಪರಿಸ್ಥಿತಿಯಲ್ಲಿ ಅವಳಿಗೆ ಮಕ್ಕಳಿದ್ದರೆ ಅವು ಅವಳಿಗೆ ಬೇಕಿದ್ದರೂ ಆ ಮಕ್ಕಳು ಪತಿಯ ಸ್ವತ್ತು. ಎಷೋ ಸಲ ಅವನು ಆ ಜವಾಬ್ದಾರಿಯನ್ನು ಬಿಟ್ಟುಕೊಡಲು ಸಿದ್ಧನಿದ್ದರೂ ಅವುಗಳನ್ನು ಸಾಕುವ ಚೈತನ್ಯ ಅವಳಿಗಿರುವದಿಲ್ಲ. ಅಲ್ಲದೆ ಮಕ್ಕಳು ದೊಡ್ಡವರಾದ ನಂತರ ತಾಯಿಮಾಡಿದ್ದು ಸರಿ ಎಂದು ಹೇಳುವ ಭರವಸೆಯಾದರೂ ಎಲ್ಲಿ? ಸಮಾಜದಲ್ಲಿ ಆ ಮಕ್ಕಳಿಗಾಗುವ ಅವಮಾನಕರ ಪ್ರಸಂಗಗಳಿಂದ ಅವರು ತಮ್ಮ ತಾಯಿಯಿಂದಲೇ ತ್ಯಾಗವನ್ನು ಬಯಸಬಹುದು. ತಂದೆ ಎಂಥವನಾದರೂ ತಾಯಿ ವಿಚ್ಛೇದನ ಪಡೆಯಬಾರದಿತ್ತು ಎಂದು ಹೇಳುತ್ತ ಮಕ್ಕಳು ತಾಯಿಯನ್ನು ತಿರಸ್ಕರಿಸುತ್ತ ಹೋದರೆ ಆ ಸಂಕಟ ಅವಳಿಗಾಗುವ ವೇದನೆ ಅದೆಷ್ಟು?

ಇಂದಿನ ಸ್ತ್ರೀಸಮಾಜದಲ್ಲಿ ಅನೇಕರು ಪ್ರೌಢ ಕುಮಾರಿಕೆಯರಿದ್ದಾರೆ. ಅವರೆಲ್ಲರೂ ಯಾವದೊಂದು ವಿಶಿಷ್ಟ ಧ್ಯೇಯಸಾಧನೆಗಾಗಿ ಕುಮಾರಿಯರಾಗಿ ಉಳಿದವರಲ್ಲ. ಮದುವೆ 'ಜೂಜಿ' ನಲ್ಲಿ ಓಡಿ ಸೋತವರು ಅನೇಕರಾಗಿದ್ದರೆ ಇನ್ನೂ ಅನೇಕ ಹುಡಿಗೆಯರು ಭಾವನೆಯ ಭರದಲ್ಲಿ ಕುಟುಂಬದ ಹೊಣೆಹೊತ್ತು ಸಾಗಿದಾಗ ಮದುವೆ ತಪ್ಪಿ ಹೋಗಿರುತ್ತದೆ. ಇಂಥ ಕುಮಾರಿಕೆಯರ ಸ್ಥಿತಿ ಒಮ್ಮೊಮ್ಮೆ ವಿಧವೆಯರಿಗಿಂತಲೂ ಹೀನವಾಗಿರುತ್ತದೆ. ಇವರು ಮಾನಸಿಕವಾಗಿ ಅನುಭವಿಸುವ ಯಾತನೆಗೆ ಸಹಾನುಭೂತಿಯೂ ಇರುವದಿಲ್ಲ.

ಅನಿವಾರ್ಯವಾಗಿ ಬೆಳೆದುಬಂದ ವೇಶ್ಯಾ ಸಮಾಜವೊಂದು ಮಾನವಕುಲಕ್ಕೇ ಕಲಂಕವಾಗಿದೆ. ಆ ವೃತ್ತಿಯನ್ನು ಸ್ವೇಚ್ಛೆಯಾಗಿ ತೆಗೆದುಕೊಂಡಿದ್ದರೆ ಅಂಥವರ ವಿಷಯ ಮಾತನಾಡುವಂತೆಯೇ ಇಲ್ಲ. ಕೆಲವು ಜನ್ಮಗಳನಂತರವೇ ಅವರು ಅದರಿಂದ ಮುಕ್ತರಾಗಬೇಕು. ಒತ್ತಾಯಪೂರ್ವಕವಾಗಿ ಆ ವೃತ್ತಿಗೆ ಹಚ್ಚಿದ್ದರೆ ಅಂಥವರನ್ನು ಸರಕಾರದ ಪ್ರಯತ್ನದಿಂದ ಸಾಮಾಜಿಕ ಸಹಾನುಭೂತಿಯಿಂದ ಸಮಾಜದಲ್ಲಿ ಅವರಿಗೆ ಒಳ್ಳೆಯ ಸ್ಥಾನವನ್ನೂ ಕಲ್ಪಿಸಬಹುದು. ಆದರೆ ಕೆಲ ಸ್ತ್ರೀಯರಿಗೆ ಬಾಳಿನ ನಿರಾಸೆಯೇ ಕಾರಣವಾಗಿರಬಹುದು. ಸ್ತ್ರೀಗೆ ಕೇವಲ ಹೊಟ್ಟೆ-ಬಟ್ಟೆಗೆ ( ಹೊಟ್ಟೆ ದೈಹಿಕ ಬಟ್ಟೆ ಸಾಮಾಜಿಕ! ) ಕೊಟ್ಟರೆ ಕರ್ತವ್ಯ ಮುಗಿಯಿತೆಂದು ಭಾವಿಸುವ ಪುರುಷ ಸಮಾಜ ಅವಳ ನೈಸರ್ಗಿಕವಾದ ಮಾನಸಿಕ ಅಪೇಕ್ಷೆಗಳ ಕಡೆಗೆ ಹೆಚ್ಚಾಗಿ ದುರ್ಲಕ್ಷ್ಯ ಮಾಡುವದು- ಈ ಸಮಾಜದ ಸಂಪೂರ್ಣ ನಿರ್ಮೂಲನ ಸಾಧ್ಯವಾಗದ್ದಕ್ಕೆ ಇದೂ ಒಂದು ಕಾರಣ ಎನ್ನಬಹುದು.

ವಿಧವೆಯರ ಸ್ಥಿತಿ ಇಂದು ಎಷ್ಟೋ ಸುಧಾರಿಸಿದೆ ಎನ್ನಬಹುದು. ಅವಳು ಸ್ವತಂತ್ರವಾಗಿ ಜೀವನವನ್ನು ನಡೆಸುವ ಶಕ್ತಿಯನ್ನೂ ಪಡೆದಿದ್ದಾಳೆ- ಪುನರ್ವಿವಾಹಗಳು ಇಂದು ಅಲ್ಲಲ್ಲಿ ನಡೆದರೂ ಅಂಥ ಸ್ತ್ರೀಗೆ ಸಮಾಜದಲ್ಲಿ ವಿಶೇಷ ಸ್ಥಾನವಿಲ್ಲ. ಧಾರ್ಮಿಕ ವಿಧಿಗಳಲ್ಲಿ ಹಿಂದಿನಂತೆ ಇಂದೆಯೂ ಅವಳಿಗೆ ಸ್ಥಾನವಿಲ್ಲ- ವಿಭಕ್ತ ಕುಟುಂಬಗಳು ರೂಢಿಯಲ್ಲಿರುವದರಿಂದ ಆಸ್ತಿಯಲ್ಲಿ ಭಾಗ ಮುಂತಾದ ಕಾರಣಗಳಿಂದಾಗುವ ತೊಂದರೆಯೂ ಇಂದು ಅಷ್ಟಿಲ್ಲ. ಪತಿಯ ಆಸ್ತಿಗೆ ಅವಳು ಹಕ್ಕುದಾರಳಾಗಿರುವದರಿಂದ ಇದ್ದುದರಲ್ಲಿಯೇ ಅವಳು ಜೀವನವನ್ನು ನಡೆಸಬಹುದು. ಅವಳು ಸ್ವತಂತ್ರವಾಗಿ ಒಂಟಿ ಬಾಳು ನಡೆಸುವದು ಆರ್ಥಿಕವಾಗಿ ಸಾಧ್ಯವಾದರೂ ಸಮಾಜದ ಕಟ್ಟು ಅವಳನ್ನು ಅಲ್ಲಿ ಬಹಳ ಬಿಗಿಯಾಗಿ ಬಂಧಿಸಿರುತ್ತದೆ. ಅನೇಕ ವ್ಯವಹಾರ-ಗಳನ್ನು ಒಬ್ಬಳೇ ನಿರ್ವಹಿಸುವದು ಸಾಧ್ಯವಿರದ್ದರಿಂದ ಅನೇಕ ವ್ಯಕ್ತಿಗಳಿಂದ ಸಹಾಯ ಅಥವಾ ಸಲಹೆಗಳನ್ನು ಅವಳು ಪಡೆಯಬೇಕಾಗುತ್ತದೆ. ಸಹಾಯ ಮಾಡಿದ ವ್ಯಕ್ತಿಗಳಲ್ಲಿ ಅನೇಕರು ದುರುದ್ದೇಶವನ್ನಿಟ್ಟುಕೊಂಡದ್ದು ಅವಳಿಗೆ ಅರ್ಥವಾಗುವದು ಕಷ್ಟಕಾಲ ಬಂದಾಗಲೇ. ಇಂಥ ಅನೇಕ ಪ್ರಸಂಗಗಳಲ್ಲಿ ''ಹೆಣ್ಣಿಗೆ ಹುಟ್ಟಿದ ಮನೆ ಅಥವಾ ಕೊಟ್ಟ ಮನೆ'' ಎಂಬ ಹಿರಿಯರ ಮಾತು ಅನುಭವಕ್ಕೆ ಬಂದು ಅದೇ ನಿಜ ಎಂದುಕೊಳ್ಳದೇ ಇಲಾರರಳು. ಆದರೆ ಇಂದಿನ ಆರ್ಥಿಕ ಪರಿಸ್ಥಿತಿ ಮತ್ತು ಸ್ವಾರ್ಥದ ಅತಿರೇಕದಿಂದ ಹಾಳಾದ ಮಾನ

ವೀಯತೆ ಇದರಿಂದ ಆ ಮನೆಗಳು ಅವಳಿಗೆ ಸಹಾಯಕವಾಗಿ ಉಳಿದಿಲ್ಲ. 'ತಮ್ಮ ಹೊಣೆ ತಮಗೆ' ಮಾತುಗಳು ಆ ಮನೆಗಳಿಂದ ಕೇಳಬರುತ್ತವೆ.

ಇಂದಿನ ಸ್ತ್ರೀಗೆ ಸಂತಾನವನ್ನು 'ದೇವರು ಕೊಟ್ಟದ್ದು' ಎಂದು ಹೇಳಲು ಸಾಧ್ಯವಿಲ್ಲ. ಸಂತತಿ ನಿಯಮನದಿಂದ ಅವಳು ಕುಟುಂಬಯೋಜನೆಯನ್ನು ಮಾಡಬಯಸುತ್ತಾಳೆ. ಆದರೆ ಆ ಸ್ವಾತಂತ್ರ್ಯ ಅವಳ ಕೈಯಲ್ಲಿಲ್ಲ. ಸಂತಾನದ ಹೊಣೆ ಹೆಚ್ಚಾಗಿ ಅವಳ ಮೇಲೆಯೇ ಇದ್ದರೂ ಅವಳು ಪತಿಯ ಆಜ್ಞೆಯನ್ನೇ ಅನುಸರಿಸಬೇಕಾಗುತ್ತದೆ. ಒಂದು ಗಂಡುಮಗು ಸಾಕೆಂದು ಅವಳಿಗೆನ್ನಿಸುತ್ತಿದ್ದರೂ ಪತಿ ಮೂರು ಬೇಕು ಎಂದರೆ ಅವಳು ಒಪ್ಪಲೇಬೇಕು. ಅಥವಾ ಅವಳಿಗೆ ಎರಡು ಬೇಕು ಎನ್ನಿಸಿದರೆ ಪತಿ ಬೇಡವೇ ಬೇಡ ಎಂದರೂ ಅವಳು ಸಹಿಸಬೇಕು. ಅನೇಕ ತರದ ಕೃತ್ರಿಮ ಸಂತತಿನಿರೋಧನ ಔಷಧಿಗಳಿಂದ ಅವಳ ಶರೀರಸ್ವಾಸ್ಥ್ಯ ಹಾಳಾಗುವದೂ ಉಂಟು. ಎಷ್ಟೋ ಸಲ ಔಷಧಿಗಳ ಜ್ಞಾನವಿಲ್ಲದೆ ತನ್ನ ಸ್ವಾಸ್ಥದೊಂದಿಗೆ ರೋಗಗ್ರಸ್ತಮಕ್ಕಳನ್ನು ಹೆರುವ ಸಂಭವವಿದೆ. ಈಗ ಪ್ರಚಲಿತವಿರುವ ಸಂತತಿ ನಿಯಮನ ಸಲಕರಣೆಗಳು ಸಾಮಾನ್ಯರಿಗೆ ಆರ್ಥಿಕವಾಗಿ ಪೂರೈಸುವದು ಕಷ್ಟ. ಅಗ್ಗವಾದ ವಸ್ತುಗಳಿಂದ ಹೆಚ್ಚಾಗಿ ಪ್ರಯೋಜನವಾಗುವದಿಲ್ಲ.

ಬಹುಶಃ ಸ್ತ್ರೀಯರಿಗೆ ಆಸೆ-ಆಕಾಂಕ್ಷೆಗಳು ಹೆಚ್ಚಿಂದೇ ಅವರು ಪುರುಷರಿಗಿಂತ ಹೆಚ್ಚು ಕಾಲ ಬದುಕುತ್ತಾರೇನೊ. ಇದರಿಂದ ಮುಪ್ಪಿನ ಸ್ತ್ರೀಯೊಬ್ಬಳು ಕುಟುಂಬಕ್ಕೆ ಹೊಣೆಯಾಗಿ ಸಮಸ್ಯೆಯಾಗುತ್ತಾಳೆ. ನೌಕರಿಯ ನಿಮಿತ್ತ ದೂರವಿದ್ದ ಮಗನ ಮನೆಯಲ್ಲಿ ತಾಯಿ ಅನಿವಾರ್ಯವಾದಾಗಲೇ ಹೋಗುವದರಿಂದ ಆ ಮನೆಗೆ ಅವಳು ಹೊಂದಿಕೊಳ್ಳಲು ಅವಳಿಗೇ ಕಷ್ಟ. "ನಮ್ಮ ದೇಶದಲ್ಲಿ ಮುದುಕರ ಸಮಸ್ಯೆಬಿಡಿಸುವದಾಗಿಲ್ಲ" ಎಂದು ಪ್ರಚಾರಮಾಡುವ ಇಂದಿನ ಪೀಳಿಗೆಯಿಂದ ಹಿಂದಿನಂತೆ ಹಿರಿಯ ವ್ಯಕ್ತಿ ಎಂದು ಗೌರವದಿಂದ ಅವಳನ್ನು ಬಾಳಿಸಿಕೊಳ್ಳುವದನ್ನು ಅಪೇಕ್ಷಿಸುವದೇ ತಪ್ಪಾಗಿದೆ. ಎಂದಿನಿಂದಲೂ ಅತ್ತೆ ಸೊಸೆಯರಲ್ಲಿ ಒಂದು ತಲೆಮಾರಿನ ಕಾಲಾಂತರವಿರುವದರಿಂದ ಅವರಲ್ಲಿ ಒಬ್ಬರಿಂದೊಬ್ಬರು ಅಪೇಕ್ಷಿಸುವ ಅಪೇಕ್ಷೆಗಳೂ ಕಾಲಮಾನಕ್ಕನುಸರಿಸಿ ಭಿನ್ನವಾಗಿರುತ್ತವೆ. ಈ ಭಿನ್ನತೆಯು ಸಮಸ್ಯೆ ಹಿಂದೂ ಇತ್ತು, ಎಂದಿಗೂ ಇದೆ ಎನ್ನುವಂತಾಗಿದೆ.

ಗುಲಾಬಿಗಿಡದ ಟೊಂಗೆಯನ್ನು ಕತ್ತರಿಸಿದರೆ ಹದನಾಗಿ ಬೆಳೆದು ಚೆನ್ನಾಗಿ ಮತ್ತೆ ಹೂ ಬಿಡುವಂತೆ ನಮ್ಮ ಸಮಸ್ಯೆಗಳೂ ಬೆಳೆಯುತ್ತಲೇ ಇರುತ್ತವೆ. ಸಮಸ್ಯೆಯ ಮೂಲವನ್ನು ನೋಡಲು ನಾವು ರೂಢಿಮಾಡಿಕೊಳ್ಳಬೇಕು ಸ್ತ್ರೀಯರಲ್ಲಿ ಯೋಗ್ಯತೆ ಇದ್ದರೆ ಎಂಥ ಪರಿಸ್ಥಿತಿಯಲ್ಲಿಯೂ ಎಂಥ ಸಮಸ್ಯೆಯನ್ನೂ ಹೊಂದಿಸಿಕೊಂಡು ಬಾಳುತ್ತಾಳೆ. ಇಂಥ ಸಮಸ್ಯೆಗೆ ಇದೇ ಮದ್ದು ಎಂದು ಹೇಳಲೂ ಬಾರದು. ಕಾರಣ ಪ್ರತಿವ್ಯಕ್ತಿಯ ಬಾಳಿನ ಸಮಸ್ಯೆ ಭಿನ್ನವಾಗಿರುತ್ತದೆ. ಒಟ್ಟಿನಲ್ಲಿ ಮಾನವೀಯತೆಯಿಂದ ಸಮಸ್ಯೆಗಳನ್ನು ನೋಡಿ ಆ ಸಮಸ್ಯೆಯಲ್ಲಿ ಸಿಕ್ಕಿಕೊಂಡಿರುವ ವ್ಯಕ್ತಿ ತಾವಾಗಿದ್ದರೆ ಎಂದು ಪ್ರತಿ ವ್ಯಕ್ತಿ ಆತ್ಮಶೋಧನೆಯಿಂದ ಯೋಚಿಸುವಂತಾದರೆ ಜೀವನ ಸುಖಮಯವಾಗಬಹುದು.



ಡೆಕ್ಕನ್

# ವರ್ಣ ಚಿತ್ರಗಳ ಶೈಲಿ



ಲೇಖಕರು:
ಶ್ರೀ. ನಾರಾಯಣರಾವ ಕುಲಕರ್ಣಿ,
ವಿಜಾಪೂರ

ದಕ್ಷಿಣದಲ್ಲಿಯ ವರ್ಣಚಿತ್ರಗಳ ಪರಂಪರೆ ಬಹು ಸುದೀರ್ಘ ಕಾಲದ್ದು. ಜಗತ್ಪ್ರಸಿದ್ಧವಾದ ಈ ವರ್ಣಚಿತ್ರಗಳ ರಚನೆ ಕ್ರಿಸ್ತಪೂರ್ವ ಕಾಲದಿಂದಲೇ ಪ್ರಾರಂಭವಾಗಿ ಪೇಶವೆ ಕಾಲದ ವರೆಗೆ ಅಂದರೆ ಸುಮಾರು ಎರಡು ಸಾವಿರ ವರುಷಗಳ ವರೆಗೆ ವ್ಯಾಪಿಸಿಕೊಂಡಿದೆ. ಶೃಂಗಾರ, ಅಲಂಕಾರ, ರಾಗ-ಮಾಲಿಕೆ, ಕಾಮಶಾಸ್ತ್ರ, ಪುರಾಣ, ಇತಿಹಾಸ, ಪ್ರಣಯ, ನಿಸರ್ಗ ಹೀಗೆ ಹಲವಾರು ರಂಗಗಳಲ್ಲಿ ಈ ಶೈಲಿಯ ಚಿತ್ರಗಳನ್ನು ಕಾಣಬಹುದು. ಇದು ಒಂದು ಅವಿನಾಶಿಯಾದ, ಅಮೌಲ್ಯವಾದ ಸೊತ್ತಾಗಿದೆ. ರಾಷ್ಟ್ರಕ್ಕೆ ದಕ್ಷಿಣವು ನೀಡಿದ ಈ ಕಾಣಿಕೆ ಹೆಮ್ಮೆಯದಾಗಿದೆ. ಈ ಶೈಲಿಯ ಬೆಳವಣಿಗೆ-ವೈಶಿಷ್ಟ್ಯಗಳನ್ನು ಈ ಲೇಖನದಲ್ಲಿ ನಿರೂಪಿಸಿದೆ.



ಚಿತ್ರಕಲೆಯ ಮೂಲದ ಬಗೆಗೆ ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಒಂದು ಸ್ವಾರಸ್ಯವಾದ ಕಥೆ ಇದೆ. "ಪೌರಾಣಿಕ ಋಷಿದ್ವಯ ವಿಷ್ಣುವಿನ ಸ್ವರೂಪಗಳಾದ ನರ-ನಾರಾಯಣರು. ಹಿಮಾಲಯದ ಗಂಗಾವಲಿಯ ಉಗಮಸ್ಥಾನದಲ್ಲಿ, ಆಶ್ರಮ ಕಟ್ಟಿಕೊಂಡು ತಪಶ್ಚರ್ಯ ಮಾಡುತ್ತ, ಕಾಲ ಕಳೆಯುತ್ತಿದ್ದರು. ಆ ಕಾಲಕ್ಕೆ ಗಂಧರ್ವ ಕನ್ನಿಕೆಯರು ನರ— ನಾರಾಯಣರ ತಪಸ್ಸನ್ನು ಭಂಗಗೊಳಿಸುವ ದುರುದ್ದೇಶದಿಂದ ಅವರು ಮೋಹಜಾಲೆಯಲ್ಲಿ ಸಿಲಕುವ ಹಾಗೆ, ಅವರ ಆಶ್ರಮದ ಸಮೀಪಕ್ಕೆ ಬಂದು ವಿಲಾಸ ಕುಚೇಷ್ಟೆಗಳಲ್ಲಿತೊಡಗಿದರು. ನಾರಾಯಣನು ಇವರ ಈ ದುಷ್ಟಉದ್ದೇಶವನ್ನು ಅರಿತು, ಮಾವಿನಗಿಡದ ರಸವನ್ನು ಬಣ್ಣದ ರೂಪದಲ್ಲಿ ಉಪಯೋಗಿಸಿ, ಒಳ್ಳೇ ಸುಸ್ವರೂಪಿಯಾದ ಕನ್ನಿಕೆಯ ಚಿತ್ರವನ್ನು ಬರೆದನು. ಈ ಚಿತ್ರದಲ್ಲಿಯ ತರುಣಿಯು ಲಾವಣ್ಯವತಿಯಾಗಿ ಗಂಧರ್ವಕನ್ನಿಕೆ,ನಾಗಕನ್ಯೆ, ಮತ್ತು ಇತರ ಎಲ್ಲ ಸ್ತ್ರೀಯರಿಗಿಂತಲೂ ಸುಸ್ವರೂಪ ಚಲುವೆಯಾದ ಕಾರಣ ಅಲ್ಲಿ ಬಂದ ಗಂಧರ್ವಕನ್ನಿಕೆಯರು ನಾಚಿ ತಲೆಬಾಗಿ ತಮ್ಮ ದುಷ್ಟಕಾರ್ಯದಿಂದ ಪರಾವರ್ತಿತರಾಗಿ ತಿರುಗಿ ಹೋದರು. ಆದರೆ ನಾರಾಯಣನಿಂದ ಚಿತ್ರಕಲೆಯ ಶಾಸ್ತ್ರ

' ಮಧುಮಾಲತಿ ' ಉರ್ದು ಸಚಿತ್ರ ಗ್ರಂಥದಲ್ಲಿಯ ಒಂದು ಚಿತ್ರ.





ದಂತೆ ರಚಿತವಾದ ಸುಂದರ ಯುವತಿಯು ಬೇರೆ ಯಾರೂ ಇರದೆ ಪುರಾಣಪ್ರಸಿದ್ಧ ಅ-ಪ್ಸರೆ ಊರ್ವಸಿ. ನಾರಾಯಣನು ಈ ಪ್ರಕಾರವಾಗಿ ಚಿತ್ರಕಲೆಯನ್ನು ಕಲ್ಪಿಸಿ ಕಲೆಯಕಟ್ಟು ನಿಯಮಗಳನ್ನು ರಚಿಸಿ ದೇವಕಲಾವಿದನಾದ ವಿಶ್ವಕರ್ಮನಿಗೆ ಉಪದೇಶವಮಾಡಿದನು" ಇದರಿಂದ ನನುಗೆ ತಿಳಿಯುವದೇನಂದರೆ, ನಮ್ಮ ಪೂರ್ವ ಕಾಲದ ಕಲಾವಿದರು ತಾವು ತಗೆಯಬೇಕಾದ ಚಿತ್ರಗಳ ಸ್ವರೂಪವನ್ನು ತಮ್ಮ ಅಂತರ್‌ಜ್ಞಾನದಿಂದ ಕಲ್ಪಿಸಿ, ವಿಷ್ಣುಧರ್ಮೋತ್ತರ ಗ್ರಂಥದಲ್ಲಿ ಹೇಳಿದ ಕಟ್ಟುನಿಟ್ಟುಗಳನ್ನು ಪಾಲಿಸಿ, ಶುಚಿರ್ಭೂತರಾಗಿ, ಕಲೆಯ ನಿಯಮುಗಳನ್ನು ಪಾಲಿಸಿ ಚಿತ್ರಗಳನ್ನು ತಗೆಯುತ್ತಿದ್ದರಾದ್ದರಿಂದ, ಅವರಿಗೆ ಎದುರಿನಲ್ಲಿ ವಸ್ತುಗಳನ್ನು ಇಟ್ಟು ಕೆಲಸಮಾಡುವ ರೂಢಿ ಇರಲಿಲ್ಲ. ಈ ಕಾರಣದಿಂದ ನಾವು ಈಗ ನೋಡುವ ಎಲ್ಲ ಪುರಾತನ ಚಿತ್ರಗಳು ಕಲಾಪೂರ್ಣ ಸಜೀವ ಕಲಾಕೃತಿಗಳಾಗಿ ಇಲ್ಲಿಯವರೆಗೆ ಜಗತ್ತನ್ನು ಮುಗ್ಧಗೊಳಿಸಿವೆ.

ಸಾಮಾನ್ಯವಾಗಿ ಆರ್ಯರು ಉತ್ತರದಿಂದ ಭಾರತಕ್ಕೆ ಬಂದಕಾರಣ ಉತ್ತರ-ದಕ್ಷಿಣ ಪದ್ಧತಿಗಳು ರೂಢಿಯಲ್ಲಿ ಬಂದಂತೆ ತೋರುತ್ತದೆ. ಈ ಪರಂಪರೆ ಇಲ್ಲಿಯವರೆಗೂ ನಡೆದುಕೊಂಡು ಬಂದಿದೆ. ವಿಂಧ್ಯಪರ್ವತದ ಕೆಳಗಿನ ಭಾಗವು ದಕ್ಷಿಣವಾಗಿದೆ. ಈ ಭಾಗವು ಪುರಾಣಕಾಲದಿಂದ ಒಳ್ಳೇ ಫಲವತ್ತಾಗಿ, ಸುಸಂಸ್ಕೃತವಾಗಿ ಎಲ್ಲ ವಿಷಯಗಳಲ್ಲಿ ಪರಿಪೂರ್ಣಾವಸ್ಥೆಯಲ್ಲಿ ಇದ್ದ ಬಗ್ಗೆ ಭಿನ್ನಾಭಿಪ್ರಾಯಗಳಿಲ್ಲ. ಇದೇ ಮೊಟ್ಟಮೊದಲು ಶಿಲ್ಪಕಲೆ, ಚಿತ್ರಕಲೆಗಳ ಉಗಮಸ್ಥಾನ. ಅಜಂತಾಗುಹೆಗಳೇ ಇದಕ್ಕೆ ಪ್ರಮಾಣ. ಇಲ್ಲಿಯೇ ಡೆಕ್ಕನ್ ಕಲೆಯ ಸಂಪ್ರದಾಯದ ಜನ್ಮ. ಚಿತ್ರಕಲೆ ಕ್ರಿ. ಶ. ಪೂರ್ವದಲ್ಲಿ ಒಳ್ಳೇ ಊರ್ಜಿತಾವಸ್ಥೆಯಲ್ಲಿ ಇದ್ದ ಬಗ್ಗೆ ಹಲವಾರು ಆಧಾರಗಳಿವೆ. ಸಾಮಾನ್ಯವಾಗಿ ಚಿತ್ರಗಳನ್ನು ಗೋಡೆಗಳ ಮುತ್ತು ಕಲ್ಲುಗಳ ಮೇಲೆ ತೆಗೆಯುವ ಪರಿಪಾಠ ಮೊದಲಿನಿಂದಲೂ ನಡೆದುಬಂದು ಈಗಲೂ ಮುಂದುವರಿದಿದೆ. ಪುರಾಣಕಾಲದ ಚಿತ್ರಗಳು ಇನ್ನೂ ನನುಗೆ ಸಾಕಷ್ಟು ದೊರೆತಿಲ್ಲ. ಆಗಿನ ಕಾಲದಲ್ಲಿ ಬಹುಶಃ ಕಟ್ಟಿಗೆ ಮುತ್ತು ಮಣ್ಣಿನ ಪಾತ್ರೆಗಳ ಮೇಲೆ ಚಿತ್ರಗಳನ್ನು ಬರೆಯುತ್ತಿದ್ದರಂತೆ. ಮಣ್ಣಿನ ಪಾತ್ರೆಗಳ ಒಡೆದ ಚೂರುಗಳೇ ಇದಕ್ಕೊಳ್ಳೇ ನಿದರ್ಶನವಾಗಿವೆ.

ಅಜಂತಾ ಗುಹೆಗಳ ಚಿತ್ರಗಳನ್ನು ಕ್ರಿ.ಶ. ಪೂರ್ವ ಒಂದುನೂರು ವರುಷದಿಂದ ಬರೆಯಲು ಪ್ರಾರಂಭಿಸಿ, ಕ್ರಿ. ಶ. ಎಂಟುನೂರು ವರುಷಗಳ ವರೆಗೆ ಅವ್ಯಾಹತವಾಗಿ ಒಳ್ಳೇ ಸ್ಪರ್ಧೆಯಲ್ಲಿ ಭಾಗವಹಿಸಿ, ಬೇರೆ ಬೇರೆ ಮತಗಳ ಐತಿಹಾಸಿಕ ಸನ್ನಿವೇಶಗಳನ್ನು ಕಲಾವಿದರು ತಮ್ಮ ಕಲ್ಪನಾಶಕ್ತಿಯಿಂದ ಅಮರ ಚಿತ್ರಗಳನ್ನು ಬರೆದು ಭಾರತದ ಚಿತ್ರಕಲೆಯ ನಿಪುಣತೆಯ ಬಗ್ಗೆ ಜಗತ್ತಿನಲ್ಲಿ ಒಳ್ಳೇ ಕೀರ್ತಿಯನ್ನು ಸಂಪಾದಿಸಿರುವರು. ದಕ್ಷಿಣದ ಕಲೆಗೆ 'ಡೆಕ್ಕನ್ ಪೇಂಟಿಂಗ್' ಎಂಬ ಹೆಸರು ಬರಲು ಭೌಗೋಲಿಕ ಸ್ಥಾನವೆ ಕಾರಣ. ಕಾಂಗ್ರಾ, ರಜಪೂತ, ಮೊಗಲ, ಮಾಲವಾ, ಬೊಸೋಲಿ, ಪಹಾರಿ, ಇವೆಲ್ಲವೂ ಆಯಾಸ್ಥಾನಗಳ ಮೇಲಿಂದ ಪಡೆದ ಹೆಸರುಗಳು.



ಸಾವಂತವಾಡಿಯಲ್ಲಿ ಸಿದ್ಧಪಡಿಸಿದ ದಶಾವತಾರದ ಗಂಜೀಫು ಸೆಟ್ಟು

ಡೆಕ್ಕನ್ ಕಲೆ ಭಾರತದಲ್ಲಿ ಅತಿ ವಿಸ್ತಾರವಾದ ಪ್ರದೇಶದಲ್ಲಿ ಅಡಕವಾಗಿದೆ. ಇದರ ಉದರದಲ್ಲಿ ಹಲವಾರು ಸಂಪ್ರದಾಯಗಳು ಪ್ರಸಿದ್ಧಿಯನ್ನು ಹೊಂದಿವೆ. ಅವುಗಳಲ್ಲಿ ಚಾಲುಕ್ಯ, ರಾಷ್ಟ್ರಕೂಟ, ಜೈನ, ವಿಜಯನಗರ, ವಿಜಾಪೂರ, ಅಹಮ್ಮದನಗರ ಮುತ್ತು ಪೇಶವೆ ಮುಖ್ಯವಾದವುಗಳು. ಆದರೆ ನಿಜವಾಗಿ ಚಾಲುಕ್ಯರ ಕಾಲದಲ್ಲಿ ಚಿತ್ರಕಲೆ ಶಿಲ್ಪಕಲೆಯಷ್ಟೇ ಪ್ರಬಲವಾಗಿರಬೇಕು. ಕಾರಣ ಭಾರತದ ಕಲೆಯ ಸುವರ್ಣಯುಗ ಎಂದು ಚಾಲುಕ್ಯರ ಕಾಲಕ್ಕೆ ಕರೆಯಲ್ಪಟ್ಟಿದೆ. ಈ ಕಾಲದ ಚಿತ್ರಗಳು ನನುಗೆ ಸಾಕಷ್ಟು ದೊರೆತಿಲ್ಲವೋ ಅಥವಾ ದೊರೆತಿರುವ ಕೆಲವು ಚಿತ್ರಗಳನ್ನು ಚಾಲುಕ್ಯರ ಕಲೆ ಎಂದು ಕರೆಯಲು ನಮ್ಮಲ್ಲಿ ಸಾಮರ್ಥ್ಯವಿಲ್ಲವೋ ತಿಳಿಯದಾಗಿದೆ. ಬಾದಾಮಿಯ ವೈಷ್ಣವಗುಹೆಯಲ್ಲಿ ಕೆಲವು ಚಿತ್ರಗಳನ್ನು ಈಗಲೂ ಕಾಣುತ್ತೇವೆ. ಅವುಗಳಲ್ಲಿ ಪಾರ್ವತಿಯ ಚಿತ್ರವು ಸ್ಪಷ್ಟವಾ-ಗಿದ್ದು ಪರಿಪೂರ್ಣವಾಗಿದೆ. ಒಟ್ಟಿನಲ್ಲಿ ಡೆಕ್ಕನ ಕಲೆಯ ಸಂಪ್ರದಾಯ ಕ್ರಿ. ಶ. ಪೂರ್ವದಿಂದ ಕ್ರಿ. ಶ. ಹದಿನೇಳನೆಯ ಶತಮಾನದ ಆದಿಲಶಾಹಿ ರಾಜ್ಯದ ಕೊನೆಯ ವರೆಗೆ ನಡೆದುಬಂದಿದೆ. ಬಹುಶಃ ಜಗತ್ತಿನ ಕಲೆಯ ಇತಿಹಾಸದಲ್ಲಿ ಈ ಸಂಪ್ರದಾಯವು ವಿಸ್ತಾರದಲ್ಲಿ ಮುತ್ತು ಕಾಲಮಾನದಲ್ಲಿ ಎಲ್ಲಕ್ಕೂ ಎತ್ತರದ ಸ್ಥಾನವನ್ನು ದೊರಕಿಸಿದೆ. ಗುಹೆಗಳ ಚಿತ್ರಗಳಿಂದ ಈ ಸಂಪ್ರದಾಯದ ಕಲೆಯ ಮಾದರಿಗಳು ತಾಡವಾಲೆ, ಮಣ್ಣಿನಪಾತ್ರೆ, ಚರ್ಮ, ಸಿಂಪು, ಹಸ್ತಿದಂತ, ರೇಶ್ಮೆ ಮುತ್ತೆ ಕಾಗದಗಳ ಮೇಲೆ ತಗೆದವು ಉಪಲಬ್ಧವಾಗಿವೆ. ಕ್ರಿ.ಶ. ಎಂಟನೇ ಶತಮಾನದಿಂದ ಹಿಂದುಸ್ತಾನದಲ್ಲಿ ಎಲ್ಲ ಕಡೆಯಲ್ಲಿಯೂ ಗಂಜೀಫು ಆಟವು ಪ್ರಚಲಿತವಿತ್ತು. ಆಗ ಡೆಕ್ಕನ ವರ್ಣಚಿತ್ರಗಳ ಶೈಲಿಯಲ್ಲಿ ಒಳ್ಳೇ ಕುಶಲ ಗಂಜೀ-ಫು ಸೆಟ್ಟುಗಳು ತಯಾರಾದದ್ದು ಈಗಲೂ ಕಾಣ-ಬಹುದು. ವಿಶೇಷವಾಗಿ ದಶಾವತಾರ ಗಂಜೀಫು ತಯಾರಿಕೆಯ ಕಾರಖಾನೆಗಳು ಕಡ್ಪಾ, ಮೈಸೂರ ಕರ್ನಾಟಕ, ಸಾವಂತವಾಡಿಗಳಲ್ಲಿ ೧೯ ನೇ ಶತಮಾನದ ಕೊನೆಯವರೆಗೆ ಇದ್ದವು.

ಚಾಲುಕ್ಯರ ತರುವಾಯ ದಕ್ಷಿಣದಲ್ಲಿ ಜೈನಮತಪ್ರವರ್ತಕರಾದ ಚೋಳರು ಕಂಚಿಯ ವರ್ಧಮಾನಗುಡಿಯಲ್ಲಿ ಹಲವಾರು ಉತ್ತಮ ತರಗತಿಯ ಭಿತ್ತಿ ಚಿತ್ರಗಳನ್ನು ನಿರ್ಮಿಸಿದ್ದು ಇಲ್ಲಿಯವರೆಗೆ ಉತ್ತಮ ಸ್ಥಿತಿಯಲ್ಲಿ ಕಾಪಾಡಿಕೊಂಡು ಬರಲಾಗಿದೆ. ಚೋಳರ ನಂತರ ಡೆಕ್ಕನ ಕಲೆಯಲ್ಲಿ ಬೇರೆ ಕಲೆಗಳು ಕಲಬೆರಕಿಯಾದದ್ದು ಕಂಡುಬರುತ್ತದೆ. ಆದರೆ ೧೪ ನೆಯ ಶತಮಾನದಿಂ ಈ ಕಲೆಯ ಪುನರುದ್ಧಾರ ಮುಸಲ್ಮಾನದ

ಆಳಕೆಯಲ್ಲಿ ಆದುದು ಕಂಡುಬರುವದು. ಈ ಕಾಲದಲ್ಲಿ ವಿಜಯನಗರದ ಚಿತ್ರಕಲೆಯೂ ಸಮಾವೇಶವಾಗುತ್ತದೆ. ದುರ್ದೈವದಿಂದ ವಿಜಯನಗರದ ಚಿತ್ರಗಳು ಸಾಕಷ್ಟು ಸಂಗ್ರಹವಾಗಿಲ್ಲ. ಈ ಕಾಲದಲ್ಲಿ ಕೆಲವು ಕಡೆ ಗುಡಿಗಳಲ್ಲಿ ಚಿತ್ರಗಳನ್ನು ಬರೆದದ್ದು ಕಾಣುತ್ತೇವೆ. ಹಂಪಿ ವಿರುಪಾಕ್ಷದೇವಾಲಯದಲ್ಲಿ ಕಾಣುವ ಚಿತ್ರಗಳು ಆಗಿನ ಕಾಲದ ಹಾಗೆ ತೋರುವದಿಲ್ಲ. ಆದರೆ ಆನೇಗುಂದಿಯ ಉಚಾಯಪ್ಪನ ಮಠದಲ್ಲಿರುವ ಚಿತ್ರಗಳು ಮಾತ್ರ ಮೂಲ ಚಿತ್ರಗಳಂತೆ ಕಾಣುತ್ತವೆ. ಇವುಗಳನ್ನು ದೇವರಾಜ ಅರಸನು ಬರೆಸಿರಬೇಕು. ಮುಸಲ್ಮಾನರ ಕಾಲದಲ್ಲಿ ಡೆಕ್ಕನ ಕಲೆಯು ವಿಶೇಷ ಪ್ರಚಾರದಲ್ಲಿ ಬಂದದ್ದು. ವಿಜಾಪೂರ ಆದಿಲಶಹಾರ ಕಾಲಕ್ಕೆ ಕಲಾಕಾರರಿಗೆ ಸಾಕಷ್ಟು ಉತ್ತೇಜನ ದೊರೆಯುತ್ತಿತ್ತು. ಸ್ವತಃ ಬಾದಶಹರು ಚಿತ್ರಕಲೆ, ಮತ್ತು ಸಂಗೀತದಲ್ಲಿ ನಿಷ್ಣಾತರಾಗಿದ್ದರು. ಇಬ್ರಾಹಿಮ ಆದಿಲಶಹಾನು ಚಿತ್ರಕಲೆಯಲ್ಲಿ ನಿಪುಣನಿದ್ದನು. ಇವನು ಲಕ್ಷ್ಮೀ ಸರಸ್ವತಿಯರನ್ನು ಪೂಜಿಸುತ್ತಿದ್ದನು. ಇವನಿಗೆ ಜಗದ್ಗುರುವೆಂದು ಬಿರುದು. ಇವನ ಕಾಲದಲ್ಲಿ ವಿಜಾಪೂರದ ಕೆಲವು ಕಟ್ಟಡಗಳ ಗೋಡೆಗಳ ಮೇಲೆ ಚಿತ್ರಗಳನ್ನು ಬರೆಸಿದ್ದು ಈಗಲೂ ಕಾಣಬಹುದು. ವಿಜಾಪೂರ ಚಿತ್ರಕಲೆಯ ಸಂಪ್ರದಾಯವು ಡೆಕ್ಕನ್ ಕಲೆಯಲ್ಲಿ ಅತಿ ಶ್ರೇಷ್ಠಸ್ಥಾನವನ್ನು ಪಡೆದಿದೆ. ಈ ಸಂಪ್ರದಾಯದ ವೈಶಿಷ್ಟ್ಯವೇನಂದರೆ, ಉತ್ತರದ ಮತ್ತು ಮೊಗಲರ ಕಲೆಯ ಯಾವ ಸ್ವರೂಪಶೈಲಿಗಳನ್ನು ಇದರಲ್ಲಿ ಅಡಕ ಮಾಡದೆ, ಕೇವಲ ಡೆಕ್ಕನ್ ಮೂಲ ಸಂಪ್ರದಾಯವನ್ನೇ ಆಧಾರವಾಗಿ ಇಟ್ಟುಕೊಂಡು ಈ ಚಿತ್ರಗಳನ್ನು ಆಳ ಮತ್ತು ಪ್ರಕಾಶಮಾನವಾದ ಬಣ್ಣಗಳಿಂದ, ಸಾಕಷ್ಟು ಬಂಗಾರವನ್ನು ಉಪಯೋಗಿಸಿ, ತನ್ನದೇ ಆದ ಒಂದು ಸಂಪ್ರದಾಯವನ್ನು ಸ್ಥಾಪಿಸಿದೆ. ಇದಕ್ಕೆ ವಿಜಾಪೂರ ಶೈಲಿ ಎಂದು ಹೆಸರು. ಇದರಲ್ಲಿ ಇನ್ನೊಂದು ಮಹತ್ವದ ಸಂಗತಿಯೆಂದರೆ ಮೊಗಲರಕಿಂತಲೂ ಆದಿಲಶಾಹಿ ಚಿತ್ರಗಳಲ್ಲಿ ಹಿಂದು ದೇವ-ದೇವತೆಗಳನ್ನು ಹೆಚ್ಚಾಗಿ ಬಳಸಿರುವದು. ಆದಿಲಶಾಹಿ ಮನೆತನವು ಹಿಂದು ಧರ್ಮದ ಬಗ್ಗೆ ಸೌಹಾರ್ದ ತೋರುತ್ತಿರುವದಕ್ಕೆ ಇದು ಉದಾಹರಣೆ. ಇವರ ಕಾಲದ ಗೋಡೆಗಳ ಚಿತ್ರಗಳು ವಿಜಾಪೂರ ಆಸಾರಮಹಾಲ ಇಬ್ರಾಹಿಮರೋಜಾಗಳಲ್ಲಿ ಕಾಣಬಹುದು. ಕುಮಟಗಿಯಲ್ಲಿ ಜಲವಿಹಾರಕ್ಕೆ ಕಟ್ಟಿದ ಮಂಟಪದ ಒಳಗೋಡೆಗಳ ಮೇಲೆ ಸಂಪೂರ್ಣಭಿತ್ತಿ ಚಿತ್ರಗಳನ್ನು ಬರೆದಿದ್ದು, ಅವು ಹೂ, ಪಕ್ಷಿ, ಪ್ರಾಣಿಗಳು, ಬೇಟೆಯಾಡುವ ಮತ್ತು ಪೋಲೋ ಆಡುವ ದೃಶ್ಯಗಳಾಗಿವೆ. ಈ ಕಾಲಕ್ಕೆ ಹಲವು ಹಸ್ತಲಿಖಿತ ಸಚಿತ್ರ ಗ್ರಂಥಗಳನ್ನು ಬರೆಸಲಾಗಿದೆ. ಅದರಲ್ಲಿ ಇಬ್ರಾಹಿಮ ಆದಿಲಶಾಹನ ಆತ್ಮಚರಿತ್ರೆ "ಕಿತಾಬಿ-ನವರಸ" ಪ್ರಸಿದ್ಧವಿದ್ದು ಇದು ನಮಗೆ ಉಪಲಬ್ಧವಿಲ್ಲ. ಬಹುಶಃ ಪರದೇಶದಲ್ಲಿ ಇರಬಹುದು. ಇಬ್ರಾಹಿಮ ಆದಿಲಶಹಾನು ಕಲಾಪೂರ್ಣವಾದ ನವರಸಪೂರವೆಂಬ ಹೆಸರಿನ ಹೊಸ ರಾಜಧಾನಿಯನ್ನು ಕಟ್ಟಿಸಿ ಅಲ್ಲಿ ಸಂಗೀತಮಹಾಲ ಎಂಬ ಕಲಾಮಂದಿರವನ್ನು ಕಟ್ಟಿಸಿದನು. ಇದರಲ್ಲಿ ರಾಗಮಾಲಿಕೆಯ ಚಿತ್ರಗಳನ್ನು ಬರಿಸಿ, ಮೂಲ ಆರು ರಾಗಕ್ಕೆ ಒಂದೊಂದರಂತೆ ಆರು ಕೋಣೆಗಳನ್ನುಕಟ್ಟಿಸಿ ಅಲ್ಲಿ ಆ ಆ ರಾಗಗಳ ಸ್ವರಗಳು ಸ್ವಾಭಾವಿಕವಾಗಿ ಹೊರಡುವ ಹಾಗೆ ಮಾಡಿದ್ದನಂತೆ. ದುರ್ದೈವದಿಂದ ಆ ಆರು ಕೋಣೆಗಳು ನಾಶವಾಗಿವೆ. ಸಂಗೀತ ಮಹಾಲದ ಗೋಡೆಗಳು ಮಾತ್ರ ನಿಂತಿವೆ. ದೊರೆತಿರುವ ಇನ್ನೂ ಕೆಲವು ಸಚಿತ್ರಗ್ರಂಥಗಳಲ್ಲಿ ಚಿತ್ರಕಲಾಪ್ರೇಮಿಯಾದ ಇತಿಹಾಸ ಪ್ರಸಿದ್ಧ ಚಾಂದಬೀಬಿಯು ಈ ಬಗೆಗೆ ಬರೆಸಿದ "ನುಜುಮ್-ಉಲ್-ಉಲ್ಲಮ್" ಎಂಬ ಗ್ರಂಥವು. ಅತಿ ಸುಂದರ ಚಿತ್ರಗಳಿಂದ ಅಲಂಕೃತವಾದ ಈ ಗ್ರಂಥವು ಈಗ ಇಂಗ್ಲಂಡದಲ್ಲಿ ಚೆಸ್ಟರಬೆಟ್ಟಿಯವರ ಸಂಗ್ರಹದಲ್ಲಿ ಅದೆ. "ಗುಲ್‌ಶಾನ-ಈ-ಇಸ್ಕ" "ಮಧುಮಾಲತಿ" ಮತ್ತು "ಅಲ್ಲಿನಾಮಾ" ಇವು ಆದಿಲಶಾಹನ ಕಾಲದ ಹೆಸರಾದ ಸಚಿತ್ರ ಗ್ರಂಥಗಳು. ಇವೆಲ್ಲ ಡೆಕ್ಕನ ಸ್ಕೂಲ ವಿಜಾಪೂರ ಸಂಪ್ರದಾಯಕ್ಕೆ ಸೇರಿದವುಗಳು. ಇದರಲ್ಲಿಯ "ಮಧುಮಾಲತಿ" ಎಂಬ ಡೆಕ್ಕನ್‌ಉರ್ದುವಿನಲ್ಲಿ ಬರೆದ ಗ್ರಂಥ ವಿಜಾಪೂರದಲ್ಲಿಯ ಕಲಾನಿಧಿಸಂಗ್ರಹದಲ್ಲಿ ಅದೆ. ಇದರಲ್ಲಿ ೪೮ ಉತ್ತಮ ತರಗತಿಯ ಡೆಕ್ಕನ್ ಶೈಲಿಯ ವರ್ಣಚಿತ್ರಗಳು ಇವೆ. ಈ ಮಧುಮಾಲತಿ ಗ್ರಂಥವನ್ನು ಒಂದು ವಿಶಿಷ್ಟವಾದ



'ಮಧುಮಾಲತಿ' ಉರ್ದು ಸಚಿತ್ರ ಗ್ರಂಥದಲ್ಲಿಯ ಒಂದು ಚಿತ್ರ

೧೮ ನೇ ಶತಮಾನದಲ್ಲಿಯ ಚಿತ್ರ ಗಜಗೌರಿ-ಗಜಲಕ್ಷ್ಮಿ



ದಖಣಿ ಉರ್ದುವಿನಲ್ಲಿ ಬರೆದ ಕಾರಣ ಇದನ್ನು ಓದಲು ದುಸ್ತರವಾಗಿದೆ. ಆದರೆ ಇವರಲ್ಲಿಯ ಚಿತ್ರಗಳು ಮಾತ್ರ ಅಪ್ರತಿಮ ಮತ್ತು ಅಮೌಲ್ಯವಾಗಿವೆ.

ಡೆಕ್ಕನಕಲೆಯ ರಾಗ-ರಾಗಿಣಿ ಚಿತ್ರಗಳು ವಿಜಾಪೂರ ಸಂಪ್ರದಾಯದಲ್ಲಿ ಮೊಟ್ಟಮೊದಲು ಹದಿನೇಳನೆಯ ಶತಮಾನದ ಆದಿಯಲ್ಲಿ ಬರೆದಿದ್ದು, ಅವುಗಳಲ್ಲಿಯ ಹದಿನೆಂಟು ಉತ್ತಮವಾದ ಚಿತ್ರಗಳು ಆಕ್ಸಫರ್ಡ ಬೋಡಲೀನ ಲಾಯಬ್ರರಿಯಲ್ಲಿಯ ಲಾಡ ಸಂಗ್ರಹದಲ್ಲಿ ಅವೆ. ಇವುಗಳನ್ನು ಬಹುಶಃ ೧೬೩೦-೩೫ ರಲ್ಲಿ ಒಬ್ಬ ಪ್ರವಾಸಿಕನು ಇಂಗ್ಲಂಡಿಗೆ ತೆಗೆದುಕೊಂಡು ಹೋಗಿರಬೇಕು. ಇಂಗ್ಲಂಡನ್ನು ತಲುಪಿದ ರಾಗಮಾಲಾಚಿತ್ರಗಳು ಇವೇ ಮೊದಲಿನವಾಗಿವೆ. ಈ ಹದಿನೆಂಟು ಚಿತ್ರಗಳುಳ್ಳ 'ದಿ ಲಾಡ್ ರಾಗಮಾಲಾ ಮಿನಿಯೇಚರ್ಸ' ಎಂಬ ವರ್ಣರಂಜಿತ ಗ್ರಂಥವು ೧೯೫೩ ರಲ್ಲಿ ಲಂಡನದಲ್ಲಿ ಪ್ರಸಿದ್ಧವಾಗಿದೆ. ಈ ಸಂಪ್ರದಾಯದಲ್ಲಿ ಹಲವಾರು ರಾಗ-ರಾಗಿಣಿ ಚಿತ್ರಗಳನ್ನು ಬೇರೆ ಬೇರೆ ಕಲಾವಿದರು ಬರೆದಿರಬೇಕು. ಸಂಪೂರ್ಣ ರಾಗಮಾಲಾ ಚಿತ್ರಗಳು ನಮ್ಮ ದೇಶದಲ್ಲಿ ವಿರಳವಾಗಿವೆ. ಅವು ಎಲ್ಲ ಕಡೆಗೂ ಹಂಚಿಹೋಗಿರಬೇಕು.

ಡೆಕ್ಕನ ಸ್ಕೂಲ ಸಂಪ್ರದಾಯವು ವಿಸ್ತಾರವಾಗಿ ಸುಮಾರು ಎರಡು ಸಾವಿರ ವರುಷಗಳವರೆಗೆ, ಅಂದರೆ ಅಜಂತಾಕಾಲದಿಂದ ಪೇಶವೆಯರ ಆಳಿಕೆಯ ವರೆಗೆ ಇದೆ. ಬೇರೆ ಬೇರೆ ಕಾಲಕ್ಕೆ ಬೇರೆ ಬೇರೆ ರಾಜರ, ನವಾಬರ, ಮತ್ತು ಕಲಾಪ್ರೇಮಿಗಳ ಆಶ್ರಯ ಉತ್ಸಾಹ ಉತ್ತೇಜನಪಡೆದಿದೆ, ವಿವಿಧ ವಿಷಯಗಳಲ್ಲಿ ಶೃಂಗಾರ, ಅಲಂಕಾರ, ರಾಗಮಾಲಿಕೆ, ಕಾಮಶಾಸ್ತ್ರ, ಪೌರಾಣಿಕ, ಐತಿಹಾಸಿಕ, ಪ್ರಣಯ, ಕಾಡು, ಮೃಗ-ಪಕ್ಷಿ, ಜಲಕ್ರೀಡೆ,ರಣಾಂಗಣ, ಬೇಟೆ ಇತ್ಯಾದಿ ಇವೆ. ಇವು ಅನೇಕ ದೃಷ್ಟಿಗಳಲ್ಲಿ ಅತಿ ಉತ್ತಮ ತರಗತಿಯ ಬಣ್ಣಗಳಲ್ಲಿ ಸುವರ್ಣಮಯವಾಗಿದ್ದು ಅವಿನಾಶಿಯಾದ ಅಮೌಲ್ಯವಾದ ಸೊತ್ತು ಮತ್ತು ದೇಶದ ಒಂದು ಸಂಪತ್ತು. ನಮ್ಮ ಪೂರ್ವಜರು ನಮಗಾಗಿ ಬಿಟ್ಟುಹೋದ ಕಾಣಿಕೆ. ಇದನ್ನು ನಾವು ಅರಿಯಬೇಕು, ತಿಳಿದುಕೊಳ್ಳಬೇಕು, ಅಭ್ಯಾಸಮಾಡಬೇಕು, ನೋಡಿ ಆನಂದ ಪಡಬೇಕುಮತ್ತು ನಮ್ಮನ್ನು ಅಗಲಿ ಹೋದ ಕೆಲವು ಕಲಾಕೃತಿಗಳನ್ನು ಶೋಧಿಸಿ ಪುನಃ ನಮ್ಮಲ್ಲಿ ಬರಮಾಡಿಕೊಂಡು ಅವುಗಳನ್ನು ಸಂಗ್ರಹಿಸಿದಲ್ಲಿ ನಮ್ಮ ಪೂರ್ವ ಕಲಾವಿದರ ಆತ್ಮ ಶಾಂತಿಹೊಂದುವದು. ಈ ಚಿತ್ರಕಲೆಗಳಲ್ಲಿ ನಮ್ಮ ದೇಶದ ಸಂಸ್ಕೃತಿ ಇದೆ, ಆಚಾರ-ವಿಚಾರಗಳಿವೆ, ಇತಿಹಾಸವಿದೆ, ಈ ಮಹಾದೇಶದ ಭವ್ಯ ಪರಂಪರೆ ಇದೆ. ಆದ್ದರಿಂದ ಈ ಕಲೆಯನ್ನು ಉಳಿಸಿಕೊಳ್ಳುವದೆಂದರೆ ನಮ್ಮನ್ನು ನಮ್ಮ ಸಂಸ್ಕೃತಿಯನ್ನು ನಮ್ಮ ಇತಿಹಾಸವನ್ನು ಉಳಿಸಿಕೊಂಡಂತೆ. ಉಳಿಸಿಕೊಳ್ಳಬೇಕೆನ್ನುವ ಹವ್ಯಾಸ ಅಭಿಮಾನ ಪ್ರಯತ್ನ ಎಂದಿಗಿಂತಲೂ ಇಂದು ಹೆಚ್ಚು ಆಗಬೇಕಾಗಿದೆ.

(ಆಕಾಶವಾಣಿ ಕೃಪೆಯಿಂದ)





ಮಗನ ಅಕಾಲಮೃತ್ಯು ಅವರಲ್ಲಿ ಬೇಸರ ತಂದಿತು; ಒಂದು ಬಗೆಯಲ್ಲಿ ವೈರಾಗ್ಯವೂ ಮೂಡಿತು. ಅದೇ ಭರದಲ್ಲಿ ಗೃಹತ್ಯಾಗ ಮಾಡಿದರು, ಸಂನ್ಯಾಸಿಯಾದರು. ಆದರೆ ಮನಸ್ಸಿಗೆ ಶಾಂತಿ ಮಾತ್ರ ದೊರಕಲಿಲ್ಲ. ಗೃಹಸ್ಥಾಶ್ರಮಕ್ಕೆ ಮರಳದೆ ಇಹಪರಗಳೆರಡರಲ್ಲೂ ಸುಖವಿಲ್ಲವೆಂದೆನಿಸಿತು. ಹಾಗೇ ಮನೆಗೆ ಮರಳಿದರು. ಸತಿಗೆ ಮೊದಲಿದು ಒಪ್ಪಿಗೆಯಾಗಲಿಲ್ಲ. ಆದರೂ ಅವಳೊಂದು ಉಪಾಯ ಸೂಚಿಸಿದಳು. ಗಂಡನ ಸಂನ್ಯಾಸಕ್ಕೆ ಭಂಗ ಬರಲಿಲ್ಲ; ಅವನ ಇಚ್ಛೆಯೂ ಈಡೇರಿತು. ಅದೇನೆಂಬುದನ್ನು ಅರಿಯಲು ಈ ಕುತೂಹಲಕಾರಿಯಾದ ಕತೆಯನ್ನು ಓದಬೇಕು.

ಲೇಖಕರು
ಶ್ರೀ. ಮತ್ತೂರ ಕೃಷ್ಣಮೂರ್ತಿ
ಬೆಂಗಳೂರು

# ಕೃಷ್ಣಶಾಸ್ತ್ರಿಯ ಗೃಹತ್ಯಾಗ

ಪೂರ್ಣಿಮೆಯ ಚಂದ್ರ ಬುವಿಯನ್ನೆಲ್ಲ ಬೆಳಗುತ್ತಿದ್ದಾನೆ. ರಾತ್ರಿ ಹನ್ನೆರಡಾಗಿದ್ದರೂ ನಾಗಮ್ಮ ತನ್ನ ಮನೆಯ ಪಡಸಾಲೆಯಲ್ಲಿ ಒಬ್ಬಳೇ ಕುಳಿತಿದಾಳೆ. ಚೌಕಿಯ ತೊಟ್ಟಿಯ ಪಕ್ಕದಲ್ಲೇ ಕುಳಿತು ಆಕಾಶವನ್ನು ನೋಡುತ್ತಿದಾಳೆ. ಆಳವಾಗಿ ಚಿಂತಿಸುತಿದ್ದಾಳೆ. ವಯಸ್ಸಿನ್ನೂ ೩೫-೩೬ ಇರಬಹುದು. ಯೌವನದಲ್ಲಿ ಅತಿರೂಪವತಿಯಾಗಿದ್ದಿರಬೇಕೆಂದು ಈಗಲೂ ಅವಳ ಮುಖವನ್ನು ನೋಡಿದರೆ ಊಹಿಸಬಹುದು. ಆ ಸೌಂದರ್ಯದ ಮೇಲೆ ಈಗಿನ ಬವಣೆಯ ಛಾಯೆ ಮೂಡಿರುವುದನ್ನೂ ಕಾಣಬಹುದು. ಅವಳ ಹದಿನೆಂಟು ವರ್ಷದ ಮಗಳು ಸೀತೆ ಅಲ್ಲೇ ಹತ್ತಿರದಲ್ಲೇ ಮಲಗಿದಾಳೆ.

ತನ್ನ ಬಾಳಿನ ದುರದೃಷ್ಟದ ದಿನಗಳನ್ನು ನೆನೆನೆನೆದು ನಾಗಮ್ಮ ಕಂಬನಿಗರೆಯದ ದಿನಗಳೇ ಇಲ್ಲ. ದಿನವೂ ನೆನೆದರೂ ಅದೇನು ತಗ್ಗಿದಂತೆ ಕಾಣಿಸುವುದೇ ಇಲ್ಲ. ಹೆಚ್ಚು ಹೆಚ್ಚಾದಂತೆಯೇ ತೋರುತ್ತದೆ. ೧೪ ವರ್ಷಗಳ ಹಿಂದೆ ನಡೆದ ಘಟನೆ ಇಂದು ಪುನಃ ಮನಸ್ಸಿನ ಮುಂದೆ ಸುಳಿಯಿತು. ಎಂತಲೇ ಅಷ್ಟು ತಡವಾಗಿದ್ದರೂ ನಿದ್ದೆ ಬಂದಿಲ್ಲ.

* * *

ಬೆಳಗ್ಗೆ ೧೦ ಗಂಟೆ. ನಾಗಮ್ಮ ಅಡಿಗೆ ಮಾಡುತ್ತಿದಾಳೆ. ನಾಲ್ಕು ವಯಸ್ಸಿನ ಸೀತೆ ಜಗುಲಿಯ ಮೇಲೆ ಕುಳಿತು ಕವಡೆಯಾಡುತ್ತಿದ್ದಾಳೆ. ಹಿತ್ತಿಲಕಡೆ ಏನೋ ಧೊಪ್ಪೆಂದು ಬಾವಿಗೆ ಬಿದ್ದ ಸಪ್ಪಳ ಕೇಳಿಸಿತು. ಸೀತೆ, ಸೀತೆ! ಎಂದು ಕೂಗುತ್ತ ನಾಗಮ್ಮ ಓಡಿದಳು. ಐದು ವಯಸ್ಸಿನ ಮಗ ಗೋಪು ಬಾವಿಗೆ ಬಿದ್ದುಬಿಟ್ಟಿದ್ದಾನೆ! ಅಯ್ಯೋ ಎಂದವಳೇ ಕೆಳಗೆ ಬಿದ್ದಳು ನಾಗಮ್ಮ. ಪಕ್ಕದ ಮನೆಯವರೆಲ್ಲ ಬಂದರು. ಈಶ್ವರದೇವಸ್ಥಾನಕ್ಕೆ ಹೋಗಿದ್ದ ಕೃಷ್ಣಶಾಸ್ತ್ರಿಗಳನ್ನು ಯಾರೋ ಹೋಗಿ ಕರೆದರು. ಅವರು ಬರುವಷ್ಟರಲ್ಲಿ ಗೋಪುವನ್ನು ಯಾರೋ ಹೊರತೆಗೆದಿದ್ದರು. ಆದರೇನು? ಅವರ ಪಾಲಿಗೆ ಅವನಿನ್ನಿರಲಿಲ್ಲ. ನಾಗಮ್ಮನಿಗೆ ಪ್ರಜ್ಞೆಯೇ ಇಲ್ಲ. ಕೃಷ್ಣಶಾಸ್ತ್ರಿಗಳು ಶಿಲೆಯಂತೆ ನಿಂತುಬಿಟ್ಟಿದಾರೆ. ಸೀತೆ ಏನೂ ತಿಳಿಯದೆ, ಅಮ್ಮ, ಗೋಪು! ಎನ್ನುತ್ತ ಬಿಕ್ಕುತ್ತಿದಾಳೆ.

ಒಂದು ವಾರ ಕಳೆಯಿತು. ಎಂಟನೇ ದಿನ ಕೃಷ್ಣಶಾಸ್ತ್ರಿ ಮನೆಗೆ ಬರಲಿಲ್ಲ. ನಾಗಮ್ಮನಿಗೆ ಗಾಬರಿಯಾಯಿತು. ರಾತ್ರಿ ರೆಪ್ಪೆ ಮುಚ್ಚದೆ ಕುಳಿತಿದ್ದಳು. ಮಾರನೇ ದಿನ, ಮೂರನೇ ದಿನ, ನಾಲ್ಕನೇ ದಿನ ಆಯಿತು. ಕೃಷ್ಣಶಾಸ್ತ್ರಿ ಬರಲೇ ಇಲ್ಲ. ಬೀದಿಯವರನ್ನೆಲ್ಲ ತನ್ನ ಇನಿಯನ ಬಗೆಗೆ ವಿಚಾರಿಸಿದಳು. ಸುದ್ದಿಯೇ ಇಲ್ಲ. ಹದಿನೈದು ದಿನಗಳಾದ ಮೇಲೆ ಗೋಕರ್ಣದಿಂದ ಶಿವಮೊಗ್ಗಾಕ್ಕೆ ಬಂದವರೊಬ್ಬರು,' ಅಲ್ಲಿಯ ಶಂಕರಾಚಾರ್ಯರ ಮಠಕ್ಕೆ ಸೇರಿದ್ದ ಆಶ್ರಮವೊಂದಕ್ಕೆ ಹೊಸಬರೊಬ್ಬರು ಸಂನ್ಯಾಸಿಯಾಗಿ ಬಂದಿದ್ದಾರೆ. ಅವರ ಪೂರ್ವಾಶ್ರಮದ ಹೆಸರು ಕೃಷ್ಣಶಾಸ್ತ್ರಿಯಂತೆ' ಎಂದು ತಿಳಿಸಿದರು. ಹಾಗೂ ಹೀಗೂ ಹೋಗಿ ನಾಗಮ್ಮನ ಕಿವಿಗೂ ಸುದ್ದಿ ಮುಟ್ಟಿತು.

'ಸ್ವಂತಮನೆ ಇದೆ. ಪಕ್ಕದ ಗ್ರಾಮವೊಂದರಲ್ಲಿ ಬೇಕಾದಷ್ಟು ಜಮೀನು ಇದೆ. ನಾಲ್ಕೈದು ಸಾವಿರ ರೂ. ಆಸ್ತಿ ಇದೆ. ಹೆಂಡತಿಗೇನೂ ಕೊರತೆ ಇಲ್ಲ. ಇದ್ದ ಒಬ್ಬನೇ ಮಗನನ್ನು ಕಳೆದುಕೊಂಡ ಆ ಮನೆಗೆ ನಾ ಹೋಗುವುದಿಲ್ಲ' ಎಂದು ತೀರ್ಮಾನಿಸಿ ಬಿಟ್ಟಿದ್ದರು ಕೃಷ್ಣಶಾಸ್ತ್ರಿ.

* * *

ಅಂದಿನಿಂದ ಈ ಹದಿನಾಲ್ಕು ವರ್ಷಗಳನ್ನು ನಾಗಮ್ಮ ಹೇಗೆ ಕಳೆದಳೆಂದು ಹೇಳಲಾಗದು. ಒಂದೇ ಮಾತಿನಲ್ಲಿ ಹೇಳುವುದಾದರೆ ಅವಳ ಪಾಲಿಗಿದ್ದುದು ದುಃಖ, ಕಷ್ಟ, ಕಣ್ಣೀರು— ಇಷ್ಟೇ. ಪ್ರಪಂಚದ ಒಂದು ವಸ್ತುವಿನ ಮೇಲೂ ಅವಳಿಗೆ ಆಸೆ ಉಳಿಯಲಿಲ್ಲ. ಸೀತೆಯ ಮೇಲೆ ಇದ್ದ ಪ್ರೀತಿಯೂ ಸಹ ಹೋಯಿತು. ಏನೋ ಮಗಳು, ವಯಸ್ಸಾಗುತ್ತಿದೆ ಯಾರಿಗಾದರೂ ಒಬ್ಬರಿಗೆ ಕೊಟ್ಟು ತಾನು ಲಕ್ಷ್ಮೀನಾರಾಯಣನ ಪಾದಾರವಿಂದ ಸೇರಿಬಿಡಬೇಕೆಂಬ ಒಂದೇ ಆಸೆ ಅವಳಿಗಿತ್ತು. ಸತತವೂ ಇದನ್ನೇ ಪ್ರಾರ್ಥಿಸುತ್ತಿದ್ದಳು. ಸೀತೆಗೆ ತುಂಬು ಯೌವನ. ನೋಡುವವರನ್ನು ಬೆರಗುಗೊಳಿಸುವಂತಹ ರೂಪ. ಅವಳೊಬ್ಬಳನ್ನೇ ಹೊರಕ್ಕೆ ಈಗ ಕಳಿಸಬಾರದೆಂಬುದೇ ನಾಗಮ್ಮನಿಗೆ. ಆದರೆ ಶಾಲೆಗೆ ಕಳಿಸದೆ ವಿಧಿಯಿರಲಿಲ್ಲ. ದಿನವೂ ಮಗಳು ಶಾಲೆಯಿಂದ ಬರುವ ತನಕ, ಅವಳಿಗಾಗು

ತ್ತಿದ್ದ ದುಗುಡ ಅಷ್ಟಿಷ್ಟಲ್ಲ. ಎಸ್. ಎಸ್. ಎಲ್. ಸಿ. ತನಕ ಓದಿಸಿದಳು. ತಾನು ಲಲಿತಾ ಸಹಸ್ರನಾಮ, ವಿಷ್ಣು ಸಹಸ್ರನಾಮ, ಪಾರಾಯಣ ಮಾಡದ ದಿನವೇ ಇರಲಿಲ್ಲ. ಲಕ್ಷ್ಮೀನಾರಾಯಣ ದೇವಸ್ಥಾನಕ್ಕೆ ಹೋಗಿ ಬರದ ದಿನವೂ ಇರಲಿಲ್ಲ. ಈಗ ಸೀತೆಯ ಮದುವೆಯೂ ನಿಶ್ಚಯವಾಗಿದೆ.

ಆದರೂ ಇಂದೇಕೋ ಅವಳ ಮನಸು ಚಂಚಲಗೊಂಡಿದೆ. ನಿರಾಳವಿರಲಿಲ್ಲ. ಪೂರ್ಣ ಚಂದ್ರನ ಪ್ರಭಾವವೋ ಏನೋ ಹೇಳಲಾಗದು. ಹಳೆಯ ನೆನಪುಗಳು, ಮೊದಲನೇ ದೀಪಾವಳಿಗೆ ಕೃಷ್ಣಶಾಸ್ತ್ರಿ ಬಂದುದು, ತನ್ನ ತಂದೆ ರೈಲ್ವೆ ಸ್ಟೇಶನ್ನಿಗೆ ಜೋಡೆತ್ತಿನ ಗಾಡಿ ಕೊಂಡುಹೋಗಿ ಕರೆದುಕೊಂಡು ಬಂದುದು, ಇನಿಯನನ್ನು ತಾನು ಬಾಗಿಲಮರೆಯಿಂದ ಇಣಿಕಿ ನೋಡಿದ್ದು, ಆತನೂ ಕಡೆಗಣ್ಣಿನಿಂದ ನೋಡಿ ಮಂದಹಾಸ ಬೀರಿದ್ದು—ಎಲ್ಲವೂ ನೆನಪಿಗೆ ಬಂದಿತು. ಇದೇನಾಶ್ಚರ್ಯ! ಆ ಸಂಭವ ನಡೆದು ಆಗಲೇ ೨೨-೨೩ ವರ್ಷಗಳಾಗಿವೆ. ತನಗಾಗಿ ತನ್ನ ಸರ್ವಸ್ವವನ್ನೂ ತ್ಯಾಗ ಮಾಡಲು ಸಿದ್ಧವಾಗಿದ್ದ ತನ್ನ ಪ್ರಿಯ ತನ್ನನ್ನಗಲಿ ಸಂನ್ಯಾಸ ಸ್ವೀಕರಿಸಿ ೧೪ ವರ್ಷಗಳಾಗಿ ಹೋಗಿವೆ.—ಇಂದೇಕೆ ಹೀಗೆ?.....

ಅರೆಕ್ಷಣ ಅಕಾಲಮರಣಕ್ಕೆ ತುತ್ತಾದ ಗೋಪುವಿನ ನೆನಪೂ ಬಾರದಿರಲಿಲ್ಲ. ಅಯ್ಯೋ ಅವರಾದರೂ ದುಡುಕಿ ಹೋಗದಿದ್ದಿದ್ದರೆ ಗೋಪುವೇ ಪುನಃ ಹುಟ್ಟಿಬರುತ್ತಿದ್ದನೋ ಎಂದೆಣಿಸಿದಾಗ ತನಗೇ ತಿಳಿಯದೆ ನಾಗಮ್ಮನ ಮೈ ಪುಳಕಿತಗೊಂಡಿತು. ಛೇ! ಏಕೆ ಹೀಗೆ?

ಟಪ್ ಟಪ್ ಟಪ್ . . . .

ಯಾರೋ ಕದ ತಟ್ಟಿದಹಾಗಾಯಿತು. ನಾಗಮ್ಮ ಬೆಚ್ಚಿಬಿದ್ದಳು. ಇಷ್ಟು ಹೊತ್ತಿನಲ್ಲಿ ಯಾರು ಕದ ತಟ್ಟುತ್ತಿದ್ದಾರೆ!

ಟಪ್ ಟಪ್ ಟಪ್ . . . . .

"ಯಾರು?"

"ನಾನು ನಾಗು! ಬಾಗಿಲ ತೆಗಿ!"

"ಯಾರು?" ಗಟ್ಟಿಯಾಗಿ ಕೇಳಿದಳು.

"ನಾನೇ ನಾಗು? ಸೀತೆಯ ತಂದೆ. ಬಾಗಿಲು ತೆಗಿ!"

ತಾನು ಕೇಳುತ್ತಿರುವುದು ನಿಜವಾದ ಧ್ವನಿಯೋ, ಭ್ರಮೆಯೋ, ತಾನು ಸ್ವಪ್ನ ಲೋಕದಲ್ಲಿದ್ದಾಳೊ, ಜಾಗ್ರತಾವಸ್ಥೆಯಲ್ಲೋ ಎಂದು ಕಂಡುಕೊಳ್ಳಲು ಐದು ನಿಮಿಷ ಬೇಕಾಯಿತು ನಾಗಮ್ಮನಿಗೆ. ನಾಗೂ-ನಾಗು! ಪುನಃ ಅದೇ ಧ್ವನಿ.

"ನಾಗೂ! ಬೇಗ ಬಾಗಿಲು ತೆಗಿ!"

ನಾಗಮ್ಮನಿಗೆ ಕೈಕಾಲು ನಡುಗಲಾರಂಭಿಸಿದವು. ಮೈ ಬೆವರಿತು. ತಲೆ ಸುತ್ತಿತು. ಗಂಟಲು ಒಣಗಿತು. ಲಾಟೀನು ದೊಡ್ಡದು ಮಾಡಿ, ಬೀದಿ ಬಾಗಿಲ ಕಡೆ ಹೋಗಿ ಕಿಟಕಿಯ ಬಾಗಿಲೊಂದನ್ನು ತೆರೆದು, ದೀಪವನ್ನು ಮೇಲೆತ್ತಿ ನೋಡಿದಳು. ಕಾಷಾಯವಸ್ತ್ರಧಾರಿಯಾಗಿ, ಕಮಂಡಲ, ದಂಡ ಹಿಡಿದು ಬಾಗಿಲಲ್ಲಿ ತನ್ನ ಇನಿಯ ನಿಂತಿದ್ದಾನೆ!

"ನಾಗು! ನನ್ನ ಮೇಲೆ ನಿನಗೆ ನಿಜಕ್ಕೂ ಕೋಪ ಬಂದಿರಬೇಕು. ಜುಗುಪ್ಸೆ ಮೂಡಿರಬೇಕು. ಮೂಡದೇ ಬಿಟ್ಟೀತೆ? ಅನಾಥರನ್ನಾಗಿಸಿ ನಡುನೀರಿನಲ್ಲಿ ಕೈಬಿಟ್ಟು ಹೊರಟು ಹೋಗಿಬಿಟ್ಟೆ. ಈಗ ನಾ ಬಂದಿರುವುದು ನಿನಗೆ ತೊಂದರೆ ಕೊಡುವುದಕ್ಕಲ್ಲ. ಈ ಹದಿನಾಲ್ಕು ವರ್ಷಗಳ ಕಾಲವನ್ನು ನಾ ಹೇಗೆ ಕಳೆದೆ ಎಂಬುದನ್ನು ಹೇಳಿಕೊಳ್ಳಲು ಬಂದೆ. ಆದರೆ ನೀ ಪಟ್ಟ ಬವಣೆಗಳನ್ನು ಮಾತ್ರ ನನಗೆ ಹೇಳಬೇಡ. ಕೇಳಿದರೆ ಸಂನ್ಯಾಸಿಯಾಗಿದ್ದ ನನ್ನ



ಧರ್ಮಸಂಕಟದಲ್ಲಿ ಬಿದ್ದ ನಾಗಮ್ಮ ಇನಿಯನ ಎರಡೂ ಕಾಲುಗಳನ್ನು ಹಿಡಿದು ಬಿಕ್ಕಿ ಬಿಕ್ಕಿ ಅತ್ತಳು.

ತಕ್ಷಣ ಬಾಗಿಲು ತೆರೆದಳು. ಕೃಷ್ಣಶಾಸ್ತ್ರಿ—ಈಗ ಶಂಕರಾನಂದರು—ಒಳಗೆ ಬಂದರು. ಬಾಗಿಲ ಅಗಳಿ ಹಾಕು ಎಂದು ಸಂಜ್ಞೆ ಮಾಡಿದರು. ಯಂತ್ರದಂತೆ ಕದ ಹಾಕಿದಳು ನಾಗಮ್ಮ. 'ಒಳಕ್ಕೆ' ಎಂದು ಕೈ ಸನ್ನೆ ಮಾಡಿದರು ಸ್ವಾಮಿಗಳು. ಒಳಗಡೆಯ ಕೋಣೆಗೆ ಹೋದಳು ನಾಗಮ್ಮ. ಕುಳಿತುಕೋ ಎಂದು ಕೈ ತೋರಿಸಿ ಕುಳಿತರು ಶಾಸ್ತ್ರಿಗಳು. ನಾಗಮ್ಮನೂ ಕುಳಿತಳು.

೮–೧೦ ನಿಮಿಷಗಳಾದರೂ ಯಾರೊಬ್ಬರೂ ತುಟಿ ಪಿಟಿಕ್ ಎನ್ನಲಿಲ್ಲ. ಕೊನೆಗೂ ಸ್ವಾಮಿಗಳೇ ಮೌನ ಭಂಗಮಾಡಿದರು.

ಎದೆಯೂ ಒಡೆದು ಹೋಗುವುದೆಂಬುದು ನನಗೆ ಚೆನ್ನಾಗಿ ಗೊತ್ತು. ಆಶ್ರಮಕ್ಕೆ ಸೇರಿ ವೇದಾಭ್ಯಾಸ ಮಾಡಿದೆ. ಸಂಸ್ಕೃತ ಕಲಿತೆ. ಬ್ರಹ್ಮಸೂತ್ರಗಳ ಭಾಷ್ಯಗಳನ್ನೆಲ್ಲ ಓದಿದೆ. ನ್ಯಾಯ, ತರ್ಕ, ಮೀಮಾಂಸೆಗಳ ಅಧ್ಯಯನ ಮಾಡಿದೆ. ಕಾಶೀವಿದ್ಯಾಪೀಠದಲ್ಲಿ ಒಂದೆರಡು ವರ್ಷ ವ್ಯಾಸಂಗ ಮಾಡಿದೆ. ಉಪನಿಷತ್ತುಗಳನ್ನು ಓದಿದೆ. ಪುರಾಣಪ್ರವಚನ ಮಾಡಿದೆ.

ಆದರೂ ನಾಗು! ಒಂದು ಮಾತ್ರ ನನ್ನಿಂದಾಗಲಿಲ್ಲ. ಮನಸ್ಸು ಬಿಗಿಹಿಡಿಯುವುದು, ವೈರಾಗ್ಯ ತಳೆಯುವುದು, ನಿನ್ನನ್ನೂ ಸೀತೆಯನ್ನೂ ಮರೆಯುವುದು ಮಾತ್ರ ಆಗಲಿಲ್ಲ...

ಮುಡುಕಿಬಿಟ್ಟೆ ಎಂದೆನಿಸಿ ನಾ ಮರುಗದ ದಿನವೇ ಇಲ್ಲ. ಕಣ್ಣೀರಿಡದ ವೇಳೆಯೇ ಇಲ್ಲ, ನನ್ನ ಕಣ್ಣೀರನ್ನು ಕಂಡ ಭಕ್ತಾದಿಗಳು ನಾ ಸಮಾಧಿ ಸ್ಥಿತಿಯಲ್ಲಿದ್ದೇನೆ ಎಂದು ಭಾವಿಸಿ ನಮಸ್ಕರಿಸುತ್ತಿದ್ದಾಗ ನಾ ಮಾಡುತ್ತಿದ್ದ ಆತ್ಮವಂಚನೆಯ ಬಗೆಗೆ ನಾಚಿ ನಾ ತಲೆತಗ್ಗಿಸುತ್ತಿದ್ದೆ. ಮನಸ್ಸು ಬಿಗಿಹಿಡಿಯಲು, ವಿರಕ್ತನಾಗಲು ಬಹಳ ಶ್ರಮಪಟ್ಟೆ. ಪ್ರಾಣಾಯಾಮ, ಯೋಗಾಭ್ಯಾಸಗಳನ್ನು ಮಾಡಿದೆ. ಅನ್ನ ಆಹಾರ ಬಿಟ್ಟೆ. ಊಹೂಂ... ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೂ ಮನಸ್ಸು ಮಾಡಿದೆ. ಅದು ಪಾಪ ಎಂದು ಕೈ ಬಿಟ್ಟೆ. ಅಂತೂ ಪುನಃ ಗೃಹಸ್ಥಾಶ್ರಮಕ್ಕೆ ಮರಳದ ಹೊರತು ಇಹಪರಗಳೆರಡರಲ್ಲೂ ನನಗೆ ಸುಖವಿಲ್ಲ. ತ್ರಿಶಂಕುವಿನ ಗತಿ ಹೊಂದಬೇಕಾಗುತ್ತದೆ ಎಂದು ಯೋಚಿಸಿ ನಿನ್ನನ್ನು ಕಾಣುವ ನಿರ್ಧಾರಕ್ಕೆ ಬಂದೆ. ಬಂದಿದ್ದೇನೆ. ಮುಂದಿನದು ನಿನಗೇ ಬಿಟ್ಟದ್ದು..."

ಕಣ್ಣೀರಿನಿಂದ ನಾಗಮ್ಮನ ಸೆರಗು ನೆನೆದು ಹೋಗಿತ್ತು. ನಿಟ್ಟುಸಿರು ಬಿಟ್ಟಳು.

"ಸಂನ್ಯಾಸಾಶ್ರಮದಿಂದ ಪುನಃ ಗೃಹಸ್ಥಾಶ್ರಮಕ್ಕೆ ಬಂದರೆ ವಂಶ ನಿರ್ವಂಶವಾಗುವುದಲ್ಲದೆ ಏಳೇಳು ಜನ್ಮಗಳಿಗೂ ಮನುಷ್ಯಜನ್ಮ ಸಿಗುವುದಿಲ್ಲ ಎನ್ನುತ್ತಾರೆ. ಈ ಜನ್ಮದಲ್ಲಂತೂ ನಮ್ಮಿಬ್ಬರ ಋಣಾನುಬಂಧ ತೀರಿತು. ಮುಂದಿನ ಜನ್ಮದಿಂದಾದರೂ ಒಂದಾಗುವ ಭಾಗ್ಯ ಪಡೆಯೋಣ .... ...."

"ಅದೆಲ್ಲ ಗೊಡ್ಡು ಶಾಸ್ತ್ರ ನಾಗು! ಮೂರ್ಖರು ಬರೆದಿರುವ ಶಾಸ್ತ್ರ, ನಾವು ಯಾರಿಗೆ ಏನು ಕೆಡುಕು ಮಾಡಿದ್ದೇವೆ? ಇತರ ಜೀವರಾಶಿಗಳಿಗೆ ಹಿಂಸೆ ಮಾಡಿದರೆ ಮಾತ್ರ ನಮಗೆ ಅಧೋಗತಿಯೇ ವಿನಾ ಬೇರಾವ ಕಾರ್ಯದಿಂದಲೂ ನಮಗೆ ದುರ್ಗತಿಯಾಗದು. ನೀಯಾಕೆ ಚಿಂತಿಸುತ್ತೀಯಾ?"

"ನನಗೆ ತರ್ಕ ಮಾಡಲು ಬರುವುದಿಲ್ಲ. ಶಾಸ್ತ್ರ ಓದಿಲ್ಲ ನಾನು. ಹಿರಿಯರು ಹೇಳುವುದನ್ನು ಕೇಳಿದೇನೆ ಅಷ್ಟೆ. ನಾವು ಒಂದು ವೇಳೆ ಹೀಗಾದರೆ ನಾಳೆ ನಮ್ಮ ಸೀತೆಯ ಗತಿಯೇನು? ಯಾರು ಅವಳ ಕೈ ಹಿಡಿಯುತ್ತಾರೆ? ನಮ್ಮ ಕಾಲ ಮುಗಿದರೆ ಮುಗಿಯಲಿ ಅಂದರೂ ಅವಳಾದರೂ ಸುಖವಾಗಿ ಬಾಳಿ ಬದುಕಬೇಡವೇ? ಸಮಾಜದಲ್ಲಿ ತಲೆ ಎತ್ತಿಕೊಂಡು ಇರುವುದಾದರೂ ಹೇಗೆ?"

"ಸಮಾಜ! ಸಮಾಜ! ಯಾವ ಸಮಾಜ ನಾಗು ಅದು? ಈ ಹದಿನಾಲ್ಕು ವರ್ಷ ಕಾಲ ನೀ ಬವಣೆಪಟ್ಟೆಯಲ್ಲ. ಈ ನಿನ್ನ ಸಮಾಜ ನಿನಗೆ ಏನು ಸಹಾಯ ಮಾಡಿತು?"

"ಅದೆಲ್ಲಾ ನನಗೆ ಗೊತ್ತಿಲ್ಲ. ಹೀಗೆ ಮಾಡುವುದು ತಪ್ಪು ಎಂದು ಮಾತ್ರ ನನ್ನ ಅಂತರಾತ್ಮ ನನಗೆ ಹೇಳುತ್ತಿದೆ."

"ಸರಿ ಹಾಗಾದರೆ. ನಾ ಹೋಗಿಬರುತ್ತೇನೆ . . . ಇಲ್ಲ. ಹೋಗುತ್ತೇನೆ. ಯಾವ ಗತಿ ನನಗೆ ಕಾದಿದೆಯೋ ಹೇಳಲಾರೆ. ಹುಚ್ಚು ಹಿಡಿಯಬಹುದು. ವಿಷ ಕುಡಿದು ಪ್ರಾಣ ಕಳೆದುಕೊಳ್ಳಬಹುದು.... ದುರ್ಮಾರ್ಗದಲ್ಲಿಳಿಯಲೂಬಹುದು. . . . . ನಾನಿನ್ನು ಹೋಗುತ್ತೇನೆ........"

ಶಂಕರಾನಂದರು ಎದ್ದು ನಿಂತರು. ನಾಗಮ್ಮನ ಮನಸ್ಸಿನ ನೆಲೆಯನ್ನು ವರ್ಣಿಸುವುದು ದುಸ್ಸಾಧ್ಯ. ಧರ್ಮಸಂಕಟದಲ್ಲಿ ಸಿಕ್ಕಿಬಿದ್ದಿದ್ದಾಳೆ. ೧೪ ವರ್ಷಗಳು ಅಗಲಿದ್ದ ಇನಿಯ ಈಗ ಬಂದಿದಾನೆ. ಬಿಟ್ಟುಬಿಡುವುದೆ? ಊಹೂಂ... ಅಥವಾ ೧೪ ವರ್ಷ ಸಂನ್ಯಾಸಿಯಾಗಿದ್ದ ಪತಿಯನ್ನು ಗೃಹಸ್ಥಾಶ್ರಮಕ್ಕೆ ಬರಮಾಡಿಕೊಂಡು ಪಾಪಕೂಪಕ್ಕೆ ಹೋಗುವುದೆ?.....ಮಗಳು ಸೀತೆಯ ಗತಿಯೇನು?

ಇನಿಯನಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿದಳು.

ಎರಡೂ ಕಾಲುಗಳನ್ನೂ ಹಿಡಿದು ಬಿಕ್ಕಿ ಬಿಕ್ಕಿ ಅತ್ತಳು....ಕಣ್ಣೊರಸಿಕೊಂಡು,

"ನನಗೊಂದು ಯೋಚನೆ ಹೊಳೆಯುತ್ತಿದೆ...."

"ಹೇಳು ಹೇಳು! ಹೇಳು ನಾಗು!"

"ಈ ತನಕ ಇನ್ನೂ ಎರಡು ತಿಂಗಳು ನೀವು ಎಲ್ಲಾದರೂ ಮಠದಲ್ಲಿದ್ದು ಬಿಡಿ. ಮಾಘಮಾಸದಲ್ಲಿ ಸೀತೆಯ ಮದುವೆಯ ಏರ್ಪಾಡು ಮಾಡಿದೇನೆ. ಹುಡುಗ ಡಾಕ್ಟರ್ ಪರೀಕ್ಷೆ ಮುಗಿಸಿ, ಟ್ರೈನಿಂಗ್ ತೆಗೆದುಕೊಳ್ಳುತ್ತಿದಾನೆ. ತಾನೇ ಸ್ವಂತವಾಗಿ ನರ್ಸಿಂಗ್ ಹೋಮನ್ನು ನಡೆಸುವುದಕ್ಕೆ ವ್ಯವಸ್ಥೆ ಮಾಡಿಬಿಡುತ್ತೇನೆ. ಅವರಿಬ್ಬರೂ ಸಂಸಾರ ಹೂಡಿದ ಮೇಲೆ ನಾವಿಬ್ಬರೂ ಸೇರಿ ಕಾಶೀ, ಬದರೀನಾಥ, ಕೇದಾರನಾಥ ಕ್ಷೇತ್ರಗಳಿಗೆ ಹೋಗಿ ಗಂಗಾಸ್ನಾನಮಾಡಿ ಬರೋಣ... ..."

"ಭೇಷ್! ಭೇಷ್! ನಾಗು! ಹಾಗೇ ಆಗಲಿ. ನಾನಿನ್ನು ಬರುತ್ತೇನೆ. ಸೀತೂ ಮದುವೆ ಸಾಂಗವಾಗಿ ನೆರವೇರಿ ವಧೂವರರು ಚಿರಾಯುಗಳಾಗಿರಲಿ ... ... ನಾ ಬರುತ್ತೇನೆ. ಬಾಗಿಲು ಹಾಕಿಕೋ."

ಕೃಷ್ಣಶಾಸ್ತ್ರಿಗಳು—ಅಲ್ಲ ಶಂಕರಾನಂದರು ಹೊರಟುಹೋದರು.

ಮಾಘಮಾಸ ಬಂದಿತು. ಮುಹೂರ್ತದ ದಿನವೂ ಬಂದಿತು. ಸೀತೆ—ಶ್ರೀಪಾದರ ಮದುವೆ ಸಾಂಗವಾಗಿ ನೆರವೇರಿತು. ಶ್ರೀಪಾದ ಅತ್ತೆಯ ಮನೆಯಲ್ಲೆ ನೆಲೆಸಿದ. ಪ್ರಾಕ್ಟೀಸ್ ಶುರುಮಾಡಿದ. ಒಂದೆರಡು ತಿಂಗಳಾದ

ಮೇಲೆ ನಾಗು ಮಗಳನ್ನು ಕರೆದು, ಆಸ್ತಿ ಪಾಸ್ತಿಗಳ ವಿವರಗಳನ್ನೆಲ್ಲ ಅವಳಿಗೆ ತಿಳಿಸಿ ತಾನು ಐನೂರು ರೂಪಾಯಿಗಳನ್ನು ಇಟ್ಟುಕೊಂಡಿರುವುದಾಗಿಯೂ ಉತ್ತರದ ಯಾತ್ರಾಸ್ಥಳಗಳಿಗೆ ಹೋಗಿಬರುವುದಾಗಿಯೂ ಹೇಳಿದಳು.

ಸೀತೆಯು ಬೇಡ ಎಂದು ಪರಿ ಪರಿಯಾಗಿ ಹೇಳಿದರೂ ನಾಗಮ್ಮ ಕೇಳಲಿಲ್ಲ. ಕೇಳುವುದಾದರೂ ಹೇಗೆ.

ಕೃಷ್ಣಶಾಸ್ತ್ರಿಗಳು—ಈಗ ಶಂಕರಾನಂದರು— ಬಿರೂರಿನಲ್ಲಿರುವುದಾಗಿಯೂ ರೈಲ್ವೆ ನಿಲ್ದಾಣದಲ್ಲಿ ಕಾದುಕೊಂಡಿರುವುದಾಗಿಯೂ ನಾಗಮ್ಮನಿಗೆ ರಹಸ್ಯವಾಗಿ ತಿಳಿಸಲು ಹೇಳಿ ಕಳಿಸಿದರು.

ನಾಗಮ್ಮ, ಮಗಳು— ಅಳಿಯಂದಿರಿಗೆ ಹೇಳಿಕೊಂಡು ಹೊರಟಳು.

ಹೇಳಿದಂತೆ ಕೃಷ್ಣಶಾಸ್ತ್ರಿ ಬೀರೂರು ಜಂಕ್ಷನ್ನಿನಲ್ಲಿ ಕಾದುನಿಂತಿದ್ದರು. ಕಾಷಾಯ ವಸ್ತ್ರ ಉಟ್ಟಿರಲಿಲ್ಲ. ಬಿಳುಪಾದ ಪಂಚೆ, ಅಂಗಿ, ಒಂದು ಗಾಂದೀ ಟೋಪಿ. ಅಚ್ಚ ಗೃಹಸ್ಥ !

ಮುಂಬೈಗೆ ಹೋಗಿ ಅಲ್ಲಿಂದ ಬದರೀನಾಥದ ಕಡೆಗೆ ಸತಿಪತಿಗಳು ಹೊರಟರು.

ಲಕ್ಷ್ಮಣತೀರ್ಥಕ್ಕೆ ಹೋದರು. ಗಂಗೆಯನ್ನು ನೋಡುತ್ತಲೇ ನಾಗಮ್ಮನ ಮುಖ ಅರಳಿತು. ಕಾಂತಿಯಿಂದ ಬೆಳಗಿತು. ಹಿರಿ ಹಿರಿ ಹಿಗ್ಗಿದಳು. ಸಂತಸದಿಂದ ನಗನಗುತ ಇನಿಯನೊಂದಿಗೆ ಮಾತಾಡಿದಳು. ಮಡದಿಯ ಅಂಥ ಮುಖ ನೋಡಿ ೧೪-೧೫ ವರ್ಷಗಳಾಗಿ ಬಿಟ್ಟಿದ್ದವು.

"ಇದೇನು ನಾಗು, ಇಂದು ನೀ ಇಷ್ಟು ಸಂತೋಷವಾಗಿದೀಯಾ, ೧೫ ವರ್ಷ ಚಿಕ್ಕವಳಾಗಿ ಬಿಟ್ಟಿದೀಯಲ್ಲ!"

"ಹೌದು ; ನಿಜಕ್ಕೂ ೧೫ ವರ್ಷ ಚಿಕ್ಕವಳಾಗಿದ್ದೇನೆ. ನನ್ನ ದುಃಖವೆಲ್ಲಾ ಇಂದಿಗೆ ನೀಗಿದವು. ಇನ್ನು ನಮಗೆ ಏತರ ಕೊರತೆ?"

ಬಹಳ ಹೊತ್ತು ಅವರಿಬ್ಬರೂ ಆ ರಮಣೀಯ ದೃಶ್ಯವನ್ನು ನೋಡಿ ಮೈಮರೆತರು. ಹಿಮಾಲಯದ ಸೊಬಗಿನಲ್ಲಿ ತನ್ಮಯರಾದರು. ಕೃಷ್ಣಶಾಸ್ತ್ರಿ ತಾವು ಓದಿದ ಶಾಸ್ತ್ರಗಳ ಸಾರವನ್ನೆಲ್ಲ ಮಡದಿಗೆ ಸರಳ ಶೈಲಿಯಲ್ಲಿ ಹೇಳಿದರು. ಎರಡನೇ ಬಾರಿಗೆ ಲಕ್ಷ್ಮಣತೀರ್ಥದಲ್ಲಿ ಸ್ನಾನಮಾಡಲು ಇಬ್ಬರೂ ಇಚ್ಛಿಸಿ ಇಳಿದರು.



ಹೆಂಡತಿ ಹೇಳಿದಂತೆ ಕೇಳಿದರು ಶಾಸ್ತ್ರಿಗಳು. ಇಬ್ಬರೂ ಮುಳುಗಿದರು. ತಲೆಯೆತ್ತಿದರು.

"ಸತಿಪತಿಗಳು ಒಟ್ಟಿಗೆ ಸ್ನಾನಮಾಡಬೇಕೆಂದು ಹೇಳುತ್ತಾರೆ. ನನ್ನ ಸೀರೆಯ ಸೆರಗಿಗೆ ನಿಮ್ಮ ಧೋತರದ ಅಂಚನ್ನು ಸೇರಿಸಿ ಗಂಟುಹಾಕಿ ನನ್ನ ಕೈಹಿಡಿದುಕೊಳ್ಳಿ. ಪೂರ್ವಾಭಿಮುಖವಾಗಿ ನಿಲ್ಲೋಣ. ಸೂರ್ಯದೇವನ ಮೇಲಿನ ಯಾವುದಾದರೂ ಶ್ಲೋಕಹೇಳಿ..." ಹೀಗೆ ಹೇಳಿದ್ದು ನಾಗಮ್ಮನೋ ಅಥವಾ ಅವಳಲ್ಲಿ ಯಾವುದಾದರೂ ದೇವತೆ ಹೊಕ್ಕು ಮಾತನಾಡಿಸುತ್ತಿದೆಯೊ ಎಂದು ಕೃಷ್ಣಶಾಸ್ತ್ರಿ ಭ್ರಮೆಗೊಂಡರು.

ಹೆಂಡತಿ ಹೇಳಿದಂತೆ ಕೇಳಿದರು ಶಾಸ್ತ್ರಿಗಳು. ಇಬ್ಬರೂ ಮುಳುಗಿದರು. ತಲೆಯೆತ್ತಿದರು. ಆದರೆ ಮುಳುಗಿದ ಜಾಗದಲ್ಲೇ ಇಬ್ಬರೂ ತಲೆಯೆತ್ತಲಿಲ್ಲ. ನಾಗಮ್ಮ ನಾಲ್ಕಾರು ಅಡಿ ದೂರ ಹೋಗಿಬಿಟ್ಟಿದ್ದಳು. ನಾಗೂ, ನಾಗೂ ಎಂದು ಕೈನೀಡಿದರು ಶಾಸ್ತ್ರಿಗಳು ಎಟುಕಲಿಲ್ಲ. ಈಜುಬಿದ್ದರು. ನಾಗಮ್ಮ ಪತಿದೇವರ ಕೈಹಿಡಿದುಕೊಂಡಳು. ಆದರೆ ಪ್ರವಾಹ ಕೆಳಕ್ಕೆಳೆಯಿತು. ಶಾಸ್ತ್ರಿಗಳ ಕೈಯನ್ನೂ ಹಿಡಿದೆಳೆದಳು. ಇಬ್ಬರನ್ನೂ ಪ್ರವಾಹ ಸೆಳೆದುಕೊಂಡು ಹೋಯಿತು.

ನಾಗಮ್ಮ ಕೊಟ್ಟ ವಚನಕ್ಕೆ ತಪ್ಪಲಿಲ್ಲ; ಕೃಷ್ಣಶಾಸ್ತ್ರಿಗಳ ಆಸೆಯೂ ನೆರವೇರಿತು. ಸಂನ್ಯಾಸಾಶ್ರಮಕ್ಕೆ ಭಂಗವೂ ಬರಲಿಲ್ಲ. ಗೃಹಸ್ಥಾಶ್ರಮವೂ ಸಾರ್ಥಕವಾಯಿತು.





# ಭೌತಶಾಸ್ತ್ರದಿಂದ ಆದ, ಆಗಬಲ್ಲ ಲಾಭಗಳು

ಲೇಖಕರು :
**ಪ್ರೊ. ಉ. ಲಕ್ಷ್ಮೀನಾರಾಯಣ ಆಚಾರ್ಯ**
**ಉಡುಪಿ**



ಮಾನವ ಇಂದು ತನ್ನ ಸುಖಜೀವನಕ್ಕಾಗಿ ಹಲವಾರು ಯಂತ್ರೋಪಕರಣಗಳನ್ನು ರಚಿಸಿಕೊಂಡಿದ್ದಾನೆ. ಅದೇರೀತಿ ವಾತಾವರಣದಲ್ಲಿ ಸುಲಭವಾಗಿ ಹಾರಾಡಬಲ್ಲ ಸಾಧನಗಳನ್ನು ನಿರ್ಮಿಸಿದ್ದಾನೆ. ಇದು ನಿಜವಾಗಿ ಭೌತಶಾಸ್ತ್ರ ಮಾನವನಿಗೆ ನೀಡಿದ ಅಮೋಘ ಕಾಣಿಕೆಯೇ. ಈ ಶಾಸ್ತ್ರದ ಈ ಅನ್ವಿತ ವಿಭಾಗದ ಹಿನ್ನೆಲೆಯಲ್ಲಿ ಶುದ್ಧಶಾಸ್ತ್ರದ ಹಲವಾರು ಸೂತ್ರಗಳಿವೆ. ಈ ಶಾಸ್ತ್ರವು ಬೆಳೆದುಬಂದ ಬಗೆ, ಪರಂಪರೆ, ಭೌತಶಾಸ್ತ್ರದ ಭವಿಷ್ಯದ ಗರ್ಭದಲ್ಲಿ ಏನಡಗಿದೆಯೆಂಬುದರ ಸ್ಥೂಲವಿವರಣೆ ಈ ಲೇಖನದಲ್ಲಿದೆ.

ಇಂದು ಜನಿಸುವ ಮಗು ಹುಟ್ಟುವಾಗಲೇ ವಿಜ್ಞಾನಜಗತ್ತಿಗೆ ಕಾಲಿಡುತ್ತಲಿದೆ. ಅದು ಗರ್ಭದಲ್ಲಿರುವಾಗಲೇ ವಿಜ್ಞಾನದ, ವೈದ್ಯಭಾಗದ, ಚಿಕಿತ್ಸಾಪದ್ಧತಿಯ ಮಾರ್ಗಗಳು ಅದರ ಅಸ್ತಿತ್ವಕ್ಕೆ ಕಾರಣವಾಗಿದ್ದು, ಅದು ಹುಟ್ಟುತ್ತಲೇ ನಡೆಯುವ ಶುಶ್ರೂಷೆ ಮೊದಲಾದುವೆಲ್ಲ ವಿಜ್ಞಾನದ ಕೊಡುಗೆಗಳಾಗಿವೆ. ಇಂದಿನ ಚಿಕ್ಕವರ, ದೊಡ್ಡವರಆಹಾರ, ಪಾನೀಯ, ಉಡಿಗೆ ತೊಡಿಗೆ, ಆಟದ ವಸ್ತುಗಳೆಲ್ಲವೂ ವಿಜ್ಞಾನದ ಫಲವಾಗಿಯೇ ರೂಪಿತವಾದವುಗಳು. ಮನುಷ್ಯನಿಗೆ ತನ್ನ ಜೀವನದಲ್ಲಿ ಹೆಚ್ಚಿನ ಭದ್ರತೆ, ಸ್ವಾಸ್ಥ್ಯ, ಆರೋಗ್ಯ ಇವಕ್ಕೆ ಅವಕಾಶಗಳನ್ನೊದಗಿಸಿದುದು ವಿಜ್ಞಾನ; ಕೃಷಿಕಾರ್ಯ ಮೊದಲಾದ ಕಸಬುಗಳಲ್ಲಿ, ಶಾರೀರಿಕ ಶ್ರಮವನ್ನು ಕಡಿಮೆ ಮಾಡಿದ ಯಶಸ್ಸೂ ವಿಜ್ಞಾನಕ್ಕೆ ಸಲ್ಲಬೇಕು; ಅಲ್ಲದೆ, ದೈನಿಕ ವ್ಯವಹಾರದ ಎಲ್ಲ ಕ್ರಮಗಳಲ್ಲೂ ವಿಜ್ಞಾನದ ಕೊಡುಗೆಗಳು ಬಂದಲ್ಲಿ, ಒಂದು ವಿಧದಲ್ಲಿ ಪರಿಣಾಮಕಾರಿಯಾಗಿ ಈ ಶತಕವನ್ನೇ ವೈಜ್ಞಾನಿಕ ಶತಕವೆಂದು ಜನ ಕರೆಯಹತ್ತಿದ್ದಾರೆ. ರೇಡಿಯೊ, ಟೆಲಿವಿಜನ್, ಆಕಾಶಯಾನ ಮೊದಲಾದುವನ್ನೆಲ್ಲ ಹಿಂದಿನ ಶತಮಾನಗಳ ಜನ ಕನಸ್ಸಿನಲ್ಲೂ ಎಣಿಸಿದ್ದಿರಲಿಲ್ಲ. ಇವೆಲ್ಲವೂ ಈ ಶತಮಾನದಲ್ಲಿ, ಇದಿಷ್ಟರಲ್ಲೇ ಮನುಷ್ಯನ ವಿಜ್ಞಾನಸಾಧನೆಯ ಫಲವಾಗಿ, ಅವನಿಗೆ ಹಸ್ತಗತವಾಗಿವೆ. ಇವುಗಳೊಡನೆ, ಪ್ರತಿ ಮನುಷ್ಯನ ಜೀವನದಲ್ಲೂ ಹೆಚ್ಚಿನ ಬಿಡುವು ಲಭಿಸುತ್ತಲಿದ್ದು ಅದರ ಸದುಪಯೋಗವನ್ನು ಕಲಾತ್ಮಕ ಚಟುವಟಿಕೆಗಳ ಮೂಲಕ ಮಾಡಿಕೊಳ್ಳುವ ಅವಕಾಶವೂ ಒದಗಿದೆ. ಇಷ್ಟುಮಾತ್ರವೇ ಅಲ್ಲ; ವೈಜ್ಞಾನಿಕ ವಿಚಾರಗಳು ಸಂಗ್ರಹವಾದಂತೆ, ಆ ವಿಚಾರಗಳನ್ನು ಸಂಗ್ರಹಿಸುವ ವಿಶಿಷ್ಟ ಮಾರ್ಗ-ಪದ್ಧತಿಯೊಂದು ಆವಿರ್ಭವಿಸಿದೆ. ಇದನ್ನು ವಿಜ್ಞಾನದ ಪದ್ಧತಿಯೆನ್ನುತ್ತಾರೆ. ವಿಜ್ಞಾನದ ವಿವಿಧ ಶಾಸ್ತ್ರ ಭಾಗಗಳಲ್ಲಿ ಮಾತ್ರವಲ್ಲದೆ, ಎಲ್ಲ ವಿಚಾರಗಳಲ್ಲೂ ಈ ವಿಧಾನವನ್ನು ಇಂದು ಉಪಯೋಗಿಸುತ್ತಲಿರುವ ಕಾರಣ, ಈ ಪದ್ಧತಿಯನ್ನು ಸಾಮಾನ್ಯ ವಿವೇಚನೆಯ ಪದ್ಧತಿ ಎಂದು ಕರೆಯಲಾಗುತ್ತಲಿದೆ. ಇಂಥ ವಿವೇಚನಾಪದ್ಧತಿಯು ಮೂಲತಃ ಭೌತಶಾಸ್ತ್ರದ ಕೊಡುಗೆಯೇ ಆಗಿದೆ; ಶುದ್ಧ ಭೌತಶಾಸ್ತ್ರದ ಕೊಡುಗೆಯಾದ ಈ ಮಾರ್ಗವು ಈ ಶತಮಾನದಲ್ಲಿ ಭೌತಶಾಸ್ತ್ರದ ಅಥವಾ ಇನ್ನಿತರ ಶಾಸ್ತ್ರಗಳ ಇತಿಮಿತಿಯನ್ನು ತೋರಿಸಿ, ಕಳೆದ ಶತಮಾನದ ಅಂತ್ಯದ ತನಕ ಪ್ರಚುರವಾಗಿದ್ದ ಹಲವು ಭಾವನೆಗಳನ್ನು ತೊಲಗಿಸಿ, ತತ್ವಶಾಸ್ತ್ರ ಹಾಗೂ ವಿಜ್ಞಾನಗಳ ನಡುವೆ ಇದ್ದ ಸಂಘರ್ಷವನ್ನು ಕಡಿಮೆ ಮಾಡಹತ್ತಿದೆ. ಹೀಗೆ ಈ ಶತಕದಲ್ಲಿ ಹೊಸ ವಿಚಾರಗಳ ಉಗಮವನ್ನು ನಾವು ಕಾಣುತ್ತಲಿದ್ದೇವೆ. ಭೌತಶಾಸ್ತ್ರವು, ಅನ್ವಿತ ವಿಭಾಗದಲ್ಲಿ ( applied science ) ಅನೇಕ ಉಪಕರಣ ಯಂತ್ರತಂತ್ರಗಳಿಗೆ ಕಾರಣವಾದಂತೆ ಮನುಷ್ಯನ ವಿವೇಚನಾಪದ್ಧತಿಯನ್ನೂ ಸಾಕಷ್ಟು ಬದಲಾಯಿಸಿದ್ದು, ಇನ್ನುಮುಂದೆಯೂ ಹೀಗೆಯೆ ಜನಜೀವನದ ಪ್ರಗತಿಗೆ ಕಾರಣವೆ ? ಇನ್ನೂ ಸ್ಪಷ್ಟವಾಗಿ ತಿಳಿಯದಿರುವ ಅನೇಕ ರಹಸ್ಯಗಳ ಪರಿಶೀಲನೆಗೆ ಸತ್ಯದ ಸ್ಥಾಪನೆಗೆ ಸಹಾಯಕವಾಗಲಿರುವುದೆ ಹೇಗೆ? ಎಂಬುದನ್ನೆಲ್ಲ ಸ್ಥೂಲವಾಗಿ ಪರಿಶೀಲಿಸುವುದೇ ಈ ಚಿಕ್ಕ ಲೇಖನದ ಉದ್ದೇಶ. ಬಹಳ ಹಿಂದಿನ, ಶತಕಗಳ ಮುಸುಕಿನ ಹಿಂದೆ ಅಸ್ವಚ್ಛವೆನಿಸಿದ ವಿಚಾರವನ್ನು ಇಲ್ಲಿ ಪ್ರಸ್ತಾಪಿಸದೆ, ಸುಮಾರು ಇದೇ ೨-೩ ಶತಕಗಳಲ್ಲಿ ಭೌತಶಾಸ್ತ್ರದ ವಿಕಾಸವು ಹೇಗೆ ಮನುಷ್ಯನ ಜ್ಞಾನವನ್ನು ಹೆಚ್ಚಿಸಿದೆ, ಆತನ ಪ್ರಪಂಚವನ್ನು ಹೇಗೆ ರೂಪಿಸಿದೆ ಎಂಬುದನ್ನು ಇಲ್ಲಿ ಪರೀಕ್ಷಿಸುವ.

### ಭೌತಶಾಸ್ತ್ರ ಅದರ ಆರಂಭ

ಭೂಮಿಗೆ ಸಂಬಂಧಿಸಿದ, ನಮ್ಮ ಸುತ್ತಲೂ, ಅನೇಕ ವಸ್ತುಗಳನ್ನು ನಾವು ಪರೀಕ್ಷಿಸುತ್ತೇವೆ. ಆದಿಮಾನವನ ಸುತ್ತಲೂ ಕಲ್ಲು, ಮಣ್ಣು, ಮರಳು ಬಂಡೆ, ಮರ, ಗಿಡ ಮೊದಲಾದುವು ಘನವಸ್ತುಗಳಾಗಿಯೂ ಕೆರೆ, ತೊರೆಗಳ ನೀರು ದ್ರವರೂಪದಲ್ಲೂ ಇನ್ನು ಅದೃಶ್ಯರೂಪದಲ್ಲಿ ತನ್ನ ಅಸ್ತಿತ್ವವನ್ನು ಪ್ರಕಟಿಸುತ್ತಲಿರುವ ಗಾಳಿ, ಇನ್ನಿತರ ಅನಿಲಗಳು ಮೊದಲು ಈತನ ಕುತೂಹಲವನ್ನು ಕೆರಳಿಸಿದ ವಿಷಯಗಳು. ಇವುಗಳೊಂದಿಗೇ, ತಪ್ಪಿದರೆ ತುಸುಮೇ

ಮುಂಚೆ, ಆಕಾಶದಲ್ಲಿನ ವಿವಿಧ ಕಾಯಗಳು, ಸೂರ್ಯ, ಚಂದ್ರ, ನಕ್ಷತ್ರ, ಗ್ರಹಗಳು ಮತ್ತು ಉಲ್ಕೆಗಳೂ ಆತನನ್ನು ಮುಗ್ಧಗೊಳಿಸಿದ್ದು ಇವೆಲ್ಲವುಗಳ ಒಂದು ವಿಚಿತ್ರ ಅಂಶವು— ಅಂದರೆ ಚಾಲನೆಯು ಅತ್ಯಂತ ಸೋಜಿಗವೆನಿಸಿದ ಸಂಗತಿ. ವಸ್ತು ತಾನೂ ಚಲಿಸಬಲ್ಲುದು. ನದಿಯ ನೀರು ಚಲಿಸುತ್ತದೆ. ಬೆಟ್ಟದ ಎತ್ತರದಿಂದ ನೀರು ಹರಿದು ಕೆಳಗೆ ಇಳಿದು ಬರುತ್ತದೆ. ಕೆಳಗಿನಿಂದ ಮೇಲ್ಮಟ್ಟಕ್ಕೆ ಹರಿಯುವುದಿಲ್ಲ. ನೆಲದಿಂದೆತ್ತಿ ಬಿಸುಟ ಕಲ್ಲೊಂದು ಡೊಂಕಾದ ಮಾರ್ಗದಲ್ಲಿ ಚಲಿಸುತ್ತ ಕೆಳಗೆ ಬೀಳುತ್ತದೆ. ಸಾಮಾನ್ಯ ಎಷ್ಟು ಎತ್ತರಕ್ಕೆ ಬಿಸುಟಿದರೂ ಅದು ಹಾಗೆಯೇ ಕೆಳಗೆ ಬೀಳದಿರುವುದಿಲ್ಲ. ಇದೇತಕ್ಕೆ ಇಂಥ ವಕ್ರ ಮಾರ್ಗದಲ್ಲಿ ಚಲಿಸುತ್ತದೆ? ಇಂಥ ಎಲ್ಲ ಸಮಸ್ಯೆಗಳನ್ನು ಮೊದಲು ಉತ್ತರಿಸಲು ಹವಣಿಸಿದ ಶಾಸ್ತ್ರಭಾಗವೇ ಭೌತಶಾಸ್ತ್ರವೆನಿಸಿತು. ಇವೇ ಅಲ್ಲದೆ, ಹರಳು ಹರಳಾಗಿ ಘನರೂಪದಲ್ಲಿ ಸಿಗುವ ಮಂಜುಗಡ್ಡೆಯು ಬಿಸಿಮಾಡಿದಾಗ ಕರಗಿ ನೀರಾಗುತ್ತದೆ, ಮತ್ತೂ ಬಿಸಿಮಾಡಿದಾಗ ನೀರು ಆವಿಯಾಗುತ್ತದೆ.— ಅದೃಶ್ಯವಾಗುತ್ತದೆ, ಇಂಥ ರೂಪಾಂತರಗಳಿಗೆ ಕಾರಣವಾದ ಶಕ್ತಿ ಎಲ್ಲಿಂದ ಒದಗುತ್ತದೆ? ವಸ್ತುಗಳನ್ನು ನೆಲದ ಮೇಲಿಂದ ಎತ್ತುವ, ವಸ್ತುಗಳನ್ನು ನೆಲದ ಮೇಲೆ ಉದ್ದಕ್ಕೂ ಎಳೆಯುವ ಶಕ್ತಿಯಾದರೂ ಇಂಥ ಉಷ್ಣಶಕ್ತಿಯ ರೂಪಾಂತರವಿರಬಹುದೆ? ಅಲ್ಲದೆ ಹಾಗಾದರೆ ಇದೆಂಥ ಶಕ್ತಿ? ಪ್ರಪಂಚದಲ್ಲಿ ಶಕ್ತಿಯು ಎಷ್ಟುರೂಪಗಳಲ್ಲಿ ವ್ಯಕ್ತವಾಗುತ್ತಲಿದೆ? ಈ ಶಕ್ತಿಯನ್ನು ನಮ್ಮ ಉಪಯೋಗದ ಬಗ್ಗೆ ಹೇಗೆ ಅಳವಡಿಸಬಹುದು ಎಂಬಿವೇ ಮೊದಮೊದಲು ಮನುಷ್ಯನನ್ನು ಕೆಣಕಿದ ಪ್ರಶ್ನೆಗಳು. ಅಂತೂ ವಸ್ತುಪ್ರಪಂಚದ ವಿವರಸಂಗ್ರಹದ ಶಾಸ್ತ್ರವಿಭಾಗವಾಗಿ ಭೌತಶಾಸ್ತ್ರವು ಆರಂಭವಾಯಿತು.

ಇದರಲ್ಲಿಯೂ ಮೊದಮೊದಲು ಮನುಷ್ಯನ ಕಲ್ಪನೆಗೇ ಪ್ರಾಧಾನ್ಯವಿತ್ತು. ಹೆಸರಾದ ಬುದ್ಧಿವಂತನೊಬ್ಬ ಹೇಳಿದ ಮಾತುಗಳೆಲ್ಲವೂ ಇತರರಿಗೆ ಪ್ರಮಾಣವೆನಿಸಿದ್ದುವು: ನೂರಾರು ತರ್ಕಗಳ ತನಕವೂ ಗ್ರೀಕ್ ಮೇಧಾವಿ, ಅರಿಸ್ಟಾಟಲ್ ಹೇಳಿದ ಮಾತುಗಳು ಅವನ ನಂತರದ ಜ್ಞಾನಿಗಳಿಗೆ ಪವಿತ್ರವೆನಿಸಿದ್ದುವು. ಅವನ್ನು ಅಲ್ಲಗಳೆಯುವ ಸಾಹಸವನ್ನು ಯಾವನಾದರೂ ತೋರಿದರೆ, ಆತನು ಈ ಎದೆಗಾರಿಕೆಗೆ ತಕ್ಕ ಶಿಕ್ಷೆಯನ್ನೂ ಪಡೆಯುವಂತಿತ್ತು. ಆದರೇನು? ಮುಂದೆ ಗೆಲಿಲಿಯೋನಂಥ ವಿಜ್ಞಾನಿಗಳು ವಿಜ್ಞಾನದ ಪ್ರಗತಿಗೆ ಆಧಾರಸ್ತಂಭವೆನಿಸಿದ ಪ್ರತ್ಯಕ್ಷ, ಪ್ರಯೋಗಮಾರ್ಗವನ್ನು ಭೌತಶಾಸ್ತ್ರಕ್ಕೆ ಕಾಣಿಕೆಯನ್ನಾಗಿತ್ತರು. ಅಂದಿನಿಂದ ಭೌತಶಾಸ್ತ್ರದ ಪ್ರಗತಿಯು ಅತ್ಯಂತ ಉತ್ಕರ್ಷಿತವಾಗಿದೆ ಎನ್ನಲಡ್ಡಿಯಿಲ್ಲ. ಅಲ್ಲದೆ, ಸಂದೇಹಾಸ್ಪದವಿದ್ದ ಅನೇಕ ವಿಚಾರಗಳಲ್ಲಿ, ಪ್ರಯೋಗಗಳಲ್ಲಿ ಪಡೆದ ಫಲಗಳನ್ನೀಕ್ಷಿಸಿ, ನಿರ್ಧಾರದ ಅನುಮಾನಗಳನ್ನು ಸಂಗ್ರಹಿಸುತ್ತ, ನಿಸರ್ಗದ ಅನೇಕ ರಹಸ್ಯಗಳನ್ನು ವಿಶ್ಲೇಷಿಸಬಹುದು ಎಂಬ ವಿಜ್ಞಾನದ ಪದ್ಧತಿಯ ಕೊನೆಯ ಅಂಗವು ಸ್ವೀಕೃತವಾಯಿತೆನ್ನಬಹುದು. ಒಂದೇ ನಿದರ್ಶನದಿಂದ ಈ ಮಾತನ್ನು ವಿವರಿಸಬಹುದು. ಭಾರವಾದ ವಸ್ತುವು ಹಗುರವಾದ ವಸ್ತುವಿಗಿಂತ ಸುಲಭವಾಗಿ, ಅಂದರೆ, ಬೇಗನೇ ಕೆಳಗೆ ಬೀಳುತ್ತದೆ ಎಂಬುದು ಹಿಂದೆ ಸ್ವೀಕೃತವಾಗಿದ್ದ ಭಾವನೆ. ಇದು ತಪ್ಪು; ಎಲ್ಲ ವಸ್ತುಗಳೂ ಏಕಪ್ರಕಾರದ ವೇಗ ಭರದಿಂದ (acceleration) ಭೂಮಿಯತ್ತ ಬೀಳುತ್ತವೆ ಎಂಬುದನ್ನು ನಂಬಲಾರದ ಜನರಿಗೆ, ಪೀಸಾನಗರದ ಕೊತ್ತಳವನ್ನೇರಿ ಎರಡು ವಸ್ತುಗಳನ್ನು ಚೆಲ್ಲಿಗೊಟ್ಟು ಅವು ಏಕಕಾಲದಲ್ಲಿ ನೆಲಕ್ಕೆ ಬೀಳುವುದನ್ನು ತೋರಿಸಿದವನು ಗೆಲಿಲಿಯೋ. ಹಾಗೆಯೇ ಇಳುಕಲೊಂದರ ಮೇಲೆ ಉರುಳಲು ಬಿಟ್ಟ. ಒಂದು ಭಾರ ಮತ್ತೊಂದು ಹಗುರ ವಸ್ತುಗಳು ಏಕಕಾಲದಲ್ಲಿ ಸಮಾನ ದೂರವನ್ನೇ ಅತಿಕ್ರಮಿಸಿದುವು ಎಂಬ ಪ್ರತ್ಯಕ್ಷ ಪ್ರಮಾಣವನ್ನು ಜನರ ಮುಂದಿಟ್ಟು ಗೆಲಿಲಿಯೋ ತನ್ನ ಜೀವಿತಕಾಲದಲ್ಲಿ ಪ್ರಬಲ ವಿರೋಧವನ್ನೆದುರಿಸಬೇಕಾದರೂ ತನ್ನ ನಂತರ ಈ ಹೆಜ್ಜೆಯು ಸಾಧುವಾದುದು ಎಂಬ ಭಾವನೆಯು ಬೇರೂರುವಂತೆ ಮಾಡಿದನು. ಸುಮಾರು ೧೬ ನೆ ಶತಮಾನದ ಅಂತ್ಯದಿಂದ ೧೭ ನೆ ಶತಮಾನದ ಆದಿಯಿಂದ ಈ ಭಾವನೆಯು ವಿಜ್ಞಾನದ ವಿವಿಧ ಭಾಗಗಳಲ್ಲಿಯೂ ಸಮಂಜಸವೆಂದು ಪರಿಗ್ರಹಿಸಲ್ಪಟ್ಟು ತಾತ್ವಿಕ ವಿಚಾರಗಳ ಶುದ್ಧ ವಿಜ್ಞಾನವು---ಮುಖ್ಯ, ಶುದ್ಧ ಭೌತಶಾಸ್ತ್ರವು (pure physics) ಮುಂದರಿಯಲು ಕಾರಣವಾಗಿದೆ.

**ಶುದ್ಧ ಭೌತವಿಜ್ಞಾನದ ಪ್ರಗತಿ :**

ಹೀಗೆ ಮೇಲೆ ಹೇಳಿದಂತೆ, ಸುಮಾರು ೧೭ ನೆ ಶತಮಾನದ ತನಕ ಭೌತಶಾಸ್ತ್ರದಲ್ಲಿನ

ಅನೇಕ ಭಾವನೆಗಳು ಅಸ್ಪಷ್ಟವಾಗಿದ್ದುವು. ವಸ್ತುಗಳ ಚಲನೆಯಲ್ಲಿ ಸರಳಮಾರ್ಗದಲ್ಲಿನ ಚಲನೆ, ವಕ್ರಮಾರ್ಗದಲ್ಲಿನ ಚಲನೆ ನಮ್ಮ (ಏಕಪ್ರಕಾರದ) ವೇಗದ ಚಲನೆ, ಕ್ಷಣ ಕ್ಷಣಕ್ಕೂ ವ್ಯತ್ಯಾಸಗೊಳ್ಳುವ ವೇಗದ ಚಲನೆ ಇವೆಲ್ಲದಕ್ಕೂ ಕಾರಣವೇನು ? ಈ ಕಾರಣ ವಾದರೋ ನಿಸರ್ಗದಲ್ಲಿನ ಆಕಾಶಕಾಯಗಳ ಚಲನವಲನಗಳಿಗೆ ಸಂಬಂಧಿಸಿ ಹೇಗೆ ತನ್ನಂ-ತೆಯೇ ಒದಗುತ್ತದೆ ಎಂಬುದರ ತೀರ್ಮಾನದ ಬಗ್ಗೆ ಅನೇಕ ವಿಚಾರಗಳು, ನ್ಯೂಟನನಂಥ ಮೇಧಾವಿಗಳು ಚಿಂತಿಸಿ ನಿಸರ್ಗದಲ್ಲಿನ ವಸ್ತುಗಳ ಗುರುತ್ವಾಕರ್ಷಣೆಯ ನಿಯಮವನ್ನು ಸ್ವೀಕರಿಸಿದರು. ಇದೇತಕ್ಕೆ ಈ ಗುರುತ್ವಾಕ-ರ್ಷಣೆಯು ಕಂಡುಬರುತ್ತದೆ? ಮಾತ್ರವಲ್ಲದೆ, ಇದೇ ತಕ್ಕ ವಸ್ತುರಾಶಿಯಿದ್ದಲ್ಲಿ ಮಾತ್ರ ವ್ಯಕ್ತವಾಗತಕ್ಕ ಬಲ ವಿಶಾಲವಾಗಿದೆ ಎಂಬ ಪ್ರಶ್ನೆಗಳನ್ನು ಅಂದಿನ ಶಾಸ್ತ್ರಕಾರರೇ ಆಗಲಿ ಬಹುಶಃ ಇಂದಿನ ಶಾಸ್ತ್ರಕಾರರೇ ಆಗಲಿ ವಿವರಿಸಲಶಕ್ತರಾದರೂ ಕೂಡ, ಈ ನಿಯಮದ ಸ್ವೀಕಾರ ಮತ್ತು ನಿಯಮಾನುಸಾರ ಗ್ರಹಗಳ ಗತಿಯ ಪರಿಶೀಲನೆ ದೂರದರ್ಶಕಗಳ ಸಹಾಯದಿಂದ, ಗಣಿತವು ನಿಶ್ಚಯಿಸಿದ ಪಥದಲ್ಲೇ ಇವು (ಈ ಗ್ರಹಗಳು) ಚಲಿಸುತ್ತಲಿವೆಯೋ ಎಂಬುದನ್ನು ಪರೀಕ್ಷಿಸಿ, ಅಲ್ಪ ಸ್ವಲ್ಪ ನ್ಯೂನತೆಗಳಿಗೆ ಹೊಸ ಗ್ರಹಗಳು ಕಾರಣವಾಗಿರಬೇಕು ಎಂದು ಅನುಮಾನಿಸಿದುದಲ್ಲದೆ, ಇಂಥ ನೂತನ ಗ್ರಹಗಳ ಶೋಧಕ್ಕೂ ಕಾರಣವಾದುದು ೧೭ ನೇ ಶತಮಾನದಲ್ಲಿ ನ್ಯೂಟನನು ಪ್ರತಿಪಾದಿಸಿದ ಗುರುತ್ವಾಕರ್ಷಣೆಯ ನಿಯಮವೇ.

ಭೂಮಿಯ ಗುರುತ್ವಾಕರ್ಷಣೆಯು ಅದರ ಮೇಲೆ ಎತ್ತರ ವೇಗಭಾರಕ್ಕೆ ಕಾರಣವಾಗಿದೆ ? ಅದರ ಆಕಾರವು ಈ ವೇಗಚರವನ್ನು ಹೇಗೆ ತುಸು ಹೆಚ್ಚುಕಡಿಮೆ ಮಾಡುತ್ತದೆ ? ಭೂಮಿಯಿಂದ ಮೇಲೆ ಹೋದಂತೆ ಈ ವೇಗಚರವು ಹೇಗೆ ಕಡಿಮೆಯಾಗುತ್ತದೆ? ಭೂಮಿಯ ಹಿಡಿತವನ್ನು ತಪ್ಪಿಸಲು ಎತ್ತರ ಆರಂಭವೇಗದಿಂದ ಒಂದು ವಸ್ತುವನ್ನು ಹೊರಗೆ ಚೆಲ್ಲಬೇಕು ? ಭೂಮಿಯ ಕೃತಕ ಚಂದ್ರನಂತೆ ವಸ್ತುವೊಂದು ಸುತ್ತುವರಿಯಬೇಕಾದರೆ, ಅದನ್ನು ಎಷ್ಟು ವೇಗದಿಂದ ಚೆಲ್ಲಬೇಕು ಎಂಬ ಈ ವಿವರಗಳನ್ನೆಲ್ಲ ಭೌತಶಾಸ್ತ್ರಾಧಾರದಿಂದ ಈ ೨ ಶತಕಗಳಷ್ಟು ಹಿಂದೆಯೂ ಲೆಕ್ಕಹಾಕಿದ್ದರೆಂದರೆ ನಿಮಗೆ ಆಶ್ಚರ್ಯವಾಗುವದಿಲ್ಲವೆ ? ಇಂಥ ವೇಗಗಳ ಸಾಧನೆಯನ್ನಾದರೂ ಮಾಡಿದುದು ಇದೀಗ ನಾಲ್ಕಾರು ಸಂವತ್ಸರಗಳಿಂದ ಎಂಬ ಒಂದೇ ಮಾತಿನಿಂದ ಭೌತಶಾಸ್ತ್ರದ ಅನ್ವಿತ ವಿಭಾಗವು, (Applied Physics) ಎಷ್ಟು ಕಾಲ ಎಷ್ಟು ಶತಮಾನಗಳತನಕ— ಹಿಂದುಳಿಯಿತು ಎಂದು ನಿಮಗನಿಸಬಹುದು. ಆದರೆ ಇದಕ್ಕೂ ಕಾರಣವಿಲ್ಲದಿಲ್ಲ !

ಬಹಳ ವಿಚಾರಗಳನ್ನು ಈ ಚಿಕ್ಕ ಲೇಖದಲ್ಲಿ ಪ್ರಸ್ತಾಪಿಸಲಾಗದಿದ್ದರೂ ಇನ್ನೊಂದು ವಿಚಾರವನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ. ವಸ್ತುಗಳ ರಚನೆಗೆ ಮೂಲತಃ ಕಾರಣವಾದ ಪರಮಾಣುಗಳನ್ನು ಕುರಿತ ವಿಚಾರವಿದು. ಈಗ ಸುಮಾರು ೨ ಸಾವಿರ ವರ್ಷಗಳ ಹಿಂದೆ ಲ್ಯೂಸಿಪಸ್ ಎಂಬ ಗ್ರೀಕ್ ದಾರ್ಶನಿಕನೊಬ್ಬ, ವಸ್ತುವು, ಯಾವುದೇ ಇರಲಿ, ಅದು ಅವಿಭಾಜ್ಯವಾದ ಸೂಕ್ಷ್ಮಕಣಗಳೆನಿಸಿದ ಪರಮಾಣುಗಳಿಂದ ಸೃಷ್ಟಿಯಾಗಿದೆ. ಒಂದು ಪರಮಾಣು, ಹಲವು ಪರಮಾಣುಗಳು (ಎಲ್ಲವೂ ಏಕಪ್ರಕಾರದವೇ ಆಗಬೇಕೆಂಬ ನಿಯಮವೇನೂ ಇಲ್ಲ) ಸೇರಿ ಪದಾರ್ಥದ ದೊಡ್ಡ ಕಣಗಳಾಗುತ್ತವೆ ಎಂಬ ಭಾವನೆಯನ್ನೂ ನ್ಯೂಟನ್, ಡಾಲ್ಟನ್ ಮೊದಲಿಗರು ಸಮರ್ಥಿಸಿದರೂ ಇದರ ಸತ್ಯಸ್ಥಾಪನೆಯು ನಡೆ

ದುದು ಇದೀಗ ಈ ಎರಡು ಮೂರು ವರ್ಷಗಳೊಳಗೆ ಅಷ್ಟೆ. ಅಲ್ಲದೆ, ಕಳೆದ ಶತಮಾನದ ಅಂತ್ಯದಲ್ಲಿ ಪರಮಾಣುವು ತಾನು ಅತ್ಯಂತ ಸೂಕ್ಷ್ಮವೇ ಇದ್ದರೂ ಚಿಕ್ಕ ಸೌರವ್ಯೂಹ ಸದೃಶವಾದ ಲೋಕವೊಂದನ್ನು ತೋರುತ್ತಲಿದೆ, ಅದರಲ್ಲಿನ ಸೂರ್ಯಸದೃಶವಾದ ಕೇಂದ್ರ ಭಾಗವು— ಪರಮಾಣು ಬೀಜವು— ಇದ್ದು ಇದರ ಸುತ್ತಲೂ ವಿವಿಧ ಕಕ್ಷೆಗಳಲ್ಲಿ ಋಣವಿ-ದ್ಯುತ್ಕಣಗಳು ಇಲೆಕ್ಟ್ರೊನುಗಳು(electrosn) ವೇಗವಾಗಿ ಸುತ್ತುವರಿಯುತ್ತಲಿವೆ ಎಂಬ ಸಿದ್ಧಾಂತವು ಈ ಐವತ್ತು ವರ್ಷಗಳ ಹಿಂದೆಯೇ ವಿವಿಧ ಪ್ರಯೋಗಗಳ ಫಲವಾಗಿ ಸ್ವೀಕರಿಸಲ್ಪಟ್ಟಿತ್ತು. ಅತ್ಯಂತ ಭಾರವಾದ ಪರಮಾಣು ಬೀಜಗಳಿಂದ ನೈಸರ್ಗಿಕವಾಗಿ, ಸಾಮಾನ್ಯ ಪರಮಾಣುಗಳಲ್ಲಿ ಉಳ್ಳ ಇಲೆಕ್ಟ್ರಾ-ನುಗಳು (ಬೀಜಕಣಗಳು), ಹೈಡ್ರೊಜ-ನಿನ ಬೀಜಗಳು. (ಪ್ರೊಟಾನುಗಳು), ಹೀಲಿಯಮ್ ಬೀಜಗಳು (ಆಲ್ಫಾಕಣಗಳು) ಅಲ್ಲದೆ, ಅತ್ಯಂತ ಶಕ್ತಿಯುತವಾದ ಗಾಮಾ ವಿಕೀರ್ಣಗಳು ಹೊರಹೊಮ್ಮುತ್ತಲಿವೆ. ಹೀಗೆ ಪರಮಾಣು ಕೇಂದ್ರದಲ್ಲಿ ಶಕ್ತಿಯು ಪ್ರಚ್ಛನ್ನವಾಗದೆ, ಈ ಶಕ್ತಿಯನ್ನೊದಗಿಸಿಕೊಳ್ಳಬಲ್ಲವೆ? ಪರಮಾಣುವಿನ ಕೇಂದ್ರಸ್ವರೂಪವನ್ನು ಬಲಾತ್ಕಾರದಿಂದ—ಹೊರಗಿನಿಂದ ಕಣಗಳನ್ನೋ ಕಿರಣಗಳನ್ನೋ ಪ್ರಯೋಗಿಸಿ ಬದಲಾಯಿಸಬಹುದೆ? ಇದಕ್ಕೆ ಅಭ್ಯಂತರಗಳೇನಾದರೂ ಇವೆಯೆ? ಎಂಬ ಎಲ್ಲ ವಿಚಾರಗಳಿಗೂ ಈ ಶತಮಾನವು—ಇಷ್ಟರ ವರೆಗಿನ ವಿವಿಧ ವಿಜ್ಞಾನಿಗಳು ಜಗದಾದ್ಯಂತವೂ ನಡೆಸಿದ ಪ್ರಯೋಗಗಳು..ಉತ್ತರಗಳನ್ನು ದೊರಕಿಸಿದೆ. ಪರಮಾಣು ರಚನೆಯಲ್ಲಿ ಮೇಲೆ ನಮೂದಿಸಿದ ಸೂಕ್ಷ್ಮಕಣಗಳಲ್ಲದೆ ಇನ್ನೂ ಹಲವು ತರದ ಸೂಕ್ಷ್ಮತಮ ಕಣವಿಶೇಷಗಳಿವೆ. ಒಂದೇ ಮೂಲಧಾತುವು ಹಲವು ರೂಪಗಳಲ್ಲಿರಬಹುದು, ಅಂದರೆ ಹೊರರಚನೆ—ಇಲೆಕ್ಟ್ರಾನುಗಳ ಸಂಖ್ಯೆ ಮತ್ತು ಹಂಚಿಕೆ—ಮತ್ತು ಬೀಜದಲ್ಲಿನ ಪ್ರೊಟಾನುಗಳ ಸಂಖ್ಯೆ ಒಂದೇ ಇದ್ದರೂ ಒಟ್ಟು ಪರಮಾಣು ತೂಕವು ಪ್ರತ್ಯೇಕವಾಗಿಯುಳ್ಳ ಐಸೊಟೋಪುಗಳ ರೂಪದಲ್ಲಿರಬಹುದು ಎಂಬಿತ್ಯಾದಿ ವಿವರಗಳು ಸಂಗ್ರಹವಾದುವಲ್ಲದೆ ಸೂಕ್ಷ್ಮತಮವೆಂದು ಪ್ರತಿಪಾದಿಸಲ್ಪಟ್ಟ ಇಲೆಕ್ಟ್ರಾನ್ ಕಣವಾಗಿರಲೂಬಹುದು. ತರಂಗರೂಪದಲ್ಲಿರಲೂಬಹುದು ಎಂದೂ ಸಿದ್ಧವಾಗಿದೆ. ಇಲೆಕ್ಟ್ರಾನಿನ ನಿಜವಾದ ಸ್ವರೂಪವೆಂತಹುದು, ಇದು ಕಣವೆ 'ಇಲ್ಲ' ತರಂಗರೂಪದಲ್ಲಿ ವ್ಯಕ್ತವಾಗುವ ಶಕ್ತಿಯೆ? ಎಂಬ ಪ್ರಶ್ನೆಯ ಉತ್ತರವು ಅನಿಶ್ಚಿತತೆಯ ರಾಜ್ಯಕ್ಕೆ ಸಂಚಾರ್ಯತೆಯೆಡೆಗೆ ನಮ್ಮನ್ನೊಯ್ಯುತ್ತದೆ. ಇಷ್ಟುಮಾತ್ರವೇ ಅಲ್ಲದೆ, ಈ ಸೂಕ್ಷ್ಮಾನು-ಸೂಕ್ಷ್ಮ ಪರಮಾಣು ರಾಜ್ಯದಲ್ಲಿನ ಇಲೆಕ್ಟ್ರಾ-ನುಗಳಾಗಲಿ, ತಮ್ಮ ವರ್ತುಲಚಲನೆಯೊಡನೆ ಭ್ರಮಣವನ್ನು ಪಡೆದಿರುತ್ತವೆ. ಇದು ಕೂಡ ಪರಮಾಣುವಿನ ಲಕ್ಷಣಗಳಿಗೆ ಕಾರಣವಾಗುತ್ತದೆ. ಅಲ್ಲದೆ ಪರಮಾಣುವೊಂದು ಸ್ಫುರಣೆಗೊಂಡು ವಿಕೀರ್ಣಗಳನ್ನು ತನ್ನ ಸುತ್ತಲೂ ಚೆಲ್ಲುವಾಗ ಇಲೆಕ್ಟ್ರಾನುಗಳು ಒಂದು ಕಕ್ಷೆಯಿಂದ ಇನ್ನೊಂದಕ್ಕೆ, ಒಂದರ ಲೂಪ ಕಕ್ಷೆಯಿಂದ ಇನ್ನೊಂದಕ್ಕೆ ಹಾರುತ್ತಲಿರುತ್ತವೆ. ಈ ಎಲ್ಲ ವಿಚಾರಗಳನ್ನು ಪರಮಾಣು ಜ್ಞಾನವು ಸ್ಥಾಪಿಸಿದೆ. ಇದು ಮಾತ್ರವೇ ಅಲ್ಲದೆ, ಸಾಪೇಕ್ಷ ಸಿದ್ಧಾಂತವು ವಸ್ತುವನ್ನು ಪೂರ್ತಿ ನಾಶಗೊಳಿಸಿ ಶಕ್ತಿಯನ್ನು ಪಡೆಯಬಹುದೆಂದೂ ಶಕ್ತಿಯನ್ನು ದಟ್ಟಣಿಸಿ (ಸಾಂದ್ರೀಕರಿಸಿ) ವಸ್ತುವನ್ನು ಪಡೆಯಬಹುದೆಂದೂ ಸಾರಿದೆ. ಇದನ್ನಾದರೂ ಸುಮಾರು ೪೦ ವರ್ಷಗಳನಂತರ ಪರಮಾಣು ಬಾಂಬಿನ ರಚನೆಯ ಮೂಲಕ ಸತ್ಯವೆಂದು ಪ್ರಮಾಣೀಕರಿಸಲಾಗಿದೆ. ಹೀಗೆಯೇ ನಕ್ಷತ್ರಗಳಾಗಲಿ, ನಮ್ಮ ಸೂರ್ಯನೇ ಆಗಲಿ ಶಕ್ತಿಯನ್ನೊದಗಿಸುವುದರ ಸತ್ಯವನ್ನು, ರಹಸ್ಯವನ್ನು ಭೌತಶಾಸ್ತ್ರಜ್ಞರು ಒದಗಿಸಿಕೊಂಡಿದ್ದಾರೆ, ಅಂದರೆ ಪ್ರಕೃತಿಯ ಅನೇಕ ರಹಸ್ಯಗಳನ್ನು ವಿಜ್ಞಾನಿ ಭೇದಿಸಿದ್ದಾನೆ. ಇಷ್ಟೊಂದು ಮಾತ್ರಕ್ಕೆ ತಿಳಿಯಲಿರುವದನ್ನೆಲ್ಲ ತಿಳಿದಾಯಿತು ಎನ್ನಲಿಕ್ಕಲ್ಲ. ಇನ್ನೂ ಎಷ್ಟೋ ವಿಚಾರಗಳು ಇವೆ. ಶುದ್ಧಶಾಸ್ತ್ರಗಳ ವಿವೇಚನೆಗೆ ಇವು ಎಟಕುವುವುಗಳೋ, ಇಲ್ಲವೋ ಎಂದು ಈಗ ಹೇಳಲಾರೆವು. ಕಾರಣ, ಅಸಂಭವವೆನ್ನಲಾದ ಎಷ್ಟೋ ವಿಚಾರಗಳು ಇದೀಗ ಸಾಧ್ಯವಾಗಿರುವ ನಿಮಿತ್ತ ಭವಿಷ್ಯವನ್ನು ಯಾವ ವಿಜ್ಞಾನಿಯೂ ನುಡಿಯಲಾರ. ಆದರೂ ಭೌತಶಾಸ್ತ್ರದ ತಾ-ತ್ವಿಕ ನಿರ್ಣಯಸಿದ್ಧಾಂತಗಳಲ್ಲಿ ಅನೇಕ ವೇಳೆ ನಾವು ಒಂದುತರದ ಅನಿಶ್ಚಿತತೆಯನ್ನು ಎದುರಿಸಬೇಕಾಗಿದೆ. 'ಇದಮಿತ್ಥಂ' ಎಂದು ಹೇಳಬಹುದಾದ ವಿಚಾರಸರಣಿ ನಮಗೆ ಹೊಳೆಯುವುದಿಲ್ಲ, ಹೊಳೆಯಲಾರದೇನೋ ಎನಿಸುತ್ತದೆ ಎಂದೂ ಹಲವು ಭೌತಶಾಸ್ತ್ರಜ್ಞರು (ಬ್ರಿಜ್‌ಯೇನ್) ಹೇಳುತ್ತಲಿದ್ದಾರೆ. "ಅಂದರೆ ಸೂಕ್ಷ್ಮಪ್ರಪಂಚದ, ಹಾಗೆಯೇ ಬೃಹತ್ಪ್ರಪಂ-ಚದ ವ್ಯಾಪಾರಗಳ ಸಮಗ್ರ ಮತ್ತು ನಿಖರವಾದ ಅಭ್ಯಾಸಕ್ಕೆ ಒಂದು ವಿಶಿಷ್ಟ ಗತಿಯೋ ಮಿತಿಯೋ ಇದ್ದಂತೆ ಭಾಸವಾಗುತ್ತಲಿದೆ. ಇದು ವಿಶ್ವವೊಡ್ಡುವ ದೌರ್ಬಲ್ಯವಲ್ಲ. ಅಂಥ ಜಟಿಲ ರಚನೆಯನ್ನರಿತುಕೊಳ್ಳಲು ನಮ್ಮ ವಿಧಾನಗಳು, ಉಪಕರಣಗಳು ಅಶಕ್ತವಾಗಿವೆ. ತಿಳಿಯಬಹುದಾದುದನ್ನಲ್ಲಿ ಇಷ್ಟರಲ್ಲೇ ನಾವು ತಿಳಿಯುವೆವು. ಇದಕ್ಕಿಂತ ಮುಂಬರಿಯುವುದು ಅಸಾಧ್ಯ, ಮುಂಬರಿದರೆ ಉಳಿದೆಲ್ಲವೂ ನಮಗೆ ಜ್ಞಾನಾತೀತ (truly neffable)" ಇವು 'ಭೌತಶಾಸ್ತ್ರದ ತಾತ್ವಿಕ ಸೂಚನೆಗಳು' ಎಂಬ ಗ್ರಂಥದಲ್ಲಿ ಬ್ರಿಜ್‌ಯೇನ್ ಬರೆದ ಮಾತುಗಳು. ತುಂಬ ಅಧಿಕಾರವಾಣಿಯಿಂದ ಬರೆದ ಮಾತುಗಳಾದರೂ ಮುಂದೆ ಮತ್ತು ಹೆಚ್ಚಿನ ಜ್ಞಾನವು ಸಂಗ್ರಹವಾಗಬಹುದಲ್ಲವೆ ಎಂದು ಅನೇಕರಿಗೆ ಅನಿಸುವುದಿದೆ. ಆದರೆ ಇಲ್ಲಿ ಡಿಂಗಲ್ Dingle) ಹೇಳುವ ಮಾತನ್ನು ಅವಶ್ಯ ನೆನಪಿಗೆ ತಂದುಕೊಳ್ಳಬಹುದು. "ಸರ್ವಸ್ವವನ್ನು ತಿಳಿದುಕೊಳ್ಳಬಹುದೆಂಬ ವಿಜ್ಞಾನದ ಗುರಿಯು ತಪ್ಪುಗುರಿ. ಎಲ್ಲವನ್ನೂ ನಾವು ಖಂಡಿತ ತಿಳಿದುಕೊಳ್ಳಲಾರೆವು. ಎಲ್ಲದಕ್ಕೂ ಕಾರ್ಯ-ಕಾರಣ ಸುಸಂಬದ್ಧವಾದ ನಿಯಮಗಳಿಲ್ಲ. ಹೊಸ ಹೊಸ ಅನುಭವಗಳ ಮೇರೆಗೆ ನಮ್ಮ ಜ್ಞಾನವು ಹೆಚ್ಚು ಹೆಚ್ಚು ವ್ಯಾಪಕವಾಗಬಹುದು".

## ಭೌತಶಾಸ್ತ್ರದ ಅನ್ವಿತ ವಿಭಾಗದ ಪ್ರಗತಿ

ಇಷ್ಟರತನಕ ಶುದ್ಧಶಾಸ್ತ್ರದ ಭಾಗವನ್ನು ಕುರಿತು ಮಾತನಾಡಿದ್ದರೆ, ಈಗ ಅನ್ವಿತ ವಿಭಾಗವನ್ನು ಮತ್ತೂ ಸ್ಥೂಲವಾಗಿ ಪ್ರಸ್ತಾಪಿಸುತ್ತೇನೆ. ಮನುಷ್ಯನ ನಿತ್ಯ ಜೀವಿತದಲ್ಲಿ ಆತನ ಕಾಯಕ ಶ್ರಮವನ್ನು ಕಡಿಮೆಮಾಡುವದೆ, ಮತ್ತು ಮುಂದೆ ಅವನ ಜ್ಞಾನೇಂದ್ರಿಯಗಳ ಸೂಕ್ಷ್ಮತೆಯನ್ನು ಹೆಚ್ಚಿಸಲು ಆತ ಅನೇಕ ಉಪಕರಣಗಳನ್ನು ರಚಿಸಿಕೊಂಡಿದ್ದಾನೆ. ಅನೇಕ ಸಾಧನಗಳನ್ನು ಮಾಡಿಕೊಂಡಿದ್ದಾನೆ. ಇವೆಲ್ಲವುಗಳ ರಚನೆಗೆ ಶುದ್ಧ ಭೌತಶಾಸ್ತ್ರದ ನಿಯಮವೊಂದು ಕಾರಣವಿದ್ದರೂ ಅದರ ರಚನೆಯಲ್ಲಿ ಬಂದ ಎಡರು ತೊಡರುಗಳನ್ನೆಲ್ಲ ಎದುರಿಸಿ, ಉದ್ದೇಶಸಾಫಲ್ಯದ ಬಗ್ಗೆ ಮನುಷ್ಯ ರಚಿಸಿಕೊಂಡ ಯಂತ್ರಗಳೂ ಅಸಂಖ್ಯವಿವೆ. ಇಂದಿನಿಂದ ಹಿಂದೆ ನಾವು ಚರಿತ್ರೆಯಲ್ಲಿ ಸಾಗಿದರೆ, ನಮಗೆ ಎಂಥ ವಿಚಿತ್ರ ಯಂತ್ರಗಳೆಲ್ಲ ಮನುಷ್ಯನಿಂದ ರಚಿ-ಸಲ್ಪಟ್ಟಿವೆ. ಅವು ಎಷ್ಟು ಸಂಕೀರ್ಣ ರಚನೆಯುಳ್ಳವುಗಳಾಗಿವೆಎಂಬುದು ತಿಳಿಯದಿರದು. ಹಾಗೆಯೇ ತೀರಹಿಂದೆ ಅತ್ಯಂತ ಸರಳ ರಚನೆಯುಳ್ಳ ಸುಲಭ ಯಂತ್ರಗಳನ್ನೇ ಮನುಷ್ಯ ರಚಿಸಿರುತ್ತ ತನ್ನ ಅವಶ್ಯಕತೆಗಳನ್ನು ನೀಗಿಸಿಕೊಂಡುದನ್ನು ಕಾಣುತ್ತೇವೆ.

ಅತ್ಯಾಧುನಿಕ ಜಗತ್ತಿನಲ್ಲಿನ ಸಾಧನಗಳಾ

ನವು? ಸ್ಪುಟ್ನಿಕುಗಳು, ವ್ಯಾನ್ಗಾರ್ಡ್‌ಗಳು ಇವೆಲ್ಲವೂ ಭೂಮಿಯ ಸುತ್ತಲೂ ಸುಮಾರು ೧॥ ಗಂಟೆಗಳಿಗೊಮ್ಮೆ ಸುತ್ತುವರಿಯುತ್ತಲಿವೆ. ಇವೆಲ್ಲವುಗಳಲ್ಲಿ ಸ್ವತಂತ್ರವಾಗಿಯೇ ವಾರ್ತೆಗಳನ್ನು ಸಂಗ್ರಹಿಸುವ, ಚಿತ್ತರಿಸುವ ಇಲೆಕ್ಟ್ರಾನಿಕ್ ಉಪಕರಣಗಳಿವೆ. ಅನೇಕ ವೇಳೆ ಕೆಲವೇ ಘ. ಅಡಿಜಾಗದೊಳಗೆ ಸಹ ಸ್ವಾಧಿಕ ಉಪಕರಣಗಳಿದ್ದು ಇವೆಲ್ಲವೂ ತಂತಮ್ಮ ಕಾರ್ಯನಿರ್ವಹಣವನ್ನು ಅತ್ಯಂತ ಚಮತ್ಕಾರವಾಗಿ ಚಾಚೂ ತಪ್ಪದೆ ಮಾಡುತ್ತಿರುವುವು. ಅನೇಕ ವೇಳೆ ಮನುಷ್ಯರ ಕೂಟದಲ್ಲಿ ಇಂಥ ಶಿಸ್ತು, ಪರಸ್ಪರಾಧೀನತೆಗಳಿರಬಾರದೆ? ಎನ್ನುವಷ್ಟರ ಸೂಕ್ಷ್ಮತೆಯಿಂದ ಇವು ಕೆಲಸ ಮಾಡುತ್ತಲಿರುತ್ತವೆ. ಸದ್ಯದಲ್ಲೇ, ಇವೆಲ್ಲವೂ ತೂಗುವ ವೇಧಶಾಲೆಗಳಾಗಿ ಪರಿಣಮಿಸಿ, ಈ ದಶಕವು ದಾಟುವಷ್ಟರಲ್ಲಿ ಭೂಮಿಯ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ವಾರ್ತೆಯನ್ನು ಕಳುಹುವ ಕ್ರಮವು, ಟೆಲಿವಿಜನ್ ವ್ಯವಸ್ಥೆಯು ಹೊಸ ರೂಪವನ್ನು ತಾಳಲಿರುವುದು ಎನ್ನುವುದರಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆ ಇದ್ದಂತಿಲ್ಲ.

ಇದಿಷ್ಟರಲ್ಲೇ ನೂರಾರು ಬಾರಿ, ೩ ದಿನಗಳಿಗೂ ಮಿಕ್ಕಿ ಆಕಾಶಯಾನ ಮಾಡಿ ಈರ್ವರು ಭೂಮಿಗೆ ಸುರಕ್ಷಿತವಾಗಿ ಹಿಂದೆರಳಿರುತ್ತಾರೆ. ಹೀಗಿದ್ದ ಬಳಿಕ ನಮ್ಮ ಲೋಕದ ಮಂದಿ ಇನ್ನು ಹತ್ತು ವರ್ಷಗಳಲ್ಲಿ ಚಂದ್ರನಲ್ಲಿಗೋ, ಮಂಗಳನಲ್ಲಿಗೋ, ಶುಕ್ರನಲ್ಲಿಗೋ ಹೋಗಿ ಹಿಂದಿರುಗಲಾರರೆ? ಎನಿಸುವುದು ಸಹಜವೆ? ಇಂಥ ಯೋಜನೆಗಳು ಕಾರ್ಯರೂಪಕ್ಕೆ ಬರಬೇಕಾದರೆ ಯಂತ್ರಜಗತ್ತಿನಲ್ಲಿ ವಿವಿಧ ಉಪಕರಣಗಳ ರಚನೆಯಲ್ಲಿ, ರಾಕೆಟ್ಟುಗಳಲ್ಲಿ ಉಪಯೋಗಿಸಲ್ಪಡುವ ಇಂಥವುಗಳಲ್ಲಿ ಇನ್ನು ಹೆಚ್ಚಿನ ಸುಧಾರಣೆ ಅತ್ಯವಶ್ಯ. ಅಂಥ ಸುಧಾರಣೆಗಳನ್ನು ನಾವು ಭೌತ, ರಸಾಯನ ಶಾಸ್ತ್ರಜ್ಞರಿಂದಲೂ ಹಾಗೆಯೇ ಇವರ ಅನುಮಾನಗಳನ್ನು ಕಾರ್ಯರೂಪಕ್ಕೆ ತರಬಲ್ಲ ವಾಸ್ತುಶಾಸ್ತ್ರಜ್ಞ ಹಾಗೂ ತಂತ್ರಜ್ಞರಿಂದಲೂ ಪ್ರತೀಕ್ಷಿಸಬಹುದು.

ಇದೀಗಲೇ ಪರಮಾಣು ಕುಲಿಮೆಗಳು ಅನೇಕ ರಾಜ್ಯಗಳಲ್ಲಿ ಸ್ಥಾಪಿತವಾಗಿದ್ದು ಶಕ್ತಿಯನ್ನೊ ಐಸೋಟೋಪುಗಳನ್ನೋ ಒದಗಿಸುತ್ತಲಿವೆ. ಜಗತ್ತಿನ ನೈಸರ್ಗಿಕ ಇಂಧನಗಳಲ್ಲಿ ಬರಿದಾಗುವ ವೇಳೆ ಅಂದರೆ ಮುಂದಿನ ಶತಮಾನವು ಕಾಲಿಡುವಷ್ಟರಲ್ಲಿ ಪ್ರಪಂಚದ ಜನ ಪರಮಾಣುಶಕ್ತಿಯನ್ನೇ ಅವಲಂಬಿಸಬೇಕಾದ ದಿನವು ಖಂಡಿತವಾಗಿಯೂ ಬಂದೀತು. ಈ ಶಕ್ತಿಯ ಸಿದ್ಧಿಯ ಶ್ರಮವೋ ತುಸು ಅಪಾಯಕರವಿದೆ. ಇಲ್ಲಿನ ಅಪಾಯುಗಳನ್ನು ತೊಲಗಿಸಿ, ಸುಲಭವಾಗಿ ನಮಗೆ ಬೇಕಾದ ಪರಿಮಾಣದಲ್ಲಿ ಶಕ್ತಿಯನ್ನೊದಗಿಸುವ ಸ್ಥಾಪರಗಳನ್ನು ಜಗದಾದ್ಯಂತವೂ ರಚಿಸಬೇಕಾಗಬಹುದು. ಈ ಬಗ್ಗೆ ಶುದ್ಧ ವಿಜ್ಞಾನಿಗಳು ಶೋಧಗಳನ್ನಾಧರಿಸಿ ತಕ್ಕ ಬದಲಾವಣೆಗಳನ್ನು ಸೂಚಿಸಿ, ತಂತ್ರಶಾಸ್ತ್ರಜ್ಞರು ಕಾರ್ಯಪ್ರವೃತ್ತರಾಗಬಲ್ಲರು ಎಂಬ ಭರವಸೆಯನ್ನು ನಾವು ಕಟ್ಟಿಕೊಳ್ಳಬಹುದು; ಕಾರಣ, ಸುಮಾರು ಈ ಇನ್ನೂರು ಮುನ್ನೂರು ವರ್ಷಗಳಲ್ಲಿ ಎಷ್ಟರ ಶುದ್ಧ ವೇಗದಿಂದ ಭೌತಶಾಸ್ತ್ರದ ಕೊಡುಗೆಗಳನ್ನವಲಂಬಿಸಿ ಯಂತ್ರಗಳ ಸ್ಥಾಪನೆಯಾಗಿವೆ, ತಂತ್ರ ಮಾರ್ಗಗಳ ಶೋಧವಾಗಿದೆ ಎಂಬುದೇ ಸಾಕ್ಷಿಯನ್ನು ಹೇಳುತ್ತಲಿದೆ. ಇಂದಿನ ಕೃತಕ ಚಂದ್ರರು, ಸ್ವಯಂಚಾಲಿತ ಗುಣಕಗಳು, ನಿರ್ದೇಶಗಳು, ರಾಕೆಟ್ಟುಗಳು, ಜೆಟ್ ವಿಮಾನಗಳು, ಟೆಲಿವಿಜನ್, ರೇಡಿಯೋ, ರೇಡಾರ್, ಇಲೆಕ್ಟ್ರಿಕ್ ಟ್ರೈನ್‌ಗಳು, ಟ್ರಾಮ್‌ಗಳು, ನೆಲದ ಇತರ ವಾಹನಗಳು, ಜಲದಲ್ಲಿ ಮೇಲ್ಭಾಗದಲ್ಲಿಯೂ ಕೆಳಭಾಗದಲ್ಲಿಯೂ ವೇಗವಾಗಿ ಓಡಬಲ್ಲ ವಾಹನಗಳು, ಇವೆಲ್ಲವೂ ಹೆಚ್ಚೆಂದರೆ ೭೦ ವರ್ಷ

ಗಳ ಇತ್ತೀಚೆಗಿನ ಶೋಧಗಳು. ಈ ೭೦-೮೦ ವರ್ಷಗಳ ಹಿಂದೆ ಇವುಗಳ ವಿಚಾರ ಕಾಲ್ಪನಿಕ ಕಾದಂಬರಿಗಳಲ್ಲೆ ಮಾತ್ರವೇ ಓದಬಹುದಿತ್ತೋ ಏನೋ. ಇಷ್ಟು ತೀವ್ರವಾಗಿ ಮಾನವನ ಬಯಕೆಗಳು ಕೈಗೂಡಿವೆ. ಇವೆಲ್ಲವಕ್ಕೂ ಹಿಂದಿನ ಶತಮಾನಗಳಲ್ಲಿದ್ದ ಉಗಿಯಂತ್ರ, ಪಂಪುಗಳು, ವಿದ್ಯುತ್ ಸ್ಥಾವರಗಳು ಮೊದಲಾದವುಗಳಿಗೂ ಮನುಷ್ಯನ ಕುತೂಹಲ ಮತ್ತು ಆವಶ್ಯಕತೆಗಳೇ ಕಾರಣವಾಗಿದ್ದುವು. ಹಾಗೆಯೇ ಆವಶ್ಯಕತೆಗಳ ಒತ್ತಡದಿಂದ, ಹೊಸತನ್ನು ಧಿಕ್ಕರಿಸುವ ಹುಮ್ಮಸ್ಸಿನ ಕಾರಣದಿಂದ ಮುಂದೆ, ಮುಂದಿನ ದಶಕಗಳಲ್ಲಿ, ತುಂಬ ಅದ್ಭುತರಚನೆಗಳು, ಉಪಕರಣಗಳು, ಮನುಷ್ಯನ ಸಾಹಸದ ಹೆಗ್ಗುರುತುಗಳಾಗಿ ಕಂಡುಬರಲಿವೆ ಎಂಬುದನ್ನು ಧೈರ್ಯವಾಗಿ ಹೇಳಬಹುದು.

**ಭೌತಶಾಸ್ತ್ರದ ಭವಿಷ್ಯದ ಗರ್ಭದಲ್ಲೇನಿರಬಹುದು ?**

ತಾಸಿಗೆ ನೂರು ಮೈಲಷ್ಟು ದೂರ ಓಡಬಲ್ಲ ಮನುಷ್ಯ ಈಗಲೀಗ ತಾಸು ಒಂದರ ಹದಿನೆಂಟು ಸಾವಿರ ಮೈಲು ವೇಗದಲ್ಲಿ ಚಲಿಸಿ ಭೂ-ಪ್ರದಕ್ಷಿಣೆ ಮಾಡಿ ಹಿಂದಿರುಗಿದ್ದಾನೆ. ಆಕಾಶಯನವು ಹಿಂದಿನ ಎರಡು ಶತಕಗಳಲ್ಲಿನ ಸಮುದ್ರಯಾನದಷ್ಟೇ ಸುಲಭವಾಗಿಯೂ ಸುಗಮವಾಗಿಯೂ ಆಗಬಹುದು ಎಂಬದು ಈ ಭಾಗದಲ್ಲಿ ನಾವು ಸುಲಭವಾಗಿಯೂ ಧೈರ್ಯವಾಗಿಯೂ ಹೇಳಬಹುದಾದ ಭವಿಷ್ಯ ನುಡಿ.

ಇಂಥ ಕೃತಕಚಂದ್ರರ ಸಹಾಯದಿಂದ, ಸ್ಪಷ್ಟವಾದ, ಶೀಘ್ರವಾದ ವಾರ್ತಾವ್ಯವಸ್ಥೆ (ಜಗತ್ತಿನ ಉದ್ದಗಲಕ್ಕೂ), ಹವೆಯ ವೈಪರೀತ್ಯಗಳ ಮುನ್ಸೂಚನೆ, ಹವೆಯ ನಿಯಂತ್ರಣ, ಮಳೆ-ಮೋಡಗಳ ನಿರ್ಮಾಣ, ಮಳೆಗರೆಯುವಿಕೆ ಇವೆಲ್ಲವೂ ಸುಲಭ ಸಾಧ್ಯವಾಗುವವಲ್ಲದೆ, ಕಾಸ್ಮಿಕ್ ಕಿರಣಗಳ ಪರಿಶೀಲನೆಯಿಂದ ಜೀವಸೃಷ್ಟಿಯ ರಹಸ್ಯವನ್ನು ಮನುಷ್ಯ ಭೇದಿಸಬಹುದು.

ಚಂದ್ರನನ್ನು ಕುರಿತ ವಿವರಗಳನ್ನು ಸಂಗ್ರಹಿಸಿ, ಅದು ಮನುಷ್ಯವಸತಿಗೆ ಯೋಗ್ಯನಾಗುವಂತೆ ಅಲ್ಲಿ ಕೃತಕವಾತಾವರಣ—ಜೀವ ಪೋಷಕ ಸನ್ನಿವೇಶದ ರಚನೆಗೆ ಮನುಷ್ಯ ಯತ್ನಿಸಬಹುದು. ಅಲ್ಲಿನ ಪ್ರಕೃತದ ಸನ್ನಿವೇಶವು ಜೀವದ ಪೋಷಣೆಗೆ ಸಹಾಯಕವಾಗಿಲ್ಲ, ಅಲ್ಲಿಗೆ ಹೋದವರು ಜೀವನಾವಶ್ಯಕ ಸಲಕರಣೆಗಳನ್ನು ಇಲ್ಲಿಂದಲೇ ಕೊಂಡೊಯ್ಯಬೇಕು. ಆದರೆ ಅಲ್ಲಿಯೂ ಸನ್ನಿವೇಶದ ಬದಲಾವಣೆ ಮಾಡುವುದು ಸಾಧ್ಯವಾದೀತು, ಸಾಧ್ಯವಾಗಲಿದೆ ಎಂಬುದನ್ನು ಆಧುನಿಕ ಪರಮಾಣು ಶಾಸ್ತ್ರಜ್ಞರು—ಕೃತಕಸೂರ್ಯನ ನಿರ್ಮಾತೃಗಳು ಕನಸು ಕಾಣುತ್ತಲಿದ್ದಾರೆ.

ಇಷ್ಟರತನಕದ ತಂತ್ರಶಾಸ್ತ್ರದಲ್ಲಿ ಉಕ್ಕು, ಕಬ್ಬಿಣಗಳು ವಹಿಸಿದ ಪಾತ್ರವನ್ನು ಮುಂದೆ ಅಲ್ಯುಮಿನಿಯಮ್, ಮೆಗ್ನೇಸಿಯಂ, ಟ್ರೈಟೇನಿಯಂ ಮತ್ತು ಜಿರ್ಕೋನಿಯಂ ಲೋಹಗಳು ನಿರ್ವಹಿಸಲಿವೆ, ಸಮುದ್ರದ ಅಲೆಗಳಿಂದ ಇಳಿತ, ಭರತಗಳಿಂದ, ಮಿಂಚಿನಿಂದ ಶಕ್ತಿಯನ್ನು ಪಡೆಯುವ ಹೊಸ ಯೋಜನೆಗಳು ಸಂಸ್ಥಾಪಿತವಾಗಲಿವೆ. ಇಷ್ಟೇ ಅಲ್ಲದೆ ಇನ್ನೊಂದು ಶಾಸ್ತ್ರಭಾಗ—ಜೀವ ಭೌತ ಶಾಸ್ತ್ರವು—ಹೆಚ್ಚಿನ ವಿಚಾರಗಳನ್ನೊದಗಿಸುತ್ತ, ಮಾನವಜೀವನವು ಭೂಮಿಯ ಮೇಲೆ ಭದ್ರವಾಗಿ ಉಳಿಯುವಂತೆ ಮಾಡಲಿದೆ.

ಇಷ್ಟೆಲ್ಲ ಸಾಧ್ಯ. ಆದರೆ ?! ಆದರೆ ಈ ಬಗ್ಗೆ ಮನುಷ್ಯ ತನ್ನ ಸಾಧನೋಪಕರಣಗಳಿಂದ ಶಕ್ತಿಪದ್ಧತಿಯಮಾರ್ಗಗಳಿಂದ ತನ್ನ ಪ್ರಪಂಚದ ಕೇಡನ್ನು ಸಾಧಿಸದೆ ಮತ್ತೂ ಮತ್ತೂ ಪ್ರಕೃತಿಯ ರಹಸ್ಯಗಳನ್ನರಿತುಕೊಳ್ಳಲು ಯತ್ನಿಸಬೇಕು. ಅವನು ಹಾಗೆ ಮಾಡಿಯಾನು ಎಂದಾಶಿಸೋಣವೆ.






# ತೆರಿಗೆ ಅಧಿಕಾರಿಗಳಿಗೆ ಕವಿಗಳ ಮನವಿ

ಹೇ ಮಹಾಪ್ರಾಣಿಗಳೆ, ನಿಮ್ಮ ಸನ್ನಿಧಿಯಲ್ಲಿ
　　ಅರ್ಪಿಸುತ್ತೇವೆ ಈ ಸಣ್ಣ ಅರ್ಜಿ.
ನಮ್ಮ ನಿಲುಮೆಯ ನಾವು ಸ್ಪಷ್ಟಪಡಿಸಿದ್ದೇವೆ ;
　　ಕೊನೆಯ ನಿರ್ಣಯ ಮಾತ್ರ ನಿಮ್ಮ ಮರ್ಜಿ.
ಕಾವ್ಯವ್ಯವಸಾಯಕ್ಕೆ ಆದಾಯ ಬಲು ಕಡಮೆ ;
　　ನಷ್ಟವಿದೆ ಎಂದರೂ ಇಲ್ಲ ಅಡ್ಡಿ.
ನಾವು ವಿನಿಯೋಗಿಸಿದ ಬಂಡವಾಳಿಗೆ ಕೂಡ
　　ಸರಿಯಾಗಿ ಸಿಗದು ಪ್ರತಿಫಲದ ಬಡ್ಡಿ.
ಕವಿತೆ ಆರ್ಥಿಕಕ್ಷೇತ್ರದೊಳಗೆ ಕುಂಬಳಕಾಯಿ ;
　　ಮತ್ತೆ ಲೆಕ್ಕಾಚಾರದೊಳಗೆ ಸೊನ್ನೆ.
ಕವಿಚಕ್ರವರ್ತಿಯೂ ಬಿಕ್ಕೆ ಬೇಡಿದ್ದುಂಟು ;
　　ಈ ಘಟನೆ ನಡೆದದ್ದು ಮೊನ್ನೆ ಮೊನ್ನೆ.
ಇದನೆಲ್ಲ ಮನವರಿಕೆ ಮಾಡಿಕೊಡಬೇಕೆಂದು
　　ಜೊತೆಯೊಳಗೆ ಜೋಡಿಸಿದೆ ಲೆಕ್ಕಪತ್ರ.
ನಖಶಿಖಾಂತದ ವರೆಗೆ ಚೆನ್ನಾಗಿ ನೋಡಿಕೊಳಿ,
　　ಸ್ವಲ್ಪವೂ ನಫೆಯಿಲ್ಲ ನಮ್ಮ ಹತ್ರ.
ಕವಿಯ ಕೀರ್ತಿಯ ಹಡಗ ನಭದೊಳಗೆ ತೇಲಿದರು
　　ಆವನ ಕಿಸೆಯೊಳಗಿಲ್ಲ ಯಾವ ಗಂಟು.
ಕವಿಯ ಉದ್ಯೋಗಕ್ಕೆ ಅಂಟಿಕೊಂಡಿಹ ರಗಳೆ
　　ಒಂದಲ್ಲ, ಎರಡಲ್ಲ, ನೂರು ಉಂಟು.
ಒಂದು ಪಂಕ್ತಿಗೆ ಹತ್ತು ತಾಸು ಹಿಡಿಯುವದುಂಟು ;
　　ಬರಡು ವ್ಯವಸಾಯವಿದು ಕವಿಯ ಕಸಬು.
ಕೈಯೊಳಗೆ ಲೇಖನಿಯ ಹಿಡಿದರೂ ಒಮ್ಮೊಮ್ಮೆ
　　ಯಾವ ಪ್ರತಿಫಲವಿಲ್ಲ, ಬರಿಯ ಉಸುಬು.
ಒಂದು ಬಂಗಾಲಿ ಮಣದಷ್ಟು ಕವಿ ಬರೆದರೂ
　　ಬಂಗಾರವೆನ್ನುವುದು ತೀರ ಕಡಿಮೆ.
ಚೆಳ್ಳಿಯೂ ಅತ್ಯಲ್ಪ, ಹಿತ್ತಾಳಿಯೇ ಹೆಚ್ಚು.
　　ಲಾಭದಾಯಕವಲ್ಲ ನಮ್ಮ ದುಡಿಮೆ.
ಶ್ರೇಷ್ಠ ಕವಿತೆಗೆ ಕೂಡ ಅಲ್ಲಷ್ಟು ಇಲ್ಲಷ್ಟು
　　ಅಂಟಿಕೊಳ್ಳುವುದುಂಟು ಮಣ್ಣು ಕೆಸರು.

ಇದನೆಲ್ಲ ತೊಳೆತೊಳೆದು ಸರಿಪಡಿಸಬೇಕಲ್ಲ.
　　'ಶಬ್ದಕೋಶ'ವೆ ನಮ್ಮ ಗಣಿಯ ಹೆಸರು.
ಪ್ರಾಸವೆಂದರೆ ತ್ರಾಸ, ಹೊಂದಿಕೊಳ್ಳದು ಪಿಳ್ಳೆ ;
　　ಎಷ್ಟು ಒದ್ದಾಡಿದರು ಗೈಮೆ ವ್ಯರ್ಥ.
ಒತ್ತಾಯದಿಂದ ಒಳಗಡೆಗೆ ತೂರಿದರಂತು
　　ಉಸಿರಡಗಿ ಪ್ರಾಣ ಬಿಡಬಹುದು ಅರ್ಥ.
ಹೀಗಾದ ಪಕ್ಷದಲಿ ಮೃತನ ಮರಿಮಕ್ಕಳಿಗೆ
　　ತುಂಬಿಕೊಡಬೇಕಲ್ಲ ಪೂರ್ಣ ಹಾನಿ.
ಇಂಥ ತಾಪತ್ರಯದ ಹಾಳುವ್ಯವಹಾರಕ್ಕೆ
　　ಅಂಟಿಕೊಳ್ಳುವರಾರು ? ಹೇಳಿ, ಸ್ವಾಮಿ.
ಯಾವ ಧಂದೆಗು ಇಲ್ಲ ಈ ತರದ ಬಿಕನಾಸಿ ;
　　ಇದನು ಗಮನಿಸಬೇಕು ಪೂರ್ತಿಯಾಗಿ.
ಇದನೆಲ್ಲ ಆಧಾರಸಹಿತ ಬಿಂಬಿಸಲಿಕ್ಕೆ
　　ಮಂತ್ರಿಗಳ ವರೆಗೆ ಬರಬೇಕೆ ಹೋಗಿ ?
ಗಣಿಯೊಳಗೆ ಇರಬಹುದು ಒಂದು ಸಾವಿರ ಟನ್ನು ;
　　ಎಲ್ಲವೂ ನಮ್ಮ ಕೆಲಸಕ್ಕೆ ಬಾರ.
ಒಂದು ಸಾವಿರದೊಳಗೆ ಒಂದೆರಡು ಸಿಗಬಹುದು ;
　　ಹೀಗುಂಟು ಕವಿಯ ನಾಲಗೆಯ ಖಾರ.
ಭಾವನೆಯ ಹರಳುಗಳ ಸಾರಣಗೆಯಲಿ ಸೋಸಿ
　　ಆರಿಸಾರಿಸಿ ಕಟ್ಟಬೇಕು ಪದ್ಯ.
ಕಾವ್ಯರಚನೆಯ ಅಮಲು ಒಮ್ಮೆ ತಲೆಗೇರಿದರೆ
　　ನೆತ್ತಿಯಲಿ ತುಳುಕಾಡಿದಂತೆ ಮದ್ಯ.
ಸ್ನಾನಕ್ಕೆ ಹೋದರೂ ಬೆನ್ನು ಹತ್ತುವುದುಂಟು ;
　　ಬಚ್ಚಲಲ್ಲೂ ನಮ್ಮ ಕಾರ್ಯಸಿದ್ಧಿ.
ಒಮ್ಮೊಮ್ಮೆ ಹಗಲೆಲ್ಲ ಹಣೆಗೆ ಬಡಕೊಂಡರೂ
　　ಕೆಲಸ ಮಾಡದು ನಮ್ಮ ಕಾವ್ಯಬುದ್ಧಿ.
ಈ ಪರಿಸ್ಥಿತಿಯೊಳಗೆ ಕವಿಗೆ ಸಿಗಬೇಕೇನು ?
　　ಮತ್ತೆ ಕೊಡಬೇಕೇನು ? ನೀವೆ ಹೇಳಿ.
ಕವಿಸಾರ್ವಭೌಮನಿಗೆ ಬಿರುದುಗಳು ಇದ್ದರೂ
　　ಆತ ತಿನಬೇಕು ಬರಿ ಬಿಸಿಲು ಗಾಳಿ.

ಬಾಣಂತಿತನದೊಳಗೆ ಪ್ರಸವವೇದನೆಯುಂಟು ;
ಇದಕಿಂತಲೂ ತೀವ್ರ ಕವಿಯ ನೋವು.
ವೇದನೆಯ ಸಂಕಟದ ಮೊದಲೆ ಮಗು ಹುಟ್ಟಿದರೆ
ತಾಯಿಗೂ ಬರಬಹುದು ಕೆಟ್ಟ ಸಾವು.
ವಸ್ತುಸ್ಥಿತಿ ಹೀಗಿರಲು ಕವಿಯ ಜೀವನದಲ್ಲಿ
ಆರೋಗ್ಯರಕ್ಷಣೆಯ ಖರ್ಚು ಹೆಚ್ಚು.
ಈ ವೆಚ್ಚವನು ವಜಾಹಾಕಿದರೆ, ಕವಿ ತೆರಿಗೆ
ಕೊಡಬೇಕು ಎನ್ನುವುದು ಶುದ್ಧ ಹುಚ್ಚು.
ಜ್ಞಾನಿ ಹೇಳಿದ ಹಾಗೆ ಪ್ರತಿಯೊಬ್ಬ ಸಾಹಿತಿಗೆ
ಭಾವನೆಯ ಸಾಮ್ರಾಜ್ಯ ದೊಡ್ಡ ಆಸ್ತಿ.
ಈ ಆಸ್ತಿಯಿಂದಲೂ ವರಮಾನ ನನಗಿಲ್ಲ !
ರಾಜ್ಯ ಕಾಪಾಡಲಿಕೆ ಶ್ರಮವೆ ಜಾಸ್ತಿ.
ಭಾವನೆಯ ರಾಜ್ಯದಲಿ ಆಡಳಿತ ದೆಸೆಯಿಂದ
ಸಂಚರಿಸಲಿಕೆ ಖರ್ಚು ಬಲು ದುಬಾರಿ.
ಸಂಚಾರಿಭತ್ತೆಯೂ ನಮಗೆ ದೊರಕುವುದಿಲ್ಲ ;
ಸಾಮ್ರಾಜ್ಯವೆನ್ನುವುದು ರಿಣದ ಮಾರಿ.
ಕವಿಯ ಸಂಚಾರಕ್ಕೆ ಯಾವುದೂ ಮಿತಿಯಿಲ್ಲ;
ಕ್ಷಣದೊಳಗೆ ಸ್ವರ್ಗಪಾತಾಳಲೋಕ.
ಈ ಪ್ರವಾಸದ ವೆಚ್ಚ ಎಷ್ಟಾಗಬಹುದೆಂದು
ನೀವೇನೆ ಹಾಕಬಹುದಲ್ಲ ಲೆಕ್ಕ.
ನಿಜವಾದ ಕವಿಗೆ ಸಾಲದ ಭಾರವೂ ಉಂಟು;
ಹಿರಿಯ ಕಬ್ಬಿಗ ಅವನ ಸಾಲಗಾರ.
ತಂದ ಸಾಲದ ಬಡ್ಡಿಸಹಿತ ಕೊಡಬೇಕಲ್ಲ;
ಇಲ್ಲದಿರೆ ಮುಗಿಯುವುದೆ ಸಂಚಕಾರ?
ಕವಿವರನ ಉದ್ಯಮಕೆ ಬಂಡವಾಳಿನ ಶಕ್ತಿ
ಪೂರ್ಣಬೇಕೆನ್ನುವುದು ಅಲ್ಲ ಸುಳ್ಳು.
ತರತರದ ಕಾವ್ಯವಸ್ತುಗಳ ಕವಿ ಕೊಳ್ಳದಿರೆ
ಇಡಿಯ ರಚನೆಯೆ ಆಗಬಹುದು ಜಳ್ಳು.
ಮತ್ತೊಂದು ಮಾತು ಮುಖ್ಯವಾದುದು, ಸ್ವಾಮಿ.
ಯಾವಾಗಲೂ ಕಷ್ಟಕಾಲ ನಮಗೆ,
ಬಂಡವಾಳವ ತಂದು ಹಗಲಿರುಳು ದುಡಿದರೂ
ಮಾರುಪೇಟೆಯ ಪ್ರಶ್ನೆ ಉಂಟು ಕೊನೆಗೆ.

ಸುಖಜೀವಿ ವಸ್ತುಗಳ ಈ ಸತ್ಯಯುಗದೊಳಗೆ
ಕವಿಯ ಕಷ್ಟವ ಕೊಳ್ಳುವವರು ಯಾರು?
ತರುಣ ಕವಿ ಬರೆಬರೆದು ಮುದುಕನಾಗುವ ವರೆಗೆ
ಖರ್ಚಾಗಬಹುದು ಪ್ರತಿ ಒಂದು ನೂರು.
ಉತ್ತಮೋತ್ತಮ ಭಾವಗೀತಗಳ ಹೆಣೆದರೂ
ಹೆಣವಾಗಿ ಬೀಳುವವು ಪೇಟೆಯೊಳಗೆ.
ಹುಣಸೆಕಾಯಿಯ ಅರ್ಧದಷ್ಟು ಖರ್ಚಾದರೂ
ನಾವು ಕೊಡಬಹುದಿತ್ತು ಪೂರ್ಣ ತೆರಿಗೆ.
ಪತ್ರಪುಸ್ತಕದೊಳಗೆ ಒಂದೆರಡು ಇಣಿಕಿದರು
ಒಜ್ಜೆಯಾಗದು ನಮ್ಮ ಕಿಸೆಯ ಕೋಟು.
ಈ ಹಣದ ವಾರ್ಷಿಕ ಸರಾಸರಿಯ ನೋಡಿದರೆ,
ಕಿಸೆಯ ಬುಡದೊಳಗಿಲ್ಲ ಯಾವ ನೋಟೂ.
ಸಾಹಿತ್ಯ ಅಕಡಮಿಯ ಬಹುಮಾನ ಸಿಕ್ಕಿದರೆ
ಐದು ಸಾವಿರ ನಗದು! ಹೌದು, ಸತ್ಯ.
ಒಬ್ಬನಿಗೆ ಸಿಕ್ಕಿದರೆ ಸಾಕೇನು ಈ ಗಂಟು ?
ಸಿಕ್ಕಿದವನಿಗೆ ಕೂಡ ಸಾಕೆ ನಿತ್ಯ ?
ಕಾವ್ಯವಾಚನಕೆಂದು ಕರೆದರೂ ನಮ್ಮನ್ನು
ಒಂದು ನಯೆಪೈಸೆಯೂ ಸಿಗದು, ಸ್ವಾಮಿ.
ಮೂರು ಗಂಟೆಯ ಕಾಲ ಹೊಯ್‌ಕೊಂಡರೂ ವ್ಯರ್ಥ;
ಎಲ್ಲಾದರೂ ಉಂಟೆ ಈ ಹರಾಮಿ.
ಬಾನುಲಿಯ ರಸಬಾಳೆ ಕೆಲವೊಮ್ಮೆ ಸಿಗಬಹುದು;
ಉಳಿದ ವೇಳೆಗೆ ಸಿಪ್ಪೆ, ಪೂರ್ಣ ಖಾಲಿ.
ಮತ್ತೆ ಈ ರಸಬಾಳೆ ಚಟ್ನಿಗೂ ಸಾಕಾಗ.
ಹೀಗೆ ಮಾಡುವುದುಂಟೆ ಕವಿಯ ಗೇಲಿ ?
ಕವಿಯ ಸಂಸಾರಕ್ಕೆ ಮತ್ತೆ ಕರಭಾರಕ್ಕೆ
ಯಾವುದೂ ಸಂಬಂಧವಿಲ್ಲ, ಸ್ವಾಮಿ.
ಯಾವ ಕಡೆ ಆಕರಣೆ? ಯಾವ ಕಡೆ ಸೀಕರಣೆ?
ಎಲ್ಲಿ ಸಾಗಿದೆ ನಮ್ಮ ಭರತಭೂಮಿ ?
ಯಾವ ಬದಿಯಿಂದಲೂ ಯಾವ ತುದಿಯಿಂದಲೂ
ಯಾವ ಸರಕಾರ ಹಾಕಿದರು ಲೆಕ್ಕ,
ಸರಕಾರವೇ ಕವಿಗೆ ಸಂದಾಯ ಕೊಡಬೇಕು
ಪ್ರತಿವರುಷ ಅವನ ಯೋಗ್ಯತೆಗೆ ತಕ್ಕ.

—ದಿನಕರ ದೇಸಾಯಿ.



## ಭವಿಷ್ಯ

ದೂರದಿಂದಲಿ ಕೇಳಿಸಿತು ಗೊಮ್ಮಟದ ಗಂಟೆ
ಎಷ್ಟು ಬಾರಿಸಿತೇನೊ—ಅದಕೆ ಗೊತ್ತು.
ದಿಂಬಿನೊಡಲಲಿ ಮೊಗವನಿರಿಸಿ ಆಳಿಸಿದೆನದನ
( ಹೀಗೆ ಮಾಡಿದುದೇಕೆ ಗೊತ್ತಿಲ್ಲ ನನಗೆ ).
ಒಟಗುಡುತ ಗಡಿಯಾರ ಮೂಲೆಯಲಿ ಕುಳಿತಿತ್ತು.
ಸೀಳಿ ಹಾಕುತ ಮೌನದೆದೆಯ.
ಕಿಟಿಕೆ ಬಾಗಿಲು ತೆರೆದು ಇಣಿಕಿ ಹಾಕಿದೆ ಹೊರಗೆ—
" ನಸುಮುಸುಕುನಿಶೆಯಲ್ಲಿ ಪಟಪಟನೆ ಬೀಳುತಿಹ
ನೂರಾರು ಮಳೆಯುಹನಿಗಳು —
ಹಿಮ್ಮೇಳ ಹಿಡಿದಿದ್ದವೆನ್ನೆದೆಯ ಗಾನಕ್ಕೆ".

ಎದೆಯಗುಂಡಿಯನೊತ್ತಿ ಹಿಡಿದರೂ ನಿಲಲಿಲ್ಲ
ಏನು ? ಎಂತೆಂಬುದರ ಕೋಲಾಹಲ.
ಮರವಿನಶ್ರುವಾಯುವನು ಬಿಟ್ಟು ಚದುರಿಸಲು ಯತ್ನಿಸಿದೆ.
ಆದರೂ ಅದಕೆ ಬಗೆಹರಿಯಲಿಲ್ಲ.
ಅದೇ ಆಗ ಜನಿಸಿರುವ ಅಳುವ ಕೂಸಿನ ದನಿಯ
ಎತ್ತಲಿಂದಲೊ ಕೇಳಿ ಮೈಮುರಿದು ಎದ್ದೆ.
ಬೆಳಕು ಕತ್ತಲೆಯ ನಡುವೆ ಹುದುಗಿರುವ ಆ ನಿಧಿಯ
'ಕ್ಷ' ಕಿರಣ ಕಣ್ಣಿಂದ ಕಂಡವರ ಉಂಟೇ ?

—ಶ್ರೀನಿವಾಸ ಕುಲಕರ್ಣಿ, ಎಂ. ಎ.
ಹುಬ್ಬ,



ಲೇಖಕರು: ಬೀChi

# ಮೋಸ ಮಾಡಿದ ಕನಸು

ಐದು ವರ್ಷಗಳಲ್ಲಿ ಮೂರು ಹೆತ್ತ ಮಾಲತಿ ಮುದುಕಿಯಾದಳು. ಅಂತೇ ಅವಳು ಗಂಡನಿಗೆ ಕಡ್ಡಾಯದ ಬ್ರಹ್ಮಚರ್ಯವನ್ನು ವಿಧಿಸಿದಳು. ಅವನೇ ಒಂದು ಹಾದಿ ಹುಡುಕಿದ. ಆದರೆ ಅದು ಮಾಲತಿಗೆ ಇಲ್ಲದ ಸಂಕಟ ತಂದಿತು. ಧರ್ಮಸಂಕಟದಲ್ಲಿ ಸಿಲುಕಿ ಬಿದ್ದಳು. ಆಸ್ಪತ್ರೆಯನ್ನು ಸೇರಬೇಕಾಯಿತು. ಅವನ ಒಂದು ಮಾತಿನಿಂದ ಅವಳಿಗೆ ಸಂತಸವಾಯಿತು. ಅದು ಯಾವ ಹಾದಿ? ಯಾವ ಪ್ರಸಂಗ? ಎಂಬುದನ್ನು ಅರಿಯಲು ಈ ಕುತೂಹಲಕಾರಿ ಕಥೆಯನ್ನು ನೀವು ಓದಬೇಕು.

"......"

ಸಾಕು ಬಿಡಿ ತಾಯಿ, ನೀವಂತು. ಇರುವ ಮೂರು ಮಕ್ಕಳು ಚೆನ್ನಾಗಿ ಇರಲಿ ಸಧ್ಯ, ಸಾಕು. ಇವಕ್ಕೇ ತುಂಬು ಆಯುಷ್ಯ ಹಾಕಲಿ ದೇವರು"

ಅದೊಂದು ಬಗೆಯ ತೃಪ್ತಿಯಿಂದ ನುಡಿದಳು ಮಾಲತಿ.

ಮುದುಕಮ್ಮ ಹಾಗೆಲ್ಲ ಬಿಡುವಾಕೆಯೆ?

"ಅಯ್ಯೊ ಹುಚ್ಚು ಹುಡಿಗಿ! ಹಾಗೆಲ್ಲ ಅನ್ನ ಕೂಡದು ಕಣೇ. ಹೆರೆಯುವ ಕೈಲೆ ನಾಲ್ಕು ಹೆಚ್ಚೇ ಹೆರೆದು ಹಾಕಿರಬೇಕಂತೆ. ನಿನಗೆಲ್ಲ ಎಷ್ಟಿವೆ ಮಹಾ? ಅದೇ ಯಂಕ, ನೊಣ, ಶೀನ. ಮೂರೇ ಮೂರಕ್ಕೆ ಗಾಂಧಾರಿ ಆಗಿಬಿಟ್ಟೆಯಾ ಆಗಲೆ?"

"ಗಾಂಧಾರಿ ಆಗುವುದೂ ಬೇಡ, ಕುಂತಿ ಆಗುವುದೂ ಬೇಡ. ಈಗಿರುವಷ್ಟೇ ಸಾಕು, ಹಾಯಾಗಿದ್ದೇವೆ. ಇನ್ನು ಮಕ್ಕಳೂ ಬೇಡ, ಮರಿಯೂ ಬೇಡ."

"ಹೂಂ, ಬೇಡ. ಪಾಪ; ಎಲ್ಲವೂ ನಿನ್ನ ಕೈಲೇ ಇದೆ ನೋಡು. ದೇವರು ಕೊಟ್ಟರೆ?"

"ಹೂಂ, ಕೊಡ್ತಾನೆ ದೇವರು. ಅದು ಹೇಗೆ ಅಜ್ಜಮ್ಮಾ ಕೊಡ್ತಾನೆ ದೇವರು?"

ಮಾಲತಿಗೆ ಅದೇ ಧೈರ್ಯ. ಗಂಡನನ್ನು ಜುಲುಮೆಯ ಬ್ರಹ್ಮಚಾರಿ ಮಾಡಿ ಕೂಡಿಸಿದ್ದಳು. ಐದಾರು ವರ್ಷಗಳ ಹಿಂದೆಯೇ ಮೂರನೆಯ ಮಗು ಶೀನು ಹುಟ್ಟಿದ ಮೇಲೆ ಮುಗಿದು ಹೋಯಿತು, ಅವರ ದೈಹಿಕಸಂಬಂಧ.

ಶಂಕರ, ಮಾಲತಿ ಅಚ್ಚು-ಮೆಚ್ಚಿನ ದಂಪತಿಗಳು. ಕಾಲೇಜಿನಲ್ಲಿದ್ದರು ಇಬ್ಬರೂ. ವಿಷಯ ಆಗಲೇ ತಿಳಿಯಿತು ಇವರ ತಂದೆ, ತಾಯಿಗಳಿಗೆ. ಒಂದು ಒಳ್ಳೆಯ ಮುಹೂರ್ತವನ್ನು ಹುಡುಕಿ ಮದುವೆ ಮಾಡಿಯೇಬಿಟ್ಟರು.

ಐದು ವರ್ಷದಲ್ಲಿ ಮೂರು ಹೆತ್ತ ಮಾಲತಿ ಬಹು ಬೇಗ ಮುದುಕಿಯಾದಳು. ಶಂಕರನಿಗೆ ಏನು ರೋಗ? ನಲವತ್ತರ ಈ ಬದಿಯಲ್ಲಿದ್ದ ಅವನು ಇನ್ನೂ ನದಿ ಮಾಗಾಣಿಯ ಕಬ್ಬಿನಂತಿದ್ದ.

ಆ, ಈ ಮಾತು ಬಂದಾಗ ಮಾಲತಿ ಸ್ಪಷ್ಟವಾಗಿ ಹೇಳಿಯೇಬಿಟ್ಟಳು ಗಂಡನಿಗೆ;

"ನೋಡೀ, ಯಂಕು ಹುಟ್ಟಿದಾಗ ಹೆಣ್ಣು ಎಂದು ಮುಸುಮುಸು ಮಾಡಿದಿರಿ. ಹಿಂದೆಯೇ ನಾಣು ಹುಟ್ಟಿದ. ಅದು ಒಂದು, ಇದು ಒಂದು ಮೇಲೆ ಯಾವುದಾದರೂ ಇನ್ನೊಂದು ಅಂತ ಶೀನುನೂಹುಟ್ಟಿದ. ಇನ್ನು ಸಾಕು ಮಾರಾಯರೆ..."

ನಗುತ್ತ ಹೇಳಿ ಕೈ ಮುಗಿದು ಒಳಗೆ ನಡೆದಳು.

"ಅಲ್ಲ ಕಣೇ. . . ."

ರಾಗವಾಗಿ ಎಳೆದು ಹಿಂದೆಯೇ ಬಂದ ಶಂಕರ.

"ಅಲ್ಲ ಇಲ್ಲ, ಬೆಲ್ಲ ಇಲ್ಲ. ದಯವಿಟ್ಟು, ಪ್ಲೀಜ್. . . . ."

ವಿದ್ಯಾವಂತೆ ಮಾಲತಿ, ಸುಸಂಸ್ಕೃತ ಶಂಕರ. ಶಂಕರ ಈ ಒಂದು ವಿಷಯದಲ್ಲಿ ಮಾತ್ರ ಸುಖಿಯಾಗಿಲ್ಲ ಎಂಬುದು ಸೂಕ್ಷ್ಮಗ್ರಾಹಿಯಾದ ಮಾಲತಿಗೆ ತಿಳಿಯಲು ಬಹುಕಾಲವೇನೂ ಬೇಕಾಗಲಿಲ್ಲ. ಗಂಡನ ಮನಸ್ಸನ್ನು ತೆರೆದಿಟ್ಟ ಪುಸ್ತಕವನ್ನೋದುವಂತೆ ಓದಿದಳು. ಸಮಯವನ್ನು ಸಾಧಿಸಿ, ಒಂದು ಬಾರಿ ಮಾಲತಿ ಗಂಡನನ್ನು ಕೆಣಕಿದಳು. ಈ ವಿದ್ಯೆ ಹೆಂಣಿಗೆ ಕಲಿಸಿಕೊಡಬೇಕೆ? ಮೀನಿನ ಮರಿಗೆ ಯಾರಾದರೂ ಈಜುಬುರುಡೆ ಕಟ್ಟುತ್ತಾರೆಯೊ?




"ಹಾಗೆಲ್ಲ ಅನ್ನಕೂಡದು ಕಣೇ. ಹೆರೆಯುವ ಕೈಲೆ ನಾಲ್ಕು ಹೆಚ್ಚೇ ಹೆರೆದು ಹಾಕಿರಬೇಕಂತೆ."

"ನೀವು ನಿಜವಾಗಿಯೂ ಸುಖವಾಗಿಲ್ಲ. ನನಗೆ ಗೊತ್ತು."

"ನನಗೇನೇ ಆಗಿದೆ. ಸುಖವಾಗಿಲ್ಲದಿರಲು? ಹುಚ್ಚಿ, ಹುಚ್ಚಿ."

ಪೆಚ್ಚುಪೆಚ್ಚಾಗಿ ನಕ್ಕು ಶಂಕರ ಮಾತು ಮುಗಿಸಲು ನೋಡಿದ.

"ನನ್ನ ಮುಂದು ನೀವು ಸುಳ್ಳು ಹೇಳಬೇಡಿ. ನನಗೆಲ್ಲ ಗೊತ್ತಿದೆ. . ."

"ಹೂಂ ಗೊತ್ತಿದೆ. ಯಾವುದಾದರೂ ಕರ್ಣಪಿಶಾಚಿ ಬಂದು ಹೇಳಿತೇನೇ ನಿನ್ನ ಕಿವಿಯಲ್ಲಿ?"

"ಕರ್ಣಪಿಶಾಚಿಯೂ ಬೇಡ, ದುರ್ಯೋಧನ ಪಿಶಾಚಿಯೂ ಬೇಡ. ನಿಮ್ಮ ಮುಖವೇ ಹೇಳುತ್ತದಲ್ಲ?"

"ಹೋಗಲಿ ಬಿಡು ಕಣೇ, ಏನು ಮಾತಿದು."

ಶಂಕರನ ದನಿಯಲ್ಲಿ ಅಷ್ಟಿಷ್ಟು ಬೇಸರವಿದ್ದಿತು. ಮಾಲತಿ ಬಿಡಬೇಕಲ್ಲ?

"ಹಾಗಂದರೆ ಹೇಗೆ? ನಿಮ್ಮನ್ನು ಅಸಂತುಷ್ಟಿಯಲ್ಲಿ ಇಟ್ಟರೆ ನನಗೆ ಮಾತ್ರ ಸಂತೋಷವೇ? ನೀವು ಬೇರೇನೂ ತಿಳಿದುಕೊಳ್ಳುವುದಿಲ್ಲ ಅಂದರೆ ಒಂದು ಹೇಳಬೇಕೆಂದಿದ್ದೇನೆ."

"ಒಂದಲ್ಲ, ನೂರು ಹೇಳು. ನಿನ್ನ ಯಾವ ಮಾತು ನಾನು ನಡೆಸಿಕೊಟ್ಟಿಲ್ಲ?"

ಅಹುದು, ಅದು ಮಾತ್ರ ಅಕ್ಷರಶಃ ನಿಜ. ಒಳ್ಳೆಯ ಪ್ರಾಯೋನ್ಮತ್ತದಲ್ಲಿಯೆ ಬ್ರಹ್ಮಚಾರಿಯಾಗಿಲ್ಲವೆ ಅವನು? ಇದಕ್ಕೂ ಹೆಚ್ಚಿನ ತಪಸ್ಸು ಅದಾವ ಗಂಡನಿಗೆ ಸಾಧ್ಯ?

"ನೀವು ನಡೆಸಿಕೊಟ್ಟಿದ್ದೀರೆಂದೇ ಹೇಳುತ್ತಿದ್ದೇನೆ. ಈಗ ನಾನು ಹೇಳುವುದೊಂದನ್ನು ಮಾಡಿಬಿಡಿ, ಇದು ಕಡೆಯದು. ಆ ಮೇಲೆ ಏನೂ ಹೇಳುವುದಿಲ್ಲ ನಾನು."

"ಏನಪ್ಪ ಅದು, ಅಂತಹದು?"

"ಇನ್ನೊಂದು ಮದುವೆ. . ."

"ಛೀ"

ಎಂದು ಶಂಕರ ಕೂಡಲೆ ಮಾಲತಿಯ ಬಾಯಿಗೆ ಕೈ ಇಟ್ಟ.

"ನನ್ನನ್ನು ಏನೆಂದು ತಿಳಿದಿ ಮಾಲತೀ? ನಾನೇನು ಮನುಷ್ಯನೋ. . ."

ನಿಜವಾಗಿಯೂ ನೋವಾಗಿದ್ದಿತು ಅವನ ಮನಸ್ಸಿಗೆ. ಮಾಲತಿ ಈ ಮಾತು ಆಡುವುದೇ? ಬೇರಿನ್ನಾರ ಬಾಯಿಂದಲಾದರೂ ಇದು ಬಂದಿದ್ದರೆ ಅವರ ಕೆನ್ನೆ ಜಾಜು ಆಗುತ್ತಿತ್ತು.

ಬಿಡಲಿಲ್ಲ ಮಾಲತಿ. ತ್ಯಾಗ ಬೇಡವೆ ಹೆಂಣಿನ ಜೀವನದಲ್ಲಿ? ಇನ್ನೊಬ್ಬಳಿಗೆ ಅನುವು ಮಾಡಿಕೊಟ್ಟು ಗಂಡನನ್ನು ಸಂತಸದಲ್ಲಿಟ್ಟುನೋಡಬೇಕೆಂಬ ಹಂಬಲ ಅವಳಿಗೆ.

"ನೀವು ಅಷ್ಟು ಬೇಸರಪಡುವಂತಹ ವಿಷಯ ಏನಿದೆ ಇದರಲ್ಲಿ ಅನ್ನೇನೆ. ಅಲ್ಲ ಕಣ್ರೀ, ಮಕ್ಕಳಾಗದವರು ಇನ್ನೊಂದು ಲಗ್ನ ಆಗುವುದಿಲ್ಲವೆ?"

"ಅದನ್ನು ನಾನು ಒಪ್ಪುವುದಿಲ್ಲ. ಹಾಗೆ ಆಗುವುದಾದರೆ ಇಬ್ಬರೂ ಬೇರೆಬೇರೆಯವರನ್ನು ಆಗಲಿ. ಮಕ್ಕಳಿಲ್ಲ ಅಂದಮೇಲೆ ಇಬ್ಬರಿಗೂ ಇಲ್ಲ. ಗಂಡನೊಬ್ಬನಿಗೇ ಏಕೆ ಆ ಅಧಿಕಾರ? ಅಲ್ಲದೆ ಈಗ ಕಾನೂನೂ ಆಗಿದೆ. ಜೈಲಿಗೆ ಕಳಿಸುತ್ತಾರೆ, ಒಬ್ಬಳಿರುವಾಗ ಇನ್ನೊಬ್ಬಳನ್ನು ಲಗ್ನವಾದರೆ?"

"ನಾನೇ ಒಪ್ಪಿ ಬರೆದುಕೊಡುತ್ತೇನಲ್ಲ?"

"ಅದಕ್ಕೆ ಕೋರ್ಟು ಬೆಲೆ ಕೊಡುವಂತಿದ್ದಿದ್ದರೆ ಎಷ್ಟು ಗಂಡಂದಿರುಗಳು ನಿತ್ಯವೂ ತಮ್ಮ ಹೆಂಡಂದಿರನ್ನು ಚೆನ್ನಾಗಿ ಒದ್ದು ಬರೆಯಿಸಿಕೊಳ್ಳುತ್ತಿದ್ದರೋ . . ."

"ಅದೆಲ್ಲ ಪುರಾಣ ಹಾಗಿರಲಿ, ಈಗ ಏನು ಅಂದಂತಾಯಿತು ನೀವು? ಅದನ್ನು ಹೇಳಿ ಮೊದಲು."

"ಏನೂ ಇಲ್ಲ, ಇಷ್ಟೇ ನೋಡು ಮಾಲತೀ! ನನಗಿನ್ನೊಬ್ಬ ಹೆಂಡತಿ ಬೇಕಿಲ್ಲ, ಇನ್ನೊಬ್ಬ ಮಗಳು ಬೇಕು . . ."



"ನನಗಿನ್ನೊಬ್ಬ ಹೆಂಡತಿ ಬೇಕಿಲ್ಲ, ಇನ್ನೊಬ್ಬ ಮಗಳು ಬೇಕು. . ."

"ಹಾಗೆಯೆ ಕನಸು ಕಾಣತಾ ಇರಿ."

ಸುಳ್ಳು ನಗೆ ನಕ್ಕು ಒಳನಡೆದಳು ಮಾಲತಿ. ಮಗಳೊಡನೆ ಮಂಚದ ಮೇಲೆ ಹಾಯಾಗಿ ಮಲಗಿದಳು. ನಿದ್ರೆ ಬರುವುದೂ ತಡವಾಗಲಿಲ್ಲ.

ಶಂಕರ ಇಡೀ ರಾತ್ರಿ ಕಣ್ತೆರದೇ ಮಲಗಿದ್ದ. ನಿದ್ರೆ ಬಾರದಿರುವಾಗ ಕಂಣು ಮುಚ್ಚುವುದೇ ಒಂದು ಶ್ರಮದ ಕೆಲಸ.

'ಇನ್ನೊಂದು ಹೆಂಣು ಆಗಿದ್ದರೆ ಚೆನ್ನಾಗಿತ್ತು.'

ಅವನ ಮನಸ್ಸು ಒಳಗೊಳಗೆ ಲೊಚಗುಟ್ಟುತ್ತಿತ್ತು ಬೆಳ್ಳಂಬೆಳಗೂ.

ಮಾಲತಿಯ ತಾಯಿಗೆ ಮೈ ಚೆನ್ನಾಗಿಲ್ಲವೆಂದು ಕಾಗದ ಬಂತು.

"ಹೋಗಿ ಒಂದೆರಡು ದಿನ ಇದ್ದು ಬಾ."

"ಮಕ್ಕಳ ಸ್ಕೂಲು?"

"ಮಹಾಸ್ಕೂಲು! ನಿನ್ನ ಮಕ್ಕಳೇನು ಈಗ ಬಿ. ಎ., ಎಂ. ಎ. ಓದುತ್ತಿರುವುದೂ ಅಷ್ಟರಲ್ಲಿಯೇ ಇದೆ. ಒಂದು ವಾರದಲ್ಲಿ ಏನಾಗುತ್ತದೆ? ಎಲ್ಲರನ್ನೂ ಕರೆದುಕೊಂಡು ಹೋಗು."

"ನೀವು?"

"ರಜೆ ಯಾವನು ಕೊಡುತ್ತಾನೆ? ಅದೂ ಈಗ?"

"ನಿಮಗೆ ಊಟ?"

"ದಾರಿಯುದ್ದಕ್ಕೂ ಇವೆ ಅಲ್ಲವೆ ಮಾವನ ಮನೆಗಳು? ಹೋಟೆಲ್‌ಗಳಿಗೆ ಕೊರತೆ ಏನೇ ಈ ಊರಲ್ಲಿ?"

ಮಾಲತಿ ಮೂವರು ಮಕ್ಕಳನ್ನು ಕರೆದುಕೊಂಡು ತವರಿಗೆ ಹೋದಳು. ಶಂಕರನ ಊಟ ಹೋಟೆಲಲ್ಲಿ, ಕೆಲಸ ಕಚೇರಿಯಲ್ಲಿ, ನಿದ್ರೆ ಮನೆಯಲ್ಲಿ — ಬಂದರೆ.

"ಅಮ್ಮಾ, ಅಪ್ಪಂದು ಕಾಗದ"

ಕುಣಿಯುತ್ತ ತಂದುಕೊಟ್ಟ ಶೀನು. ಕೆಲಸದಲ್ಲಿದ್ದ ಮಾಲತಿ ಅದನ್ನು ತಂದು ಮೇಜಿನ ಮೇಲಿಟ್ಟಳು. ಆ ಮೇಲೆ ಓದಿದರಾಯಿತೆಂದು.

"ಏನು ಬರೆದಿದ್ದಾರಮ್ಮಾ, ಓದಿ ಹೇಳು ನನಗೆ. ನಾನೇ ಓತ್ತೇನೆ ತಾ."

ಒಂದೇ ಹಟ ಅವನದು.

ಲಕೋಟೆಯನ್ನು ಒಡೆದು ನೋಡಿ

"ಇಂಗ್ಲೀಷ್‌ನಲ್ಲಿದೆ ಮರೀ!" ಎಂದಳು.

"ಅಪ್ಪಗೆ ಕನ್ನಡಾನೇ ಬರೋಲ್ಲ"

ಎಂದು ಎರಡೆರಡು ಬಾರಿ ಅಂದು ಆಡಲು ಹೊರಗೋಡಿದ ಶೀನು.

ಕಾಗದವನ್ನು ಓದಿ ಮುಗಿಸಿ ಯಾರ ಕೈಗೂ ಸಿಗದಂತೆ ಬಚ್ಚಿಟ್ಟು ಮಾಲತಿ ತಾಯಿಯ ಬಳಿ ಬಂದಳು.

"ಏನು ಬರೆದಾರೆಯೇ ನಿನ್ನ ಗಂಡ? ಊಟಕ್ಕೆ ಅನಾನುಕೂಲ ಆಗಿರುತ್ತೆ ಪಾಪ!"

"ಇಲ್ಲ, ಬ್ರೆಡ್ ಮತ್ತು ಹಾಲು ಕೊಡ್ತಾರಲ್ಲ ಆಸ್ಪತ್ರೆಯಲ್ಲಿ?"

"ಆಸ್ಪತ್ರೆ! ಕಾಯಿಲೆ ಏನಂತೆ?"

ಎದ್ದೇಕುಳಿತರು ಮಾಲತಿಯ ತಾಯಿ.

"ಏನೂ ಕಾಯಿಲೆ ಇಲ್ಲಮ್ಮಾ, ನೀನೇಕಷ್ಟು ಗಾಬರಿ ಆಗುತ್ತಿ?"

“ಹಾಗಾದರೆ ಆಸ್ಪತ್ರೆಗೆ ಏಕೆ ಸೇರಿದರಂತೇ?”

“ಏನೋ . . . ಚಿಕ್ಕ . . . ಆಪರೇಷನ್ ಅಂತೆ. . .”

“ಆಪರೇಷನ್ನು ! ”

ಮುದುಕಿ ಎದೆ ಒಡೆದಳು.

“ಸರಿ, ನಿನ್ನ ಮುಂದು ಹೇಳಿದುದೇ ನನ್ನ ತಪ್ಪಾಯಿತು. ಏನೂ ಪ್ರಮಾದವಿಲ್ಲಮ್ಮಾ. ಆಪರೇಷನ್ನೂ ಆಯಿತಂತೆ, ನಾಳೆ ಡಿಸ್‌ಚಾರ್ಜ್ ಆಗಿ ಮನೆಗೇ ಬರ್‍ತಾರಂತೆ. ಅವರೇ ಬರೆದಿದ್ದಾರೆ.”

“ಅಲ್ಲೇ, ಅದೇನೋ ಆಪರೇಷನ್ ಅಂದಿಯಲ್ಲವೇ ? ಏನು ಆಪರೇಷನ್ ಅದು ? ”

“ಆಮೇಲೆ ಹೇಳ್ತೇನೆ ಬಿಡು, ಮಕ್ಕಳು ಇಲ್ಲೇ ಇವೆ”

ನಾಣು ಓದುತ್ತ ಕುಳಿತಿದ್ದರೂ ಅವನ ಗಮನವೆಲ್ಲ ಅಮ್ಮ, ಅಜ್ಜಿಯು ಮಾತಿನ ಮೇಲೆಯೇ ಇತ್ತು.

ಮೆಲುದನಿಯಲ್ಲಿ ತಾಯಿಗೆ ಹೇಳಿದಳು. ಮಾಲತಿ ಕೊಂಚ ಸಮಯದ ನಂತರ.

“ಈ ಮೂರೇ ಮಕ್ಕಳು ಸಾಕು ಅಂತ ಆಪರೇಷನ್ ಅಷ್ಟೇ ನೋಡಮ್ಮ.”

“ಅಂಥಾದೆಲ್ಲ ಒಳ್ಳೆಯದಲ್ಲ ಮಾಲತಿ”







ವಯಸ್ಸಿಗೆ ತಕ್ಕ ಮಾತನಾಡಿ ಸುಮ್ಮನಾದಳು ಮಾಲತಿಯ ತಾಯಿ.

ಶಂಕರ, ಮಾಲತಿ ಬಂಗಾರದಂತಿದ್ದರು ಕೆಲ ಕಾಲ. ದಿನಗಳು ಸಂದುವು.

ಒಂದು ತಿಂಗಳು ಅದಾವುದೋ ಟ್ರೇನಿಂಗ್‌ಗಾಗಿ ಶಂಕರ ದಿಲ್ಲಿಗೆ ಹೋಗಬೇಕಾಯಿತು. 'ಸ್ಪೆಷಲ್ ಜಾಬ್' ಎಂದು ಮೇಲಧಿಕಾರಿಗಳು ಅವನನ್ನೇ ಆರಿಸಿದ್ದಾರೆ.

ಮಾಲತಿ ಬೆನ್ನು ಚಪ್ಪರಿಸುವಂತೆ ಹೇಳಿದಳು ಗಂಡನಿಗೆ.

" ಎಂಟೆ ಬರುವಾಗ ಕಂಣುಮುಚ್ಚಿ ಕೂಡುವುದೇ? ಹೋಗಿಬನ್ನಿ ಒಂದೇ ತಿಂಗಳುತಾನೆ?"

" ನೀನೂ ಬಂದರೆ . . . "

" ಮಕ್ಕಳು?"

" ಸರಿ, ಈ ಸಂಸಾರಕ್ಕೆ ದಿಲ್ಲಿಯಲ್ಲಿ ತಿಂಗಳ ಸಂಬಳ ವಾರಕ್ಕೂ ಸಾಲದು. ನಿಮ್ಮಮ್ಮನ ಮನೆಗೆ ಕಳಿಸಿದರೆ ಹೇಗೆ?"

" ಚೆನ್ನಾಗಿ ಹೇಳಿದಿರಿ. ಸ್ಕೂಲು ಬೇಡವೆ ಅವಕ್ಕೆ? ಆಗ ಅಂದರೆ ಒಂದು ವಾರ, ಇದು ತಿಂಗಳು."

ಇಷ್ಟವೋ ಅನಿಷ್ಟವೊ, ಆಫೀಸಿನ ಕೆಲಸ ಆಗಲೇಬೇಕು. ಶಂಕರ ದಿಲ್ಲಿಗೆ ಹೊರಟ; ರೈಲ್ವೆ ಸ್ಟೇಷನ್ನಿಗೆ ಮಕ್ಕಳೊಂದಿಗೆ ಬಂದಿದ್ದ ಮಾಲತಿ ಗಂಡನಿಗೆ 'ಟಾಟಾ' ಮಾಡಿ ಕಳಿಸಿ ಮನೆಗೆ ಬಂದಳು. ಅದೇಕೊ ಬಿಕೋ ಅನ್ನುತ್ತಿತ್ತು ಮನೆ ಅವಳಿಗೆ.

ಮರುದಿನ, ಬೆಳಗಾಯಿತು. ಗಂಟೆ ಎಂಟಾದರೂ ಮಾಲತಿ ಹಾಸಿಗೆಯಿಂದ ಏಳಳು.

ವೆಂಕು ಕಾಫಿ ತಂದು ಎಬ್ಬಿಸಿದಳು.

" ನನಗೇನೂ ಬೇಡ ಕಣೇ, ತಲೆ ಸುತ್ತಿಕೊಂಡು ಬರುತ್ತೆ"

ಉಬ್ಬಳಿಕೆ ಓಕರಿಕೆ.

ಸಂಜೆಯ ಹೊತ್ತಿಗೆ ಎಲ್ಲವೂ ಸರಿಹೋಯಿತು. ಏನೋ ಪಿತ್ಥವಾಗಿರಬೇಕೆಂದುಕೊಂಡು ಸುಮ್ಮನಾದಳು.

ಮರುದಿನವೂ ಅದೇ ಕಥೆ!

ಮಾಲತಿಯ ಎದೆ ಝುಲ್ಲೆಂದಿತು.

'ಹೇಗಾಯಿತು ?'

ದಿಲ್ಲಿಯಿಂದ ಬರುವ ಶಂಕರನಿಗೆ ಏನೆಂದು ಹೇಳುವುದು ?

ಕಳ್ಳಿಯಂತಾದಳು ಮಾಲತಿ. ಅನ್ನ ರುಚಿಸದು, ನಿದ್ರೆಬಾರದು. ರಾತ್ರಿ ಎಲ್ಲವೂ ಏನೇನೋ ಯೋಚನೆಗಳು. ಅರೆಗಳಿಗೆ ಕಣ್ಮುಚ್ಚಿದರಾಯಿತು, ಸಾಲಾಗಿ ದುಃಸ್ವಪ್ನಗಳು. ಎದೆ ನಡುಗಿತು.

ಅವಳ ದೇಹಸ್ಥಿತಿ ಅವಳಿಗೆ ತಿಳಿಯದೆ? ಮೂರು ಹೆತ್ತ ಹೆಂಣಿಗೆ ನಾಲ್ಕನೆಯದರ ಸುಳಿವು ಅರ್ಥವಾಗದೆ ಇರುತ್ತದೆಯೆ?

'ಈ ಪಿಶಾಚಿ ಹೇಗೆ ಬಂತು?'

ಮಾಲತಿಯ ತಲೆ ಪಾಣಿಪತ್ತು ಆಯಿತು. ಕಟ್ಟಕಡೆಗೆ ಮನೆ ಕೆಲಸದ ಕೆಟ್ಟ ನಾಗಿಯ ಸಹಾಯ ಪಡೆದಳು.

ಅನಿರೀಕ್ಷಿತವಾಗಿ ಒಂದು ವಾರ ಮುಂಚಿತವಾಗಿಯೆ ಮುಗಿಯಿತಂತೆ ಶಂಕರನ ಟ್ರೇನಿಂಗ್. ತಾರನ್ನೂ ಕಳಿಸಲಿಲ್ಲ ಊರಿಗೆ, ಅಷ್ಟು ಆತುರ ಅವನಿಗೆ. ಪ್ಲೇನ್‌ನಲ್ಲಿ ಬಂದಿಳಿದ. ಅದಕ್ಕೂ ವೇಗವಾಗಿ ಬಂದಿತ್ತು ಅವನ ಮನಸ್ಸು ಇಲ್ಲಿಗೆ.




" ನಾನು ನಿನಗೆ ಸುಳ್ಳು ಹೇಳಿದ್ದೆ . . . . ಆಪರೇಶನ್ . . . . ಸುಳ್ಳು."

ಮನೆಗೆ ಬೀಗ.

"ಆಸ್ಪತ್ರೆಯಲ್ಲಿದ್ದಾರೆ."

ಪಕ್ಕದ ಮನೆಯವರು ಹೇಳಿದರು.

ಅದೇ ಟ್ಯಾಕ್ಸಿ ಆಸ್ಪತ್ರೆಗೆ ಓಡಿತು. ಡಾಕ್ಟರ್ ಹೇಳಿದರು.

"ಅದೇನೋ ತಿಂದಿರಬೇಕು, ಗರ್ಭಸ್ರಾವಕ್ಕೆ"

ಮಾಲತಿಗೆ ಕೊಂಚ ಕೊಂಚ ಪ್ರಜ್ಞೆ ಬರಹತ್ತಿತು. ಅರ್ಧ ಕಂಣು ತೆರೆದು ಹಾಗೆಯೇ ನೋಡಿದಳು. ಹುಚ್ಚಿಯಂತೆ ನೋಡಿದಳು, ಶಂಕರ !

"ಎಂತಹ ತಪ್ಪು ಮಾಡಿದೆಯಲ್ಲ ಮಾಲತೀ!"

ಢಡಢಡ ಬಡಿದುಕೊಂಡಿತು ಮಾಲತಿಯ ಹೃದಯ.

"ನಾನು ನಿನಗೆ ಸುಳ್ಳು ಹೇಳಿದ್ದೆ . . . ಆಪರೇಶನ್ . . . ಸುಳ್ಳು."

ಹಾಗೆಯೇ ಕಂಣು ಮುಚ್ಚಿದಳು ಮಾಲತಿ. ಪುಟ್ಟ ನಗುವೊಂದು ಅವಳ ಮುಖದ ಮೇಲೆ ಸುಳಿದೋಡಿತು.

ಈಗ ಶಂಕರ ಮಾಲತಿಗೆ ಎಂಟು ಮಕ್ಕಳು.

ಆಗಾಗ್ಗೆ ಮಾಲತಿ ತನ್ನಲ್ಲಿಯೇ ಅಂದುಕೊಳ್ಳುತ್ತಿರುತ್ತಾಳೆ.

"ಅದೂ ಇದ್ದಿದ್ದರೆ ಒಂಭತ್ತಾಗುತ್ತಿತ್ತು. ಆ ಕೂಸು ಮೋಸ ಮಾಡಿತು."



# ಗೋವಾ ವಿಮೋಚನ ಕತೆ: ನಾವು ಹೇಗೆ ಬೀರಿದೆವು ?

ಲೇಖಕರು:
ಆರ್. ಕೆ. ಜೋಶಿ



**ಕಳೆದ ಡಿಸೆಂಬರದಲ್ಲಿ ಮಾತ್ರ ಪೋರ್ತುಗೀಜರ ಕಪಿಮುಷ್ಟಿಯಿಂದ ವಿಮುಕ್ತವಾದ ಗೋವೆ ಇಂದು ಭರದಿಂದ ಪ್ರಗತಿ ಸಾಧಿಸುತ್ತಲಿದೆ. ಅಂದಿನ ವಿಮೋಚನೆಯ ಕತೆ ಅತ್ಯಂತ ಕುತೂಹಲಕಾರಿಯಾಗಿದೆ. ಭಾರತೀಯ ಸೈನಿಕರು ಗೋವೆಯನ್ನು ಪ್ರವೇಶಿಸುವದೆಂಬುದು ನಿಶ್ಚಿತವಾಗಿದ್ದರೂ ಎಂದು ಹೇಗೆ ಪ್ರವೇಶಿಸುವದೆಂಬುದು ಅತ್ಯಂತ ಗುಪ್ತವಾಗಿದ್ದಿತು. ಗೋವೆಗೆ ತೀರ ಸಮೀಪದಲ್ಲಿದ್ದ ದೊಡ್ಡ ಪತ್ರಿಕೆಯೆಂದರೆ 'ಸಂಯುಕ್ತ ಕರ್ನಾಟಕ' ಒಂದೇ. ಈ ರೋಮಾಂಚಕಾರಿ ಘಟನೆಗಳ ಸುದ್ದಿಗಳನ್ನು ಮೊದಲಿಗೆ ಬೀರುತ್ತಿದ್ದ ಶ್ರೇಯಸ್ಸು ಈ ಪತ್ರಿಕೆಗೆ ಸಲ್ಲುವುದು. ಅದಕ್ಕಾಗಿ ಸಾಕಷ್ಟು ಪರಿಶ್ರಮಪಡಲಾಯಿತು. ಈ ಸುದ್ದಿ ಬೇಟೆಯಾಡಿದ ಬಗೆಯನ್ನು ಮತ್ತು ಅದನ್ನು ಮೊದಲಿಗೆ ಸಾದರಪಡಿಸುವಲ್ಲಿ ಅನುಸರಿಸಿದ ರೀತಿನೀತಿಯನ್ನು ಆ ಪತ್ರಿಕೆಯ ಸಹಾಯಕ ಸಂಪಾದಕರಾದ ಶ್ರೀ ಆರ್. ಕೆ. ಜೋಶಿಯವರು ಈ ಲೇಖನದಲ್ಲಿ ನಿರೂಪಿಸಿದ್ದಾರೆ.**

ಯುದ್ಧಸ್ಯ ವಾರ್ತಾ ರಮ್ಯಾ ಎನ್ನುವಂತೆ, ಎಲ್ಲ ಯುದ್ಧಗಳ ಕತೆ ರಮ್ಯವೂ ಮನೋವೇಧಕವೂ ಮನೋರಂಜಕವೂ ಇರುತ್ತದೆ. ಅದೇ ರೀತಿ ನಾಲ್ಕು ಶತಮಾನಗಳವರೆಗೆ ಪೋರ್ತುಗೀಜರ ಕ್ರೂರ ದಬ್ಬಾಳಿಕೆಯಲ್ಲಿ ಬಳಲಿ ಬೆಂಡಾಗಿದ್ದ ಗೋವೆಯ ವಿಮೋಚನ ಕತೆಯೂ ರಮ್ಯವಿರುತ್ತದೆ. ವಿಮೋಚನ ಕತೆಯಂತೆ, ಆ ಕತೆಯನ್ನು ಆಗ ಪತ್ರಿಕೆಗೆ ಪ್ರತ್ಯಕ್ಷ ವರದಿ ಮಾಡಿದ ವಿವರಣೆ ಸಹ ಅಷ್ಟೇ ಮನೋಹರವಿರುತ್ತದೆಯೆಂದು ಹೇಳುವ ಅಗತ್ಯವಿಲ್ಲ. ನಾನಿಲ್ಲಿ ಬರೆಯುತ್ತಿರುವದು ಇದನ್ನೇ. ಗೋವೆಯ ವಿಮೋಚನೆ ನಡೆದಾಗ "ಸಂಯುಕ್ತ ಕರ್ನಾಟಕ"ವು ಬಿಸಿ ಬಿಸಿ ಸುದ್ದಿಗಳನ್ನೂ ಪ್ರತ್ಯಕ್ಷ ವರದಿಗಳನ್ನೂ ಪ್ರಸಿದ್ಧಿಸುವಲ್ಲಿ ಭಾರತದಲ್ಲಿಯೇ ಮೊದಲನೆಯದೆಂದು ಕೀರ್ತಿ ಪಡೆದಿದೆ. ಈ ಮಹಾ ಕಾರ್ಯ ಹೇಗೆ ಸಾಧ್ಯವಾಯಿತು, ಇದನ್ನು ನಾವು ನಿರ್ವಹಿಸಿದುದು ಹೇಗೆ ಎಂಬದನ್ನು 'ಕರ್ಮವೀರ'ದ ವಾಚಕರಿಗೆ ಈ ದೀಪಾವಳಿಯ ಸಂದರ್ಭದಲ್ಲಿ ನೀಡಬಯಸುತ್ತೇನೆ.

## ಅವಸರದ ಕರೆ

ಡಿಸೆಂಬರ ೮, ೧೯೬೧ ಮಧ್ಯಾನ್ಹ ೧-೦೦ ಗಂಟೆಯ ಸಮಯ. ಬೆಂಗಳೂರಿನ ನಮ್ಮ ಕಾರ್ಯಾಲಯದಲ್ಲಿ ಏನೋ ಓದುವದರಲ್ಲೋ ಬರೆಯುವದರಲ್ಲೋ ಮಗ್ನನಾಗಿದ್ದೆ. ನನ್ನ ಮೇಜಿನ ಮೇಲಿದ್ದ ಟೆಲಿಫೋನ ಗಂಟೆ ಟ್ರಣ್ .... ಟ್ರಣ್ ... ಎಂದು ಬಾರಿಸಿತು. ರೀಸಿವರನ್ನು ಎತ್ತಿ ಕಿವಿಗೆ ಹಿಡಿದುಕೊಂಡೆ. 'ಸರ್, ಹುಬ್ಬಳ್ಳಿಯಿಂದ ನಿಮಗೆ ವಿಶೇಷ ಕರೆ ಇದೆ' ಎಂದು ಟೆಲಿಫೋನ ಆಪರೇಟರ ತಿಳಿಸಿದ. ಕೊಡು ಎಂದು ಹೇಳಿದೆ. ಟೆಲಿಫೋನಿನಲ್ಲಿ ಮಾತಾಡಿದವರು ನಮ್ಮ ಹುಬ್ಬಳ್ಳಿ ಕಾರ್ಯಾಲಯದ ಸಹಕಾರಿಗಳೇ. "ಗೋವೆಯ ಪರಿಸ್ಥಿತಿ ಉಲ್ಬಣವಾಗುತ್ತಿದೆ. ಬೆಳಗಾವಿಯಲ್ಲಿ ಅಪಾರ ಸೈನ್ಯ ಸಂಗ್ರಹವಾಗಿದೆ. ಯಾವ ನಿಮಿಷದಲ್ಲೂ ದಾಳಿಯಾಗಬಹುದು. ಬೆಳಗಾವಿ ಸುದ್ದಿಗಾರನೊಬ್ಬನಿಂದಲೇ ಈ ಈ ಕಾರ್ಯ ನೀಗದು. ಹೆಚ್ಚು ಜನ ಬೇಕು. ನೀವು ಕೂಡಲೇ ಹೊರಟು ಹುಬ್ಬಳ್ಳಿಗೆ ಬರಬೇಕು' ಟೆಲಿಫೋನ ಸಂದೇಶ. "ಆಗಲಿ ವಿಚಾರಿಸುತ್ತೇನೆ"ಎಂದು ಉತ್ತರಿಸಿ ರಿಸೀವರನ್ನು ಕೆಳಗಿರಿಸಿದೆ.

ವಿಚಾರಗಳು ಒಂದೊಂದಾಗಿ ಮುತ್ತತೊಡಗಿದವು. ನಮ್ಮ ನಿತ್ಯದ ಟೆಲಿಪ್ರಿಂಟರ ಸಂಪರ್ಕ ಪ್ರಾರಂಭವಾಗಲು ಇನ್ನೂ ಒಂದು ಗಂಟೆ ಇತ್ತು. ಆವರೆಗೂ ಕಾಯದೆ, ಅವಸರದಿಂದ ಹೀಗೆ ಟೆಲಿಫೋನ ಮಾಡಿದ್ದೇಕೆ? ಪರಿಸ್ಥಿತಿ ನಿಜವಾಗಿಯೂ ಅಷ್ಟು ಗಂಭೀರವಾಗಿದೆಯೇ? ಇವತ್ತೇ ವಿಮೋಚನ ದಾಳಿ ಪ್ರಾರಂಭವಾದರೆ ನಾನೇನು ಮಾಡಬೇಕು? ಗೋವೆಗೆ ಸಮೀಪವಿದ್ದ ದೊಡ್ಡ ಪತ್ರಿಕೆಯೆಂದರೆ ಸಂಯುಕ್ತ ಕರ್ನಾಟಕ ಮಾತ್ರ. ಆದುದರಿಂದ ನಮ್ಮಮೇಲಿನ ಹೊಣೆ ಭಾರವಾಗಿತ್ತು. ಗೋವೆಯ ದಾಳಿಯ ಚಿನ್ಹಗಳು ಕಂಡುಬರಲಾರಂಭಿಸಿದ್ದು ಡಿಸೆಂಬರ ೮ ರಿಂದಲೇ ಅಲ್ಲ. ಅದಕ್ಕಿಂತ ಮೊದಲೇ. ಡಿಶಂಬರ ೧ ನೇ ದಿನಾಂಕ ಮದ್ದು ಗುಂಡು ಮತ್ತು ಸೈನಿಕರಿಂದ ತುಂಬಿದ ಮೊದಲನೆಯ ವಿಶೇಷ ರೈಲು ಬಂಡಿ ಬೆಳಗಾವಿ ನಿಲ್ದಾಣದಲ್ಲಿ ಬಂದಿಳಿದಾಗಿನಿಂದಲೂ ಯುದ್ಧದ ವಾತಾವರಣ ಸುತ್ತಲೂ ಪಸರಿಸಿತ್ತು. ದಿಲ್ಲಿಯಿಂದ ಬೆಂಗಳೂರ ವರೆಗೆ ಅನೇಕ ಪ್ರವಾಸಿಕರ ರೈಲು ಗಾಡಿಗಳು ಮೂರು-ನಾಲ್ಕು ದಿನ ತಡೆಹಿಡಿಯಲ್ಪಟ್ಟು, ಸೈನಿಕರ ಗಾಡಿಗಳ ತ್ವರಿತ ರವಾನೆಗೆ ದಾರಿ ಮಾಡಿಕೊಡಲಾಗಿತ್ತು. ೧೯೪೮ ರಲ್ಲಿ ಜರುಗಿದ ಹೈದರಾಬಾದ ವಿಮೋಚನೆಯ ಅನುಭವವಿದ್ದ ನಾವಾದರೂ ಪರಿಸ್ಥಿತಿಯನ್ನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನಿರೀಕ್ಷಿಸುತ್ತಿದ್ದೆವು. ಹೈದರಾಬಾದ ವಿಮೋಚನೆ ಅತ್ಯಂತ ಗುಪ್ತವಾಗಿ ಆರಂಭವಾಗಿತ್ತು. ನಮ್ಮ ಸೈನಿಕರು ಹೈದರಾಬಾದ ಗಡಿಯಲ್ಲಿ ಪ್ರವೇಶಿಸಿದ ಮರುದಿನ ನಸುಕಿನಲ್ಲಿಯೇ ಜಗತ್ತಿಗೆ ಪೋಲೀಸ ಕ್ರಮದ ಸುದ್ದಿ ಗೊತ್ತಾಯಿತು. ಗಡಿಯಲ್ಲಿ ಸೈನ್ಯ ಸಂಗ್ರಹವೂ ಗುಪ್ತವಾಗಿ ನಡೆದಿತ್ತು. ಸೈನಿಕರಿಂದ ತುಂಬಿದ ಗಾಡಿಯೊಂದು ಮುಂಬಯಿ ಕಡೆಯಿಂದ ಬಂದು ಧಾರವಾಡದಲ್ಲಿ ಎರಡು ನಿಮಿಷ ತಂಗಿ, ಹುಬ್ಬಳ್ಳಿಯಲ್ಲಿ ನಿಲ್ಲದೆ ಗದುಗಿಗೆ ಹೋದುದನ್ನು ನಾನು ಪ್ರತ್ಯಕ್ಷ ನೋಡಿದ್ದರೂ ಅದು ಪೋಲೀಸ ಕ್ರಮಕ್ಕಾಗಿಯೇ ಬಂದಿದೆ ಎಂದು ಗುರುತಿಸುವುದು ಸಾಧ್ಯವಾಗಲಿಲ್ಲ. ಈ ರೈಲುಗಾಡಿಗಳ ಚಲನವಲನಗಳನ್ನು ನಿಯಂತ್ರಿಸುತ್ತಿದ್ದ ಉಚ್ಚ ರೇಲ್ವೆ ಅಧಿಕಾರಿ ನನ್ನ ಪರಿಚಯದವನಿದ್ದರೂ ಮುಂಬರುವ ಕ್ರಮದ ಸುಳುವು ಹತ್ತಲಿಲ್ಲ. ಆಗಿನ ಸಿದ್ಧತೆ ಅಷ್ಟೊಂದು ಗೌಪ್ಯವಿತ್ತು. ಈಗಲೂ ಅವರ ಪುನರುಚ್ಚಾರವಾಗಬಹುದೇ? ಎಂಬ ವಿಚಾರ

ಸುಳಿದು ಹೋಯಿತು. ಆದರೆ ಸೈನ್ಯ ಸಂಗ್ರಹ ಬಹಿರಂಗವಾಗಿಯೇ ನಡೆದಿತ್ತು. ಬೆಳಗಾವಿ ಯುದ್ಧದ ಸನ್ನಿಧಿಕೇಂದ್ರವಾಗಿ ಪರಿಣಮಿಸಿತ್ತು. ಬೆಳಗಾವಿಯೊಡನೆ ನಿತ್ಯ ಸಂಪರ್ಕವಿಟ್ಟುಕೊಂಡು ಪರಿಸ್ಥಿತಿಯನ್ನು ಅರಿತುಕೊಳ್ಳುತ್ತಿದ್ದರೂ ಯಾವಾಗ ಏನು ಸಂಭವಿಸೀತೆಂಬುದು ನಿರೀಕ್ಷೆಗೆ ನಿಲುಕದಾಗಿತ್ತು. ಮೇಲೆ ಈ ಅವಸರದ ಕರೆ. ಆದುದರಿಂದ ಕೂಡಲೇ ಹುಬ್ಬಳ್ಳಿಗೆ ಹೊರಡುವದೆಂದು ನಿಶ್ಚಯಿಸಿ ಅಂದು ಸಾಯಂಕಾಲದ ರೈಲಿನಿಂದ ಬೆಂಗಳೂರು ಬಿಟ್ಟು ಮರುದಿನ ಹುಬ್ಬಳ್ಳಿ ತಲುಪಿದೆ. ಅಲ್ಲಿ ಸಹಕಾರಿಗಳೊಡನೆ ಪರಿಸ್ಥಿತಿ ಕುರಿತು ವಿಚಾರಿಸಿದೆ. ಎಲ್ಲವೂ ಗಂಭೀರಾವಸ್ಥೆಗೆ ಬಂದು ಮುಟ್ಟಿತ್ತು. ನಮ್ಮ ಸುದ್ದಿಗಾರರಲ್ಲೊಬ್ಬರಾದ ಶ್ರೀ ಆರ್. ಎಸ್. ಉಪಾಧ್ಯಾಯರನ್ನು ಸಾವಂತವಾಡಿ ಗಡಿಗೆ ಕಳಿಸಲಾಗಿತ್ತು. ನಾನು ಮರುದಿನ ಬೆಳಗ್ಗೆ ಬೆಳಗಾವಿಗೆ ಹೋಗಿ ಪರಿಸ್ಥಿತಿಯ ಪ್ರತ್ಯಕ್ಷ ಪರಿಶೀಲನೆ ಮಾಡಬೇಕೆಂದೂ ಆನಂತರ ತಕ್ಕ ವ್ಯವಸ್ಥೆ ಮಾಡಬೇಕೆಂದೂ ಗೊತ್ತಾಯಿತು.

**ಬೆಳಗಾವಿಯಲ್ಲಿ**

ಡಿಶೆಂಬರ ೧೧ ರಂದು ಬೆಳಿಗ್ಗೆ ಬೆಳಗಾವಿಗೆ ತೆರಳಿದೆ. ಅಲ್ಲಿ ನಮ್ಮ ಸುದ್ದಿಗಾರರಾಗಿರುವ ಶ್ರೀ ಎಂ. ವಿ. ಮುತಾಲಿಕದೇಸಾಯಿಯವರನ್ನು ಕೂಡಿಕೊಂಡು ನಮ್ಮ ಮೋಟರ ವ್ಯಾನಿನಲ್ಲಿ ನಗರವನ್ನು ಪೂರ್ಣ ಸುತ್ತುಹಾಕಿದೆ. ಪರಿಚಯವಿದ್ದ ನಗರದ ಪ್ರತಿಷ್ಠಿತ ನಾಗರಿಕರನ್ನೂ ಉಚ್ಚ ಸಿವಿಲ್ ಅಧಿಕಾರಿಗಳನ್ನೂ ಕಂಡು ಪರಿಸ್ಥಿತಿಯನ್ನು ಚರ್ಚಿಸಿದೆ. ನಗರದ ವಿಶೇಷತಃ ಕ್ಯಾಂಟೋನಮೆಂಟದ ಬೀದಿಗಳು ಸೈನಿಕರಿಂದ ತುಂಬಿದ್ದವು. ವಿಶಾಲವಾದ ಬಯಲುಗಳು ಸೈನಿಕರ ಡೇರೆಗಳಿಂದ ಮುಚ್ಚಿಹೋಗಿದ್ದವು. ಎಲ್ಲಿ ನೋಡಿದರೂ ಸೈನಿಕರ ಟ್ರಕ್ಕುಗಳ ಓಡಾಟವೇ ಓಡಾಟ. ಅನೇಕ ಟ್ರಕ್ಕುಗಳು ಸೈನಿಕ ಉಪಕರಣಗಳನ್ನು ತಂದಿಳಿಸುತ್ತಿದ್ದವು. ಸಲಕರಣೆಗಳ ಸಾರಿಗೆಗೆ ಖಾಸಗಿ ಟ್ರಕ್ಕುಗಳನ್ನೂ ಹಿಡಿಯಲಾಗಿತ್ತು. ಬೆಳಗಾವಿ-ಖಾನಾಪೂರ ಮತ್ತು ಬೆಳಗಾವಿ-ಸಾವಂತವಾಡಿ ರಸ್ತೆಗಳ ಇಕ್ಕೆಲದಲ್ಲಿ ಸೈನಿಕರು ಡೇರೆಗಳಲ್ಲಿ ತಳವೂರಿದ್ದರು. ಸ್ವಲ್ಪದರಲ್ಲಿ ಹೇಳುವುದಾದರೆ ಹತ್ತೇ ದಿನಗಳಲ್ಲಿ ಬೆಳಗಾವಿ ಯುದ್ಧದ ನೆಲೆಯಾಗಿ ಪರಿವರ್ತನೆಗೊಂಡಿದ್ದಿತು. ಹೀಗಿದ್ದರೂ ಮುಂದೇನಾಗುವದೆಂಬುದು ತಿಳಿಯುವಂತಿದ್ದಿಲ್ಲ. ಗಣ್ಯನಾಗರಿಕರು ಹಾಗೂ ಸಿವಿಲ್ ಅಧಿಕಾರಿಗಳು ಉಳಿದವರಷ್ಟೇ ಅಜ್ಞಾನಿಗಳಿದ್ದರು. ಸೈನಿಕ ಅಧಿಕಾರಿಗಳು ಕೈಗೆ ಸಿಗುವಂತಿದ್ದಿಲ್ಲ. ಆಝಾದ ಗೋಮಾಂತಕ ದಲದವರು ಮಾತ್ರ ಉತ್ಸುಕರಾಗಿದ್ದರು. ಪೋಲೀಸ ಕ್ರಮದ ಬಗ್ಗೆ ಅವರಲ್ಲಿ ನಿರೀಕ್ಷೆಯೇನೂ ಇದ್ದಿಲ್ಲ. ಆದರೆ ಈಗಲೇ ಕ್ರಮ ಕೈಕೊಳ್ಳಬೇಕು ಇಲ್ಲವಾದರೆ ಮುಂದೆಂದೂ ಸಾಧ್ಯವಾಗಲಿಕ್ಕಿಲ್ಲ ಇತ್ಯಾದಿ ಅವರು ಮಾತನಾಡುತ್ತಿದ್ದರು. ಗೋವೆಯ ಆಂತರಿಕ ಪ್ರದೇಶಗಳೊಡನೆ ಅವರ ಸಂಪರ್ಕವಿದ್ದುದರಿಂದ ಆಗಾಗ ತುಣುಕು ಸುದ್ದಿಗಳು ತಿಳಿಯುತ್ತಿದ್ದವು. ಗಡಿರಕ್ಷಣಾ ಪೋಲೀಸ ಪಡೆಯ ವರಿಷ್ಠಾಧಿಕಾರಿಗಳಾಗಿದ್ದ ಶ್ರೀ. ಹಂಡು ಅವರು ಅದು ವರೆಗೆ ಗೋವಾ ಸುದ್ದಿಗಳಿಗೆ ಮೂಲಾಧಾರರಾಗಿದ್ದರು. ಅವರನ್ನು ಕಾಣಬೇಕೆನ್ನುವಷ್ಟರಲ್ಲಿ, ಭಾರತ ಸರಕಾರವು ಶ್ರೀ. ಡಿಪಿನ್ಟಾ ಎಂಬುವರನ್ನು ವಿಶೇಷ ಸುದ್ದಿ ಅಧಿಕಾರಿಗಳನ್ನಾಗಿ ದಿಲ್ಲಿಯಿಂದ ಕಳಿಸಿರುವದೆಂದೂ ಅವರು ಹನ್ನೆರಡು ಗಂಟೆಗೆ ಕಮೀಶನರರ ಕಚೇರಿಯಲ್ಲಿ ಸುದ್ದಿಗಾರರನ್ನು ಭೆಟ್ಟಿಯಾಗುವರೆಂದೂ ನಮಗೆ ಹೇಳಲಾಯಿತು. ಅವರು ಹೇಳಿದ ವೇಳೆಗೆ ಸಭೆಯೂ ಜರುಗಿತು. ಶ್ರೀ. ಡಿಪಿನ್ಟಾ ಒಂದೆರಡು ಸುದ್ದಿ ತಿಳಿಸಿದರು. ಆದರೆ ಪೋಲೀಸ ಕ್ರಮದ ಬಗ್ಗೆ ಏನನ್ನೂ ಹೇಳಲಿಲ್ಲ. ಮುಂದೆ ಪ್ರತಿದಿನ ಎರಡು-ಮೂರು ಸಲ ಸೇರುವದಾಗಿ ಮಾತ್ರ ನುಡಿದರು.

**ಸುದ್ದಿಗಾಗಿ ಬೇಟೆ**

ಇವನ್ನೆಲ್ಲ ನಿರೀಕ್ಷಿಸಿದನಂತರ ಪೋಲೀಸ ಕ್ರಮ ತೀರ ಸನ್ನಿಹಿತವಾಗಿದೆಯೆಂದು ನನಗೆ ಮನದಟ್ಟಾಯಿತು. ಬೆಳಗಾವಿಯಲ್ಲೇ ತಳವೂರುವುದಾಗಿ ನಿಶ್ಚಯಿಸಿ, ಸತ್ಕಾರ ಹೊಟೆಲಿನಲ್ಲಿ ಒಂದು ದೊಡ್ಡ ಕೋಣೆ ಹಿಡಿದೆನು. ಅಂದಿನಿಂದ ಸುದ್ದಿಗಾಗಿ ಬೇಟೆಯಾಡುವದೇ ನನ್ನ ಮುಖ್ಯ ಧ್ಯೇಯವಾಯಿತು. ಕೇವಲ ಸುದ್ದಿ ತರುವ ಕೆಲಸ ಅಲ್ಲಿದ್ದಿಲ್ಲ. ಬೇಟೆನಾಯಿಯಂತೆ, ಗುರಿಯ ವಾಸನೆ ಹಿಡಿದು ನಡೆಯಬೇಕಾಗುತ್ತಿತ್ತು. ಅಧಿಕಾರಿಗಳನ್ನು ಕಾಣುವದು, ಅವರೊಡನೆ ಏನಾದರೂ ಹರಟೆ ಹೊಡೆದು ಅಪ್ರತ್ಯಕ್ಷವಾಗಿ ಏನಾದರೂ ತಿಳಿದುಕೊಳ್ಳುವ ಕ್ರಮ ದಿನವೂ ಸಾಗಿತ್ತು. ಜನರಲ್ ಜೆ, ಎನ್. ಚೌಧರಿಯವರನ್ನೊಳಗೊಂಡು ಅನೇಕ ಉಚ್ಚ ಸೈನ್ಯಾಧಿಕಾರಿಗಳು ಅಲ್ಲಿ ಬೀಡುಬಿಟ್ಟಿದ್ದರೂ ಅವರ ಸಂದರ್ಶನ ನಮಗೆ ದುಸ್ಸಾಧ್ಯವಿತ್ತು. ಆದರೂ ಇತರ ಸಾಧನಗಳ ಮೂಲಕ ಸುದ್ದಿ ತೆಗೆಯುವ ನಮ್ಮ ಪ್ರಯತ್ನಗಳನ್ನು ಮಾತ್ರ ಕಡಿಮೆ ಮಾಡಲಿಲ್ಲ. ದಿನವೂ ಒಂದು ಹೊಸ ಸುದ್ದಿ ಕೊಡದೆ ನನಗೆ ನಿದ್ರೆ ಬರುತ್ತಿದ್ದಿಲ್ಲ.

ಹೀಗೆ ಮೂರು ದಿನಗಳು ಕಳೆದವು. ಪೋಲೀಸ ಕ್ರಮಕ್ಕೆ ಇನ್ನು ಒಂದು ವಾರವಾದರೂ ಬೇಕಾಗಬಹುದೆಂಬ ವಾತಾವರಣ ನಿರ್ಮಾಣವಾಗಿತ್ತು. ಆಗ ಒಂದು ದಿನ ಹುಬ್ಬಳ್ಳಿಗೆ ಹೋಗಿಬರಲು ನಿರ್ಣಯಿಸಿ ಡಿಶಂಬರ ೧೪ ನೇ ದಿನಾಂಕ ಬಂದೆನು. ಅಂದು ನನ್ನ ದೇಹ ಹುಬ್ಬಳ್ಳಿಯಲ್ಲಿದ್ದರೂ ಕಣ್ಣು, ಮನಸ್ಸು ಎಲ್ಲವೂ ಬೆಳಗಾವಿಯಲ್ಲಿಯೇ. ರಾತ್ರಿ ಏನೋ ಓದುತ್ತ ಮನೆಯಲ್ಲಿ ಹಾಗೆಯೆ ಒರಗಿದ್ದೆ. ೧೧ ಗಂಟೆಯಾಗಿರಬಹುದು, ನಮ್ಮ ಕಾರ್ಯಾಲಯದಿಂದ ಅವಸರದ ಕರೆ ಬಂದಿತು. ಒಂದು ನಿಮಿಷವನ್ನೂ ಕಳೆದುಕೊಳ್ಳದೆ ಹೊರಟೆ. ಕಾರ್ಯಾಲಯದಲ್ಲಿ ಬಂದು ನೋಡಿದಾಗ, Military operation against Goa is imminent— ಗೋವೆಯ ವಿರುದ್ಧ ಸೈನಿಕ ಕ್ರಮ ಈಗಲೋ ಇನ್ನೊಂದು ಗಳಿಗೆಗೋ ಎಂಬ ಪಿ. ಟಿ. ಐ. ವರದಿ ನನಗಾಗಿ ಕಾದಿತ್ತು. ಅದನ್ನು ಮುಖಪುಟದ ಮೇಲೆ ಎದ್ದು ಕಾಣುವಂತೆ ಪ್ರಕಟಿಸಲು ಸಹಕಾರಿಗಳಿಗೆ ಹೇಳಿ, ಟೆಲಿಫೋನ ಮುಂದೆ ಕುಳಿತು ಬೆಳಗಾವಿಯ ನಾಲ್ಕಾರು ನಂಬರುಗಳಿಗೆ, ನಮ್ಮ ವರದಿಗಾರನಿಗೆ ಅರ್ಜಂಟ ಕರೆ ಕೊಟ್ಟೆನು. ಅವುಗಳಲ್ಲಿ ಎರಡು ಮೂರು ಸಂಪರ್ಕಗಳು ದೊರೆತವು. ಅವರಿಗೆಲ್ಲ ನಾನು ಪಿ. ಟಿ. ಐ. ವರದಿ ತಿಳಿಸಿ, ವಿವರ ಕೇಳಿದಾಗ ಅವರಿಗೂ ಆಶ್ಚರ್ಯವಾಯಿತು. ಈ ಸುದ್ದಿಯೇ ಬೆಳಗಾವಿಯಲ್ಲಿ ಇಲ್ಲ ಎಂದು ಅವರೆಲ್ಲರೂ ರಾಗ ಎಳೆದರು. ಇದು ಬೆಳಗು ಮುಂಜಾವಿನ ೩ ಗಂಟೆಯ ವರೆಗೂ ನಡೆಯಿತು. ಪತ್ರಿಕೆಯ ಮುದ್ರಣ ಸಮಯ ಮೀರುತ್ತ ಬಂದರೂ ನಿಶ್ಚಿತವಾಗಿ ಏನೂ ತಿಳಿಯದ್ದರಿಂದ ಬಹಳ ನಿರಾಶೆಯಾಯಿತು.

ಡಿಶಂಬರ ೧೫ ರಂದು ನಸುಕಿನಲ್ಲಿ ಮತ್ತೆ ಬೆಳಗಾವಿಗೆ ಹೊರಟೆ. ಅಷ್ಟೊತ್ತಿಗೆ ಅಲ್ಲಿದ್ದ ಸುದ್ದಿಗಾರರ ತಂಡ ಬೆಳೆದಿತ್ತು. ಕೆಲ ವಿದೇಶೀಯರನ್ನೊಳಗೊಂಡು ನಮ್ಮ ಬಳಗದಲ್ಲಿ ೫೦ ಜನರಿದ್ದರು. ಅವರೊಡನೆ ನಾನು ಮಾತಾಡಿದಾಗ ನನ್ನನ್ನೇ ಪೆದ್ದನನ್ನಾಗಿ ಮಾಡಿದರು. ಬೆಳಗಾವಿಯಲ್ಲಿ ಯಾವ ದೊಡ್ಡ ಪತ್ರಿಕೆಗಳು ಇರದ್ದರಿಂದ ಅಲ್ಲಿಗೆ ಪಿ. ಟಿ. ಐ. ವರದಿಗಳು ಬರುತ್ತಿದ್ದಿಲ್ಲ. ಸೇನಾಧಿಕಾರಿಗಳೂ ನನ್ನ ವರದಿ

ಕೇಳಿ ಚಕಿತರಾದರು. ಆಗ ಪಿ. ಟಿ. ಐ. ಪ್ರತಿನಿಧಿಗಳಲ್ಲೊಬ್ಬರಾದ ಶ್ರೀ ಗುರ್ಜರ ಇವರನ್ನು ಕಂಡು ವಿಶ್ವಾಸದಿಂದ ಕೇಳಿದೆ. ತಮ್ಮ ದಿಲ್ಲಿ ಕಾರ್ಯಾಲಯವು ಆ ರೀತಿ ತಿಳಿಸಿತ್ತೆಂದು ಅವರು ವಿವರಿಸಿದರು. ಇಲ್ಲಿಗೆ ಈ ಪ್ರಕರಣವನ್ನು ಮುಕ್ತಾಯಗೊಳಿಸಿದೆ. ದಿ. ೧೫ ರಂದು ದಾಳಿ ಮಾಡಲು ಭಾರತ ಸರಕಾರವು ಮೊದಲು ನಿರ್ಧರಿಸಿತ್ತು. ಆದರೆ ಅಮೇರಿಕೆಯ ಅಪೇಕ್ಷೆಯಂತೆ ಅದನ್ನು ಮುಂದೂಡಲಾಯಿತೆಂದು ಪ್ರಧಾನ ಮಂತ್ರಿ ಪಂ. ನೆಹರು ಕೆಲದಿನಗಳ ನಂತರ ಲೋಕಸಭೆಯಲ್ಲಿ ಹೇಳಿಕೆ ಕೊಟ್ಟಿದ್ದು ನೆನಪಿನಲ್ಲಿರಬಹುದು.

## ಗಡಿಸುದ್ದಿಗಾರರೊಂದಿಗೆ ದೈನಿಕ ಸಂಪರ್ಕ

ಅಂದು ಮಧ್ಯಾಹ್ನದಿಂದ ಮತ್ತೆ ಸುದ್ದಿ ಬೇಟೆ ಎಂದಿನಂತೆ ಆರಂಭವಾಯಿತು. ಶ್ರೀ. ಡಿಪಿನ್ಹಾ ಅವರು ಹೇಳುವದಕ್ಕಿಂತ ಹೆಚ್ಚು ದೊರಕಿಸುವದು ನಮ್ಮ ಧ್ಯೇಯವಾಗಿತ್ತು. ಅದಕ್ಕಿಂತ ಹೆಚ್ಚಾಗಿ, ಸೈನಿಕ ಕ್ರಮ ಪ್ರಾರಂಭವಾದರೆ, ಅದನ್ನು ನಾವೇ ಮೊದಲು ದೊರಕಿಸಬೇಕು, ನಮ್ಮ ಪತ್ರಿಕೆಯೇ ಮೊದಲು ಪ್ರಕಟಿಸಬೇಕೆಂಬ ಹಿರಿಯಾಸೆ ನನ್ನಲ್ಲಿತ್ತು. ಅದಕ್ಕಾಗಿ ಸಾಧನಗಳನ್ನು ಹುಡುಕತೊಡಗಿದೆ. ಕಾರವಾರಕ್ಕೆ ನಮ್ಮ ಕಾರ್ಯಾಲಯದ ಶ್ರೀ ಎಸ್. ವ್ಹಿ. ಹೆಗಡೆಯವರನ್ನು ಕಳಿಸಿ ಅವರಿಗೆ ನನ್ನೊಡನೆ ದಿನಾಲೂ ಟೆಲಿಫೋನ ಮೂಲಕ ಸಂಪರ್ಕ ವಿಟ್ಟುಕೊಳ್ಳುವಂತೆ ತಿಳಿಸಿದೆ. ಸಾವಂತವಾಡಿಯಲ್ಲಿದ್ದ ಶ್ರೀ. ಉಪಾಧ್ಯ ಆ ಗಡಿಯಲ್ಲಿಯ ವಿದ್ಯಮಾನಗಳನ್ನು ದಿನವೂ ತಿಳಿಸುತ್ತಿದ್ದರು. ಅವರನ್ನು ದಿನಾಂಕ ೧೬ ರಂದು ಬರಮಾಡಿಕೊಂಡು ಅನೇಕ ವಿಷಯಗಳನ್ನು ಪ್ರತ್ಯಕ್ಷ ತಿಳಿದುಕೊಂಡೆ. ಅವುಗಳಲ್ಲಿ ಎರಡು ಮುಖ್ಯವಾಗಿದ್ದವು. ನಮಗೆ ಮುಂದೆ ಮಾರ್ಗದರ್ಶಕವೂ ಆಗಿದ್ದವು. (೧) ಸಾವಂತವಾಡಿಯಲ್ಲಿಯ ಸಿವಿಲ್ ಆಸ್ಪತ್ರೆಯನ್ನು ದಿ. ೧೮ ರಿಂದ ಸೈನಿಕ ಶಾಖೆಯವರು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಲಿದ್ದಾರೆ ಮತ್ತು (೨) ಸಾವಂತವಾಡಿ ಗಡಿಯವರೆಗೆ ಇದು ವರೆಗೆ ಬಂದುದು ಸೈನಿಕ ಭಟರಲ್ಲ, ಪೂರ್ವ ವ್ಯವಸ್ಥೆ ಮಾಡುವವರು. ಭಟ ಸೈನಿಕರು ಬೆಳಗಾವಿಯಲ್ಲಿ ಅಥವಾ ಸಮೀಪದಲ್ಲಿ ತಳವೂರಿರುವರು. ದಾಳಿಯ ದಿನವೇ ಅವರು ಹೊರಟುಬರುತ್ತಾರೆಂದು ಅವರು ನನಗೆ ತಿಳಿಸಿದರು.

ಅದನ್ನು ಕೇಳಿ ನನಗೆ ಪರಮಾನಂದವಾಯಿತು. ಬಂಗಾರದ ಗಣಿಯೇ ಸಿಕ್ಕಂತಾಯಿತು. ಸಮಯ ಸಿಕ್ಕರೆ ಸಾವಂತವಾಡಿ ಗಡಿ ನೋಡಲು ಬರುವೆನೆಂದು ಅವರಿಗೆ ತಿಳಿಸಿ ಬೀಳ್ಕೊಟ್ಟು, ಹೊಸ ಸೂತ್ರಗಳ ಆಧಾರದ ಮೇಲೆ ಸುದ್ದಿಬೇಟೆಯನ್ನು ಮತ್ತೆ ಆರಂಭಿಸಿದೆ. ನಮ್ಮ ಹುಬ್ಬಳ್ಳಿ ಹಾಗೂ ಬೆಂಗಳೂರು ಕಾರ್ಯಾಲಯಗಳಿಗೂ ಮುನ್ಸೂಚನೆ ಕೊಟ್ಟೆ.

ಬೆಳಗಾವಿಯಲ್ಲಿಯ ಅತ್ಯುಚ್ಚ ಅಧಿಕಾರಿಯೊಬ್ಬರು ನನಗೆ ತೀರ ಪರಿಚಿತರಿದ್ದರು. ಈ ಕಾರ್ಯದಲ್ಲಿ ನನಗೆ ನೆರವಾಗಲು ಅವರಿಂದ ಅಭಯ ಪಡೆದಿದ್ದೆ. ಆದರೆ ಯಾರನ್ನೂ ನಂಬಿ ಕುಳಿತುಕೊಳ್ಳುವಂತಿದ್ದಿಲ್ಲ. ಹೊಸ ಆಧಾರಗಳನ್ವಯ ದಿ. ೧೮ ರಂದು ರಾತ್ರಿ ಸೈನಿಕ ಕ್ರಮ ಆರಂಭವಾಗುವದು ನಿಶ್ಚಿತವೆಂದು ನನ್ನ ಆತ್ಮ ಹೇಳುತಿತ್ತು. ಆದರೆ ಅದನ್ನು ಕಂಡುಹಿಡಿಯುವದು ಹೇಗೆ? ಬೆಳಗಾವಿ ಸಿವಿಲ್ ಆಸ್ಪತ್ರೆಯನ್ನೂ ಸ್ವಾಧೀನಪಡಿಸಿಕೊಳ್ಳಲಾಗುವದೋ ಎಂದು ವಿಚಾರಿಸಿದೆ. ಬೆಳಗಾವಿಯಲ್ಲಿ ಮಿಲಿಟರಿಯ ಪ್ರತ್ಯೇಕ ವ್ಯವಸ್ಥೆ ಇರುವದೆಂದು ತಿಳಿಯಿತು. ಆ ನಂತರ ಬೆಳಗಾವಿ–ಖಾನಾಪೂರ ಹಾಗೂ ಬೆಳಗಾವಿ–ಸಾವಂತವಾಡಿ ರಸ್ತೆಗುಂಟ ನಮ್ಮ ವ್ಯಾನಿನಲ್ಲಿ ಸಂಚರಿಸಿ ಸೈನಿಕರು ಅಲ್ಲಲ್ಲಿ ಬೀಡುಬಿಟ್ಟಿದ್ದನ್ನು ಕಂಡೆ. ಈ ಜನರು ಎಂದು ತಳಕಿತ್ತುವರೋ ಅಂದೇ ದಾಳಿ ಎಂದು ನಿಶ್ಚಯಿಸಿ ದಿನಾಲು ಆ ಪ್ರದೇಶದ ಮೇಲೆ ಕಣ್ಣಿಡಲಾರಂಭಿಸಿದೆ,

## ಸೈನಿಕ ಕ್ರಮದ ಸುದ್ದಿ

ಡಿಸೆಂಬರ ದಿ. ೧೮ ಬೆಳಗಾಯಿತು. ಅಂದು ಕಿವಿ, ಕಣ್ಣುಗಳನ್ನು ಅಗಲವಾಗಿಸಿಕೊಂಡು ಅಡ್ಡಾಡುವದೇ ನನ್ನ ಕೆಲಸವಾಗಿತ್ತು. ಅಂದು ಸೈನಿಕ ಕ್ರಮ ಆರಂಭವಾಗಿಯೇ ತೀರುವದೆಂಬ ಸುದ್ದಿ ಸುತ್ತಲೂ ಹಬ್ಬಿತ್ತು. ಅದನ್ನು ಮೊದಲು ಪಡೆದು ನಮ್ಮ ಪತ್ರಿಕೆಗೆ ತಿಳಿಸುವ ಹುಮ್ಮಸ್ಸು ನನ್ನ ದೇಹವನ್ನೆಲ್ಲ ವ್ಯಾಪಿಸಿತ್ತು. ಸುದ್ದಿಗಾರರ ಮಧ್ಯಾಹ್ನದ ಸಭೆ ನೀರಸವಾಗಿತ್ತು. ವಿಶೇಷ ಸಂಗತಿಗಳೇನೂ ತಿಳಿದುಬರಲಿಲ್ಲ. ಆನಂತರ ಮೂರು ಗಂಟೆಯ ಮೇಲೆ ಸೇರಿದ್ದ ಸುದ್ದಿಗಾರರ ಸಭೆಯೂ ನಮಗೆ ವಿಶೇಷ ಸುಳಿವನ್ನು ಕೊಡಲಿಲ್ಲ. ದೇಶ ವಿದೇಶಗಳ ಸುದ್ದಿಗಾರರು ಪ್ರಶ್ನೆಗಳನ್ನು ಸುರಿಸಿದರೂ ಶ್ರೀ ಡಿಪಿನ್ಹಾ ಏನೂ ಹೇಳಲಿಲ್ಲ, ವಿಶೇಷವೇನಾದರೂ ಸಂಭವಿಸಿದರೆ ಅವಸರದ ಸಭೆ ಕರೆಯುವದಾಗಿ ಮಾತ್ರ ತಿಳಿಸಿದ್ದರು.

ಈ ಸಭೆಯ ವರದಿಯನ್ನು ಹುಬ್ಬಳ್ಳಿಗೂ ಬೆಂಗಳೂರಿಗೂ ಕಳಿಸಿ, ಅಲ್ಲಿಯವರಿಗೆ ಜಾಗ್ರತೆಯಿಂದ ಇರಲು ತಿಳಿಸಿ, ಮತ್ತೆ ಸುದ್ದಿ ಬೇಟೆಯನ್ನಾರಂಭಿಸಿದೆ. ಮೋಟರ ವ್ಯಾನಿ

ನಲ್ಲಿ ನಗರದ ಹೊರವಲಯವನ್ನೆಲ್ಲ ಸುತ್ತು ತ್ತಿರುವಾಗ ಮೈಪುಳಕಿತವಾಯಿತು. ರಸ್ತೆಯ ಇಕ್ಕೆಲಗಳಲ್ಲಿ ಬೀಡುಬಿಟ್ಟಿದ್ದ ಸೈನಿಕರು ಗುಳೆ ಕಿತ್ತಿದ್ದರು. ಮಡಚುವ ದೋಣಿಗಳಿಂದ ತುಂಬಿದ್ದ ಸೈನಿಕರ ಟ್ರಕ್ಕಿನ ಸಾಲಿಗೆಸಾಲೇ ಬೆಳಗಾವಿಯಿಂದ ತೊಲಗಿತ್ತು. ಇದನ್ನೆಲ್ಲ ನೋಡಿ ನನಗೆ ನಿಶ್ಚಯವಾಯಿತು, ಇವತ್ತೇ ದಾಳಿ ಎಂದು. ಅಷ್ಟರಲ್ಲಿ ಸಾವಂತವಾಡಿ ಯಿಂದಲೂ ನಮ್ಮ ಸುದ್ದಿಗಾರನಿಂದ ವರದಿ ಬಂದಿತ್ತು. ಸೈನಿಕರು ಘೋಷಣೆಗಳ ಮಧ್ಯೆ ಆಗಲೇ ಗಡಿಗೆ ಹೊರಟಿರುವರೆಂದು ಶ್ರೀ ಉಪಾಧ್ಯಾಯ ತಿಳಿಸಿದರು. ಅದನ್ನು ಹುಬ್ಬಳ್ಳಿಗೂ ಹೇಳಿ, ಅದರ ಪ್ರಕಟನೆಗೆ ದಾರಿ ಕಾಯಲು ತಿಳಿಸಿದೆ. ಯಾಕಂದರೆ ಅದನ್ನು ಖಚಿತಪಡಿಸಿಕೊಳ್ಳಬೇಕಾಗಿತ್ತು. ಇಷ್ಟೊತ್ತಿಗೆ ಆಗಲೇ ಸಾಯಂಕಾಲವಾಗಿತ್ತು. ಸೆಂಟ್ರಲ್ ಟೆಲಿಗ್ರಾಫ ಆಫೀಸಿಗೆ ಹೋಗಿ ಅಲ್ಲಿಯ ವರೆಗಿನ ವರದಿಗಳನ್ನೆಲ್ಲ ಹುಬ್ಬಳ್ಳಿಗೆ ಕಳುಹಿ, ಮತ್ತೆ ನಗರಪ್ರದಕ್ಷಿಣೆಯನ್ನಾರಂಭಿಸಿದೆ.

ಅಂದು ರಾತ್ರಿ ಬೆಳಗಾವಿ ಕನ್ನಡ ಮಿತ್ರರು ಗದಗ ಸಾಹಿತ್ಯ ಸಮ್ಮೇಲನದ ನಿಯುಕ್ತ ಅಧ್ಯಕ್ಷ ಶ್ರೀ ಕೆ. ಜಿ. ಕುಂದಣಗಾರರ ಗೌರವಾರ್ಥ ಭೋಜನ ಸಮಾರಂಭ ಏರ್ಪಡಿಸಿದ್ದರು. ನನಗೂ ನಮ್ಮ ಬೆಳಗಾವಿ ಪ್ರತಿನಿಧಿ ಶ್ರೀ ಮುತಾಲಿಕರಿಗೂ ಆಗ್ರಹದ ಆಮಂತ್ರಣವಿತ್ತು. ಹೊರಗೆ ವಿಶೇಷ ಕೆಲಸವಿದ್ದರೂ ಈ ಕಾರ್ಯಕ್ರಮವನ್ನೂ ತಪ್ಪಿಸುವಂತಿರಲಿಲ್ಲ. ಅನಿವಾರ್ಯವಾಗಿ ಅಲ್ಲಿಗೆ ಹೋದೆವು. ಅಲ್ಲಿ ಇದೇ ಸುದ್ದಿ. ಎಲ್ಲರೂ ನಮ್ಮನ್ನು ಪ್ರಶ್ನಿಸುವವರೆ—ದಾಳಿ ಯಾವಾಗ ಎಂದು. ಇವತ್ತೆ ರಾತ್ರಿ ಎಂದು ನನ್ನ ಮನಸ್ಸು ಹೇಳುತ್ತಿತ್ತು. ಅದು ತುದಿ ನಾಲಗೆವರೆಗೆ ಬಂದರೂ ಬಹಿರಂಗ ನುಡಿಯುವಂತಿರಲಿಲ್ಲ. ಶ್ರೀ ಕುಂದಣಗಾರರೇ ನನ್ನನ್ನು ಸ್ವತಃ ವಿಚಾರಿಸಿದಾಗ, "ಬೆಳಗಾಗುವವರೊಳಗಾಗಿ ಏನಾಗುವದೆಂಬುದು ಹೇಳುವಂತಿಲ್ಲ" ಎಂದು ನಾನು ನುಡಿದಾಗ ಅವರ ಮುಖದ ಮೇಲೆ ಆಶ್ಚರ್ಯದ ಗೆರೆ ಮೂಡಿತು.

### ಮುಹೂರ್ತ ಸಮೀಪಿಸಿತು

ಭೋಜನ ಸಮಾರಂಭ ಬೇಗ ಮುಗಿಯುವದೇ ನಮಗೆ ಬೇಕಾಗಿತ್ತು. ಅಲ್ಲಿ ಒಂದು ನಿಮಿಷ ಕೂಡ ಕಳೆಯದೆ ಹೊರಬಿದ್ದು ನೇರವಾಗಿ ಡಾ. ತೆರಗುಂಡಿಯವರಲ್ಲಿಗೆ ಬಂದೆವು. ಅಂದು ರಾತ್ರಿ ನಮಗೊಂದು ಖಾಸಗಿ ಟೆಲಿಫೋನ ಬೇಕಾಗಿತ್ತು. ಸತ್ಕಾರ ಹೊಟೆಲ್ ಇಲ್ಲವೆ ಟೆಲಿಫೋನ ಕಚೇರಿಯಿಂದ ಟೆಲಿಫೋನ ಮಾಡಿದರೆ ಇತರರಿಗೆ ಗೊತ್ತಾಗುತ್ತಿತ್ತು. ನನ್ನ ಕಷ್ಟವನ್ನು ಡಾ. ತೆರಗುಂಡಿಯವರಿಗೆ ತಿಳಿಸಿದೆ. ಈ ದಿನ ತಮ್ಮ ನಿದ್ರಾಭಂಗವಾದರೂ ರಾತ್ರಿಯಲ್ಲಿ ನಮಗೆ ಟೆಲಿಫೋನ ಕೊಡಬೇಕಾಗಿ ಬಿನ್ನವಿಸಿದೆ. ಅವರು ಕೂಡಲೇ ಒಪ್ಪಿದರು.—ಸಂತೋಷದಿಂದ ಸಮ್ಮತಿಸಿದರು. ತಕ್ಷಣ ಅವರ ಮನೆಯಲ್ಲಿದ್ದ ಟೆಲಿಫೋನ ಎತ್ತಿಕೊಂಡು ನನ್ನ ಪರಿಚಯದ ಉಚ್ಚಾಧಿಕಾರಿಗೆ ಟೆಲಿಫೋನ ಮಾಡಿದೆ. "Yes, Zero hour has come, go ahead" ಹೌದು, ಮುಹೂರ್ತ ಸಮೀಪಿಸಿದೆ, ಮುಂದೆ ಸಾಗಿರಿ ಎಂದು ತಿಳಿಸಿದರು. ಇದು ಅಧಿಕೃತ ಸುದ್ದಿ. ಇದಕ್ಕಿಂತ ಅಧಿಕೃತ ದೃಢೀಕರಣ ಬೇಕಾಗಿರಲಿಲ್ಲ. ಇದನ್ನು ಕೇಳಿ ಮೈ ಪುಳಕಿತವಾಯಿತು. ನಮಸ್ತೆ ಎಂದು ಅವರಿಗೆ ಹೇಳಿದವನೇ ರಿಸೀವ್ಹರ ಇರಿಸಿ, ಮತ್ತೆ ಎತ್ತಿಕೊಂಡು ಹುಬ್ಬಳ್ಳಿಗೆ ಅರ್ಜಂಟ ಕಾಲ್ ಮಾಡಿದೆ. ಅದು ಕೆಲವೇ ನಿಮಿಷಗಳಲ್ಲಿ ಸಿಕ್ಕಿತು. ಹುಬ್ಬಳ್ಳಿ ಕಾರ್ಯಾಲಯಕ್ಕೆ ಎಲ್ಲವನ್ನೂ ತಿಳಿಸಿ, ಪತ್ರಿಕೆಯಲ್ಲಿ ಅದನ್ನು ಮುಖಪುಟದ ಮೇಲೆ ಎದ್ದು ಕಾಣುವಂತೆ ಪ್ರಕಟಿಸಲು ಹೇಳಿ, ವಿವರಗಳನ್ನು ಹಿಂದಿನಿಂದ ಕೊಡುವದಾಗಿ ಅಭಯವಿತ್ತೆ. ಸುದ್ದಿ ದೊರಕಿಸುವಲ್ಲಿ ಯಶಸ್ವಿಯಾದ ನನ್ನಲ್ಲಿ ಉತ್ಸಾಹ ತುಂಬಿ ತುಳುಕುತ್ತಿತ್ತೆಂದು ಹೇಳುವ ಕಾರಣವೇ ಇಲ್ಲ. ಅಲ್ಲಿಂದ ಹೊರಬಿದ್ದು ಹೊಟೆಲಿನತ್ತ ಸಾಗುತ್ತಿರುವಾಗ ಪರಿಚಿತರೊಬ್ಬರು ಸಿಕ್ಕಿದರು. ಶ್ರೀ. ಡಿಪಿನ್ಹಾ ಇವರು ರಾತ್ರಿ ಟೆಲಿಫೋನ ಕಾದುಕೊಂಡು ಕುಳಿತಿರಲು ಜವಾನನನ್ನು ಹುಡುಕುತ್ತಿದ್ದಾರೆಂದು ಅವರು ನನಗೆ ತಿಳಿಸಿದರು. ಇದು ನನ್ನ ಸುದ್ದಿಗೆ ಎರಡನೇ ಪುಷ್ಟಿ. ಆಮೇಲೆ ಅಲ್ಲಿ-ಇಲ್ಲಿ ಸ್ವಲ್ಪ ಅಲೆದು ರಾತ್ರಿ ಹನ್ನೊಂದು ಗಂಟೆಯ ಸುಮಾರಿಗೆ ಸತ್ಕಾರ ಹೋಟೆಲಿಗೆ ಆಗಮಿಸಿದೆವು. ಅಷ್ಟೊತ್ತಿಗಾಗಲೇ ಶ್ರೀ. ಡಿಪಿನ್ಹಾ ಅವರ ಕಚೇರಿಯಿಂದ ಎಲ್ಲ ಸುದ್ದಿಗಾರರಿಗೂ ಕರೆಬಂದಿತ್ತು. ಮಧ್ಯರಾತ್ರಿ ಸುದ್ದಿಗಾರರ ಸಭೆ ಎಂದು ಅವರು ಸಂದೇಶ ಕಳಿಸಿದ್ದರು. ಅದನ್ನು ಪುನಃ ಹುಬ್ಬಳ್ಳಿಗೆ ತಿಳಿಸಿ, ಜೀಪಕಾರ ಮಾಡಿಕೊಂಡು ಮಧ್ಯರಾತ್ರಿ ಸುಮಾರಿಗೆ ಕಮಿಶನರರ ಕಚೇರಿಗೆ ತೆರಳಿದೆವು. ಮುಂದೆ ಕೆಲ ನಿಮಿಷಗಳಲ್ಲಿ ಅಲ್ಲಿ ಸುದ್ದಿಗಾರರ ಜಾತ್ರೆಯೇ ನೆರೆದಿತ್ತು. ಕೇವಲ ನಮ್ಮ ದೇಶದವರು ಮಾತ್ರವಲ್ಲ, ಅಮೇರಿಕ, ಇಂಗ್ಲಂಡ, ಜಪಾನ ಮೊದಲ್ಗೊಂಡು ಹಲವಾರು ವಿದೇಶಿ ಸುದ್ದಿಗಾರರೂ ಅಲ್ಲಿದ್ದರು. ಡಾ. ಡಿಪಿನ್ಹಾ ಅವರ ಚಿಕ್ಕ ಕೋಣೆ ಅಂದು ಜಾಗತಿಕ ಸುದ್ದಿ ಕೇಂದ್ರವಾಗಿತ್ತು. ಇಷ್ಟು ಜನರಿಗೆ ಅಲ್ಲಿ ಕುಳಿ-ತುಕೊಳ್ಳಲಂತೂ ಜಾಗವೇ ಇದ್ದಿಲ್ಲ. ನಿಲ್ಲಲು ಸಹ ಸಾಲುವಂತಿದ್ದಿಲ್ಲ. ಆ ಕಡೆ ಯಾರ ಲಕ್ಷ್ಯವೂ ಇದ್ದಿಲ್ಲ. "ಏನು ಸುದ್ದಿ?" ಎಂದು ಒಬ್ಬರನ್ನೊಬ್ಬರು ಪ್ರಶ್ನಿಸುತ್ತಿದ್ದರು. ಮಹಾಕಾರ್ಯ ಸಾಧನೆಯಲ್ಲಿ ತೊಡಗಿದ ಹೆಮ್ಮೆ ಎಲ್ಲರ ಮುಖದ ಮೇಲೂ ಸುಳಿದಾಡುತಿತ್ತು.

### ಸುದ್ದಿ ಕಳಿಸಿದವರಲ್ಲಿ ಮೊದಲಿಗರು

ಗೋಡೆಯ ಮೇಲಿನ ಗಡಿಯಾರ ಹನ್ನೆರಡು ಬಾರಿಸಿತು. ಎಲ್ಲರ ಕಿವಿಗಳೂ ನಿಗುರಿದವು. ಕಣ್ಣರಳಿಸಿ ಶ್ರೀ. ಡಿಪಿನ್ಹಾ ಬರುವ ದಾರಿಯನ್ನೇ ನಿರೀಕ್ಷಿಸುತಿದ್ದವು. ನಿಮಿಷಗಳು ಉರುಳಿದವು. ಆದರೆ ಅವರು ಸರಿಯಾದ ಹೊತ್ತಿಗೆ ಬರಲಿಲ್ಲ. ತರ್ಕ-ವಿತರ್ಕಗಳು ತೇಲಾಡತೊಡಗಿದವು. ಮುಂದೆ ಅರ್ಧಗಂಟೆ ಕಳೆಯುವಷ್ಟರಲ್ಲಿ ಅವರು ಬಂದರು. ಸುದ್ದಿಗಾರರು ಅವರನ್ನು ಮುತ್ತಿಬಿಟ್ಟರು. ಜನ

ಸಂಪಣೆಯ ಮುನ್ನೆ ಅವರು ಕಾಣಿಸಿಕೊಂಡರು. ಆಗ ಅವರನ್ನು ಅಲ್ಲಿಯೇ ಇದ್ದ ಮೇಜಿನ ಮೇಲೆ ನಿಂತು ಸರಕಾರದ ಪ್ರಕಟಣೆ ಓದಲು ಬಿನ್ನವಿಸಲಾಯಿತು. ಅವರು ಆ ರೀತಿ ಮೇಜಿನ ಮೇಲೆ ನಿಂತು, The Indian Defense Forces have begun moving into Portuguese Territory after mid-night hour. ಎಂದು ಎರಡೇ ಸಾಲು ಓದಿ ಅದರ ಪ್ರತಿಗಳನ್ನು ಎಲ್ಲರಿಗೂ ಹಂಚಬೇಕಾದರೆ ಅವರಿಗೆ ಕಷ್ಟವೆನಿಸಿತು. ಎರಡು ನಿಮಿಷ ನಿಶ್ಶಬ್ದವಾಗಿದ್ದ ಸಭೆ ಮತ್ತೆ ಕಲಕಲರವದಲ್ಲಿ ಮುಳುಗಿತು. ಪ್ರಕಟನೆಯ ಪ್ರತಿ ಕೈಗೆ ಸಿಗುತ್ತಲೇ ಸುದ್ದಿಗಾರರ ಜಾತ್ರೆ ತಂತಿ-ಟೆಲಿಫೋನ ಕಚೇರಿಗೆ ಧಾವಿಸಲಾರಂಭಿಸಿತು. ನಾನು ಮತ್ತು ನನ್ನ ಸಹಕಾರಿಗಳು ಕಚೇರಿಯ ಕಟ್ಟೆಯಿಂದ ಜಿಗಿದು ಎಲ್ಲಕ್ಕೂ ಮುಂದೆನಿಲ್ಲಿಸಿದ್ದ ನಮ್ಮ ಜೀಪಿನ ಕಡೆ ಓಡಿದೆವು. ಡ್ರಾಯವರನಿಗೆ ಮೊದಲೇ ಸೂಚನೆ ಕೊಟ್ಟಿದ್ದರಿಂದ ನಾವು ಏರುತ್ತಲೇ ಜೀಪ ವೇಗದಿಂದ ಮೊದಲನೆಯದಾಗಿ ಓಡಿತು. ಡಾ. ತೆರಗುಂಡಿಯವರ ಮನೆಗೆ ಬಂದು, ವಿದ್ಯುತ್ ಗಂಟೆ ಬಾರಿಸಿ ಅವರನ್ನು ಎಬ್ಬಿಸಿದೆವು. ಅವರು ಬಾಗಿಲು ತೆರೆಯುವದೇ ತಡ, ಟೆಲಿಫೋನ ಎತ್ತಿ ಹುಬ್ಬಳ್ಳಿಗೆ ಅರ್ಜಂಟ ಕಾಲ್ ಕೊಟ್ಟೆವು. ಐದು ನಿಮಿಷಗಳಲ್ಲಿ ಸಂಪರ್ಕ ಸಿಕ್ಕಿತು. ಹುಬ್ಬಳ್ಳಿಗೆ ಹೇಳುವದನ್ನೆಲ್ಲ ಹೇಳಿ ಪತ್ರಿಕೆ ಆಕರ್ಷಕವಾಗುವಂತೆ ಸೂಚನೆ ಕೊಟ್ಟು ಮರಳಿದೆವು. ಅಂದು ಪತ್ರಿಕೆಗಳಿಗೆ ಸುದ್ದಿ ಕಳಿಸಿದವರಲ್ಲಿ ನಾವೇ ಮೊದಲು ಎಂದು ಹೇಳಲು ನನಗೆ ಹೆಮ್ಮೆ ಎನಿಸುತ್ತದೆ.

ಮರಳಿ ಸತ್ಕಾರ ಹೊಟೆಲಿಗೆ ಆಗಮಿಸಿದಾಗ, ಅಲ್ಲಿಯ ಟೆಲಿಫೋನ ಸುತ್ತಲೂ ಹತ್ತಿ-ಪ್ಪತ್ತು ಜನ ಸೇರಿದ್ದರು. ಇನ್ನೂ ಅನೇಕರು ಟೆಲಿಫೋನ ಕಚೇರಿಗೆ ಹೋಗಿದ್ದರು. ಅವರೆಲ್ಲರಿಗೆ ಸಂಪರ್ಕ ಸಿಕ್ಕಲು ವೇಳೆ ಹಿಡಿಯಿತು. ಮದ್ರಾಸ-ಮುಂಬಯಿಗೆ ಕರೆ ಕೊಟ್ಟವರಿಗಂತೂ ಸಂಪರ್ಕಸಿಕ್ಕಾಗ ಬೆಳಗಿನ ಮೂರಾಗಿತ್ತು. ಮಲಗಲು ಹೋದಾಗ ಆತ್ಮತೃಪ್ತಿಯಿಂದ ಮೈ ಹಗುರಾಗಿತ್ತು.

ಡಿಸಂಬರ ದಿ. ೧೯ ರಂದು ನಮ್ಮ ಕೆಲಸ ಇಮ್ಮಡಿಯಾಗಿತ್ತು. ಅದು ವರೆಗೆ ಸೈನಿಕ ಕ್ರಮದ ಪ್ರಾರಂಭವನ್ನು ನಿರೀಕ್ಷಿಸುತ್ತಿದ್ದರೆ, ಅವತ್ತಿನಿಂದ ಆರಂಭವಾದ ಸೈನಿಕ ಕ್ರಮದ ವಿವರ ಕಳಿಸಿಹಾಕುವ ಭಾರ ನಮ್ಮ ಮೇಲೆ ಬಿದ್ದಿತ್ತು. ಮೇಲಾಗಿ ಸೈನಿಕ ಕ್ರಮ ಆರಂಭವಾದೊಡನೆ ನಮ್ಮನ್ನು ರಂಗಕ್ಕೆ ಕರೆದೊಯ್ಯುವದಾಗಿ ಮೊದಲೇ ತಿಳಿಸಲಾಗಿತ್ತು. ಅದಕ್ಕಾಗಿ ನಮ್ಮ ಫೋಟೋವನ್ನೂ ತೆಗೆದುಕೊಂಡಿದ್ದರು. ಪ್ರಸಂಗದಲ್ಲಿ, ಸೈನಿಕ ಪೋಷಾಕು ಹಾಕಿಕೊಳ್ಳಬೇಕಾಗುವದೆಂದು ತಿಳಿಸಲಾಗಿತ್ತು. ಅದೆಲ್ಲಕ್ಕೂ ನಾವು ಉತ್ಸುಕರಾಗಿದ್ದೇವೆಂದು ಹೇಳುವದೇ ಬೇಡ. ಅದಕ್ಕೆಂದೇ ಸಮಯ ಕಾಯುತ್ತಿದ್ದೆವು. ಆದರೆ ಅಂದು ಶ್ರೀ ಡಿಪಿನ್ನಾ ಜರುಗಿಸಿದ ಸುದ್ದಿ ಪರಿಷತ್ತುಗಳು ಎರಡೂ ದೃಷ್ಟಿಯಿಂದ ನಿರಾಶಾಮಯವಾಗಿದ್ದವು. ಅವರು ಹೆಚ್ಚಿನ ಸುದ್ದಿಗಳನ್ನು ತಿಳಿಸಲಿಲ್ಲ; ಗೋವೆಗೆ ಕರೆದುಕೊಂಡು ಹೋಗುವ ಮಾತಂತೂ ಇರಲೇ ಇಲ್ಲ. ಸುದ್ದಿಗಳ ವಿಷಯದಲ್ಲಿ ರೇಡಿಯೋದಲ್ಲಿ ಕೇಳಬರುವದಕ್ಕಿಂತ ಹೆಚ್ಚು ಹೇಳುತ್ತಿದ್ದಿಲ್ಲ. ಯುದ್ಧರಂಗದಿಂದ ಬರುತ್ತಿರುವ ಸುದ್ದಿಗಳನ್ನು ಬೆಳಗಾವಿ ಸೇನಾಧಿಪತ್ಯದವರು ದಿಲ್ಲಿಗೆ ಕಳಿಸುತ್ತಿದ್ದರು. ಅಲ್ಲಿ ಅವುಗಳ ಪೂರ್ವಪರಿಶೀಲನೆ ಜರುಗಿ, ಪ್ರಕಟನೆಗೆ ಕೊಡಬೇಕಾದುದನ್ನು ರೇಡಿಯೋಕ್ಕೂ ಪಿ. ಟಿ. ಐ. ಸಂಸ್ಥೆಗೂ ಕೊಟ್ಟು ಬೆಳಗಾವಿಗೂ ಕಳಿಸಲಾಗುತ್ತಿತ್ತು. ಶ್ರೀ. ಡಿಪಿನ್ನಾ ಅವರು ಅವುಗಳನ್ನು ಮಾತ್ರ ಸುದ್ದಿಗಾರಪರಿಷತ್ತುಗಳಲ್ಲಿ ಓದುತ್ತಿದ್ದರು. ಇದರಿಂದ ನಮಗೆ ತೀವ್ರ ನಿರಾಶೆಯಾಯಿತು. ಮಧ್ಯಾಹ್ನವಾದರೂ ಯುದ್ಧದ ಪ್ರಗತಿ ಎಳ್ಳಷ್ಟೂ ತಿಳಿದುಬರಲಿಲ್ಲ. ಆಗ ಸುದ್ದಿಗಾರರಲ್ಲಿ ತರ್ಕ-ವಿತರ್ಕಗಳು ಕೇಳಬರಹತ್ತಿದವು. ವಿದೇಶಿ ಸುದ್ದಿಗಾರನೊಬ್ಬನು "ನನಗೆ ಬಹಳ ಗೊತ್ತಿದೆ. ಭಾರತೀಯ ಸೈನಿಕರಿಗೆ ತೀವ್ರ ಪ್ರತಿಭಟನೆ ಎದುರಾಗಿದೆ. ಆದುದರಿಂದ ಇವರು ಏನೂ ಸುದ್ದಿ ಕೊಡುತ್ತಿಲ್ಲ" ಎಂದು ಬಡಬಡಿಸಹತ್ತಿದನು. ನಮ್ಮ ಹೊಟ್ಟೆಯಲ್ಲಿ ತಣ್ಣೀರು ಜಿಮುಕಿದಂತಾಗುತ್ತಿತ್ತು. ಆದರೆ ಸಾಯಂಕಾಲದಹೊತ್ತಿಗೆ ಪರಿಸ್ಥಿತಿ ಬದಲಿಸಿತು. ನಮ್ಮ ಸೈನಿಕರು ಮಾಂಡವಿ ನದಿ ಮತ್ತು ಮಡಗಾವ ಮುಟ್ಟಿರುವರೆಂದು ತಿಳಿದುಬಂದಾಗ ನಮ್ಮ ಉತ್ಸಾಹಕ್ಕೆ ಪಾರವೇ ಇರಲಿಲ್ಲ.

### ಸುದ್ದಿಗಾರರನ್ನೇ ಚಕಿತಗೊಳಿಸಿದ ಪ್ರತ್ಯಕ್ಷದರ್ಶಿಯ ವರದಿ

ಇವುಗಳ ಜೊತೆಗೆ ನನಗೆ ಸಾವಂತವಾಡಿ ಮತ್ತು ಕಾರವಾರ ಗಡಿಗಳಿಂದಲೂ ಸುದ್ದಿಗಳು ಬರುತ್ತಿದ್ದವು. ಕಾರವಾರದಲ್ಲಿ ತಳವೂರಿದ್ದ ನಮ್ಮ ಕಾರ್ಯಾಲಯದ ಶ್ರೀ. ಎಸ್. ವ್ಹಿ. ಹೆಗಡೆಯವರು ಅಂಜದೀವ ನೌಕಾಯುದ್ಧದ ಪ್ರಾರಂಭದ ಕೆಲ ವಿವರಗಳನ್ನು ನನಗೆ ಟೆಲಿಫೋನಿಸಿಂದ ತಿಳಿಸಿದ್ದರು. ಸಾವಂತವಾಡಿಯಿಂದಲೂ ಕೆಲ ವಿವರಗಳು ತಲುಪಿದ್ದವು. ಅವೆಲ್ಲವುಗಳನ್ನೂ ಬೆಳಗಾವಿಯಲ್ಲಿ ತಿಳಿದವುಗಳನ್ನೂ ನಾನು ಸಂಗ್ರಹಿಸಿ ಹುಬ್ಬಳ್ಳಿಗೆ ಕಳಿಸುತ್ತಿದ್ದೆ. ಮರುದಿನದ ನಮ್ಮ ಪತ್ರಿಕೆಯಲ್ಲಿಯ ಹೊಸ ವಿವರಗಳನ್ನೋದಿ ಬೆಳಗಾವಿಯಲ್ಲಿ ತಳವೂರಿದ್ದ ಅನೇಕ ಸುದ್ದಿಗಾರರಿಗೆ ಆಶ್ಚರ್ಯವಾಯಿತು. ಅಂಜದೀವ ನೌಕಾಯುದ್ಧದ ಪ್ರತ್ಯಕ್ಷದರ್ಶಿಯ ವಿವರಗಳನ್ನು ಅವರು ನಮ್ಮ ಪತ್ರಿಕೆಯಲ್ಲಿ ಓದಿದಾಗಂತೂ ಕೈ ಕೈಹಿಸುಕಿಕೊಳ್ಳುವಂತಾಯಿತು.

ದಿ. ೧೯ ರಾತ್ರಿಯೇ ಪೋರ್ತುಗೀಜರು ಶರಣು ಬರುವ ಸಂಭವವಿದ್ದದರಿಂದ ನಾವು ಅಂದು ಬಹಳಹೊತ್ತು ಕಾಯಬೇಕಾಯಿತು. ತಂತಿಕಚೇರಿಯಲ್ಲಿ ಏನಾದರೂ ಸುಳುವು ಹತ್ತಬಹುದೆಂದು ಶ್ರೀ ಮುತಾಲಿಕರು ಅದನ್ನು ಎರಡು ಮೂರು ಸಲ ಸುತ್ತುಹಾಕಿದರು.

ಬೆಳಗಿನ ೧ ಗಂಟೆ ವರೆಗೆ ಏನೂ ಸುಳುವು ಹತ್ತದ್ದರಿಂದ ನಿರಾಶೆಗೊಂಡು ಮಲಗಬೇಕಾಯಿತು.

ದಿ. ೨೦ ರಂದು ಮುಂಜಾನೆ ಪಣಜಿಯಲ್ಲಿ ಶರಣಾಗತಿ ನಡೆದುಹೋಯಿತು. ಜನರಲ್ ಚೌಧರಿಯವರು ಅದಕ್ಕಾಗಿ ಅಲ್ಲಿಗೆ ಹೋಗಿದ್ದರು. ಈ ಮಹತ್ವದ ಸುದ್ದಿಯನ್ನು ಓದುಗರಿಗೆ ಸಾದರಪಡಿಸಲು ತಕ್ಕಪನಿಸಿದ ದಪ್ಪಕ್ಷರಗಳು ನಮ್ಮಲ್ಲಿ ಇರುತ್ತಿದ್ದಿಲ್ಲವಾದ್ದರಿಂದ ಆ ಬಗೆಗೂ ನಾವು ಮುಂಚಿತವಾಗಿ ಏರ್ಪಾಡು ಮಾಡಿಕೊಳ್ಳಬೇಕಾಯಿತು. ಗೋವೆ ಶರಣು ಬರಬೇಕು. ಇಲ್ಲವೆ ಪರಾಭವಹೊಂದಬೇಕು. ಇವೆರಡೂ ಅಂಶಗಳ ತಲೆ ಬರೆಹಗಳನ್ನು ಎರಡು ಇಂಚಿನಷ್ಟು ದಪ್ಪವಾದ ಅಕ್ಷರಗಳನ್ನು ಸಿದ್ಧಪಡಿಸಿಟ್ಟುಕೊಳ್ಳಲಾಗಿದ್ದಿತು. ಈ ಸುದ್ದಿಯ ಬಿತ್ತರಣೆಯಲ್ಲಿ ಅದು ತುಂಬ ಪ್ರಯೋಜನಕಾರಿಯಾಯಿತು. ಈ ಸಂಗತಿಗಳು ನಮಗೆ ಗೊತ್ತಾಗಿದ್ದರೂ ಶ್ರೀ. ಡಿಪಿನ್ನಾ ಅವರು ಯಾವುದನ್ನೂ ಹೇಳಲಿಲ್ಲ. ಸಂರಕ್ಷಣಶಾಖೆ ಸುರಕ್ಷಿತತೆಯ ಹೆಸರಿನಲ್ಲಿ ಕಪಿಮುಷ್ಟಿ ಧೋರಣೆ ತಳೆದಿತ್ತು. ಗೋವೆಗೆ ನಮ್ಮನ್ನು ಕರೆದುಕೊಂಡು ಹೋಗುವ ಮಾತೂ ಇರಲಿಲ್ಲ. ಸುದ್ದಿಗಾರರಿಗೆ ಇದು ಸಹನವಾಗಲಿಲ್ಲ. ಕೆಲವರು ಅಲ್ಲಿಯೇ ವಂತಿಗೆಯಿಂದ ಹಣ ಕೂಡಿಸಿ ಪ್ರಧಾನಮಂತ್ರಿ

ಪಂ. ನೆಹರೂರವರಿಗೆ ಪ್ರತಿಭಟನಾ ತಂತಿಗಳನ್ನು ಕಳಿಸಿದರು. ವಿದ್ಯುತ್ತಿನಂತೆ ಅದರ ಪರಿಣಾಮವಾಯಿತು. ಕನಿಷ್ಟ ಒಂದುವಾರದ ವರೆಗೆ ಗೋವೆಗೆ ಕರೆದುಕೊಂಡು ಹೋಗಲಾಗುವದಿಲ್ಲೆಂದು ಅಂದು ನಮಗೆ ತಿಳಿಸಲಾಗಿದ್ದರೂ ಮರುದಿನವೇ ಕರೆದೊಯ್ಯಲು ಪ್ರಧಾನಮಂತ್ರಿಗಳಿಂದ ಆದೇಶ ಬಂದಿತು.

**ಗೋವೆಯ ಮಾರ್ಗದಲ್ಲಿ**

ದಿ. ೨೧ ರಂದು ನಸುಕಿನಲ್ಲಿ ನಾಲ್ವತ್ತು ಜನ ಸುದ್ದಿಗಾರರು ಎರಡು ವಿಶೇಷ ಬಸ್ಸುಗಳಲ್ಲಿ ಪಣಜಿಗೆ ಪ್ರಯಾಣ ಬೆಳೆಸಿದರು. "ಏನಾದರೂ ಆಕಸ್ಮಿಕದಿಂದ ಪ್ರಾಣಾಪಾಯ ಪ್ರಾಣಹರಣವಾದರೆ ಭಾರತ ಸರಕಾರವು ಅದಕ್ಕೆ ಹೊಣೆಗಾರವಲ್ಲ" ಎಂದು ನಮ್ಮಿಂದ ಬರೆಯಿಸಿಕೊಳ್ಳಲಾಗಿತ್ತು. ಪಣಜಿಯ ದಾರಿ ಆರೆಂಟು ತಾಸಿನದಿದ್ದರೂ ನಮಗೆ ಹಿಡಿದುದು ಹನ್ನೆರಡು ತಾಸು. ಮಾರ್ಗದಲ್ಲಿರುವ ಎಲ್ಲ ಪೂಲುಗಳನ್ನು ಪೋರ್ತುಗೀಜರು ಕೆಡವಿದ್ದರಿಂದ ಮತ್ತು ಸೈನಿಕ ವಾಹನಗಳು ಇನ್ನೂ ಸಾಲುಗಟ್ಟಿ ಹೋಗುತಿದ್ದುದರಿಂದ ನಮ್ಮ ಪ್ರಗತಿ ಹೆಜ್ಜೆಹೆಜ್ಜೆಗೆ ಕುಂಠಿತವಾಗುತ್ತಿತ್ತು. ದೊಡ್ಡಮಾರ್ಗದಿಂದ ಪಣಜಿ ಸಾಮಾನ್ಯದಿನಗಳಲ್ಲಿ ಒಂದು ಗಂಟೆಯ ದಾರಿಯಾಗಿದ್ದರೂ ಅಂದು ನಮಗೆ ೫ ಗಂಟೆ ಹಿಡಿಯಿತು.

ಸೈನಿಕರ ನಂತರ ಗೋವೆ ಪ್ರವೇಶಿಸಿದವರಲ್ಲಿ ನಾವೇ ಮೊದಲಿಗರಾದ್ದರಿಂದ ಒಂದು ತರದ ಹೆಮ್ಮೆ ನಮಗೆ ಇದ್ದಿತು. ಆದರೆ ನಮ ಉದ್ದೇಶವಾಗಿದ್ದ ಸುದ್ದಿಸಂಗ್ರಹ ಕಾರ್ಯ ಅಲ್ಲಿ ಅತ್ಯಲ್ಪವಿತ್ತು. ಡಾಕ್ಟರರು ಶವ ಪರೀಕ್ಷೆ ನಡೆಸುವಂತೆ, ಹಿಂದಿನ ಎರಡು ದಿನದ ಘಟನೆಗಳನ್ನು ಶೋಧಿಸುವದೇ ನಮ್ಮ ಮುಖ್ಯ ಕಾರ್ಯವಾಗಿ ಪರಿಣಮಿಸಿತು.

ಪಣಜಿಯ ಪರಿಸ್ಥಿತಿ, ಎರಡು ದಿನ ಸೈನಿಕಕ್ರಮ, ಯುದ್ಧ ಮಾಡದೆ ಪೋರ್ತುಗೀಜರು ಶರಣು ಬಂದ ಬಗೆ ಮೊದಲಾದವುಗಳನ್ನು ಕುರಿತು ಸಂಯುಕ್ತ ಕರ್ನಾಟಕದಲ್ಲಿ ಲೇಖಮಾಲೆಯನ್ನೇ ಪ್ರಕಟಿಸಿರುವದರಿಂದ ಇಲ್ಲಿ ಮತ್ತೆ ಪ್ರಸ್ತಾಪಿಸಬೇಕಾಗಿಲ್ಲ.

ಆದರೆ ಸೈನಿಕ ಕ್ರಮದ ನೇತಾರರಾಗಿದ್ದ ಮೇಜರ ಜನರಲ್ ಕ್ಯಾಂಡೆತ್‌ರ ಸುದ್ದಿಗಾರರ ಪರಿಷತ್ತನ್ನು ಕುರಿತು ನಾಲ್ಕು ಮಾತು ಹೇಳಿ ಈ ಲೇಖ ಮುಗಿಸುತ್ತೇನೆ.

ಹೈದರಾಬಾದವನ್ನು ೧೯೪೮ ರಲ್ಲಿ ವಿಮೋಚನಗೊಳಿಸಿದ ಜನರಲ್ ಚೌಧರಿಯವರ ಪತ್ರಿಕಾಪರಿಷತ್ತಿನಲ್ಲಿ ಭಾಗವಹಿಸಿದ್ದ ನಾನು ಕ್ಯಾಂಡೆತ್‌ರ ಸಭೆಗೂ ಹೋಗಲು ಉತ್ಸುಕನಾಗಿದ್ದೆನೆಂದು ಹೇಳುವ ಅವಶ್ಯಕತೆ ಇಲ್ಲ. ಅಂದು ಬೋಲಾರಾಮಬಂಗಲೆಯ ವಿಶಾಲವಾದ ಆವರಣದಲ್ಲಿ ಹಾಕಿದ ಭವ್ಯ ತಂಬೂದಲ್ಲಿ ಸುದ್ದಿಗಾರರೊಡನೆ ಚಹಾ ಸೇವಿಸುತ್ತ ಜನರಲ್ ಚೌಧರಿಯವರು ಸರಸವಾಗಿ ಮಾತನಾಡಿದ ಸನ್ನಿವೇಶ ಪದೇಪದೇ ನನ್ನ ಸ್ಮರಣೆಗೆ ಬರುತ್ತಿತ್ತು. ಅವರಿಗೆ ಯಾರ ನೆರವೂ ಇದ್ದಿಲ್ಲ; ಸ್ವಯಂಶೂರರಂತೆ ಮಾತನಾಡುತಿದ್ದರು.

"ಹೈದರಾಬಾದ ಸೈನ್ಯವು ಬಲಿಷ್ಠವಿದ್ದಿಲ್ಲವೇ?" ಎಂದೊಬ್ಬನು ಪ್ರಶ್ನಿಸಿದ್ದ.

"ಹೋ, ಬಲಿಷ್ಠವಿದ್ದಿತು" ಚೌಧರಿ ಉತ್ತರಿಸಿದರು.

"ಹಾಗಾದರೆ ನೀವು ಜಯಿಸಿದ್ದು ಹೇಗೆ?" ಇನ್ನೊಂದು ಪ್ರಶ್ನೆ.

"ನಾವು ಹೆಚ್ಚು ಬಲಿಷ್ಠರಿದ್ದೆವು" ಎಂದವರು ನಗುತ್ತ ನುಡಿದು ಎಲ್ಲರನ್ನೂ ನಗಿಸಿದರು.

ಈ ಚಿತ್ರಗಳನ್ನು ತಲೆಯಲ್ಲಿ ತುಂಬಿಕೊಂಡು ದಿ. ೨೨ ರಂದು ಬೆಳಿಗ್ಗೆ ೯-೦ ಗಂಟೆಗೆ ಪೋರ್ತುಗೀಜ ಅರಮನೆಯಲ್ಲಿ ಕರೆದಿದ್ದ ಪತ್ರಿಕಾ ಪರಿಷತ್ತಿಗೆ ಹೋದೆ. ಆದರೆ ಅಲ್ಲಿಯ ವಾತಾವರಣ ಅಧಿಕಾರಮಯವಾಗಿತ್ತು. ಶ್ರೀ ಕ್ಯಾಂಡೆತ್‌ಲು, ಶ್ರೀ ಹಂಡು ಮತ್ತು ಶ್ರೀ ನರೋನ್ಹಾ ಅವರ ಮಧ್ಯೆ ಉನ್ನ ತಾಸನದಲ್ಲಿ ಕುಳಿತಿದ್ದರು. ಪ್ರಶ್ನೆಗಳ ಸುರಿಮಳೆಯಾಯಿತು. ಆದರೆ ಸಮಾಧಾನಕರ ಉತ್ತರಗಳು ಸಿಕ್ಕಲಿಲ್ಲ. ಅನೇಕ ಪ್ರಶ್ನೆಗಳನ್ನು ಶ್ರೀ. ಹಂಡುರವರೇ ಉತ್ತರಿಸುತ್ತಿದ್ದರು. ಹೀಗಾಗಿ ಅನೇಕರಿಗೆ ನಿರಾಶೆಯಾಯಿತು. ಪರಿಷತ್ತು ನನ್ನ ದೃಷ್ಟಿಯಲ್ಲಿ ನೀರಸವಾಯಿತು.

ಪಣಜಿ ಯಕ್ಷಿಣೀ ನಗರದಂತಿದ್ದರೂ ಆಗ ಮಾತ್ರ ನಿರುತ್ಸಾಹದಿಂದ ತುಂಬಿತ್ತು. ಸ್ನಾನಕ್ಕೆ ಮತ್ತು ಕುಡಿಯಲು ನೀರಿದ್ದಿಲ್ಲ. ಊಟ - ತಿಂಡಿಗಳು ದುರ್ಲಭವಾಗಿದ್ದವು. ಆದರೂ ಒಂದು ವಾರ ಅಲ್ಲಿದ್ದು ಅನೇಕ ವಿವರಗಳನ್ನು ಸಂಗ್ರಹಿಸಿಕೊಂಡು ಬೆಳಗಾವಿಗೆ ಮರಳಿದೆ. ಇಂತು ಡಿಶಂಬರ ೮ ರಂದು ಪ್ರಾರಂಭವಾದ ಗೋವಾ ಸುದ್ದಿ-ಯಾತ್ರೆ ಅದೇ ತಿಂಗಳು ೨೮ ರಂದು ಮುಕ್ತಾಯವಾಯಿತು.




ನ್ಯಾಯಾಧೀಶ: ಪುನಃ ಪುನಃ ಇಲ್ಲಿಗೆ ಬರಲು ನಿನಗೆ ನಾಚಿಕೆಯಾಗುವದಿಲ್ಲವೆ ?
ಕಳ್ಳ: ಅಲ್ಲ ಸ್ವಾಮಿ ತಾವೂ ದಿನಾಲೂ ಇಲ್ಲಿಯೇ ಇರುತ್ತೀರಲ್ಲ !

ಲೇಖಕರು:

ದ. ಲ. ಕೆರೂರ



# ಧನಲಾಭ



ಮಿತ್ರನ ದರ್ಶನಕ್ಕಾಗಿ ಅವನು ರೇಲ್ವೆ ಹಳಿಗಳ ಮೇಲಿಂದಲೇ ಆತುರಾತುರವಾಗಿ ಹೊರಟದ್ದ. ಆಗೆಲ್ಲ ಹಳೆಯ ನೆನಪುಗಳು-ಬೆಳುದಿಂಗಳಲ್ಲಿ ನವವಧುವಾಗಿ ಬಂದ ಪತ್ನಿಯೊಂದಿಗೆ ಅಲ್ಲೆ ತಿರುಗಾಡಿದ ನೆನಪು-ಬೇಡವೆಂದರೂ ಬಂದು ಕಾಡತೊಡಗಿದವು. ಸ್ಟೇಶನ್ನದ ಸಮೀಪಕ್ಕೆ ಬಂದಾಗ ನೈಲಾನ ಪರ್ಸೊಂದು ದೊರೆತಿತು. ಅದರ ತುಂಬ ನೂರು ರೂಪಾಯಿಗಳ ನೋಟುಗಳು. ಆದರೆ ಆ ಹಣ ಗೆಳೆಯನದಾಗಬೇಕೆ? ಆದರೂ ಅವ ಯಶಸ್ವಿಯಾದ. ಗೆಳೆಯ ತನ್ನ ಮಗನಿಗೆ ಇವನ ಮಗಳನ್ನು ತಂದುಕೊಳ್ಳಲು ಸಮ್ಮತಿಸಿದ್ದ. ಯಾರು ಯಾರಿಗೆ ಚಹ ಕೊಡಿಸಬೇಕು. ಆದರೆ ಇದೆಲ್ಲ ಕನಸಿನಲ್ಲಿ ಎಂದಾಗ ಯಾರಿಗೂ ನೋವೆ. ಅವನಿಗೆ ಕನಸಿನಲ್ಲಾದರೂ ಭವಿಷ್ಯ ನಿಜವಾಯಿತಲ್ಲ ಎಂದು ಸಮಾಧಾನ. ಇದೊಂದು ಮನೋರಂಜಕವಾದ ಕಥೆ

---

ಸೀಗೀಹುಣ್ಣಿಮೆಯ ಬೆಳದಿಂಗಳು ಆಹ್ಲಾದಕರವಾಗಿತ್ತು. ನಕ್ಷತ್ರರತ್ನಖಚಿತ ನೀಲಾಂಬರವನ್ನುಟ್ಟ ರಜನಿ ಮೋಹಿನಿಯಾಗಿದ್ದಳು. ಹುಬ್ಬಳ್ಳಿಯ ಬಡಾವಣೆಯೊಂದರ ಬಂಗ-ಲೆಯ ಔಟಹೌಸಿನಲ್ಲಿದ್ದ ಆತ ಕಂಪೌಂಡಿನ ಗೇಟ ಮುಚ್ಚಿಕೊಂಡು ರಸ್ತೆಗೆ ಹತ್ತಿದ್ದರೂ ಪ್ರಕೃತಿಯ ರಾಮಣೀಯಕತೆ ಆತನನ್ನು ಸೆಳೆದಂತೆ ತೋರಲಿಲ್ಲ. ರಪರಪನೆ ಹೆಜ್ಜೆಗಳನ್ನಿಕ್ಕುತ್ತಿದ್ದ ಆತ ಹೆದ್ದಾರಿಗೆ ಬಂದು ಕೂಡಿದೊಡನೆ ಕುಳಿರ್ಗಾಳಿಯು ಆತನನ್ನು ಎಚ್ಚರಿಸಿತು. ಕಂಕುಳಲ್ಲಿದ್ದ ಟೊಪ್ಪಿಗೆಯನ್ನು ತಲೆಗೇರಿಸಿದ. ಕೊರಳಸುತ್ತಲೂ ಸ್ಕಾರ್ಫನ್ನು ಬಿಗಿದು ಅದರ ಚುಂಗುಗಳನ್ನು ಎದೆಯ ಮೇಲೆ ಇಳಿಬಿಟ್ಟು ಕೋಟಿನ ಬಿರಡಿಗಳನ್ನು ಹಾಕಿಕೊಂಡ. ಕೈಯಲ್ಲಿಯ 'ಸಿಟಿಝನ್' ವಾಚ ನೋಡಿದ, ಗಂಟೆ ಒಂಬತ್ತಾಗಿತ್ತು. ಕಳೆದ ವರ್ಷ ಶೈಕ್ಷಣಿಕ ಸಂಚಾರಕ್ಕೆಂದು ಶಿಷ್ಯಪರಿವಾರದೊಡನೆ ಮೈಸೂರು, ಬೆಂಗಳೂರು ಎಂದೆಲ್ಲ ಸುತ್ತಾಡಿದಾಗ ಬೆಂಗಳೂರಲ್ಲಿ ಹಿಂದುಸ್ತಾನ ಮಶೀನಟೂಲ್ಸ ಕಾರಖಾನೆಯಲ್ಲಿ ಈ ವಾಚ ಕೊಂಡಿದ್ದ. ಸುಮಾರು ಒಂದು ವರ್ಷವಾಗುತ್ತ ಬಂದಿತ್ತು. ಈ ಹೊಸ ವಾಚ ಆತನ ಮುಂಗೈಯ ಮೇಲೆ ಶೋಭಿಸಹತ್ತಿತ್ತು. ಮಗ ಎಸ್.ಎಸ್.ಸಿ. ಪಾಸಾದ ಕೂಡಲೆ ಅಪ್ಪನ ಕೈಯಲ್ಲಿಯ ವಾಚನ್ನು ಕಸಿದುಕೊಂಡುಬಿಟ್ಟಿದ್ದ. ಮತ್ತೊಮ್ಮೆ ಸಹಜವಾಗಿ ಎಡಮುಂಗೈ ಕಡೆಗೆ ಆತನ ಗಮನ ಹರಿಯಿತು. ಮಕ್ಕಳು, ಮಿಲಿಟರಿಯವರಿಗಾಗಿ ಈ ವಾಚುಗಳನ್ನು ತಯಾರಿಸುತ್ತಿರುವಂತೆ ತೋರುತ್ತದೆ. ಎಷ್ಟಗಲ, ಏನು ಆಕಾರ! ಅಂತೂ ಕೈಗೆ ಸ್ವದೇಶೀ ವಾಚ ಬಂದಿತು. ಅಷ್ಟೇ ಸಾಕು ಎಂದು ಆತನ ತಲೆಯಲ್ಲಿ ವಿಚಾರಚಕ್ರ ತಿರುಗುತ್ತಿದ್ದಂತೆ, ಕಾಲ ಕೆಳಗಿನ ಕಲ್ಲೊಂದು ಹೊರಳಿ ಕಾಲು ಮಡಿಚಿಕೊಂಡು ತಾನು ಇಷ್ಟರಲ್ಲಿಯೆ ರೇಲ್ವೆಮಾರ್ಗದ ಸಮೀಪಕ್ಕೆ ಬಂದಂತಾಯಿತು ಎಂಬ ಅರಿವು ಹುಟ್ಟಿತು.

ಸಿಟಿಬಸ್ಸಿನಲ್ಲಿಯೆ ಆತ ರೇಲ್ವೆ ನಿಲ್ದಾಣದವರೆಗೆ ಹೋಗಬಹುದಿತ್ತು. ಹನ್ನೊಂದು ನಯೆ ಪೈಸೆಗಳನ್ನು ಬಸ್ಸಿಗೆ ತೆತ್ತು ಬುತ್ತಸೆ ಹೋಗಿ ಅಲ್ಲಿಳಿಯುವದಕ್ಕಿಂತ ಮಿಟ್ಟಿಜೆಲ್ಲಿ ದಂಥ ಈ ಬೆಳದಿಂಗಳಲ್ಲಿ ಇಪ್ಪತ್ತು ನಿಮಿಷ ಪಾದಯಾತ್ರೆ ಮಾಡಿದರೆ ಸಾಕು, ಸುಖವಾಗಿ ರೇಲ್ವೆನಿಲ್ದಾಣ ಸೇರಬಹುದು, ಅಲ್ಲದೆ ಮೇಲೆ ಮೂರು ಬರ್ಕ್ಲೆ ಪ್ರಾಪ್ತಿಯಾಗಬಹುದು ಎಂದು ಹಾಗೇ ಹೊರಟಿದ್ದ. ರೇಲ್ವೆ ಕ್ರಾಸಿಂಗಿಗೆ ಬಂದು ರೇಲ್ವೆ ಹಳಿಗುಂಟ ನಡೆಯಹತ್ತಿದಾಗಲೇ ಆತನಿಗೆ ತನ್ನ ಸುತ್ತಲಿನ ನೀರವ ಪ್ರಶಾಂತರಜನಿಯ ಅನುಭವ ಉಂಟಾಗಹತ್ತಿತು. ಎಂಥ ವಿಷಣ್ಣತೆಯನ್ನೂ ಪರಿ



ಮಾಸ್ತರ ರೇಲ್ವೆ ಹಳಿಗಳ ನಡುವೆ ರಭಸದಿಂದ ಹೆಜ್ಜೆ ಇಕ್ಕುತ್ತ ಸಾಗಿದ್ದ.

ಹರಿಸಬಲ್ಲ ಪೋಷಕ ವಾತಾವರಣವು ಸಂಜೀವಿನಿಯಂತಿತ್ತು. ಒಂಬತ್ತೂವರೆಗೆ ಮೊದಲೇ ರೇಲ್ವೆ ನಿಲ್ದಾಣದಲ್ಲಿರಬೇಕೆಂದು ಆತನು ಎರಡೂ ರೇಲ್ವೆಹಳಿಗಳ ನಡುವೆ ರಭಸದಿಂದ ಹೆಜ್ಜೆಯಿಕ್ಕುತ್ತ ಸಾಗಿದ್ದನು. ಈ ದಾರಿ ಅವನಿಗೆ ಕಾಲುರೂಢಿಯಾಗಿ ಬಿಟ್ಟಿತ್ತು. ನುರಿತ ಎತ್ತುಗಳು ಎಂಥ ಕಾರ್ಗತ್ತಲೆಯಲ್ಲಿಯೂ ಹೊಲದಿಂದ ತಮ್ಮ ಮನೆಗೆ ನೇರವಾಗಿ ಬರುವಂತೆ ಈ ಪ್ರಾಣಿ ಒಮ್ಮೆ ರೇಲ್ವೆ ಹಳಿಗೆ ಹತ್ತಿದರೆ ಸಾಕು, ಕಣ್ಣು ಮುಚ್ಚಿಕೊಂಡು ನಡೆದರೂ ನೇರವಾಗಿ ತನ್ನ ಗುರಿಯನ್ನೇ ತಲುಪುತ್ತಿದ್ದ. ಸುಮಾರು ಇಪ್ಪತ್ತು ಜೋಡು ಪಾದತ್ರಾಣಗಳನ್ನು ಇದೇ ರಸ್ತೆಯ ಮೇಲೆ ಸವೆಸಿ ಹರಿದಿದ್ದ. ಅದರಲ್ಲಿಯೂ ರೇಲ್ವೆ ಹಳಿಗಳ ದಂಡೆಯ ಕಾಲುದಾರಿಯ ಮೇಲೆ ನಡೆಯುವದಕ್ಕಿಂತ ಹಳಿಗಳ ನಡುವೇ ಸ್ಲೀಪರುಗಳ ಮೇಲೆ ಜಾಪುಗಾಲು ಇಕ್ಕುತ್ತ ನಡೆಯುವದೆಂದರೆ ಈತನಿಗೆ ಬಲುಪ್ರೀತಿ. ಇಂದೂ ಹಾಗೇ ಸಾಗಿದ್ದ. ಅಗಸರ ಹಳ್ಳದ ಪೂಲಿಗೆ ಬರುವ ಹೊತ್ತಿಗೆ ಒಮ್ಮೆ ಕಲ್ಲುಎಡವಿ ಮುಗ್ಗರಿಸಿದ. ಜೋಲಿಹೋಯಿತಾದರೂ ಹೊಡಮರಳಿ ಬೀಳಲಿಲ್ಲ. ತನ್ನಲ್ಲಿಯೇ ಮುಸಿನಕ್ಕ. ಈ ಸಂಸಾರವೂ ಹೀಗೇ ಅಲ್ಲವೆ! ಎಡಹುತ್ತ ಮುಗ್ಗುತ್ತ ಕುಂಟುತ್ತ ಕೂರುತ್ತ ಸಾಗುವವರೇ ಎಲ್ಲರು! ಎಲ್ಲಿಯೊ ಒಬ್ಬಿಬ್ಬರು ರೋಲ್ಸರಾಯ್ಸನಲ್ಲಿ ಜೀವನಪಥವನ್ನು ಕ್ರಮಿಸುತ್ತಾರೆ ಎಂದರೆ, ಅವರಿಗೆ ಆರೋಗ್ಯಭಾಗ್ಯವಿಲ್ಲದಿರಬಹುದು ಅಥವಾ ಇನ್ನಾವುದಾದರೂ ವ್ಯಾಧಿ ಬಡೆದುಕೊಂಡಿರಬಹುದು. ಕೌಪೀನವಂತಃ ಬಲು ಭಾಗ್ಯವಂತಃ ಎಂದು ಆಚಾರ್ಯವರ್ಯರು ಹೇಳುತ್ತಿರುವ ಈ ಜಗತ್ತಿನಲ್ಲಿ ಅದರ ಅರ್ಥವನ್ನು ಅರಿತುಕೊಳ್ಳದೆ ಕೌಪೀನಕ್ಕಿಂತಲೂ ಹೆಚ್ಚಿಗೆ ಪಡೆದಿರುವ ನಾವೇ ಇನ್ನೂ ಭಾಗ್ಯವಂತರು ಎಂಬುವರ ಸಂಖ್ಯೆ ಅಧಿಕ ಪ್ರಮಾಣದಲ್ಲಿರುತ್ತದೆ. ಮತ್ತು ಆಚಾರ್ಯರ ಆ ವಿರಕ್ತಿಭಾವ ಎಲ್ಲರಿಗೂ ಸುಲಭದಲ್ಲಿ ಪ್ರಾಪ್ತವಾಗುವಂಥದಲ್ಲ. ಆದರೂ 'ಧನ್ಯೋ ಗೃಹಸ್ಥಾಶ್ರಮಃ' ಎಂದು ಹಾಡಿ ಹೊಗಳುತ್ತ ಸ್ವಲೀಲೆಗಾಗಿ ಗೃಹಸ್ಥಾಶ್ರಮಿಗಳಾದವರು ದುರ್ಗಮವಾದ ಸಂಸಾರಮಾರ್ಗವನ್ನು ಕ್ರಮಿಸಿ ಕೊನೆಗೆ ಬಂದಮುಟ್ಟುವದು ವಿರಕ್ತಿಯ ಗುರಿಯನ್ನೇ ಎಂಬುದನ್ನು ಯಾರೂ ನಿರಾಕರಿಸುವಂತಿಲ್ಲ. ಹೀಗೆ ಮಾಡಿದವರು ಜಗತ್ತಿನ ದೃಷ್ಟಿಯಲ್ಲಿ ಉತ್ತಮರೆನಿಸುವರು. ಕೊನೆಯುವರೆಗೂ ಲೌಕಿಕದ ದುರಾಗ್ರಹದಿಂದಲೇ ಸೆಣಸುತ್ತ ಹೋಗುವವರಿಗೆ ಇಹಕೀರ್ತಿ ಪ್ರಾಪ್ತಿ ಒಂದು ವೇಳೆ ಆದರೂ ಇಲ್ಲಿ ಸಲ್ಲಿದವರಾದ ಅವರು ಅಲ್ಲಿ ಸಲ್ಲುವದಿಲ್ಲ. ಆದ್ದರಿಂದ ಸಂಸಾರದ ನದಿಗೆ ವಿವೇಕದ ಪೂಲನ್ನು ಕಟ್ಟಿ ದಾಟಬೇಕು ಎಂದು ಆತನು ಅಗಸರ ಹಳ್ಳದ ಪೂಲನ್ನು ದಾಟಿ ಬಂದಾಗ ಅಂದುಕೊಂಡ.

ಮುಂದೆ ಸಾಗಿದಂತೆ ರೇಲ್ವೆಮಾರ್ಗವು ಎತ್ತರದಲ್ಲಿದ್ದು ಇಕ್ಕೆಲಗಳಲ್ಲಿ ಎರಡು ಆಳುಗಳಷ್ಟು ತಗ್ಗು ಇರುವದರಿಂದ ಕುಳಿರ್ಗಾಳಿ ಇನ್ನೂ ಕೊರೆಯುತೊಡಗಿತು. ಮೈಯಲ್ಲಿಯ ಶಾಖವನ್ನು ಹೆಚ್ಚಿಸಿಕೊಳ್ಳಲಿಕ್ಕೆ ಇವನ ಹೆಜ್ಜೆಗಳು ಇನ್ನೂ ಬಿರುಸಾಗಿ ಬೀಳಹತ್ತಿದವು. ಹತ್ತಾರು ಹೆಜ್ಜೆ ನಡೆಯುವಷ್ಟರಲ್ಲಿ ಕಾಲ ಕೆಳಗಿನ ಕಲ್ಲೊಂದು ಜರಿದು ಹಾರಿ ಈತನ ಚಪ್ಪಲಿಯನ್ನು ಮುಂದಕ್ಕೆ ತೂರಿ, ಪರಿಣಾಮವಾಗಿ ಈತ ಪೂರಾ ಜೋಲಿ ಕಳೆದುಕೊಳ್ಳುವಂತೆ ಮಾಡಿತು. ಆದರೂ ಚಪಲತನದಿಂದ ಸಾವರಿಸಿ ಮರುಹೆಜ್ಜೆಯಲ್ಲಿ ನೆಟ್ಟಗೆ ನಿಂತುಕೊಂಡ. ಪೀಡೆ! ಹಾಳು ಶನಿ! ಥೀ ಕಲ್ಲೆ! ಈಗೇನು ಉಪಯೋಗ ಅಂದುಕೊಂಡು ನಕ್ಕ. ಅಂದರೆ– ಓಹೊ ಹಿಂದಿನ ರಸನಿಮಿಷ ಆತನಿಗೆ ನೆನಪಾಗಿರಬೇಕು. ನವ ವಧುವಾಗಿದ್ದ ತನ್ನ ಹೆಂಡತಿಯನ್ನು ಬೆಳದಿಂಗಳ ರಾತ್ರಿಯಲ್ಲಿ ಹೀಗೆ ವಿಹಾರಕ್ಕಾಗಿ ನಿರ್ಜನವಾಗಿರುತ್ತಿದ್ದ ಈ ರೇಲ್ವೆ ಹಳಿಗಳಗುಂಟ ಕರೆದುಕೊಂಡು ಬರುವ ಪರಿಪಾಠವನ್ನಿಟ್ಟುಕೊಂಡಿದ್ದ ಈತ. ರೇಲ್ವೆಹಳಿಗಳ ನಡುವಿನ ಕಲ್ಲುಹರಳುಗಳಿಗೇನಾದರೂ ಬಾಯಿಬಂದರೆ ಇವರ ವಿಲಾಸಲೀಲೆಗಳನ್ನು ಬಾಯಿತುಂಬ ಹೇಳಿಯಾವು. ಈಗ ಮುಗ್ಗರಿಸಿದಾಗ 'ಛಿ, ಈಗೇನು, ಪ್ರಯೋಜನ' ಎಂದಿದ್ದರಿಂದ ಹಿಂದೊಮ್ಮೆ ನಲ್ಮೆಯ ನಲ್ಲೆಯೊಡನೆ ಗುಜುಗುಜು ಮಾತಾಡುತ್ತ ಇದೇ ದಾರಿಗುಂಟ ಸಾಗಿದಾಗ ಆಕೆ ಎಡವಿ ಮುಗ್ಗರಿಸಿ ಜೋಲಿ ತಪ್ಪಿರಬೇಕು; ಅವಸರದಿಂದ ಈತ ಆಕೆಯನ್ನು ಹಿಡಿದೆತ್ತಲು ಕೈಚಾಚಿದಾಗ ಕಂಕುಳವನ್ನೇ ಸೇರಿ ಗಟ್ಟಿಯಾಗಿ ಆಕೆಯನ್ನು ಹಿಡಿದು ನಿಲ್ಲಿಸಿರಬಹುದು. ಆಗ ಆಕೆಯು ಗಾಬರಿಯಿಂದ, ಚಕಿತಹರಿಣಿಯಂತೆ, ತನ್ನಿನಿಯನ ಕೈಗಳನ್ನು ಇನ್ನೂ ತುಸು ಕೆಳಕ್ಕೆ ಸರಿಸಿಕೊಂಡು ಸ್ವಸ್ಥಾನದಲ್ಲಿ ಭದ್ರವಾಗಿರಿಸಿ ಹಾಗೇ ಹಿಂಬದಿಗೆ ಆತನ ಮೇಲೆ ಒರಗಿ, "ಹಾಯ್ ಬಿದ್ದೇಹೋದೆನೆಂದೆನಿಸಿತು. ನೀವೆಷ್ಟು ತೂಕದಿಂದ ನನ್ನನ್ನು ಹಿಡಿದೆತ್ತಿದಿರಿ" ಎಂದು ಆ ಅರೆಮುಚ್ಚಿದ ಕಣ್ಣುಗಳಿಂದ ತುಟಿ ಬಿರಿದು ಹೇಳಿದಾಗ ಆಕಾಶದಲ್ಲಿಯ ಚಂದ್ರನು ಆಕೆಯ ಅಧರಗಳಿಗೆ ನೀಡಿದ ಅಧಿಕಮಧುವನ್ನು ಈತನು ಆಸ್ವಾದಿಸಿದ ನೆನಪು ಈಗ ತಾನೇ ಕಲ್ಲನ್ನು ಎಡವಿದಾಗ ಮರುಕಳಿಸಿರಬೇಕು. ಇಪ್ಪತ್ತುವರುಷಗಳ ನಂತರವೂ ಅಚ್ಚಳಿಯದೆ ಉಳಿದುಕೊಂಡಿರುವ ಇಂಥ ಸ್ಮೃತಿಗಳಿಗಾಗಿಯೇ ಕೆಲವರು

ಧನ್ಯೋಽಗೃಹಸ್ಥಾಶ್ರಮಃ ಎಂದೂ ಹೇಳುತ್ತಿರ ಬಹುದು.

ಈತನೂ ಆಗ ಹೀಗೇ ಅಂದುಕೊಂಡಿರ ಬಹುದು. ಆದರೆ ಇವರ ಕಾಮವೃಕ್ಷಕ್ಕೆ ಸಂತಾನಫಲಪ್ರಾಪ್ತಿಯಾಗುತ್ತ ನಡೆದಂತೆಲ್ಲ ಗೃಹಸ್ಥಾಶ್ರಮದ ಬಗ್ಗೆ ಈತನ ವಿಚಾರಗಳು ಬದಲಿಸುತ್ತ ಹೊರಟವು. ಗೃಹಸ್ಥಾಶ್ರಮ ಸ್ವಯಂಧನ್ಯವಾಗಿರುವದಿಲ್ಲ. ನಮ್ಮ ವಿಚಾರ ಆಚಾರಗಳಿಂದ ಅದನ್ನು ಧನ್ಯವಾಗಿಸುವದರ ಜೊತೆಗೆ ನಾವೂ ಧನ್ಯರಾಗಬೇಕಾಗುತ್ತದೆ. ಈ ಭೂಮಿಯಲ್ಲಿ ವಾಸಿಸಲಿಕ್ಕೆ ಬಂದ ನಾವು ಇದರ ಒಡೆಯನಾದ ದೇವರಿಗೆ ಸತ್ಕೃತ್ಯಗಳ ರೂಪದಲ್ಲಿ ಬಾಡಿಗೆ ಸಲ್ಲಿಸಿ ಅಲ್ಲಿಗೆ ಹೋದಾಗ ಆತ ನಮ್ಮನ್ನು ಸಂತೋಷದಿಂದ ಬರಮಾಡಿ ಕೊಳ್ಳುತ್ತಾನೆ ಎಂಬ ಮಟ್ಟಕ್ಕೆ ಅವನು ಬಂದು ನಿಂತಿದ್ದ. ಗೃಹಸ್ಥಾಶ್ರಮದ ಆತ್ಮದಂತಿರುವ ಬಾಲಿಕೆಯರನ್ನು ತಿದ್ದುವ ಕಾರ್ಯಕ್ಕೆ ಹೂಡಿ ಕೊಂಡಿದ್ದ ಈತನಿಗೆ ಈ ಮಾತು ವಿಶೇಷ ವಾಗಿ ಮನದಟ್ಟಾಗಿತ್ತು. ‘ಒಳುಗುವರನಿ ಗಿತ್ತಮಾತ್ರಕೆ ಕುಲಕೋಟಿಯನುದ್ಧರಿ ಪೆನು’ ಎಂದು ಹೇಳುತ್ತ ಹದಿನೆಂಟು ವರ್ಷದ ಮಗಳೊಬ್ಬಳು ಮನೆಯಲ್ಲಿ ಕುಳಿತಿದ್ದಳು. ಹಾಗೆ ನೋಡಿದರೆ, ಈಗಿನ ಕಾಲದಲ್ಲಿ; ಈ ಹುಡುಗೆಗೆ ಕುಳಿತಿದ್ದಳು ಎಂದು ಬೇಸರ ದಿಂದ ಹೇಳಬೇಕಾದ ಪ್ರಮೇಯವೇ ಇಲ್ಲ. ಇಪ್ಪತ್ತು ವರ್ಷಗಳ ನಂತರ ವರಾನ್ವೇಷಣ ಪ್ರಾರಂಭವಾಗಿ ಇಪ್ಪತ್ತೈದು ಮೂವತ್ತು ವರ್ಷಗಳ ವರೆಗೂ ಕಂಕಣಬಲ ಒದಗಿಬರು ವದು ಸಾಮಾನ್ಯವಾಗಹತ್ತಿರುವ ಈ ಕಾಲ ದಲ್ಲಿ ಹದಿನೆಂಟು ವರ್ಷದ ಬಾಲೆ ತನ್ನ ವಿವಾ ಹದ ಬಗ್ಗೆ ಚಿಂತಿಸಬೇಕಾಗಿರಲಿಲ್ಲ. ಅಲ್ಲದೆ ತಾಯಿಯ ಪ್ರತಿರೂಪವಾಗಿದ್ದ ಈಕೆಯನ್ನು ಯಾವ ವರನಾದರೂ ‘ನಾತಿಚರಾಮಿ’ ಎಂದು ಆಶ್ವಾಸನವನ್ನಿತ್ತು ಕರೆದುಕೊಂಡು ಹೋಗ ಬಹುದಾಗಿತ್ತು. ಆದರೆ ಬೀಗರನ್ನು ಸಂತುಷ್ಟ ಪಡಿಸಲು ಈ ಬಡ ಉಪಾಧ್ಯಾಯನ ಹತ್ತರ ಸಾಕಷ್ಟು ಹಣ ಇರಲಿಲ್ಲ. ಅಷ್ಟಾಗಿ ಮಗ ನೊಬ್ಬ ಇದೇ ವರ್ಷ ಎಸ್.ಎಸ್.ಸಿ. ಪಾಸಾಗಿ ಪಿ.ಯು.ಸಿ. ಸೈನ್ಸಕ್ಕೆ ಸೇರಿದ್ದ. ಆತನಿಗಾಗಿ ಸ್ವಲ್ಪ ಹೆಚ್ಚು ಹಣ ವ್ಯಯಿಸಬೇಕಾಗಿ ಬಂದಿ ದ್ದರಿಂದ ಮಗಳ ಲಗ್ನವನ್ನು ಸದ್ಯ ಮುಂದೂ ಡಿದ್ದ. ಇವನ ಬೊಕ್ಕಸಕ್ಕೆ ಇನ್ನೂ ಅಷ್ಟಾಗಿ ಚುರುಕು ಮುಟ್ಟಿಸದಿದ್ದ ಹತ್ತು ವರ್ಷದ ಮಗ ಎಂಟು ವರ್ಷದ ಮಗಳು ಜೀವನ ಚಂದ್ರಿಕೆಯಂತೆ ಬೆಳಗುತ್ತಿದ್ದರು. ಮೂರಕ್ಕೆ ಮುಕ್ತಾಯವೆಂಬುದು ಹೋಗಿ ನಾಲ್ಕಕ್ಕೆ ಮುಕ್ತಾಯವಾಗಿತ್ತು. ನಾಲ್ಕನೆಯವಳಾಗಿ ಬಂದ ಮಗಳು ತಂದೆಗೆ ಕುಟುಂಬಯೋ ಜನೆ ನಡೆಸಿದ ಶ್ರೇಯಸ್ಸನ್ನು ತಂದುಕೊ ಟ್ಟಳು.

ಎಲ್ಲಿಂದೆಲ್ಲಿಗೆ ಉರುಳುತ್ತಿದೆ ವಿಚಾರಚಕ್ರ. ಹೀಗೆ ಮನಸ್ಸಿನಲ್ಲಿ ತನ್ನ ಕುಟುಂಬಯೋಜ ನೆಯ ವಿಚಾರ ಬರುತ್ತಲೆ ತಾನೀಗ ಇಷ್ಟೊಂದು ಸಂಭ್ರಮದಿಂದ ಭೆಟ್ಟಿಯಾಗಲು ಹೊರಟಿರು ವುದು ರಾಜ್ಯದ ಕುಟುಂಬಯೋಜನಾ ಶಾಖೆಯ ಮುಖ್ಯಾಧಿಕಾರಿಯನ್ನು ಎಂಬ ನೆನಪು ಪುನಃ ಉಂಟಾಯಿತು. ಹತ್ತು ವರ್ಷ ಗಳ ನಂತರ ಆತನನ್ನು ಈಗ ಪುನಃ ಭೆಟ್ಟಿ ಯಾಗುವದು. ಮಿತ್ರನಾಗಿದ್ದ ಆತನು ಆಗ ‘ಏನು ಇನ್ನೂ ನಮ್ಮ ಕುಟುಂಬ ಯೋಜನೆ ನಿನಗೆ ಒಗ್ಗುವದಿಲ್ಲವೆ’ ಎಂದು ಟೀಕಿಸಿದ್ದ. ಈ ಸಲ ಎದೆತಟ್ಟಿ ಆತನಿಗೆ ಹೇಳಬಹುದು ನಾನೂ ಕುಟುಂಬ ಯೋಜನೆ ಮಾಡಿದ್ದೇ ನೆಂದು ಎಂದಂದುಕೊಂಡ. ಹೊ! ಆತನಿ ಗೇನು ಹೇಳುವದು ಬಿಡು. ‘ನೀನಾದರೂ ನಿನ್ನ ಯೋಜನೆ ಅನುಸರಿಸುತ್ತಿದ್ದೀಯಾ’, ಎಂದು ಆತನನ್ನು ಆಗ ವಿಚಾರಿಸಿದಾಗ, ‘ಅಯ್ಯಾ, ಹಾಗಿಲ್ಲದಿದ್ದರೆ ಜನ ಹೇಗೆ ನಮ್ಮನ್ನು ನಂಬಬೇಕು? ಆದರೆ ನೀನು ನನ್ನ ಲಂಗೋಟಿ ಗೆಳೆಯನೆಂದು ಹೇಳುತ್ತೇನೆ, ಯಾರಿಗೂ ತಿಳಿಸಬೇಡ ಮತ್ತೆ, ನಾವು ಕುಟುಂಬ ಯೋಜನೆ ಮಾಡಿದರೂ ನಮ್ಮ ಸಂತಾನಶ್ರೀ ಬೆಳೆಯುತ್ತಲೇ ಹೋಗುತ್ತದೆ. ಕುಟುಂಬದಲ್ಲಿ ಅಲ್ಲ, ಹೊರಗೆ’ ಎಂದು ನುಡಿದು ಕಣ್ಣು ಕಿವಚಿದ್ದ. ಥೂ, ಎಂಥ ಹೇಸಿ ಎನಿಸಿತು ಈತನಿಗೆ. ಆದರೇನು ಮಾಡು ವದು. ಆತನ ಮಗನೊಬ್ಬ ಡಾಕ್ಟರ ಆಗಿ ಧಾರವಾಡ ಸಿವಿಲ್ ಆಸ್ಪತ್ರೆಯಲ್ಲಿ ನೌಕರಿಗೆ ಬಂದಿದ್ದ. ಈ ಸಲದ ಭೆಟ್ಟಿಯಲ್ಲಿ ಮಾತಿಗೆ ಮಾತು ಹೊರಟು ಆತನ ಗೆಳೆಯ ತನ್ನ ಮಗಳನ್ನು ಸೊಸೆಯಾಗಿ ಸ್ವೀಕರಿಸಲು ಒಪ್ಪಿಕೊಂಡರೆ ಬಂಗಾರವೇ ಆಯಿತು ಎಂಬ ಉತ್ಸಾಹದಿಂದಲೂ ಹೊರಟಿದ್ದ. ಹೇಗಾ ದರೂ ಈಗ ಲಗ್ನವಾದ ಕೂಡಲೆ ಗಂಡ- ಹೆಂಡಿರು ಪ್ರತ್ಯೇಕಸಂಸಾರ ಹೂಡುವದರಿಂದ ಮಾವನ ಶೀಲದ ಬಗ್ಗೆ ಅಷ್ಟೊಂದು ಯೋಚಿ ಸಬೇಕಿಲ್ಲ. ಇಂದೇನು ಭಾಗ್ಯನಿಧಿಯೆ ದೊರೆ ಯಲಿದೆ ಎಂಬ ಉಲ್ಲಾಸದಲ್ಲಿ ಸಾಗಿದ್ದಾಗ ಹಳ ಗಳ ಪಕ್ಕದಲ್ಲೇನೋ ಮಿಂಚಿದಂತಾಯ್ತು.

ಹೋಗಿ ನೋಡುತ್ತಾನೆ, ಮಿರಿ ಮಿರಿ ಮಿಂಚುತ್ತಿದ್ದುದು ದೊಡ್ಡದಾದ ನೈಲಾನ್ ಪರ್ಸ. ಕೈಗೆತ್ತಿಕೊಂಡು ತೂಗಿನೋಡಿದಾಗ ಆ ಕೆಂಪು ಪರ್ಸು ಭಾರವಾಗಿದ್ದಂತೆ ಕಂಡಿತು. ಸಹಜವಾಗಿ ಸುತ್ತಲೂ ದೃಷ್ಟಿ ಬೀರಿದ. ವಿಲಿ ಗ್ರೌಂಡಿನಲ್ಲಿ ದೂರದಲ್ಲಿ ಯಾರೋ ಕೆಲವರು ಅಡ್ಡಾಡುತ್ತಿದ್ದಂತೆ ಕಂಡರೂ ಈತನು



ಅವೆಲ್ಲ ಬರಿ ನೂರರ ನೋಟುಗಳು !

ನಿಂತಿದ್ದ ರೇಲ್ವೆ ಮಾರ್ಗ ನಿಷ್ಕಂಟಕವಾಗಿತ್ತು. ಪರ್ಸನ್ನು ಬಿಡಿಸಿ ನೋಡಿದ. ಒಳಗೆ ಬರಿ ನೋಟುಗಳೇ. ಧೈರ್ಯದಿಂದ ಅವನ್ನು ಹೊರಗೆ ಹಿರಿದ, ಅವೆಲ್ಲ ಬರಿ ನೂರರ ನೋಟುಗಳು, ಇಲ್ಲವೆನ್ನುವದಕ್ಕೆ ಕೆಲವು ಪುಡಿ ನೋಟುಗಳೂ ಇದ್ದವು. ನೂರರ ನೋಟುಗಳನ್ನೇ ಎಣಿಸಿ ನೋಡಿದ; ೩೪ ನೋಟುಗಳಿದ್ದವು. “ಭಾಗ್ಯದ ಲಕ್ಷ್ಮಿ ಬಾರಮ್ಮ” ಎಂದು ತನ್ನ ಹೆಂಡತಿ ಶ್ರಾವಣ ಮಾಸದಲ್ಲಿ ಎಷ್ಟೋ ವರ್ಷ ಒರಲಿಕೊಂಡಿ ದ್ದರೂ ಸುಳಿವನ್ನು ತೋರಗೊಡದೆ ತಲೆ ಮರೆಸಿಕೊಂಡಿದ್ದ ಲಕ್ಷ್ಮಿ ಇಂದು ಸೀಗೀ ಹುಣ್ಣಿವೆಯ ದಿನ ತಾನಾಗಿ ಪ್ರತ್ಯಕ್ಷಳಾಗಿ ದ್ದಾಳೆ. ನನ್ನ ಭಾಗ್ಯವೆ ಭಾಗ್ಯ ಎಂದೆನಿಸಿತು. ಖೊಟ್ಟಿ ನೋಟುಗಳಿರಲಿಕ್ಕಿಲ್ಲವೇ ಎಂಬ ವಿಚಾರವೂ ಸುಳಿದು ಹೋಯಿತು. ಆದರೆ ಇಷ್ಟೊಂದು ಖೊಟ್ಟಿ ನೋಟುಗಳನ್ನು ಒಬ್ಬರೇ ಒಯ್ಯುವದು ಸಾಧ್ಯವಿಲ್ಲ ಎಂಬ ಸಮಾಧಾ ನವೂ ಆಯಿತು. ಪರ್ಸು ಯಾರದೊ ಅವರಿಗೆ ಮುಟ್ಟಿಸಬೇಕೆಂಬ ವಿಚಾರವೂ ಅವನಲ್ಲಿ ಆಗ ಸುಳಿಯಲಿಲ್ಲ. ನೋಟುಗಳನ್ನು ತುರುಕಿ ಪರ್ಸನ್ನು ಒಳಜೇಬಿನಲ್ಲಿ ಭದ್ರವಾಗಿರಿಸಿ ಕಿಸೆ ಯನ್ನು ತಟ್ಟಿನೋಡಿ ಮುಂದೆ ಹೊರಟ.

ಆ ತಂಪು ಹವೆಯಲ್ಲಿಯೂ ಆತನ ಮೋರೆ ಬೆವೆತಂತಾಗಿತ್ತು.

ಆಗ ಸ್ಟೇಶನ್ ಓವ್ಹರಬ್ರಿಜ್ಜಿನ ಮೇಲೆ ನಾಲ್ಕಾರು ಜನ ಖಟ್ ಖಟ್ ಎಂದು ಬೂಟು ಗಾಲಿನಿಂದ ಸದ್ದು ಮಾಡುತ್ತ ನಡೆದು ಬರುತ್ತಿರುವುದನ್ನು ಕಂಡನು. ಇನ್ನೆರಡು ಹೆಜ್ಜೆ ಹೋಗುವಷ್ಟರಲ್ಲಿ ಅವರು ಪೋಲೀಸರೇ ಎಂಬುದು ಈತನಿಗೆ ಖಚಿತವಾಯಿತು. "ಗ್ಯಾಜೆಟೆಡ್ ಆಫೀಸರರಂತೆ. ತಮ್ಮ ಪರ್ಸ ನೆಟ್ಟಗೆ ಇಟ್ಟುಗೊಳ್ಳಲಿಕ್ಕೆ ಬರುವದಿಲ್ಲ. ಅಶೋಕನಗರದಿಂದ ಈಚೆಗೆ ಬಿದ್ದು ಹೋಗಿದೆಯಂತೆ. ಬಹಳಷ್ಟು ಹಣ ಇತ್ತಂತೆ. ಎಲ್ಲೊ ಲಂಚ ಹೊಡೆದ ದುಡ್ಡು ಇದ್ದಿರಬಹುದು. ಬಿದ್ದು ಹೋಗಿದೆ. ಹುಡುಕುವದು ನಮ್ಮ ಕರ್ಮ" ಎಂದು ಮಾತಾಡಿಕೊಳ್ಳುತ್ತ ಅವರು ಹೊರಟಿದ್ದೂ ಇವನ ಕಿವಿಗೆಬಿತ್ತು. ಆಗಂತೂ ಈತನು ಪೂರಾ ಬೆವೆತ.

'ಲಲಾಟೆ ಲಿಖಿತಾ ರೇಷಾ' ಬ್ರಹ್ಮನಿಗೂ ಅಳಿಸಲಿಕ್ಕಾಗುವದಿಲ್ಲವಂತೆ. ಈ ಹಣ ನನಗೆ ದಕ್ಕುವ ಯೋಗವಿಲ್ಲ. ಬಡ ಮಾಸ್ತರ ಹೀಗೆ ಅನಾಮತ್ತಾಗಿ ದೊರೆತ ಹಣವನ್ನು ದಕ್ಕಿಸಿಕೊಳ್ಳುವ ಧೈರ್ಯ ನನಗೆಲ್ಲಿ ಬರಬೇಕು. ಸುಮ್ಮನೆ ಪೋಲೀಸ ಸ್ಟೇಶನ್ನಿಗೆ ಒಪ್ಪಿಸಿ ತೆರಳೋಣ. ಪ್ರಾಮಾಣಿಕತನದ ಶಿಫಾರಸು ಆದರೂ ದೊರೆತೀತು ಎಂಬ ಸುವಿಚಾರ ಮೂಡಿತಾದರೂ ನೋಡೋಣ, ಪರ್ಸಿನಲ್ಲಿ ಹೆಸರು ಡೆಸೆ ಏನಾದರೂ ಇದ್ದರೆ. ಯಾರದೋ ಅನಾಮಧೇಯರದಿದ್ದರೆ ದಕ್ಕಿಸಿಕೊಳ್ಳಲೂ ಒಂದು ಪ್ರಯತ್ನ ಮಾಡೋಣ' ಎಂಬ ಮಾನವಸಹಜವಾದ ಒಳನುಡಿ ಮೊಳಗಿತು.

ಫ್ಲಾಟಫಾರ್ಮನ್ನು ಹತ್ತಿದ ಕೂಡಲೆ ಮೆತ್ತಗೆ ಪರ್ಸನ್ನು ಹೊರತೆಗೆದು ಅದನ್ನು ಹೊರಳಿಸಿ ನೋಡಲಾಗಿ 'ಎಸ್. ಎಸ್. ಆಚಾರ' ಎಂಬ ಹೆಸರಿನ ಚೀಟಿ ಕಾಣಿಸಿತು. ತಾನೂ ಸಗರ ಶ್ರೀನಿವಾಸಾಚಾರ್ಯ, ಪರ್ಸು ತನ್ನದೇ ಆಯಿತು ಎಂದುಕೊಂಡು ಅದನ್ನು ಜೇಬಿಗೆ ಸೇರಿಸಬೇಕೆನ್ನುವಷ್ಟರಲ್ಲಿ ತನ್ನ ಭುಜದ ಮೇಲೆ ಯಾರೊ ಕೈಕೋಲಿನಿಂದ ತಟ್ಟಿದಂತಾಯಿತು. ಹೊರಳಿ ನೋಡಿದರೆ ನಿಲುವಂಗಿಯ ಪೋಲೀಸ್! ಈತನ ಕೈ-ಕಾಲೇ ಹೋದವು. "ಸ್ವಲ್ಪ ಪೋಲೀಸ ಸ್ಟೇಶನ್ನಿಗೆ, ಇಲ್ಲೇ ಹೊರಗೆ, ಬರ್ರೀರಾ, ನಮ್ಮ ಎಸ್. ಐ. ಸಾಹೇಬರು ಕರಿತಾರೆ" ಎಂದ ಆ ಭೂಪ. 'ಏಕೆ' ಎಂದು ಈತ ತುಸು ಧೈರ್ಯದಿಂದಲೇ ಕೇಳಿದ. "ನನಗೆ ಗೊತ್ತಿಲ್ಲ ನಿಮ್ಮನ್ನು ಕರೆದುಕೊಂಡು ಬರಲು ಹೇಳಿದ್ದಾರೆ." ಎಂದು ಉತ್ತರಿಸಿದ. ಹಾಗಾದರೆ, ಈತನಿಗೇನೂ ಈ ಪರ್ಸಿನ ವಾಸನೆ ಬಡಿದಂತಿಲ್ಲ. ಪೋಲೀಸ ಠಾಣೆಯಲ್ಲಿ ಸಬ್ ಇನ್‌ಸ್ಪೆಕ್ಟರ ಕೇಳಿದರೆ 'ಶಾಲೆಯ ಹಣ' ಎಂದು ಹೇಳಿ ಲಕ್ಷ್ಮೀಗ್ರಹಣಕ್ಕೆ ಪ್ರಯತ್ನಿಸಿದರಾಯಿತು ಎಂದು 'ನಡೆ' ಎಂದು ಆತನೊಡನೆ ಹೊರಟ.

ಪೋಲೀಸಸ್ಟೇಶನ್ನಿನಲ್ಲಿ ಸಬ್ ಇನ್‌ಸ್ಪೆಕ್ಟರ ನೆದುರು ಈತ ಹೋಗಿ ಮಂಡಿಸಿದ ಕೂಡಲೆ ಪೋಲೀಸ ಹೇಳಿದ್ದು "ಇವರ ಹತ್ತರ ಆ ಕೆಂಪು-ಕಪ್ಪು ಪರ್ಸ ಇದೆ ರಾವಸಾಹೇಬ" ಎಂದು. ಈತನು ಆ ಪೋಲೀಸನನ್ನು ಒಮ್ಮೆ ಕೆಂಗಣ್ಣಿನಿಂದ ನೋಡಿದ.

"ಹೌದ್ರಿ ಮಿಸ್ಟರ, ಯಾವ ಪರ್ಸ ಸ್ವಲ್ಪ ತೋರಿಸಿರಿ ನೋಡೋಣ. ನಮ್ಮ ಸ್ನೇಹಿತರೊಬ್ಬರು ಈಗೊಂದು ಗಂಟೆಯ ಹಿಂದೆ ಧಾರವಾಡದಿಂದ ಬರುವಾಗ ಪರ್ಸ ಕಳೆದುಕೊಂಡಿದ್ದರಂತೆ."

"ನನ್ನ ಪರ್ಸ ನನ್ನದು. ನಿಮಗೇಕೆ ತೋರಿಸಬೇಕು."

"ನಿಮ್ಮ ಹತ್ತರ ಎರಡು ಪರ್ಸ ಇವೆಯೆಂದು ಇಟ್ಟುಕೊಳ್ಳೋಣ. ಆಗ ಆ ಇನ್ನೊಂದು ನಿಮ್ಮದಲ್ಲವೆಂದಾಗುವದು."

"ಹೀಗೇನಾದರೂ ಕೇಳಹತ್ತಿದರೆ ನಾನು ಉತ್ತರ ಕೊಡಲು ನಿರಾಕರಿಸಬೇಕಾಗುವದು."

"ಉತ್ತರ ಕೊಡಬೇಡ ಮಹಾರಾಯ ಪರ್ಸ ಸಿಕ್ಕಿದ್ದರೆ ಕೊಟ್ಟುಬಿಡು" ಎಂದು ನುಡಿಯುತ್ತ ತನ್ನ ಬೆನ್ನಿಗೆ ಗುದ್ದುಕೊಟ್ಟವರಾರೆಂಬುದನ್ನು ನೋಡಲು ಮಾಸ್ತರ ಹಿಂತಿರುಗಿದಾಗ ತನ್ನ ಗೆಳೆಯನ ದರ್ಶನವೇ ಆಯಿತು. ಹೀಗೆ ಅನಪೇಕ್ಷಿತ ರೀತಿಯಲ್ಲಿ

ಅನಿಷ್ಟ ವಾತಾವರಣದಲ್ಲಿ ಇಷ್ಟಮಿತ್ರನ ದರ್ಶನ ವಾಗುವದೆಂದು ಆತನು ಅಪೇಕ್ಷಿಸಿರಲಿಲ್ಲ. ಫರ್ಸ್ಟ್‌ಕ್ಲಾಸವೇಟಿಂಗ್ ರೂಮಿನಲ್ಲಿ ಭೆಟ್ಟಿಯಾಗಬೇಕಾಗಿದ್ದ ಆತನನ್ನು ಪೋಲೀಸ ಠಾಣೆಯಲ್ಲಿ ನೋಡುವಂತಾಯಿತು.

"ಏ, ಹುಲಿ, ಈತನ ಕಡೆಗೆ ನನ್ನ ಪರ್ಸ ಇದ್ದರೆ ಎಲ್ಲಿಯೂ ಹೋಗುವದಿಲ್ಲ ನಾವು ಸ್ವಲ್ಪ ಮಾತಾಡಿಕೊಂಡು ಬರುತ್ತೇವೆ" ಎಂದು ಆತನು ಸಬ್‌ಇನ್‌ಸ್ಪೆಕ್ಟರನಿಗೆ ಹೇಳಿ ಉಪಾಧ್ಯಾಯನನ್ನು ಎಬ್ಬಿಸತೊಡಗಿದನು.

"ಶೋಧಕ್ಕೆ ಹೋದ ನಮ್ಮ ಜನರೂ ಬರಲಿ ನೋಡೋಣ" ಎಂದ ಆ ಹುಲಿ.

ಕುಟುಂಬಯೋಜನಾಶಾಖೆಯ ಅಧಿಕಾರಿ ಈ ಮಾಸ್ತರನೊಂದಿಗೆ ಠಾಣೆಯ ಮುಂದಿನ ಅಂಗಳಕ್ಕೆ ಬಂದಕೂಡಲೆ,

"ಸೂಳೀಕೇರಿ, ನೀ ಎಸ್. ಎಸ್. ಆಚಾರ ಎಂದಿಗೆ ಆದ್ಯೋ ಮಗನೆ" ಎಂದ ಮಾಸ್ತರ.

"ಮೈಸೂರು ರಾಜ್ಯದ ಪ್ರಭಾವ ಕಾಣೊ. ಸೂಳೀಕೇರಿ ಶ್ರೀಕಾಂತಾಚಾರ್ಯ ಹೋಗಿ ಎಸ್. ಎಸ್. ಆಚಾರ, ಅಪ್ಪಟ ಮೈಸೂರಿಗನಾಗಿಬಿಟ್ಟೀನಿ."

"ಪರ್ಸು ಹ್ಯಾಂಗ ಬಿತ್ತು ?"

"ಅಷ್ಟು ಗೊತ್ತಾಗಿದ್ದರೆ ಜೇನ ಎಳೆದು ಗಾಡಿ ನಿಲ್ಲಿಸಿಬಿಡುತ್ತಿದ್ದೆ. ಸರಕಾರಿ ಹಣ ಮೂರುವರೆ ಸಾವಿರದಷ್ಟಿತ್ತು. ನಾಳೆಗೆ ಬೆಳಗ್ಗೇ ಬಳ್ಳಾರಿಯಲ್ಲಿ ಕೊಡಬೇಕಾಗಿತ್ತು, ಈಗ ಪರ್ಸ ಕಳೆದುಹೋಗಿ ಇಕ್ಕಟ್ಟಿಗೆ ಸಿಕ್ಕ ಹಾಗೆ ಆಗಿದೆ."

"ಈಗ ನಿನ್ನನ್ನು ಪಾರುಮಾಡಿದರೆ ಪ್ರಾಪ್ತಿಯು ಅರ್ಧಪಾಲು ನನಗೆ ಹೌದಲ್ಲೊ?"

"ಸರಕಾರಿ ಹಣ ಮಹಾರಾಯಾ, ಮತ್ತಿನ್ನೇನಾದರೂ ಕೇಳು ಇಲ್ಲವೆನ್ನುವದಿಲ್ಲ. ನನ್ನ ಆಣೆ."

"ನೋಡು ಹಾಗಾದರೆ, ಇಲ್ಲವೆನ್ನಬಾರದು. ನಿನ್ನ ಡಾಕ್ಟರ ಮಗನಿಗೆ ನನ್ನ ಮಗಳನ್ನು ತಂದುಕೊಳ್ಳಬೇಕು. ಈ ಬೀಗತನಕ್ಕೆ ಸಿದ್ಧವಾದರೆ ನಿನ್ನ ಸಂಕಟ ನಿವಾರಣೆ ತಕ್ಷಣ ಸಾಧ್ಯ."



"ನಿನ್ನ ಡಾಕ್ಟರ ಮಗನಿಗೆ ನನ್ನ ಮಗಳನ್ನು ತಂದುಕೊಳ್ಳಬೇಕು".

"ಛೇ ಮರತೇ ಹೋಯಿತು ನೋಡು, ಅದನ್ನು ಹೇಳಲಿಕ್ಕೆಂದೇ ನಿನ್ನನ್ನು ಈ ರಾತ್ರಿಯಲ್ಲಿ ಕರೆಸಿದ್ದು. ನಿಮ್ಮ ಹುಡಗಿನ್ನ ನಮ್ಮ ಹುಡಗ ನೋಡ್ಯಾನಂತ. ನಮ್ಮ ಕೆಲಸ ಈಗ ಉಳಿದೇ ಇಲ್ಲ. ನಿಮ್ಮ ಹುಡಿಗಿ ನಾಚಿಕೆಯಿಂದ ಇನ್ನೂ ಬಾಯಿ ಬಿಟ್ಟಿರಲಿಕ್ಕಿಲ್ಲ. ನಾನೂ ನಮ್ಮ ಪರಿಚಯವಿದ್ದ ಸುಳಿವು ಆತನಿಗೆ ಹಚ್ಚಿಗೊಟ್ಟಿಲ್ಲ. ಹೊಡಿಸಿಬಿಡೂಣು-ಕಾರ್ತೀಕದಾಗ ಆಯ್ತಿಲ್ಲೋ."

"ಕುರುಡ ಒಂದು ಕಣ್ಣು ಕೇಳಿದರೆ ದೇವರು ಎರಡು ಕೊಟ್ಟಂತಾಯಿತು. ಆದರೆ ವರದಕ್ಷಿಣೆ ನಾನೇನೂ ಕೊಡುವವನಲ್ಲ."

"ಈಗ ಕೊಡತೀಯಿಲ್ಲಪ್ಪ ಅದೇ ಸಾಕು. ನನಗೇನು ಬೇಕಾಗಿಲ್ಲ ನಿನ್ನ ವರದಕ್ಷಿಣೆ. ನಿನ್ನ ಅಳಿಯ ಅಂತೂ ಕನ್ಯಾ ನೋಡುವವ. ಮುಗೀತಿಲ್ಲೊ ತಕರಾರು ?"

ಮಾಸ್ತರ ಕಿಸೆಯಲ್ಲಿಯ ಪರ್ಸು ತೆಗೆದು ಆತನಿಗೆ ತೋರಿಸಿದೊಡನೆ ಸೂಳೀಕೇರಿಯ ಮುಖ ಇಷ್ಟಗಲವಾಯಿತು.

"ನಡೆ, ಆ ಹುಲಿಗೆ ಅಷ್ಟು ಚಹ ಕುಡಿಸಿ ಪೋಲೀಸರಿಗೆ ಹತ್ತುರೂಪಾಯಿ ಬುಷಿಕೊಟ್ಟು ಹೋಗೋಣ" ಎನ್ನುವದಕ್ಕೂ ಒಳಗಿನಿಂದ "ಚಹ ಬಂದದ್ರೋ ಬರ್‍ರಿ ಮಕ್ಕಳಾ" ಎಂದು ಆ ಹುಲಿ ಗುಡುಗುವವದಕ್ಕೂ ಸರಿಹೋಯಿತು.

ಅತಿಥಿಗಳಿಗೆ ತನ್ನದೇ ಚಹ ಆಗಬೇಕೆಂದು ಸಬ್-ಇನ್‌ಸ್ಪೆಕ್ಟರ, ಕಳೆದು ಹೋದ ಹಣ ಸಿಕ್ಕಿದ್ದಕ್ಕೆ ತನ್ನದೇ ಚಹಾಪಾನ ಸಮಾರಂಭವೆಂದು ಸೂಳೀಕೇರಿ ಹಾಗೂ ಅಗ್ಗದಲ್ಲಿ ಅಳಿಯ ಸಿಕ್ಕಿದನೆಂಬ ಸಂತೋಷಕ್ಕಾಗಿ ತನ್ನದು ಈ ಸಮಾರಂಭವೆಂದು ಮಾಸ್ತರ ಹೀಗೆ ಮೂವರೂ ಚಹದ ಹಣ ಯಾರು ಕೊಡಬೇಕೆಂಬ ಬಗ್ಗೆ ಅವರಲ್ಲಿ ವಾದವಿವಾದ ನಡೆದಾಗ ಉಳಿದ ಮಾತುಗಳೆಲ್ಲ ಮುಗ್ಗಿಹೋಗಿ, ಬರಿ "ಚಹ, ಚಹ" ಎಂಬ ಶಬ್ದಗಳೇ ಗಟ್ಟಿಯಾಗಿ ಕೇಳಹತ್ತಿದವು.

ಮಾಸ್ತರ ಗಡಬಡಿಸಿ ಕಣ್ಣುತೆರೆದು ನೋಡಲಾಗಿ ಎದುರಿಗೆ ಗೃಹಿಣಿಯು ಚಹದ ಕಪ್ಪನ್ನು ಹಿಡಿದು ಈತನನ್ನು ಎಬ್ಬಿಸುತ್ತಿದ್ದಳು.

"ಏನು ಭವಿಷ್ಯ ಬರಿತಾರ ಮಕ್ಕಳು' ಇಂದಿನ ಭವಿಷ್ಯ ಏನದ ನೋಡು, ಚಹಾಪಾನ, ಭಾರ್ಯಾದರ್ಶನ, ನಿದ್ರಾಭಂಗ ಅಂತೇನು?' ಎಂದು ಚಹದ ಕಪ್ಪನ್ನು ಬಾಯಿಗೆ ಹಚ್ಚಿದ. "ಹೌದು, ನಿನ್ನೆ ಧನಲಾಭ, ಅಪಮಾನ ಯೋಗ, ಸನ್ಮಿತ್ರದರ್ಶನ ಎಂದಿತ್ತು ನಿಮ್ಮ ಭವಿಷ್ಯ ಏನಾಯಿತು. ಎಲ್ಲಾ ಸುಳ್ಳೇ" 'ಹಾಗೆನ್ನಬೇಡ ಕನಸಿನಲ್ಲಾದರೂ ಅವು ನಿಜವಾಗುತ್ತವೆ' ಎಂದು ಕನಸನ್ನು ವಿವರಿಸಿದ.

# ಐತಿಹಾಸಿಕ ಕಾಲದ ಭಾರತದ ಭಾಗ್ಯೋದಯ



## ಆರ್ಥಿಕ ಪರಿಸ್ಥಿತಿಯ ಯಥಾರ್ಥ ಚಿತ್ರ

**ಪ್ರಾಚೀನ ಇತಿಹಾಸ ಕಾಲದಲ್ಲಿ ಭಾರತವು ಏಕೀಕರಣವನ್ನು ಸಾಧಿಸಿದ್ದಲ್ಲದೆ ಪರರಾಷ್ಟ್ರಗಳ ಸಂಪರ್ಕವನ್ನೂ ಸಾಧಿಸಿಕೊಂಡು ಅಂತಾರಾಷ್ಟ್ರೀಯ ಸಂಬಂಧಕ್ಕೆ ದಾರಿಯನ್ನು ಮಾಡಿಕೊಂಡಿದ್ದಿತು. ಸಾಂಸ್ಕೃತಿಕ ಅಭ್ಯುದಯವನ್ನು ಸಾಧಿಸಿತ್ತು. ಭಾರತದ ಕೃಷಿವ್ಯವಸಾಯ ಉದ್ಯಮ ವ್ಯಾಪಾರಗಳು ಬಹಳ ವಿಕಾಸಹೊಂದಿದ್ದವು. ಹಳ್ಳಿಯೇ ಮಹತ್ವದ ಆರ್ಥಿಕ ಘಟಕವಾಗಿದ್ದಿತು. ಗ್ರಾಮ ರಾಜ್ಯವು ಸುವ್ಯವಸ್ಥಿತವಾಗಿದ್ದಿತು. ಇದನ್ನೆಲ್ಲ ಲಕ್ಷಿಸಿದಾಗ ಆ ಕಾಲದಲ್ಲಿಯ ಆಡಳಿತವೂ ಕಲ್ಯಾಣ ರಾಜ್ಯ ಪದ್ಧತಿಯ ಮಾದರಿಯದಾಗಿತ್ತೆಂಬುದು ಕಂಡು ಬರುವುದು. ಇದರ ಸುಂದರ ವಿವೇಚನೆ ಇಲ್ಲಿದೆ.**

ಲೇಖಕರು :
**ನಾಯಕ ವೆಂಕಟರಾಯ,**
ಎಂ. ಎ., ಎಲ್‌ಎಲ್. ಬಿ
**ವಿಜಾಪೂರ**

ಭಾವೈಕ್ಯದ ಅವಶ್ಯಕತೆ ಹಾಗು ಮಹತ್ವಗಳನ್ನು ಕುರಿತು ಇಂದು ನಾಡಿನಲ್ಲಿ ನಡೆದ ಚರ್ಚೆಯ ಹಿನ್ನೆಲೆಯಲ್ಲಿ ಪ್ರಾಚೀನ ಭಾರತದ ಇತಿಹಾಸದಿಂದ ಸ್ಫೂರ್ತಿಯನ್ನು ಪಡೆಯ ಬಯಸುವದು ಸಹಜ. ಆದರೆ ಅಂತಹ ಸ್ಫೂರ್ತಿಯನ್ನು ಒಣ ಅಭಿಮಾನದಿಂದ ಪಡೆಯಲಿಚ್ಛಿಸುವದಕ್ಕಿಂತ ಸಾಧಾರಣವಾದ ಐತಿಹಾಸಿಕ ಪ್ರಮಾಣಗಳಿಂದ ಸಂಪಾದಿಸಿದರೆ, ಅದು ಬಹುಕಾಲ ಉಳಿಯಬಲ್ಲದು. ಈ ದೃಷ್ಟಿಯಿಂದ ಭಾರತದ ಅದ್ಭುತರಮ್ಯ ಇತಿಹಾಸದ ಸಿಂಹಾವಲೋಕನವನ್ನು ಮಾಡುವದು ನಿಜವಾಗಿ ಫಲಪ್ರದವಾಗದಿರದು.

ಪ್ರಾಗೈತಿಹಾಸಿಕ ಕಾಲದ ಮಾತುಗಳಲ್ಲಿ ಸಂಶೋಧನೆಗಳಲ್ಲಿ ಸಹ ನಮ್ಮ ಮಾತೃಭೂಮಿಯ ಮಹಿಮೆಯ ವರ್ಣನೆಗಳನ್ನು ಕುರಿತು ಅಭಿಮಾನಾಸ್ಪದ ಆಧಾರಗಳು ದೊರೆಯುತ್ತವೆ. ಆದರೆ ಈಗ ಆ ವಿಷಯವು ಅಪ್ರಸ್ತುತ. ಐತಿಹಾಸಿಕಕಾಲವೆಂದು ಇತಿಹಾಸ ಸಂಶೋಧಕರು ಗೊತ್ತುಪಡಿಸಿದ ಅವಧಿಯಲ್ಲಿ ಅಂದರೆ ಮಗಧಸಾಮ್ರಾಜ್ಯದ ಬೆಳವಣಿಗೆಯಿಂದ ಕ್ರಿ. ಶ. ೪ ನೇ ಶತಮಾನದ ವರೆಗಿನ ಕಾಲಾವಧಿಯಲ್ಲಿ ನಮ್ಮ ದೇಶದ ಪ್ರಗತಿಯ ಕುರುಹುಗಳು ಹೇಗೆ ಎದ್ದು ಕಾಣುತ್ತವೆಯೆಂಬುದನ್ನು ವಿಮರ್ಶಿಸುವದು ಈ ಲೇಖದ ಕಕ್ಷೆಯೊಳಗಿನ ಮಾತು. ಪ್ರಾಚೀನ ಸಾಮ್ರಾಜ್ಯ ಸ್ಥಾಪಕರು ಸಾಧಿಸಿದ್ದ ಭಾರತದ ಭಾವೈಕ್ಯದ ರೂಪ ರಚನೆಗಳಿಗೂ ಇಂದು ನಮಗೆ ಬೇಕಾಗಿರುವ ಭಾವೈಕ್ಯದ ಸಂಘಟನಾ ಸಂವಿಧಾನಕ್ಕೂ ಮಹತ್ವದ ಅಂತರವಿರಬಹುದು. ಆದರೆ ಭಾರತವು ಒಂದು, ಅವಿಭಾಜ್ಯ; ಹಾಗು ನಾವೆಲ್ಲರೂ ಭಾರತೀಯರು ಎಂಬ ಭಾವನೆಯು ತಳಹದಿಯಲ್ಲಿ ಇರದಿದ್ದರೆ ಮುಂದಿನ ರಾಜ್ಯರಚನೆಯ ಕಟ್ಟಡವೆಲ್ಲ ಕುಸಿದು ಬೀಳುವದೆಂಬಲ್ಲಿ ಸಂಶಯವಿಲ್ಲ. ಅಂದರೆ ರಾಜ್ಯ ಪದ್ಧತಿಯು ಯಾವುದಿದ್ದರೂ ಪ್ರಜೆಗಳ ಅಂತರಂಗದಲ್ಲಿ ತಾಯ್ನಾಡಿನ ಬಗೆಗೆ ಇರಬೇಕಾಗಿರುವ ಪ್ರೀತಿಯ ಸ್ವರೂಪ ಒಂದೇ ಎಂಬ ತತ್ವದ ಬಿಂಬನವು ಅವಶ್ಯವೆಂದು ಒಪ್ಪಿಕೊಳ್ಳಲೇಬೇಕು.

### ಭಾರತದ ಏಕೀಕರಣ

ಕ್ರಿ. ಶ. ಪೂ. ೭ನೇ ಶತಕದಿಂದ ಕ್ರಿ. ಶ. ೪ನೇ ಶತಕದವರೆಗೆ ಸ್ಥೂಲವಾಗಿ ಒಂದು ಕಾಲಖಂಡವನ್ನು ನಮ್ಮ ಇಂದಿನ ವಿಮರ್ಶೆಗೆ ವಿಷಯವೆಂದಿಟ್ಟುಕೊಳ್ಳಬಹುದು. ಈ ಕಾಲಖಂಡದಲ್ಲಿ ಎರಡು ಭಾಗಗಳನ್ನು ಕಲ್ಪಿಸಲು ಶಕ್ಯವಿದೆ. ಕ್ರಿ. ಶ. ಪೂ. ೭ ನೇ ಶತಕದಿಂದ ಕ್ರಿ. ಶ. ೨ ನೆಯ ಶತಕದ ವರೆಗೆ ಒಂದು ಭಾಗವೆಂದೂ ಕ್ರಿ. ಶ. ೨ ನೇ ಶತಕದಿಂದ ೪ ನೆಯ ಶತಕದ ವರೆಗಿನ ಭಾಗವನ್ನು ೨ ನೆಯ ಭಾಗವೆಂದೂ ಇಟ್ಟುಕೊಳ್ಳಲಭ್ಯಂತರವಿಲ್ಲ. ಮೊದಲ ಭಾಗವೇ ಮಗಧಸಾಮ್ರಾಜ್ಯವಿಸ್ತಾರದ ಕಾಲ. ಆಗ ಶತಕಾನುಶತಕಗಳ ಸಿಂಹಸ್ವಪ್ನವಾಗಿದ್ದ ಭಾರತದ ಏಕೀಕರಣವು ಸಿದ್ಧಿಸಿತು. ಈ ಏಕೀಕರಣದಲ್ಲಿ ೧೬ ಮಹಾಜನಪಾದಗಳು ಸಮಾವಿಷ್ಟವಾಗಿದ್ದವು. ಎರಡನೆಯ ಕಾಲ ಭಾಗದಲ್ಲಿ ಏಕೀಕೃತ ಭಾರತವು ಪರರಾಷ್ಟ್ರಗಳ ಸಂಪರ್ಕವನ್ನು ಸಾಧಿಸಿಕೊಂಡು ಅಂತಾ-ರಾಷ್ಟ್ರೀಯ ಸಂಬಂಧಕ್ಕೆ ದಾರಿಯನ್ನು ಮಾಡಿಕೊಂಡಿತಲ್ಲದೆ ಸಾಂಸ್ಕೃತಿಕ ಅಭ್ಯುದಯವನ್ನು ಸಾಧಿಸುತ್ತ ಪರಕೀಯ ಸಂಸ್ಕೃತಿಯಲ್ಲಿಯ ಗುಣಾಂಶಗಳನ್ನು ಮೈಗೂಡಿಸಿಕೊಂಡು ತನ್ನತನದ ಸತ್ತ್ವಾಂಶಗಳನ್ನೂ ಅವುಗಳ ತೀಕ್ಷ್ಣತೆಯನ್ನೂ ದೃಢೀಕರಿಸಿತು.

ಸಂಸ್ಕೃತಿಯ ಸತ್ತ್ವ, ಪೋಷಣೆ, ವಿಸ್ತಾರ ಇವುಗಳಿಗೆ ಯಾವ ದೇಶದಲ್ಲಿಯಾದರೂ ಅನುಕೂಲವಾದ ಭೌತಿಕ ಪರಿಸ್ಥಿತಿಯು ಇರಬೇಕಾಗುವದೆಂದು ಇತಿಹಾಸವು ಸಾರಿ ಹೇಳುತ್ತಿದೆ. ದೇಹವು ಬಲಿಷ್ಠವಾಗದಿದ್ದರೆ ಮನಸ್ಸು ದೃಢವಾಗದೆಂಬಂತೆ ನಾಡಿನ ಆರ್ಥಿಕ ಮತ್ತು ಔದ್ಯಮಿಕ ಜೀವನವು ಸತ್ತ್ವಶಾಲಿಯಾಗಿರದಿದ್ದರೆ ಸಂಸ್ಕೃತಿಯ ವಿಕಾಸವು ಸರಿಯಾದ ರೀತಿಯಲ್ಲಿ ಆಗಲಾರದು. ಈ ಮಾತನ್ನು ನಾವು ವಿಚಾರಿಸುತ್ತಿರುವ ಈ ಕಾಲಾವಧಿಯ ಚರಿತ್ರೆಯು ಹೇಗೆ ಬೆಂಬಲಿಸುತ್ತದೆಂಬುದನ್ನು ನೋಡುವ.

ಈ ಕಾಲಖಂಡದಲ್ಲಿ ಭಾರತದ ಕೃಷಿವ್ಯವಸಾಯ, ಉದ್ಯಮ, ಮತ್ತು ವ್ಯಾಪಾರ ಇವು ಬಹಳ ವಿಕಾಸವನ್ನು ಹೊಂದಿದ್ದವು. ಈ ಅಭಿ

ವೃದ್ಧಿಗೆ ಸರಕಾರಗಳೂ ಸಮಾಜವೂ ಜೊತೆ ಜೊತೆಯಾಗಿ ದುಡಿದಿದ್ದವೆಂಬುದು ಮನನೀಯವಾಗಿದೆ. ಕೆಲವೆಡೆಗಳಲ್ಲಿ ಪ್ರಭುತ್ವದ ನಿಯಂತ್ರಣವು ಬಿಗಿಯಾಗಿ ಈ ಅಭಿವೃದ್ಧಿಯ ಸಿದ್ಧಿ ಆಗಿದ್ದರೆ ಬೇರೆ ಕೆಲವೆಡೆಗಳಲ್ಲಿ ಉದ್ಯಮಕಾರರೂ ವ್ಯಾಪಾರಸ್ಥರೂ ಸರಕಾರದ ಬಿಗಿಯಾದ ನಿರ್ಬಂಧಗಳಿಲ್ಲದೆ ಸ್ವಸ್ಫೂರ್ತಿಯಿಂದ ಅದನ್ನು ಕೈಗೂಡಿಸಿದ್ದರು. ಕೌಟಿಲ್ಯನ ಅರ್ಥಶಾಸ್ತ್ರದಿಂದ ಆಗಿನ ಕಾಲದ ಜನಜೀವನದ ವಿವಿಧಾಂಗಗಳ ಮೇಲೆ ಸುದೀರ್ಘ ಹಾಗು ಸುಸ್ಪಷ್ಟ ಪ್ರಕಾಶವು ಬಿದ್ದಿದೆ.

ಈಗಿದ್ದಂತೆ ಆ ಕಾಲದಲ್ಲಿಯೂ ಒಕ್ಕಲತನವೇ ಬಹುಜನರ ವ್ಯವಸಾಯವಾಗಿದ್ದಿತು. ಹಳ್ಳಿಯು ಮಹತ್ವದ ಆರ್ಥಿಕಘಟಕವಾಗಿದ್ದಿತು. ಹೊಲವಿಲ್ಲದ ದಿನಗೂಲಿ ಮಾಡುವ ಕೆಲಸಗಾರನಿಗೆ ಸಮಾಜದಲ್ಲಿ ಗೌರವವಿದ್ದಿಲ್ಲ. ಆತನನ್ನು ಗುಲಾಮನಿಗಿಂತ ಹೀನನನ್ನಾಗಿ ಕಾಣುತ್ತಿದ್ದರು. ಗೋಧನದ ಬಗೆಗೆ ವಿಶೇಷ ಆದರವಿದ್ದಿತು. ಕೌಟಿಲ್ಯನ ಗ್ರಾಮಯೋಜನೆಯಲ್ಲಿ ಧಾರ್ಮಿಕ ಅಭ್ಯಾಸ ಮತ್ತು ಆಚಾರಗಳಿಗಾಗಿ ಉದ್ಯಾನವನಗಳು ಅವಶ್ಯವೆಂದೆಣಿಸಲಾಗಿದ್ದಿತು. ಅರ್ಥಶಾಸ್ತ್ರದಲ್ಲಿ ಗ್ರಾಮದ ವರ್ಣನೆಯು ಬಹಳ ನಿಚ್ಚಳವಾಗಿದೆ. ಅಲ್ಲದೆ ಗ್ರಾಮಭೂಮಿಯಲ್ಲಿ ಕೆಳಗಿನಂತೆ ೧೧ ಬಗೆಗಳಿದ್ದವು:

(೧) ಕೃಷ್ಟ (ಸಾಗುವಳಿಯಾದ), (೨) ಅಕೃಷ್ಟ (ಸಾಗುವಳಿಯಾಗದಿದ್ದ), (೩) ಸ್ಥಲ, (೪) ಕೇದಾರ, (೫) ಆರಾಮ, (೬) ಷಂಡ, (೭) ಮೂಲಾಲಾಪ, (೮) ವಾಟ, (೯) ವನ, (೧೦) ವಿವೀತ, (೧೧) ಪಥಿ.

## ಗ್ರಾಮರಚನೆ

ಗ್ರಾಮರಚನೆಯಲ್ಲಿ ವಾಸ್ತುಚೈತ್ಯ, ದೇವಗೃಹ, ಸೇತುಬಂಧ, ಸ್ಮಶಾನ, ಸತ್ರ, ಪ್ರಪಾ, ಪಣ್ಯಸ್ಥಾನ, ಪ್ರೇಕ್ಷಾಗಾರ, ಪ್ರವಹನ ಎಂಬುದಾಗಿ ವ್ಯವಸ್ಥೆಯನ್ನು ಮಾಡಿದ್ದರು. ಆಗಿನ ಕಾಲದಲ್ಲಿ ಬೆಳೆಯುತ್ತಿದ್ದ ಬೆಳೆಗಳ ಪ್ರಕಾರಗಳೂ ಗಮನಾರ್ಹವಾಗಿರುವವು. ಕೋದ್ರವ, ತಿಲ, ಪ್ರಿಯಂಗು, ಮುದ್ಗ, ಮಾಷ, ಮಸೂರ, ಕುಳಿತ್ಥ, ಯವ, ಗೋಧೂಮ, ಕಲಾಯ, ಅತಸೀ, ಸರ್ಷಪ ಎಂಬ ಧಾನ್ಯಾದಿಗಳ ವರ್ಣನೆಯು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬಂದಿದೆ. ಅಲ್ಲದೆ ಶಾಕಮೂಲಗಳು ಹಾಗು ಹಣ್ಣುಹಂಪಲಗಳ ವರ್ಣನೆಯೂ ಹೃದಯಂಗಮವಾಗಿದೆ.

ಒಕ್ಕಲತನಕ್ಕೆ ಗೋಸಂಪತ್ತಿಯು ಮಹತ್ವದ್ದೆಂಬ ಅಂಶವನ್ನು ಅರ್ಥಶಾಸ್ತ್ರವು ಗುರುತಿಸಿ ಅವರ ಬಗೆಗೆ ದಕ್ಷತೆಯನ್ನು ವಹಿಸಲು ಕೊಟ್ಟ ಆದೇಶವು ಮನನೀಯವಾಗಿದೆ. ಎತ್ತು, ಆಕಳು, ಎಮ್ಮೆ, ಕೋಣ, ಕುರಿ, ಆಡು, ಕತ್ತೆ, ಒಂಟೆ, ಹಂದಿ, ನಾಯಿ ಮೊದಲಾದವುಗಳ ಪಾಲನೆಯ ಬಗೆಗೆ ವಿವರಿಸಿದ ನಿಯಮಗಳು ಲಕ್ಷಿಸತಕ್ಕವಾಗಿವೆ. ಸರಕಾರವು ಮಾದರಿಯ ಕೃಷಿಗೋರಕ್ಷಗಳ ಕ್ಷೇತ್ರಗಳನ್ನು ನಿರ್ಮಿಸುತ್ತಿದ್ದಿತು. ಗೋಪಾಲಕ, ಪಿಂಡಾರಕ, ದೋಹಕ, ಮಂಥಕ, ಲುಬ್ಧಕ ಮೊದಲಾದ ಬೇರೆ ಬೇರೆ ಕೆಲಸಗಾರರಿದ್ದರು. ವನ್ಯಮೃಗಗಳ ರಕ್ಷಣೆಯನ್ನೂ ಪ್ರಭುತ್ವದವರು ಬಹಳ ದಕ್ಷತೆಯಿಂದ ಮಾಡಬೇಕೆಂಬ ಆದೇಶವಿದ್ದಿತು.

ಗ್ರಾಮರಾಜ್ಯಭಾರದ ಅಂಗವಾಗಿ ಗ್ರಾಮಭೃತಕರಲ್ಲಿ ಕುಟ್ಟಕ (ಬಡಗಿ) ಕಮ್ಮಾರ. ಕುಂಬಾರ, ನಾಪಿತ, ಅಸಗ, ಮೇದಕ, ರಜ್ಜುವರ್ತಕ, ಅನೀಕಸ್ಥ, ಅಶ್ವದಾಯಕರು ಮುಖ್ಯರಾಗಿದ್ದರು. ಅಲ್ಲದೆ ಮೇಲ್ವಿಚಾರಕ್ಕಾಗಿ ಅಧ್ಯಕ್ಷ, ಸಂಖ್ಯಾಯಕಗೋಪ, ಸ್ಥಾನಿಕ, ಚಿಕಿತ್ಸಕರೇ ಮೊದಲಾದವರ ಏರ್ಪಾಡೂ ಇದ್ದಿತು.

ಗ್ರಾಮರಕ್ಷಣೆಗಾಗಿ ಪೋಲೀಸದಳದ ವ್ಯವಸ್ಥೆಯನ್ನೂ ಮಾಡಲಾಗಿದ್ದಿತು. ವಾಗುರಿಕರು, ಶಬರರು, ಪುಳಿಂದರು. ಚಾಂಡಾಲರೂ ಆರಣ್ಯಚರರೂ ಈ ದಳದಲ್ಲಿರುತ್ತಿದ್ದರು.

ಸರಕಾರವು ಒಕ್ಕಲತನದ ಹುಟ್ಟುವಳಿಯ ಮೇಲೆ ಬೇರೆ ಬೇರೆ ಸುಂಕಗಳನ್ನು ತೆಗೆದುಕೊಳ್ಳುತಿದ್ದಿತು. ಅವುಗಳಲ್ಲಿ ಬಿಟ್ಟಿಯೂ ಒಂದಾಗಿದ್ದಿತು. ಅಲ್ಲದೆ ಬರಗಾಲ ಯುದ್ಧ ಮೊದಲಾದ ಅನಿರೀಕ್ಷಿತ ಆಪತ್ತುಗಳ ಪರಿಹಾರಕ್ಕಾಗಿ ದವಸಧಾನ್ಯಗಳ ಸಂಗ್ರಹವನ್ನು ಒಕ್ಕಲಿಗರಿಂದ ಎತ್ತಲಾಗುತಿದ್ದಿತು. ಭಾಗ, ಬಲಿ, ಕರ, ವಿವೀತ, ರಜ್ಜು ಚೋರರಜ್ಜು ಅಂದರೆ ಒಕ್ಕಲತನದ ಉತ್ಪಾದನೆಯು ಆರರಲ್ಲಿ ಒಂದಂಶ, ಭಾಗದ ಮೇಲೆ ತೆರಬೇಕಾದ ಅನಿರ್ದಿಷ್ಟ ಸುಂಕವೇ ಬಲಿಯೆಂದೆನಿಸಿಕೊಳ್ಳುತ್ತಿದ್ದಿತು. ಹೀಗೆಯೆ ಕಾಲಕಾಲಕ್ಕೆ ತೆರಬೇಕಾದ ಕರ ತೆರಿಗೆಗಳಲ್ಲಿ ಹುಲ್ಲುಬನ್ನಿ, ಮೋಜಣಿಕರ ಪೋಲೀಸತೆರಿಗೆ ಮೊದಲಾದವುಗಳು ಇರುತಿದ್ದವು. ಗ್ರಾಮಕ್ಕೆ ಬೇಕಾದ ಉರುವಲಕಟ್ಟಿಗೆ ಮೊದಲಾದವುಗಳನ್ನು ಅರಣ್ಯದಿಂದ ಒದಗಿಸಿಕೊಳ್ಳಲಾಗುತಿದ್ದಿತು. ಕಾದಿಟ್ಟಅರಣ್ಯ, ಸಾಮಾನ್ಯಅರಣ್ಯ ಎಂದು ವಿಭಾಗಗಳಿದ್ದವು. ಸರಕಾರವು ಮಾದರಿಯ ಕೃಷಿಕ್ಷೇತ್ರಗಳನ್ನು ಅಣಿಗೊಳಿಸಿದ್ದಿತು. ಹತ್ತಿ, ಸಣಬು ಮೊದಲಾದವುಗಳನ್ನು ಬೆಳೆಯಲು ಹಾಗು ಹಣ್ಣುಹಂಪಲುಗಳನ್ನು ಬೆಳೆಯಲು ಸೌಕರ್ಯಗಳನ್ನು ಸರಕಾರವು ಒದಗಿಸುತ್ತಿದ್ದಿತು. ಹಾಗೆಯೆ ಯುದ್ಧಗಳಿಗಾಗಿ ಬೇಕಾಗುವ ಆನೆಗಳನ್ನು ಪಡೆಯುವದಕ್ಕಾಗಿ ಅವುಗಳಿಗಾಗಿಯೆ ಅರಣ್ಯಗಳನ್ನು

ಕಾಪಾಡಿಕೊಂಡು ಬರಲಾಗುತಿದ್ದಿತಲ್ಲದೆ ಅವುಗಳ ಮೇಲ್ವಿಚಾರಣೆಗೆ ನಾಗವನಾಧ್ಯಕ್ಷನೆಂಬ ಅಧಿಕಾರಿಯನ್ನು ನಿಯಮಿಸಲಾಗುತಿದ್ದಿತು.

## ವ್ಯಾಪಾರೋದ್ಯಮ

ಆ ಕಾಲದಲ್ಲಿ ವ್ಯಾಪಾರೋದ್ಯಮಗಳ ಪ್ರಗತಿಯೂ ಮನನೀಯವಾಗಿದ್ದಿತು. ಕಲಾಕೌಶಲ್ಯಗಳ ನಾಮನಿರ್ದೇಶನವನ್ನು ಆಗಿನ ಕಾಲದ ಸಾಹಿತ್ಯದಲ್ಲಿ ನೋಡಿದರೆ ಈ ಸಂಗತಿಯು ಸ್ಪಷ್ಟವಾಗುತ್ತದೆ. ಜಾತಕಗಳಲ್ಲಿ ಹದಿನೆಂಟು ಹಸ್ತಕುಶಲ ಕೈಗಾರಿಕೆಗಳ ಉಲ್ಲೇಖವಿದೆ. ನೇಯ್ಗೆ, ಕುಂಬಾರಿಕೆ, ಹಸ್ತಿದಂತ, ಚರ್ಮಕಾರ, ಬಣ್ಣಗಾರ ಮೊದಲಾದವರು ಗ್ರಾಮಜೀವನದ ವಿಕಾಸಕ್ಕೆ ತುಂಬ ನೆರವಾಗಿದ್ದರೆಂಬ ಉಲ್ಲೇಖವು ನಿಜಕ್ಕೂ ಹೆಮ್ಮೆಯದಾಗಿದೆ. ಗಣಿ ಉದ್ಯಮವು ಬಹಳ ಮುಂದುವರಿದಿದ್ದಿತೆಂದೂ ವಿಫುಲವಾಗಿ ಬಂಗಾರ, ಬೆಳ್ಳಿ, ತಾಮ್ರ, ಕಬ್ಬಿಣಗಳನ್ನು ಗಣಿಗಳಿಂದ ತೆಗೆಯಲಾಗುತ್ತಿದ್ದಿತೆಂದೂ ಗ್ರೀಕ ರಾಯಭಾರಿಗಳಾಗಿದ್ದ ಮೆಗ್ಯಾಸ್ಥನೀಸರು ಮುಕ್ತಕಂಠವಾಗಿ ಪ್ರಶಂಸಿಸಿರುವರು. ಯಾನ, ರಥ, ಶಕಟಗಳೆಂಬ ಬಗೆಬಗೆಯ ವಾಹನಸೌಕರ್ಯಗಳನ್ನು ನಿರ್ಮಿಸುವಲ್ಲಿ ಬಡಗಿಯು ಮಹತ್ವದ ಪಾತ್ರವನ್ನು ವಹಿಸಿದ್ದನೆಂಬ ಮಾತು ಯಾರಿಗೆ ತಾನೆ ಅಭಿಮಾನವನ್ನುಂಟು ಮಾಡಲಿಕ್ಕಿಲ್ಲ!

ಉದ್ಯಮಗಳನ್ನು ಕೈಕೊಂಡ ಬೇರೆಬೇರೆ ಉದ್ಯಮಗಾರರು ಒಂದೆಡೆ ವಾಸಿಸುತ್ತ ಅವರ ಕೇರಿಗಳೂ ಗ್ರಾಮಗಳೂ ಇದ್ದವೆಂಬುದು ಗಮನಾರ್ಹವಾಗಿದೆ. ಪಟ್ಟಣಗಳಲ್ಲಿ ಕರ್ಮಾಲಯಗಳೂ ಪೇಟೆಗಳೂ ಇದ್ದವು. ಬಟ್ಟೆ, ಕಿರಾಣಿ, ಎಣ್ಣೆ, ಧಾನ್ಯ, ಸುಗಂಧದ್ರವ್ಯ, ಹೂ, ಚಿನ್ನ, ಬೆಳ್ಳಿ, ರತ್ನ ಮುತ್ತು ಮೊದಲಾದ ವ್ಯಾಪಾರಸ್ಥರ ಸಾಲುಗಳಿದ್ದವಲ್ಲದೆ ಮದ್ಯದ ಅಂಗಡಿಗಳೂ ಇದ್ದವು. ತೀಕ್ಷ್ಣಮದ್ಯ, ವಿಷಪದಾರ್ಥ, ಮಾಂಸ, ಗುಲಾಮರು ಇವರ ಮಾರಾಟವನ್ನು ಪ್ರತಿಬಂಧಿಸಲಾಗಿದ್ದಿತು. ಸರಕಾರವು ಬೆಲೆ ನಿಯಂತ್ರಣವನ್ನು ಕೈಕೊಂಡಿರಲಿಲ್ಲ, ಬಂಗಾರವನ್ನು ಒತ್ತೆಯಿಟ್ಟುಕೊಂಡು ಸಾಲವನ್ನು ಕೊಡಲಾಗುತ್ತಿದ್ದಿತು. ಚಕ್ರಬಡ್ಡಿ, ವಾಡಿಕೆಯ ಬಡ್ಡಿ ದರಕ್ಕಿಂತ ಹೆಚ್ಚಿನ ಬಡ್ಡಿ, ಅಸಲಿನಷ್ಟು ಬಡ್ಡಿ, ಬಡ್ಡಿಯ ಬದಲು ಬಿಟ್ಟಿ ಅಲ್ಲದೆ ಒತ್ತಾಯಕ್ಕೊಳಗಾಗಿ ಮಿತಿಮೀರಿ ಬಡ್ಡಿಯನ್ನು ಕೊಡಲೊಪ್ಪುವದು ಇವೇ ಮೊದಲಾದವುಗಳು ನಿಷಿದ್ಧವಾಗಿದ್ದವು. ಭದ್ರತೆಯಿಲ್ಲದ ಸಾಲಗಳಿಗೆ ಮಾತ್ರ ಹೆಚ್ಚಿನ ಬಡ್ಡಿಯನ್ನು ಆಕರಿಸಲಾಗುತಿದ್ದಿತು.

ವ್ಯಾಪಾರೋದ್ಯಮಗಳು ಸಾಕಷ್ಟು ಸುಸಂಘಟಿತವಾಗಿದ್ದವು. ವಿವಿಧೋದ್ಯಮಗಳ ಶ್ರೇಣಿಗಳೂ ಸಂಘಗಳೂ ಇದ್ದವು. ವಿದೇಶಗಳ ಕೂಡ ವ್ಯಾಪಾರೀ ಸಂಪರ್ಕವೂ ಏರ್ಪಟ್ಟಿದ್ದಿತು. ಆಡಳಿತದವರು ಬೆಲೆಗಳ ಮೇಲೆ ಹತೋಟಿಯನ್ನಿಟ್ಟುಕೊಳ್ಳುವಲ್ಲಿ ಬಹಳ ದಕ್ಷರಾಗಿದ್ದರು, ಹುಟ್ಟುವಳಿಯಾದ ಸ್ಥಳಗಳಲ್ಲಿಯೆ ಸರಕುಗಳನ್ನು ಮಾರಗೊಡುತ್ತಿದ್ದಿಲ್ಲ. ಬೆಲೆಗಳನ್ನು ಗೊತ್ತುಪಡಿಸಿ ಮಾರ್ಕೆಟ್ಟುಗಳಿಗೆ ಸಾಗಿಸುವ ಅಧಿಕಾರಿಗಳಿರುತ್ತಿದ್ದರು. ವ್ಯಾಪಾರಸ್ಥರು ಲೈಸೆನ್ಸನ್ನು ಪಡೆಯಬೇಕಾಗುತ್ತಿದ್ದಿತು. ಕೆಲಸಗಾರರ ಸಂಘಗಳನ್ನು ನಿರ್ಬಂಧಿಸಲಾಗಿದ್ದಿತು. ಒಟ್ಟಿನಲ್ಲಿ ಸರಕಾರವು ಸಾರ್ವಜನಿಕರ, ಬಳಕೆಗಾರರ ಮತ್ತು ಗಿರಣಿಗಳ ಹಿತಸಂಬಂಧಗಳನ್ನು ಚೆನ್ನಾಗಿ ರಕ್ಷಿಸುತ್ತ ದೇಶದ ಆರ್ಥಿಕ ಹಾಗು ಔದ್ಯೋಗಿಕ ಪ್ರಗತಿಗೆ ನೆರವಾಗುತ್ತಿದ್ದಿತು. ತೂಕ ಅಳತೆ, ಆಯಾತ, ನಿರ್ಯಾತ ಮೊದಲಾದವುಗಳ ಮೇಲೆ ಸರಕಾರದ ನಿಯಂತ್ರಣವು ಪ್ರಭಾವಿಯಾಗಿದ್ದಿತು. ಅಂತು ಅಷ್ಟು ಪ್ರಾಚೀನಕಾಲದಲ್ಲಿಯೂ ಆಡಳಿತವು ಕಲ್ಯಾಣರಾಜ್ಯಪದ್ಧತಿಯ ಮಾದರಿಯದೇ ಆಗಿದ್ದಿತೆಂಬುದನ್ನು ಗಮನಿಸಿದರೆ, ನಾವಿಂದು ಮಾತ್ರ ಕಲ್ಯಾಣ ರಾಜ್ಯಪದ್ಧತಿಯ ಗುರಿಯನ್ನು ಸಾಧಿಸಲು ಹೊರಟಿರುವೆವೆಂಬ ಮಾತು ಹೊಸತೆಂದು ಹೆಮ್ಮೆಕೊಚ್ಚಿಕೊಳ್ಳುವಲ್ಲಿ ಹುರುಳಿಲ್ಲ.



# ನಾಟಕಾ ಬರೀಬ್ಯಾಡ್ರಿ

ಲೇಖಕರು :
ಜಿ. ಜಿ. ಹೆಗಡೆ
ಹುಬ್ಬಳ್ಳಿ

ಅವನು ಪ್ರಸಿದ್ಧ ನಾಟಕಕಾರ. ಅವನ ಗೆಳೆಯರು ಅವನ ಹೊಸ ನಾಟಕವನ್ನು ತುಂಬ ಪ್ರಶಂಸಿಸಿದರು. ಆದರೆ ಅವನ ಈ ಹೊಸ ಬಗೆಯ ನಾಟಕ ಅವನ ಹೆಂಡತಿಗೆ ಇಲ್ಲದ ಸಂಕಟ ತಂದೊಡ್ಡಿತು. ಗೃಹಿಣಿಯರ ಹರಟೆಯ ಚಾವಡಿಯಲ್ಲಿ ಎಲ್ಲರೂ ಅವಳನ್ನು ಟೀಕಿಸುವವರೇ. ಆ ನಾಟಕ ತಮ್ಮದೇ ಟೀಕೆಯಾಗಿದೆಯೆಂದೂ ಇನ್ನು ನಾಟಕ ಬರೆಯದಿರಲು ಗಂಡನಿಗೆ ಹೇಳಬೇಕೆಂದೂ ತಿಳಿಸಿದರು. ಅವಳೂ ಏನೂ ಮಾತನಾಡಲಾರಳು. ಆದರೂ ಗಂಡನಿಗೆ ಚಾವಡಿಯ ಸಂಗತಿ ತಿಳಿಸಿ ದುಂಬಾಲುಬಿದ್ದಳು. ನಾಟಕಕಾರನ ನಾಟಕ ಬರೆಯುವ ಕಾಗದ ಮಗನ 'ನೋಟಬುಕ್' ಆಯಿತು. . . . . . .

[ಶಂಭೂರಾಯನ ಮನೆಯ ಕೋಣೆ. ಆತ ಮೇಜಿನ ಬಳಿ ಕುಳಿತು ಸಿಗರೇಟು ಸೇದುತ್ತ ಯೋಚಿಸುತ್ತಿದ್ದಾನೆ. ಮೇಜಿನ ಮೇಲೆ ಕಾಗದ ಹರಡಿದೆ. ಕೈಯಲ್ಲಿರುವ ಸಿಗರೇಟು ಮುಗಿಯಲು ಆತ "ರಾಮೂ, ರಾಮೂ, ರಾಮ್ಯಾ!" ಎಂದು ಕರೆಯುವನು.]

**ಶಂಭೂ**— ಎಲ್ಲಿ ಹೋದ ಇಂವಾ ? ರಾಮ್ಯಾ, ಏ ರಾಮ್ಯಾ ? (ಎಂದು ಗಟ್ಟಿಯಾಗಿ ಕೂಗುವನು.)

**ಪಾರ್ವತಿ**—(ಶಂಭೂನ ಹೆಂಡತಿ ಒಳಗಿಂದ) ಯಾಕೆ? ಅಲ್ಲೆ ಎಲ್ಲಾದ್ರೂ— ಅಂಹಂ. ಹೌದಲ್ಲ ! ಇಲ್ಲೆ ಅಂಗಡೀಗೆ ಕಳಸೇನಿ. ಜೋಡಿ ಮರ್ತೇ ಹೋಗಿತ್ತು. ಉಪ್ಪೇ ಇದ್ದಿಲ್ಲ. ತರಲಿಕ್ಕೆ ಕಳಸೇನಿ.

**ಶಂಭೂ**— ನಿಂದು ಯಾವಾಗ್ಲೂ ಹೀಗೇನೇ. ಮನೀಗೆ ಬೆಂಕಿ ಹತ್ತಿದಮ್ಯಾಲೇ ಬಾವಿ ತೋಡವಾಕಿ ನೀನು. ಅವನ್ನ ಕಳಸಬೇಕಾದ್ರೆ ನನಗಷ್ಟು ಹೇಳ್ಬೇಕಿತ್ತು.

**ಪಾರ್ವತಿ**— ಯಾಕೆ ? ನೀವೇ ಹೋಗಿ ತರ್ತಿದ್ದರೇನು ?

**ಶಂಭೂ**— ಹೌದೌದು. ಶಾಣ್ಯಾಕಿ ನೀನು. ನೀ ಉಪ್ಪ ಮರತಿ ಅಂತ ನಾ ನನ್ನ ಕೆಲಸ ಮರೀಲಿಕ್ಕೆ ಬರತದೇನು ? ನಿನಗೇನು, ಅಕಸ್ಮಾತ್ ಒಂದ ಸಾಮಾನು ಇಲ್ಲದಿದ್ರೆ ಕಡೀಕ್ಕ ಮಂದೀ ಮನಿಂದ ಕಡಾ ತಂದಾದ್ರೂ ಕೆಲಸ ನಡಸಬಹುದು. ನಂದು ಹಾಗೇನು ? ನನ್ನ ಕೆಲಸ ಮಂದೀ ಕಡಿಂದ ಆಗವಂಥಾದ್ದಲ್ಲ. ನಿನ್ನ ಅಡ್ಡಿ ಅಡಚಣಿ ತೀರಸವ್ರು ಇರೂಹಾಂಗೆ ನನ್ನ ಕೆಲಸ ಮಾಡಿಕೊಡೂ ಭೂಪ ಒಬ್ಬನೂ ನೆರೆಹೊರೆಯೊಳಗೆ ಯಾಕೆ, ಈ ಊರಿನಾಗೇ ಇಲ್ಲ.

**ಪಾರ್ವತಿ**— ಸಾಕುಬಿಡ್ರಿ. ದಿನಾ ಒಂದೇ ಪುರಾಣ ಏನ ಹೇಳ್ತೀರಿ? ಮಾತೆತ್ತಿದರೆ, ನಮ್ಮನ್ನೆಲ್ಲ ಹೀಗಳೆಯೂದೂ ನಿಮ್ಮನ್ನ ಹೊಗಳಿಕೊಂಬೂದೂ ನಿಮಗೊಂದು ಚಟಾನೇ ಆಗಿಬಿಟ್ಟದ. ಏನೊ ನಾಲ್ಕಕ್ಷರ ಬರೀಲಿಕ್ಕೆ ಬರ್ತದಂತ ಕಾಳಿದಾಸನೇ ನಾನು ಅನ್ನೂ ಸ್ಥಿತೀಗೆ ಬಂದು ಮುಟ್ಟೀರಿ ನೀವು. ಹೋಗ್ಲಿ ಬಿಡ್ರಿ, ಎಲ್ಲಾ ರೋಗಕ್ಕೆ ಮದ್ದಿದ್ರೂ ಸ್ವಭಾವಕ್ಕಿಲ್ಲ. ಯಾರೇನು ಮಾಡೂದದ ? ಅದಾತು, ಈಗ ರಾಮು ಯಾಕೆ ಬೇಕಾಗಿದ್ದ ಅಂತ. . .

**ಶಂಭೂ**— ಭೇಷ್. ಇಂದು ನನ್ನ ಗ್ರಹಮಾನ ನೆಟ್ಟಗಿದ್ದಾಂಗ ಕಾಣ್ತದ. ಎಂದಿನ ಹಾಂಗೆ ನೀ ಮಾತಿಗೆ ಮಾತು-ಬೆಳಸಿ ವಾದ ಹಾಕ್ಕೋತ ಕೂಡ್ರೂಬದ್ಲು ಸೀದಾ ವಿಷಯಕ್ಕೆ ಬಂದದ್ದು ಶುಭಲಕ್ಷಣಾನೇ ಸರಿ. ನನಗೆ ಸಿಗರೇಟು ಬೇಕಾಗಿದ್ದು.

**ಪಾರ್ವತಿ**— ಹುಂ.

**ಶಂಭೂ**— ಅಂ? ಏನರ್ಥ ಈ 'ಹೂಂ'ಕ್ಕೆ?...

**ಪಾರ್ವತಿ**—'ಅಷ್ಟ್ಯಾಕ್ ತಿಳೀದಿದ್ದ ಮ್ಯಾಲೆ ನೀವೆಂಥ ನಾಟಕ ಬರೀವವ್ರು' ಅಂತೇನಿ?

**ಶಂಭೂ**— ಅಲ್ಲೆ, ನಾಟಕಾ ಬರಿಯೂದಕ್ಕೂ ಮಾತಿನ ಅರ್ಥಾ ಹಚ್ಚೂದಕ್ಕೂ ಏನು ಸಂಬಂಧ ಅಂತೇನಿ ? "ಸ್ತ್ರೀಯಶ್ಚರಿತ್ರಂ ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ'' ಅಂತ ದೊಡ್ಡವ್ರು ಮತ್ತೆ ಯಾಕೆ ಹೇಳ್ಯಾರ ? ಸ್ತ್ರೀಯಾದ ನಿನ್ನ ಮಾತಿನ ಅರ್ಥಾ, ಪುರುಷನಾದ ನನ್ನ ಭಾಗ್ಯದ ಮಾತೂ ಯಾರಿಗೆ ಹೇಳಲಿಕ್ಕೆ ಬಂದೀತು ? ಒಂದ. .

**ಪಾರ್ವತಿ**— (ನಕ್ಕು) ನಿಮ್ಮ ಮಟ್ಟೀಗೆ ಆ ಮಾತು ಖರೇ ಆದ್ರೂ ನಂದೇನೂ ಹಾಂಗಿಲ್ಲ. ಹೆಂಡತೀ ಮಾತು ತಿಳದ್ರೂ ತಿಳೀಲಿಲ್ಲ ಅಂತ ಅನ್ನೂಗತ್ತು ಗಂಡನ ಬಳಿ ಇರದಿದ್ರ ಸಂಸಾರನೇ ನಡಿಯೂದಿಲ್ಲ ಅಂತ ಗಂಡ



ಸರು ತಿಳಕೊಂಡಾರ ಅಂತ ನನಗೆ ಗೊತ್ತಿಲ್ಲೇನು ? ಆದ್ರೆ ಒಂದ ಮಾತು ಹೇಳಲ್ಯಾ ? ನಿಮ್ಮ ಭಾಗ್ಯದ ಮಾತು ಮಾತ್ರ ನನಗ ಗೊತ್ತದ. ನೀವು ಎಲ್ಲೀವರೆಗೆ ಸಾಹಿತ್ಯ, ನಾಟಕ, ಕಲ್ಪನೆ, ಸ್ಫೂರ್ತಿ ಅಂತ ಕುಣದಾಡ್ತಾ ವ್ಯವಹಾರಾ ಮರ್ತು ನಡೀತೀರೋ ಅಲ್ಲೀವರೆಗೆ ನಿಮ್ಮ ಭಾಗ್ಯ ಈಗಿದ್ದ್ಹಾಂಗೇ ಇರ್ತದೇ ವಿನಾ ಏನೂ ಬದಲಾಗೂದಿಲ್ಲ. ಈ ಬರಿಯೂ ಚಟ ಬಿಟ್ಟು. . .

**ಶಂಭೂ**— ಏ, ಏ, ಏನ ಮಾತು ನಿಂದು? ಅಲ್ಲಾ, ಸ್ವಯಂಸ್ಫೂರ್ತಿಯಿಂದ, ಅಂತಃಸ್ಫೂರ್ತಿಯಿಂದ ಬರಿಯೂದನ್ನ ಚಟ ಅಂತ ಧಿಕ್ಕಾರ ಮಾಡ್ತೀಯಲ್ಲ !

**ಪಾರ್ವತಿ**— ಇನ್ನೇನು ಮಾಡ್ಲಿ ಹೇಳ್ರಿ. ಇದರಿಂದ ನಿಮಗೆ ಸಂಪಾದನೆ ಎಷ್ಟು ಆಗತದ ಹೇಳ್ರಿ? ನಿಮ್ಮ ಸರಿಜೋಡಿಯವ್ರು ನೌಕರಿ ಮಾಡಿ. . .

**ಶಂಭೂ**— ಅಯ್ಯೋ ಅಯ್ಯೋ ಹೆಂಗಸರ ಬುದ್ಧೀನೆ ? ನಿಮ್ಮ ದೃಷ್ಟಿಯಲ್ಲಿ ಹಣ ಬಿಟ್ಟರೆ ಈ ಜಗತ್ತಿನಲ್ಲಿ ಮತ್ತೇನೂ ಇರೂದೇ ಇಲ್ಲ. ಅಂ! ರಾಮ್ಯಾ, ಉಪ್ಪು ತಂದಿಯೇನು ? ಅದನ್ನಿಟ್ಟು ಹೋಗಿ ಒಂದ ಪ್ಯಾಕ್ ಬರ್ಕಲಿ ಸಿಗರೇಟು ತಗೊಂಡ್ಬಾ. ಯಾಕೆ, ಮುಖಾ ಸೊಟ್ಟಮಾಡಿದಿ? ಹೋಗು. ಲಗೂ ತಗೊಂಡ್ಬಾ. ಅವ್ವನ ಹತ್ತರ ರೊಕ್ಕಾ ಇಸಕೊ. ಏನೆ ಅಂವಗೆ ಒಂದು ಮೂರು ನಯಾ ಪೈಸಾ ಹೆಚ್ಚಿಗೆ ಕೊಡು. ಪೆಪ್ಪರ್‌ಮಿಂಟ್ ತಗೊಳ್ಳಲಿ. ಲಗೂ ಬಾ ರಾಮ್ಯಾ. ಅಲ್ಲೆ ಯಾರಗೂಡಾದ್ರೂ ಆಡ್ತಾ ನಿಂತಕೊಬ್ಯಾಡ. (ರಾಮು ಹೋಗುವನು.) ಏನೇ, ಅಂವ ಬರೂದರೊಳಗೆ ಒಂದು ಕಪ್ ಚಹಾ ಮಾಡ್ಬಿಡು. ಈ ನಾಟಕಾ ಇಂದು ಮುಗಸಲೇ ಬೇಕು. ನಾಳೀನೇ ಕೊಡ್ಬೇಕು ಅಂತ ಸಂಪಾದಕರು ಅಲ್ಟಿಮೇಟಂ ಕೊಟ್ಟಬಿಟ್ಟಾರ. ನಾಲ್ಕ ದಿನಾ ತಡೀರಿ, ಸ್ಫೂರ್ತಿ ಬಂದು ಬರದ್ರ ಫರ್ಸ್ಟ್ ಕ್ಲಾಸ್ ಆಗ್ತದ ಅಂದ್ರೂ ಕೇಳಲಿಲ್ಲ- ಮ್ಯಾಟರ್ ಹರಕತ್ತ ಆಗ್ತದ, ನೀವೇನ್ರಿ ಮರಕವಿಗಳು, ಸ್ಫೂರ್ತಿ ಅಂದ್ರ ಇಪ್ಪತ್ತ ನಾಲ್ಕು ತಾಸೂ ನಿಮ್ಮ ಕಿಸೆಯಾಗಿರ್ತದ, ಎರಡು ಸಿಗರೇಟು ಸೇದೂದರೊಳಗೆ ಮೂರು ನಾಟಕ ಬರೀಬಲ್ರಿ ನೀವು, ನಿಮ್ಮ ಥರ್ಡ್ ಕ್ಲಾಸ್ ನಾಟಕಾ ಅಂದ್ರೂ ಉಳಿದವ್ರ ಫರ್ಸ್ಟ್‌ಕ್ಲಾಸ್ ನಾಟಕಕ್ಕಿಂತ ಬೇಷಾಗಿರ್ತದ ಅಂತ ಏನೇನೊ ಹೇಳಿದ್ರು. ಇನ್ನು ಸಾಧ್ಯ ಇಲ್ಲ ಅಂದ್ರ ಮರ್ಯಾದೀನೇ ಹೋಗ್ತದ ಅಂತ ಹೂಂ ಅಂದು ಬಂದೇನಿ. ಏನೊ ಒಂದು ವಿಚಾರ ತಲೆಯೊಳಗೆ ಮೂಡಿದ್ದ್ಹಾಂಗ ಆಗ್ಯೇದ. ನೀ ಮಾಡಿಕೊಟ್ಟ ನಂಬರ್ ವನ್ ಚಾ ಕುಡ್ದು ಸಿಗರೇಟಿನ ಒಂದೆರಡು ಝುರಕಿ ಎಳದನಂದ್ರೆ ಪೆನ್ ಓಡಿದ್ರೂ ಓಡಬಹುದು. ಮತ್ತೆ ಏನಂತಿ? ಪೆನ್ ಒಮ್ಮೆ ಓಡಲಿಕ್ಕ ಹತ್ತಿತು ಅಂದ್ರೆ ಮತ್ತೆ . . . (ಪಾರ್ವತಿ ಕಿಸಕ್ ಅಂತ ನಗುವಳು.) ಯಾಕೆ ನಕ್ಕಿ? ನನ್ನ ಮಾತೆಲ್ಲ ನಿನಗೆ ಹುಡಗಾಟಿಕಿ. . .

**ಪಾರ್ವತಿ**— ಅಂಹಂ ! ಆ ಸಂಪಾದಕ ನಿಮ್ಮನ್ನು ಸರಸ್ವತಿ ಅಪರಾವತಾರ ಅಂತ ಹೊಗಳಿದ ಅಂತ ನೀವೂ ಹಾಗೇ ತಿಳಕೊಂಡ್ರಿ, ಹೌದಲ್ಲೊ? ನಿಮ್ಮ ನಾಟಕದೊಳಗೆ ಏನಿರ್ತದ ಅಂತ ಅಂವಾ ಹಾಂಗಂದನೊ ನನಗಂತೂ ತಿಳೀವಲ್ದು. ನನಗೆ ಗೊತ್ತಿಲ್ಲೇನು ನಿಮ್ಮ ನಾಟಕದ ಕಥಿ ? ನಾಟಕಾ ಅಂತ ಇಲ್ಲಿ ಮನಿಯೊಳಗೆ ನಾವು ಮಾತಾಡಿಕೊಂಡದ್ದು, ಬಡಿದಾಡಿದ್ದು, ಆಚೆ ಈಚೆ ಮನಿಯವ್ರ ಹುಳಕು-ಪಳಕು ಒಂದು ನಾಕ ಸಾಲಿನೊಳಗೆ ಬರ್ದು ನೀವು ಕೈ ತೊಳಕೊಳ್ತೀರಿ. ಆ ಸಂಭ್ರಮಕ್ಕ ನೀ ಇಲ್ಲ ನಿಮ್ಮ ನಾಟಕ ಮುಗಿಯೂದರೊಳಗೆ ಕೈಯೊಳಗಿನ ಕೆಲಸ ಬಿಟ್ಟು ಒಂದಿಪ್ಪತ್ತ ಸಲ ಚಾ ಮಾಡಿಕೊಡಬೇಕು. ರಾಮ್ಯಾ ಒಂದ ಹತ್ತಸಲ ಸಿಗರೇಟಿಗೆ ಅಂತ ಅಂಗಡೀಗೆ ಓಡಬೇಕು.

**ಶಂಭೂ**— ಅಲ್ಲೆ, ಎಷ್ಟು ಸಹಜ ನನ್ನ ನಾಟಕಾನ್ನ ಟೀಕಿಸಿಬಿಟ್ಟೆಯಲ್ಲ ! ಅಲ್ಲೆ, ನಾಟಕಾ ಅಂದ್ರೆ ಸಮಾಜದ, ಜೀವನದ, ಸಂಸಾರದ ಪ್ರತಿಬಿಂಬದಂತಿರಬೇಕು. ನಾ ಯಾರು, ನೀ ಯಾರು, ನೆರೆಹೊರೆಯವರು ಯಾರು—ನಾನೂ ನೀನೂ ಕೂಡಿ ಸಂಸಾರ, ನಾವು ಮತ್ತು ನೆರೆಹೊರೆಯವರು ಕೂಡಿ ಸಮಾಜ—ನಾವೆಲ್ಲ ಬದುಕಿ ಬಾಳೂದು ಜೀವನ—ಇದರ ಪ್ರತಿಬಿಂಬ ಅಂದ್ರೆ—ಯಥಾರ್ಥಚಿತ್ರಣ ಅಂದ ಮ್ಯಾಲೆ ನಾವು ಮಾತಾಡಿಕೊಂಡದ್ದು, ಬಡದಾಡಿದ್ದು, ಪ್ರೀತಿಸಿದ್ದು, ನೆರೆಯವರ ಹುಳಕುಥಳಕು, ಗುಣ ಅವಗುಣ ಎಲ್ಲಾ ಬರ್ಲಿಕ್ಕೇಬೇಕು. ಹೀಗೆ ಬರದದ್ದೇ ಸಾಹಿತ್ಯ. ನೀ 'ಹ್ಞುಂ' ಅಂತ ಮೂಗು ಮುರೀತಿಯಲ್ಲಾ, ಅದನ್ನೇ ಜನ ಮೆಚ್ಚಿ "ಭೇಷ್ ನಾಟಕಾ ಅಂದ್ರೆ ಹೀಗಿರ್ಬೇಕು" ಅಂತ ನನ್ನ ಬೆನ್ನು ಚಪ್ಪರಸತಾರೆ.

**ಪಾರ್ವತಿ**— ಹೌದೌದು. ಅವರ ಗಂಟೇನು ಹೋಗ್ತದ ? ಆದ್ರೆ ಅವರ ಶಹಬಾಶ್‌ಗಿರಿಯಿಂದ ನೀವು ಇಲ್ಲೀ ತನಕಾ ಎಷ್ಟು ಸಂಪಾದಿಸೀರಿ ಹೇಳ್ರಿ? ಅಲ್ಲಿ ಹೊರಗೆ ಅವರು ನಿಮ್ಮ ನಾಟಕಾ ಓದಿ ನಿಮ್ಮ ಬೆನ್ನು ಚಪ್ಪರಿಸತಾರ, ಇಲ್ಲಿ ಮನಿಯೊಳಗೆ ನಾಕ ಮಂದಿ "ಏನ ಅಸಹ್ಯರವಾ" ಅಂತ ನನ್ನ ಮುಖದ ಮೇಲೆ ಉಗಳತಾರ.

**ಶಂಭೂ**— ಯಾರವರು ಉಗಳವವ್ರು? ಹುಚ್ಚಿ, ಹೊಟ್ಟೆಕಿಚ್ಚಿನಿಂದ ಅವರು ಹಾಗಂತಾರೆ ಅಂತ ತಿಳೀವಲ್ದೇನು ನಿನಗೆ? ತಮ್ಮ ಗಂಡಗ ಬರದ ವಿದ್ಯೆ ಈಕೀ ಗಂಡಗ ಬರ್ತದಲ್ಲ ಅಂತ . . .

**ಪಾರ್ವತಿ**— ಇರ್ಲಿ ಬಿಡ್ರಿ. ಚಹ ತಗೊಳ್ರಿ. ನನ್ನ ಹಣೇಬರಹಕ್ಕ ನೀವೇನು ಮಾಡೀರಿ?

**ಶಂಭೂ**— ಸುಳ್ಳೆ ಯಾಕೆ ಸಂತಾಪ ಮಾಡಿಕೊಳ್ಳತೀದಿ? ಖರೇ ಅಂದ್ರ, ಒಬ್ಬ ನಾಟಕಕಾರನ, ಒಬ್ಬ ಸಾಹಿತಿಯ ಹೆಂಡತಿ ಅಂತ ನೀನು ಅಭಿಮಾನ ಪಟ್ಟಕೊಳ್ಳಬೇಕು. ಇನ್ನೊಮ್ಮೆ ಯಾವಾಗಾದರೂ ನನ್ನ ಅಭಿನಂದನ ಸಭೆ ಆದಾಗ ನಿನ್ನೂ ಕರದೊಯ್ಯತೇನೆ. ಮೊನ್ನೆ ನನ್ನ ನಾಲ್ಕು ಮಂದಿ ಸ್ನೇಹಿತರು ಸೇರಿದಾಗ ನಡೆದ ಮಾತೂಕಥೆ ನೀ ಕೇಳ್ಬೇಕಿತ್ತು. ಅಂದ್ರೆ . .

**ಪಾರ್ವತಿ**— ಕೇಳಿದ್ದ್ಹಾಂಗೇ ಅದ ಬಿಡ್ರಿ. ನಿಮ್ಮನ್ನ ಹೊಗಳಿದ್ರು ಹೌದೊ ಅಲ್ಲೊ?

**ಶಂಭೂ**— ಹಾಂಗೆ ಮುಂಗಾಲಪುಟಿಗೀಲಿ ಹಾರಬ್ಯಾಡ. ಮೊನ್ನೆ ಏನಾತಂದಿ? ಹೋದ ವಾರ ರೇಡಿಯೊದೊಳಗೆ ನನ್ನ ನಾಟಕ ಬಂತಲ್ಲ, ಅದರ ಸುದ್ದಿ ಬಂತು. ಪೇಪರಿನೊಳಗೆ ಅದರ ವರ್ಣನಾ ಬಂದಿತ್ತು. ಎಲ್ಲಾರೂ ಕೂಡಿ ಚಾ ಆಗಲೇಬೇಕು ಅಂದ್ರು.

**ಪಾರ್ವತಿ**— ಅವ್ರು ಕುಡಿಸಿದರೊ ನೀವೇ ಕುಡಿಸಿದರೊ?

**ಶಂಭೂ**— ಶಾಭಾಸ್‌ಗಿರಿ ಸಿಕ್ಕಿದ್ದು ನನಗೆ. ಅವರು ಯಾಕೆ ಕುಡಸ್ತಾರ? ನಾನೇ ಕುಡಿಸಿದ. ಎಲ್ಲೂ ಕೂಡಿ ಸ್ಪೆಶಲ್ ರೂಮಿನೊಳಗೆ ಕೂತವಿ. ಆಗ . . .

[ ದೃಶ್ಯ ಬದಲಾಗುವುದು. ಹೊಟೆಲ್ಲಿನ ಸ್ಪೆಶಲ್ ರೂಮ್. ಶಂಭೂ, ಅವನ ಸ್ನೇಹಿತರು ಚಹ ಕುಡಿಯುತ್ತ ಕುಳಿತಿದ್ದಾರೆ. ]

**ಗೋವಿಂದ**— ಛೆಛೆಛೆ! ಭಾರೀ ಆತ್ರಪಾ. ಏನಂತೀನಿ, ಖರೇ ಅಂದ್ರ ನೈಂಟೀನ್‌ಥರ್ಟಿ ಇಂದಾ ನನ್ನದೂ ಇವರದೂ ಪರಿಚಯ. ಏನಂತೀನಿ, ನಾ ಆಗ್ಲೇ ಅಂದಿದ್ದೆ- ಶಂಭೂರಾಯ್ರು ಸಾಮಾನ್ಯರಲ್ಲ. ವನ್ ಡೇ ಆರ್ ಅದರ್ ವರ್ಲ್ಡ ಫೇಮಸ್ ಆಗ್ತಾರೆ ಅಂತ. ಖರೇ ಅಂದ್ರ ಏನಂತೀನಿ, ಇವರು ನಮ್ಮ ಆಫೀಸಿನ ಷೇಕ್ಸ್‌ಪಿಯರ್. ಮೊನ್ನಿನ ನಾಟಕಾ ಕೇಳಿದ್ರೊ ಇಲ್ಲೋ? ಏನಂತೀರಿ, ವ್ಹಾ ವ್ಹಾ! ಏನ್ ಲ್ಯಾಂಗ್ವೇಜು, ಏನ್‌ಸಟಾಯರ್ರೂ ಛೆ ಛೆ ಛೆ . . . ಕೃಷ್ಣರಾವ್, ಆ ಬೆಲ್ ಒಂದಿಷ್ಟು ಒತ್ತರಿ. (ಕೃಷ್ಣರಾವ್ ಬೆಲ್ ಒತ್ತುವನು. ಮಾಣಿ ಬರುವನು.) ಸೀ ಏನದನೊ?

**ಮಾಣಿ**— ಶಿರಾ, ಬಾಲೂಷಾ, ಮೋತೀಚೂರು . . .

**ಗೋವಿಂದ**— ಒಂದು, ಎರಡು . . . ಐದು ಆರು. ಆರು ಬಾಲೂಷಾ ತಗೊಂಡ್ಬಾ. ಮತ್ತ ಖಾರಾ ಏನದ? ಚಕ್ಲಿ ಇದ್ದರೆ ಆರು ಚಕ್ಲಿ ತಗೊಂಡ್ಬಾ. (ಮಾಣಿ ಹೋಗುವನು.) ಏನಂತೀನಿ? ಛೆ ಛೆ ಛೆ! ಮೊನ್ನಿನ ರೇಡಿಯೋ ನಾಟಕಾ ಕೇಳಿದಾಗ ರೇಡಿಯೋದ ಮುಂದಿಂದ ಏಳೋದೇ ಆಗ್ಲಿಲ್ಲ ನೋಡ್ರಿ ನನಗೆ. ನನ್ನ ಊಟಕ್ಕೆ ಎಬ್ಬಿಸಬೇಕಾದ್ರೆ ನನ್ನ ವೈಫು, ಏನಂತೀನಿ, ಶಂಖಾ ಹೊಡೀಬೇಕಾತು. ಶಂಭೂರಾವ್, ಏನಂತೀನಿ, ಖರೇ ಅಂದ್ರ ನೀವು ಈ ತ್ರಿಶಂಕೂನಂಥ ನಮ್ಮ ರಾಜ್ಯದೊಳಗೆ—ಅಂದರೆ ಮೈಸೂರು ಅನ್ನು ಹೆಸರು ನಮಗೆ ಮಾನ್ಯ ಇಲ್ಲ, ಕರ್ನಾಟಕ ಅನ್ನೂ ಹೆಸರು ಅವರೀಗೆ ಮಾನ್ಯ ಇಲ್ಲ. ಹೀಂಗೆ ಯಾವ ಹೆಸರಿಗೂ ಏನಂತೀನಿ, ಗತಿ ಇಲ್ಲದ್ಹಾಂಗ ಆದ ನಮ್ಮ ಈ ರಾಜ್ಯದೊಳಗೆ ಹುಟ್ಟದೆ ಆ ಇಂಗ್ಲಂಡಿನೊಳಗೆ ಹುಟ್ಟಿದ್ರೆ— ಷೇಕ್ಸ್‌ಪಿಯರನ ಹೆಸರು ಅಳಿಸಿ ಹೋಗ್ತಿತ್ತು. ಏನಂತೀನಿ, ಒಂದು ಉಪಕಾರ, ಫೇವರ್ ಮಾಡ್ರಪಾ ಬಡವ್ರೀಗೆ. ನಮ್ಮಗಾ ಶಾಣ್ಯಾ ಇದ್ದಾನ. ಚೂರಚಾರು ಬರೀತಾನ. ಅಂವಗ ಒಂದಿಷ್ಟು ನಿಮ್ಮ ಕಲಾ ಹೇಳಿಕೊಡ್ರಲ್ಲ. ಅಂ, ಏನಂತೀನಿ. ಷೇಕ್ಸ್‌ಪಿಯರ್ ಅಲ್ಲದಿದ್ರೂ . . .

**ಕೃಷ್ಣ**— ಏನ್ರಪಾ ಗೋವಿಂದರಾವ್, ನೀವೂ ಹೆಚ್ಚಿನವ್ರು. ಕಲತು ಎಲ್ಲಿ ಯಾದ್ರೂ, ನಾಟಕಕಾರ ಆಗ್ತಾರೇನ್ರಿ?

**ಗೋವಿಂದ**—ಪ್ರ್ಯಾಕ್ಟೀಸ್ ಮಾಡಿದ್ರೆ ಯಾಕ ಆಗ್ಬಾರದು ಅಂತೇನಿ. ಯಾಕ್ರಿ ಶಂಭೂರಾವ್, ಏನಂತೀನಿ, ಇನಸ್ಪಿರೇಷನ್ ಈಜ್ ನ್ಯಾಂಟಿ ಪರ್ಸೆಂಟ್ ಪರಸ್ಪಿರೇಶನ್ ಅಂತ . . .

**ಕೃಷ್ಣ**—ಆಗ್ಲಿ ಆಗ್ಲಿ. ನ್ಯಾಂಟಿ ಯಾಕೆ ನಿಮ್ಮ ಮಗ ಹಂಡ್ರೆಡ್‌ಪರ್ಸಂಟ್ ಪರಸ್ಪಿರೇಶನ್ ಮಾಡ್ಲಿ. ಆದ್ರೆ ಪರಸ್ಪಿರೇಶನ್ನಿಂದ ಬರೂ ಸಾಹಿತ್ಯ ನರಕವಿ ಸಾಹಿತ್ಯ ಆಗ್ತದ. ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರ್ದು.—ಶಂಭೂರಾವ್ ಅಂದ್ರ ವರಕವಿಗಳು. ( ತಿಂಡಿ ತಂದಿಟ್ಟ ಮಾಣೀಗೆ ) ಮೂರು ಕಾಫಿ-ಮೂರು ಚಹಾ ಸ್ಪೆಶಲ್. ಯಾಕ್ರಿ, ಶಂಭೂರಾವ್, ನಾ ಅಂದದ್ದು ಹೌದೋ ಅಲ್ಲೋ?

**ಶಂಭೂ**—ನಿಮ್ಮ ಮಾತಿನ ಚಮತ್ಕಾರ ನೋಡಿದ್ರೆ ಖರೇ ಕವಿಗಳು ನೀವು, ನಾವೆಲ್ಲಾ ಕಪಿಗಳು ಅಂತ . . .

**ಗೋವಿಂದ**—ನೋ ನೋ ನೋ ಮಾಯ್ ಡಿಯರ್ ಷೆಕ್ಸ್‌ಪಿಯರ್.

**ಶಂಕರರಾವ್**—ಯಸ್‌ಯಸ್ ಸರ್ಟನ್ಲಿ. ನನ್ನ ವೋಟದ ಈ ಮಾತೀಗೆ. ಬೆಲ್ ಒತ್ತರಿ ಕೃಷ್ಣರಾವ್. ( ಬೆಲ್ ಆಗುವದು. ಮಾಣೀಗೆ ) ಚಹಾ ಆತೇನೊ ?

**ಮಾಣಿ**—ಒಂದೈದ ಮಿನಿಟ್ . . .

**ಶಂಕರ**—ಹಾಗಾದ್ರೆ ಒಂದು ಮೂರು ಕಟ್ ದೋಸೆ—ಸ್ಪೆಶಲ್ ಹೇಳು, ಅಂ—ಏನು ಹೇಳತಿದ್ದೆ ಅಂದ್ರೆ—ಶಂಭೂರಾವ್, ಇದೆಲ್ಲ ಸಹವಾಸ ದೋಷ ಅಂನ್ರಿ ಬೇಕಾದ್ರೆ. ನಿಮ್ಮಂಥ ಕವಿಗಳ ಸಹವಾಸದಿಂದ ನಮ್ಮಂಥವ್ರ ಬಾಯಲ್ಲೂ ಆಗೀಗ ಚಮತ್ಕಾರದ ಮಾತು ಬರ್ತದ.

**ಗೋವಿಂದ**—ಯುಸ್ ಯುಸ್. ಏನಂತೀನಿ. ಸಾಕ್ಷಾತ್ ಷೇಕ್ಸ್‌ಪಿಯರನ ಸಹವಾಸ . . .

**ಶಂಕರ**— ತಡೀರಿ ಗೋವಿಂದರಾವ್. ಮನುಷ್ಯ ಅಂದ ಮೇಲೆ ದೇಶಾಭಿಮಾನ, ಸ್ವಾಭಿಮಾನ ಎಲ್ಲಾ ಇರ್ಬೇಕು. ಷೇಕ್ಸಪಿಯರನ ಉಪಮಾ ಯಾಕೆ ? ನಮ್ಮ ದೇಶದಲ್ಲಿ ಕಾಳಿದಾಸ, ಟಾಗೋರ; ಇಲ್ಲೆ ನಮ್ಮ ಕರ್ನಾಟಕದೊಳಗೆ ಕೈಲಾಸಂ ಆಗಿಲ್ಲೇನು ? ಶಂಭೂರಾವ್ ಪ್ರತ್ಯಕ್ಷ ಕಾಳಿದಾಸ ಅನ್ರಿ. ಅವ್ರನ್ನೂ ಹೊಗಳಿದ ಹಾಂಗೆ ಆಗ್ತದ, ನಮ್ಮ ದೇಶಾನ್ನೂ ಹೊಗಳಿದ ಹಾಂಗೆ ಆಗ್ತದ. ಅದನ್ನ ಬಿಟ್ಟು ಪರದೇಶದವ್ರು. . .

**ಗೋವಿಂದ**—ನೋ ನೋ. ಸಾಹಿತ್ಯಕ್ಕೆ ದೇಶ, ಪರದೇಶ ಅಂತ ಇರೂದಿಲ್ಲ. ಏನಂತೀನಿ, ಸಾಹಿತ್ಯ ಅಂದ್ರೆ ವರ್ಲ್ಡ್ ಎಫೇರ್- - -

**ಕೃಷ್ಣ**— ಹಂ-ಹಂ ಗೋವಿಂದರಾವ್, ಆರ್ಗ್ಯೂಮೆಂಟ್ ಬ್ಯಾಡ್ರಿ. ನಿಮ್ಮ ಆವೇಶದೊಳಗೆ ರಸಭಂಗ ಆದೀತು. ದೇಶಾನೂ ಇರ್ಲಿ, ಪರದೇಶಾನೂ ಇರ್ಲಿ. ನಮ್ಮ ಶಂಭೂರಾವ್ ಷೇಕ್ಸ್‌ಪಿಯರ್, ಕಾಳಿದಾಸ, ಎಲ್ಲಾನೂ ಆಗ್ಲಿ. (ಚಹ ತಂದ ಮಾಣೀಗೆ) ಆರು ಸ್ಪೆಶಲ್ ಪಾವ ಪಟ್ಟಿ, ಆರು ಪ್ಲೇಯರ್ಸ್ ತಗೊಂಡ್ಬಾ. ಶಂಭೂರಾವ್, ಈ ಸಲ ತಪ್ಪಸಬ್ಯಾಡ್ರಿ, ನಮಗೆ ಒಂದು ನಾಟಕಾ ಬರಕೊಡ್ರಿ- ಅದನ್ನಾಡಿ ನಿಮ್ಮ ಕೀರ್ತಿ ಇನ್ನಷ್ಟು ಹಬ್ಬುವ ಹಾಗೆ ಮಾಡ್ತೇವಿ. ನಮ್ಮ ಆಫೀಸನವರದೇ ಒಂದು ಅಮೇಚೂರ್ಸ ಕಂಪನಿ ಕಟ್ಟಿಬಿಡೋಣ. ಪ್ರಸಂಗ ಬಂತೂ ಅಂದ್ರೆ ಖಾಯಂ ಕಂಪನೀನೂ ಮಾಡಿಬಿಡೋಣ ಬೇಕಾದ್ರೆ. ನಿಮ್ಮಂಥಾ ನಾಟಕಕಾರ ಸಿಕ್ಕರೆ ಏನ್ರೀ ರೊಕ್ಕದ ಮಳೀನೆ ಸುರದೀತು.

**ಶಂಕರ**— ಬರೀ ಹೊಗಳಬ್ಯಾಡ್ರಿ. ಈಗಿನ ಕಾಲ ಎಂಥಾದ್ದು ರಿಯಲೈಜ್ ಮಾಡ್ರಿ. ಈಗ ಎಲ್ಲಾ ಸ್ಪಿಯರನೊಳಗೂ ಮಾತು ಬೇಕಾಗಿಲ್ಲ, ಕೃತಿ ಬೇಕಾಗೇದ. ಶಂಭೂರಾಯ್ರ ಬಗ್ಗೆ ನಿಮಗೆಲ್ಲ ನಿಜವಾಗ್ಲೂ ಅಭಿಮಾನ ಇದ್ರೆ ಒಂದ ಸಾರ್ವಜನಿಕ ಸಭಾ ಸೇರಿಸ್ರಿ. ಅವ್ರನ್ನ ಗೌರವಿಸ್ರಿ.

**ಗೋವಿಂದ**—ಹೌದೌದು. ಏನಂತೀನಿ, ಎಕ್ಸಲಂಟ್ ಐಡಿಯಾ. ನಾವು ಕೊಟ್ಟಿರುವ ಷೇಕ್ಸ್‌ಪಿಯರ್ ಅನ್ನೂ ಟೈಟಲನ್ನ ಸಾರ್ವಜನಿಕವಾಗಿ ಕೊಡಿಸೋಣ. ಅಂದ್ರೆ ಅವರಿಗೂ ಭೂಷಣ, ಏನಂತೀನಿ, ನಮಗೂ ಭೂಷಣ.

**ಕೃಷ್ಣ**— ಹೌದು. ಆದರೆ ನನ್ನ ಹತ್ರ ಅನ್ರಿ ಅಥವಾ ನಿಮ್ಮ ಹತ್ತರ ಅನ್ರಿ ಇರೂದು ಬರೀ ಮಾತು. ಮಾತೀಗೆ ತಕ್ಕಂತೆ ರೊಕ್ಕ ಎಲ್ಲದ ಹೇಳ್ರಿ ? ಸಭಾ ಮಾನಪತ್ರ ಅಂದಮ್ಯಾಲೆ ಖರ್ಚ ಬಂದೇ ಬರ್ತದ. ದಿನಾ ಎರಡ ಸಲದ ಬದಲು ಮೂರು ಸಲ ಚಾ ಕುಡೀಬೇಕು ಅಂದ್ರೆ ಲೆಕ್ಕ ಹಾಕ್ಬೇಕಾದ ನಾವು ಈ ಖರ್ಚು. . .

**ಶಂಕರ**— ಛೆ ಛೆ. ಮಾತೆತ್ತಿದ ಕೂಡ್ಲೆ ಸೀಸ ಬ್ಯಾಡ್ರಿ ಕೃಷ್ಣರಾವ್. ಖರ್ಚು ಅಂದ್ರೆ ಏನ ಮಹಾ ಬಂದೀತು! ನಾವೇನು ಅಲ್ಲಿ ಬ್ಯಾಂಡ ಹಚ್ಚಬೇಕಾಗಿಲ್ಲ, ಹೋಳಗಿ ಊಟಾ ಹಾಕಿಸಬೇಕಾಗಿಲ್ಲ. ಟೌನ್‌ಹಾಲ್ ಅದ. ಫುಕಟ ದೊರಕಿಸಬಹುದು. ಭಾಳ ಅಂದ್ರೆ ಏನು ಒಂದೆರಡು ರೂಪಾಯಿದ್ದು ಹಾರ ಬೇಕಾಗ್ತದ. ಶಂಭೂರಾಯ್ರ ಅಭಿಮಾನಿಗಳಾದ ನಾವು ಅಷ್ಟ ಹಣಾ ಕೂಡಿಸಲಾರ್ವೇನು?

**ಕೃಷ್ಣ**— ಆಗಲರಪಾ. ಹಾಂಗೇ ಆಗ್ಲಿ. ಏಳ್ರಿನ್ನು. ಹೊತ್ತಾತು ಹೋಗೋಣ. ಲಗೂ ಮನಿಗೆ ಹೋಗದಿದ್ರ ರಾಣೀಸಾಹೇಬರಿಂದ ಮಾನಪತ್ರ ಸ್ವೀಕಾರ ಮಾಡ್ಬೇಕಾದೀತು.

**ಗೋವಿಂದ**— ಗುಡ್ ಗುಡ್, ವೆರಿ ಗುಡ್ ಏನಂತೀನಿ. ಕೃಷ್ಣರಾವ್, ನೀವೂ ಆಗ್ತೀರಿ ಷೇಕ್ಸಪಿಯರ್ ಒಂದಿನಾ. ರಾಣೀಸಾಹೇಬರಿಂದ ಮಾನಪತ್ರ-ಭೇಷ್, ಹತ್ತ ದಿವಸ ವಿಚಾರ ಮಾಡಿದ್ರೂ ನನ್ನ ತಲೀ ಒಳಗೇನು ಏನಂತೀನಿ, ಇಂಥ ಛಂದ ಮಾತು ಹೊಳೀತಿರಲಿಲ್ಲ. ಶಂಭೂರಾವ್, ಏನ್ರಪಾ, ಏನಂತೀನಿ. ಈ ಸಲ ಪಗಾರ ಬಂತೂ ಅಂದಕೂಡ್ಲೆ ನಿಮಗ ಷೇಕ್ಸಪಿಯರ್ ಟೈಟಲ್ ಬಂತೂ ಅಂತ ತಿಳಕೊಂಡು ಬಿಡ್ರಿ. ಒಂದ ಝುಕಾಸ್ ಫೋಟೊ ತೆಗಿಸಿಡ್ರಿ. ಪೇಪರನವ್ರಿಗೆ ಹೇಳಿ ಬ್ಲಾಕೂ ಹಾಕಿಸಿಬಿಡೋಣ. ಮತ್ತ ಬ್ಲಾಕ್ ಬಂದ ದಿನ ನಿಮ್ಮ ಮನೀ ಒಳಗೆ ಶ್ರೀಖಂಡ ಪುರೀ ಜೇತು ಆಗಿಬಿಡ್ಲಿ. ಹೌದಲ್ಲೊ ಫ್ರೆಂಡ್ಸ್?

**ಕೃಷ್ಣ**—ಯುಸ್ ಯುಸ್. ಸರ್ಟನ್ಲಿ. ಚಲೊ (ಜೆಲ್ ಬಾರಿಸಿ) ಬಿಲ್ ಕೊಡೊ. ತಂದೀಯಾ ? ೪ ರೂ. ೮೦ ನಯೇಪೈಸೆ. ರೈಟ್. ತಗೋರಿ ಶಂಭೂರಾವ್.

**ಗೋವಿಂದ—** (ಹೊರಡುತ್ತ ಶಂಭೂರಾಯನ ಹೆಗಲು ಮುಟ್ಟಿ) ಒಂದ ಮಿನಿಟ್ ಶಂಭೂರಾವ್ (ಮೆಲ್ಲಗೆ) ಅಂದಹಾಂಗೆ, ಏನಂತೀನಿ. ಒಂದಿಷ್ಟು ಉಪಕಾರ ಮಾಡತೀರೇನು ? ಅಡಚಣೀ ಭಾಳ ಅದ. ನನ್ನ ಮಗಾ ಒಂದ ನಾಟಕಾ ಬರದಾನ. ನೀವು ಅದರ ಮ್ಯಾಲೆ ಒಂದಿಷ್ಟು ಕೈಯಾಡಿ ಸರಿ. ಆ ಮ್ಯಾಲೆ ರೇಡಿಯೊಕ್ಕೆ ಕಳಿಸಲಿಕ್ಕೆ ಹೇಳತೀನಿ. ಅಲ್ಲಿ ನಿಮ್ಮ ಇನ್‌ಫ್ಲುಯೆನ್ಸ್ ಖರ್ಚ ಮಾಡಿ ಎಕ್ಸೆಪ್ಟ್ ಆಗೂ ಹಾಂಗ ಮಾಡ್ರಿ. ಭಾಳ ಉಪಕಾರ ಆಗ್ತದ.

[ಮತ್ತೆ ಶಂಭೂರಾಯನ ಮನೆ]

**ಶಂಭೂ—** ಅಂದು ಇವರೆಲ್ಲ ಹೀಗೆ ಮಾತಾಡಿದ್ದು ಏನೊ ಚಾ ಕುಡದ ಹುರುಪಿನೊಳಗೆ ಮಾತಾಡಿದ್ರು ಅಂತ ಮಾಡಿದ್ದೆ. ಆದರೆ ಖರೇ ಅಂದ್ರೂ ಅವರೀಗೆಲ್ಲ ನನ್ನ ಮ್ಯಾಲೆ ಅಭಿಮಾನ ಅದ- ನಾಡದು ಆದಿತ್ಯವಾರಾನೇ ಸಭಾದೊಳಗೆ ನನಗೆ ಟೈಟಲ್ ಕೊಡವ್ರಿದ್ದಾರ. ಆ ದಿನ ನೀನೂ ಬಾ ನನ್ನ ಜೋಡಿ. ಆಗ ನಿನಗೆ. . .

**ಪಾರ್ವತಿ—** ನಿಮ್ಮ ಈ ಆಫೀಸಿನ ಅಭಿಮಾನಿಗಳು ಅಂದ್ರಲ್ಲ, ಒಟ್ಟು ಅವರೆಷ್ಟು ಮಂದಿ ಇದ್ದಾರೆ? ಚಾ ಕುಡದ ಆರೇ ಮಂದೀನೊ ಅಥವಾ....

**ಶಂಭೂ—** ಆಫೀಸಿನ ಹದಿನೆಂಟು ಮಂದೀನೂ ನನ್ನ ಪಕ್ಕಾ ಅಭಿಮಾನಿಗಳು.

**ಪಾರ್ವತಿ—** ಹುಂ. ಅಂದ್ರೆ ಹಾರದ ಎರಡು ರೂಪಾಯಿ ಅಂದ್ರೆ ಒಬ್ಬೊಬ್ಬರಿಗೆ ಹತ್ತಿಪ್ಪತ್ತು ನಯಾಪೈಸೆಕಿಂತಲೂ ಹೆಚ್ಚಿಗೆ ಬೀಳೂದಿಲ್ಲ. ಆ ಮ್ಯಾಲೆ ನೀವು ಅವರಿಗೆ ಶ್ರೀಖಂಡ ಪುರಿ ಊಟ ಹಾಕ್ಬೇಕು. ಹೋಟೆಲ್ ಲೆಕ್ಕದಂತೆ ಹೋಗ್ಲಿ, ಖಾಸಗೀ ಲೆಕ್ಕ ಅಂದ್ರೂ ಒಬ್ಬೊಬ್ರೀಗೆ ಒಂದು ಒಂದೂವರೆ ರೂಪಾಯಿ ಆದ್ರೂ ಬೇಕು. ಹತ್ತ ನಯೇಪೈಸೆಕ್ಕ ೧೫೦ ನಯೆ ಪೈಸೆ ಸಿಗೂದಾದ್ರ...

**ಶಂಭೂ—** ನಿಂದ ಒಂದು ಬ್ಯಾರೇನೇ ಬಿಡು. ಗಂಡನ ಮ್ಯಾಲೆ ಮಂದೀಗಿರುವಷ್ಟು ಅಭಿಮಾನಾನೂ ನಿನಗಿಲ್ಲ ಅಂದಮ್ಯಾಲ. . .

**ಪಾರ್ವತಿ—** ಹಾಗಲ್ಲ. ಅಭಿಮಾನ ಅದ ಅಂತಲೇ ಅಂತೇನಿ. ಇನ್ನಮ್ಯಾಲೆ ನೀವು ನಾಟಕ ಬರೀಬ್ಯಾಡ್ರಿ.

**ಶಂಭೂ—** ನಾಟಕಾ ಬರೀಬ್ಯಾಡ್ರಿ! ಸಾಧ್ಯ ಇಲ್ಲ. ಪ್ರಾಣ ಹೋದ್ರೂನೂ...

**ಪಾರ್ವತಿ—** ನಾಟಕ ಬರಿಯೂದು ಬಿಟ್ರೆ ನಿಮ್ಮ ಪ್ರಾಣ ಏನೂ ಹೋಗೂದಿಲ್ಲ. ನಾ ಗ್ಯಾರಂಟಿ ಕೊಡ್ತೇನಿ. ಆದ್ರೆ ನೀವು ನಾಟಕ ಬರೀತಾ ಇದ್ರೆ ನನ್ನ ಮಾನ ಮಾತ್ರ ಉಳಿಯೂ ಹಾಂಗಿಲ್ಲ. ಮಾನ ಹೋದ ಮ್ಯಾಲೆ ಪ್ರಾಣ ಹೋದ್ಹಾಂಗ ಹೌದಲ್ಲೊ ?

**ಶಂಭೂ—** ಅಂದ್ರೆ ನೀ ಅನ್ನೂದಾದ್ರೂ ಏನು ? ನಾ ನಾಟಕ ಬರದ್ರ ನಿನ್ನ ಮಾನ ಯಾಕೆ ಹೋಗ್ತದ ? ಹ್ಯಾಂಗ ಹೋಗ್ತದ? ಅದನ್ನಷ್ಟು ...

**ಪಾರ್ವತಿ—** ಹೀಂಗ ಕೇಳ್ರಿ. ಬಂದ್ಯಾ ರಾಮು. ಕೊಡವ್ರಿಗೆ ಸಿಗರೇಟು. ನೀ ಆಡ್ಲಿಕ್ಕೆ ಹೋಗು. ಹಚ್ಚರಿ ಒಂದ ಸಿಗರೇಟು. ತಲೀ ಶಾಂತ ಇಟಕೊಳ್ರಿ. ನಾ ಹೇಳಿದ್ದನ್ನ ಸರಿಯಾಗಿ ಕೇಳಿಕೊಳ್ರಿ. ಆಮ್ಯಾಲೆ ವಿಚಾರ ಮಾಡ್ರಿ. ಆ ಮ್ಯಾಲೆ ಏನೂ ಅಂತ ನಿರ್ಧಾರ ಮಾಡ್ರಿ. ಯಾವ ರೇಡಿಯೊ ನಾಟಕ ಹೊಗಳಿ ನಿಮ್ಮ ಅಭಿಮಾನಿಗಳು ಚಾ ಕುಡಿದದ್ದಲ್ಲದೆ ಊಟದ ಆಮಂತ್ರಣಾನೂ ದೊರಕಿಸಿಕೊಂಡ್ರೂ ಅದೇ ರೇಡಿಯೊ ನಾಟಕದ ಕಥೀ ಕೇಳ್ರಿ. ಆ ನಾಟಕ ಬಂದ ಮಾರನೇ ದಿನಾನೇ ನಾನು ಸೋನೂಬಾಯಿ ಮನೀಗೆ ಹೋಗಿದ್ದೆ. ಆದರೆ ನಸೀಬ ನಂದು. ಹೋಗಿ ಅಂಗೈ ತೋರಿಸಿ ಅವಲಕ್ಷಣಾ ಹೇಳಿಸಿಕೊಂಡ್ಹಾಂಗಾತು.

**ಶಂಭೂ—** ಹಂ!

**ಪಾರ್ವತಿ—** ಹುಂ. ಸೋನೂಬಾಯಿ ಮನೀ ಅಂದ್ರೆ ಭಗಿನೀಮಂಡಳಾನೇ ಅಂತನ್ರಿ ಬೇಕಾದ್ರೆ. ಎಂಟ್ಹತ್ತು ಮಂದಿ ಕೂಡದೆ ಇದ್ದ ದಿನಾನೇ ಇಲ್ಲ.

**ಶಂಭೂ—** ಓಹೊಹೊ, ತಿಳೀತು ಬಿಡು. ಈ ಭಗಿನಿ ಮಂಡಳದವರು ನಿನ್ನ ಚ್ಯಾಷ್ಟಿ ಮಾಡಿದ್ರೇನು ? ಅಕಾ, ನಾಟಕಕಾರರ ಹೇಂಡ್ತಿ ಬಂದಳು, ಎಲ್ಲಾರೂ. . .

**ಪಾರ್ವತಿ—** ಚ್ಯಾಷ್ಟಿ ಮಾಡ್ಲಿಲ್ಲ, ಛಲೋ ಮಂಗಳಾರತಿ ಮಾಡಿದ್ರು. ಮರ್ಯಾದೆಯಿಂದ ಜಡಕಬೇಕಾದ್ರೆ, ನೀವು ನಾಟಕಾ ಬರೀಬಾರ್ದು ಅಂತ ಸೂಚಿಸಿದರು. ಆ ಸೂಚನಾದೊಳಗೆ ಬೆದರಿಕೀನೂ ಇತ್ತು.

**ಶಂಭೂ**— ಅಂ ! ನಾಟಕಾ ಬರ‍್ದು ನಾ ಏನು ಇವರ ತಲೀ ಹೊಡೆದೆನೇನು ?

**ಪಾರ್ವತಿ**— ತಲೀ ಹೊಡೀಲಿಲ್ಲ. ಆದರೆ ರಾಜಾರೋಷ್ ಅವರ ಮರ‍್ಯಾದಿ ತೆಗದಿರಿ, ತೆಗೀತೀರಿ ಅಂತ ಅವರೆಲ್ಲ ಅಂದ್ರು. ಸೋನುಬಾಯಿ ಗಂಡ ಅಂತೂ . . .

**ಶಂಭೂ**— ಹೇಳು ಹೇಳು.

**ಪಾರ್ವತಿ**— ಕೇಳ್ರಿ.

[ದೃಶ್ಯ ಬದಲಾಗುವುದು. ಸೋನುಬಾಯಿ ಮನೆ, ನಾಲ್ಕಾರು ಹೆಂಗಸರು ಹರಟೆಹೊಡೆಯುತ್ತಲಿದ್ದಾರೆ. ಪಾರ್ವತಿಬಾಯಿ ಬರುವಳು.]

**ಸೋನು**— ಬರ‍್ರಿ ಬರ‍್ರಿ. ಹೇಳಿಕಳಿಸಿದವರಾಂಗೆ ಬಂದ್ರಿ ನೋಡ್ರಿ. ಇದೇ ಈಗ ನಿಮ್ಮ ಮಾತೇ ಹೊಂಟಿತ್ತು.

**ಪಾರ್ವತಿ**— ಅದೇನ್ರವಾ ಮತ್ತೆ ? ಅಂಥಾದ್ದೇನು—

**ಸೋನು**— ಊಂ ಹುಂ. ನಿಮ್ಮದು ಅಂದ್ರೆ ನಿಮ್ಮ ಯಜಮಾನ್ರ. ಅಂದ್ರೆ ನಿನ್ನೆ ನಿಮ್ಮ ಯಜಮಾನ್ರ ನಾಟಕಾ ರೇಡಿಯೊದೊಳಗೆ ಬಂತಲ್ಲ. ಅದರ ಸುದ್ದೀನೇ ಮಾತಾಡ್ಲಿಕ್ಕೆ ಹತ್ತಿದ್ವಿ.

**ಪಾರ್ವತಿ**— ಹುಂ. ಅದೇನು ಬಿಡ್ರಿ. ಯಾರ ಯಾರದೊ ನಾಟಕಾ ಬರ‍್ತದ. ಹಾಂಗೆ ಇವರದೂ ಬರ‍್ತದ. ಅದರೊಳಗೇನು ಮಹಾ ?

**ರಂಗೂಬಾಯಿ**— ಹಾಂಗೆ ಕೇಳ್ಲಿಕ್ಕೆ ನಾಟಕಾ ಬೇಷಿತ್ತು.

**ಸೋನು**— ಏನು ಬೇಷಿತ್ತು ಅಂತೀರಿ ? ಮಂದೀ ಮನೀ ಟೀಕಾ ಮಾಡೂದು ನಾಟಕದೊಳಗೇ ಆಗವಲ್ಲದ್ಯಾಕೆ ಬೇಷೇನು ? ನಮ್ಮವ್ರು ನಾಟಕಾ ಕೇಳ್ತಾ ಕೇಳ್ತಾ "ಭೇಷ್, ಭಲೆ, ಹೌದಪಾ, ಅಗದೀ ಎಲ್ಲಾರ ಸಂಸಾರ ದೊಳಗೂ ನಡೀವ್ಹಾಂಗೆ ಬರದಾನ. ಶಂಭೂರಾಯಂದೂ ತಲೀ ಭಾಳ ಚುರುಕು" ಅಂತ ಅಂದ್ರು.

**ರಂಗೂ**— ಇಷ್ಟೆಲ್ಲಾ ಅನದಿದ್ರೂ ನಮ್ಮವ್ರು "ನಾಟಕ ಅಡ್ಡಿಲ್ಲಾ" ಅಂತಂದ್ರು.

**ಸೋನು**— ಹೌದಲ್ಲೊ. ಈ ಗಂಡಸರ ಹಣೇಬರಾನೇ ಇಷ್ಟು. ಮುಸುಕಿನಾಗ ಚಪ್ಪಲಿ ಏಟ ಹಾಕಿದ್ದು ಗೊತ್ತಾಗೂದೇ ಇಲ್ಲ. ಸಂಸಾರದೊಳಗಿನ ಸೂಕ್ಷ್ಮ ಗಂಡಸರೀಗೆ ಗೊತ್ತಾಗತಿದ್ರೆ ನಾವೆಲ್ಲ ಸ್ವರ್ಗದೊಳಗೆ ಇರತಿದ್ವಿ ತಿಳಿತೇನು ?

**ಗಂಗೂಬಾಯಿ**— ಖರೇ ಅದ ನಿಮ್ಮ ಮಾತು. ಬೆಳ್ಳಗಿದ್ದದ್ದೆಲ್ಲ ಹಾಲೇ ಗಂಡಸರೀಗೆ.

**ಸೋನು**— ಪಾರ್ವತಬಾಯಿ, ನಾ ಹೇಳ್ತೇನಿ ಅಂತ ಕೆಟ್ಟ ಅನಿಸಿಕೊಬ್ಯಾಡ್ರಿ. ನಿಮ್ಮವ್ರೀಗೆ ಹೇಳ್ರಲಾ ಒಂತುಸಾ—ಈ ನಾಟಕಾ ಪಾಟಕಾ ಬರಿಯೂದು ಬಿಡ್ರಿ ಅಂತ. ಹಾಂಗ ಮಂದೀನ ಟೀಕಾ ಮಾಡ್ಬೇಕು ಅಂತಿದ್ರೆ ಗಂಡಸರ ಹಾಂಗ ಗಂಡಸರಾಗಿ ಎದರಾ ಎದರೇ ಮಾಡ್ಬೇಕು. ಅದನ್ನ ಬಿಟ್ಟು ಹೀಂಗ ಕದ್ದುಮುಚ್ಚಿ ಯಾಕೆ ?



**ಗಂಗೂ**— ಹೌದ್ರವಾ.

**ಸೋನು**— ನಿನ್ನಿನ ನಾಟಕಾ ನೀವು ಕೇಳಿದ್ರೊ ಇಲ್ಲೊ—

**ಗಂಗೂ**— ಎಲ್ಲಿ ಬಂತ್ರಿ? ಅದಕೂ ಬೇಕು ನಸೀಬ. ಒಂದ ರೇಡಿಯೊ ತಗೊಳ್ರಿ ಅಂತ ನಮ್ಮ ವಾಶ್ಯಾ ಹುಟ್ಟಿದಾಗಿಂದೂ ಹೇಳೀ ಹೇಳ್ತೇನಿ. ಅದೇನು ಬಂದಿಲ್ಲ. ಬರೂ ಹಾಂಗ ಕಾಣಸೂದೂ ಇಲ್ಲ.

**ಸೋನು**— ಅದೇ ಛಲೋ ಬಿಡ್ರಿ. ಕೆಟ್ಟದ್ದು ಕೇಳೂದಕ್ಕಿಂತ ಕೇಳದೆ ಇರೂದೇ ಛಲೊ. ರೇಡಿಯೊ ಇತ್ತು ಅಂತಂದ್ರೆ ಕೇಳ್ದೆ ಇರ‍್ಲಿಕ್ಕೂ ಆಗೂದಿಲ್ಲ. ಈಗ ನೋಡ್ರಿ, ನಮ್ಮ ಮನಿಯೊಳಗೆ ರೇಡಿಯೊ ಇತ್ತಂತ ನಿನ್ನಿನ ನಾಟಕಾ ಕೇಳಿದ್ವಿ, ನನಗೆ, ನಾ ಹೇಳಿದ ಮ್ಯಾಲೆ ಮನೀಯವರೀಗೆ ಸಂತಾಪ ಆತು. ಈಗ ನನಗೆ ತಂಗೀ ಹಾಗೆ ಇರೂ ಪಾರ್ವತಬಾಯಿ ಎದುರು ಅವರ ಯಜಮಾನ್ರ ಬಗ್ಗೆ ಹೇಳೂಹೊತ್ತು ಬಂತು.

**ಗಂಗೂ**— ತ್ಸು-ತ್ಸು. ಹೌದ್ರವಾ ಖರೇ ಅದ ನಿಮ್ಮ ಮಾತು. ಮೊನ್ನೆ ಪುರಾಣದೊಳಗೆ ಆಚಾರ‍್ರು ಅಂದ್ರು, ಇದ್ರೂ ಚಿಂತೆ, ಇಲ್ಲದಿದ್ರೂ ಚಿಂತೆ ಮನುಷ್ಯನೀಗೆ ಅಂತೆ. ಖರೇ ಅದ ಅವರ ಮಾತು. ಖರೇ ಅದ ನಿಮ್ಮ ಮಾತು. ಹ್ಯಾಂಗೂ ಕೇಳೀರಿ, ಮಾತೂ ಎತ್ತೀರಿ ಅಂದಮ್ಯಾಲೆ. . .ಪಾರ್ವತ ಬಾಯಿ ಏನೂ ತಿಳಕೊಂಬೂದಿಲ್ಲ. ನೀವಂದ್ಹಾಂಗೆ ಸೂಕ್ಷ್ಮ ತಿಳೀದಿರ‍್ಲಿಕ್ಕೆ ಅವರೇನೂ ಗಂಡಸರಲ್ಲ. ಯಾಕ್ರಿ ಪಾರ್ವತಬಾಯಿ ?

**ಸೋನು**— ಪಾಪ, ಅವರೇನು ಅಂತಾರ. ಗಂಡ ಅಂತ ಮಾಡಿಕೊಂಡ ಮ್ಯಾಲೆ ಅವರ ತಪ್ಪಿನ ಪ್ರಾಯಶ್ಚಿತ್ತ ಹೆಂಡತೀನೂ ಅನುಭವಿಸಬೇಕಾಗ್ತದೆ.

**ಗಂಗೂ**— ಖರೇ ಅದ ನಿಮ್ಮ ಮಾತು.

**ರಂಗೂ**— ಗಂಗೂಬಾಯಿ, ನೀವು ತುಸು ಸುಮ್ಮನಿರ‍್ರಿ. ನಿನ್ನೆ ಏನೇನಾತು ಅಂತೆ ಹೇಳ್ಲಿ ಅವ್ರು. ಸೋನುಬಾಯಿ, ನಾಟಕ ಹೊಗಳಿದ ಮ್ಯಾಲೆ. . .

**ಸೋನು**— ನಾನು ಅವ್ರೀಗೆ ಅದರ ಅರ್ಥ ಹೇಳಿಕೊಡಬೇಕಾತು. ನೀವೂ ಕೇಳಿದೆ ಅಂದ್ರಲ್ಲ. ಏನಿತ್ತು ಅದರೊಳಗೆ ? ಅದೇನು ನಾಟಕಾನೆ ? ನಾವು ಹೆಂಗಸರು, ಮರವು ಅಡಚಣಿ ಏನಾದ್ರೂ ಇದ್ದದ್ದೇ ನೋಡ್ರಿ, ಒಂದು ಮುಷ್ಟಿ ಹಿಟ್ಟೊ, ಬ್ಯಾಳೀನೊ, ಸಕ್ಕರೇನೊ ಕಡಾ ಅಂತೆ ಇಸಕೋತೇವಿ. ಸುಖದುಃಖದ ಮಾತು ಆಡಿಕೋತೇವಿ. ಆಗ ಈಗ ಅಪ್ಪಿತಪ್ಪಿ ನಾಲ್ಕು ಬಿರುಸು ಮಾತೂ ನಮ್ಮಲ್ಲಿ ನಡೀತದ. ಇದನೆಲ್ಲಾ ಬರದ್ರ ನಾಟಕಾ ಅಂತಾರೇನು? ಅಂದ್ರೆ, ಪಾರ್ವತಬಾಯಿ, ನಿಮ್ಮ ಮನೀಗೆ ನಾವು ಬರೂದೇ ತಪ್ಪಾಗಿ ಹೋತೇನು? ನೀವೂ ನಮ್ಮವ್ರು ಅಂತೆ ತಿಳಕೊಂಡು ನಡಕೊಳ್ಳೂದು ತಪ್ಪಾಗಿ ಹೋತೇನು ? ನಿನ್ನಿನ ನಾಟಕದೊಳಗೆ ಸ್ಪಷ್ಟ ನಂಮ ಮತ್ತು ಅವರದ್ದೇ ಮಾತು ಇತ್ತು ಬಿಡ್ರಿ ಅಸಹ್ಯ ತಂದು. ನೆನಪಿಲ್ಲ ನಿಮಗೆ ಪಾರ್ವತಬಾಯಿ, ಆ ದಿನ ನಾ ಒಂದಿಷ್ಟು ರವಾ ನಿಮ್ಮಲ್ಲಿಂದ ತರೂದಕ್ಕೂ ನಮ್ಮವರು, ನಿಮ್ಮವರು ಕೂಡಿ ಗಪ್ಪಾಹೊಡಕೋತ ಬಂದು ಮುಂದೆ ತಾವು ಜಗಳಕ್ಕೆ ನಿಂತು ನಮ್ಮನ್ನೂ ಜಗಳಕ್ಕೆ ಹಚ್ಚಿದ್ದು ! ಥೇಟ್ ಅದನ್ನೆ ಬರದಾರ ಶಂಭೂರಾಯರು ನಿನ್ನಿನ ನಾಟಕದೊಳಗೆ. ನಮ್ಮವ್ರಿಗೆ ಅದು ಗೊತ್ತಾಗಲೇ ಇಲ್ಲ. ನಾ ಹೇಳಿದ ಮ್ಯಾಲೆ ಅವರಿಗೆ ತಿಳೀತು. ಮತ್ತೆ ಗೊತ್ತದಲ್ಲ ನಿಮಗೆ, ಸಿಟ್ಟು ಬಂತೂ ಅಂದ್ರೆ ಅವರು ವಿಶ್ವಾಮಿತ್ರ್ರನೇ ಆಗ್ತಾರ ಅನ್ನೂದು. "ಹೀಂಗೇ ಹೋಗಿ ಆ ಶಂಭೂರಾಯನ್ನ ಕೇಳೇ ಬಿಡ್ತೇನಿ. ಏನಂತೆ ತಿಳಕೊಂಡಾನ ಮಗಾ ? ನಾಟಕಾ ಬರದು ನಮ್ಮ ಚ್ಯಾಷ್ಟಿ ಮಾಡ್ಲಿಕೆ ನಾವೇನು ಇವನ ಋಣದೊಳಗೆ ಬಿದ್ದೇವೇನು ?" ಅಂತ ಎದ್ದುನಿಂತೇ ಬಿಟ್ರು. ಅವರನ್ನ ಸಮಾಧಾನ ಮಾಡಬೇಕಾದ್ರೆ ನನಗೆ ಸಾಕಾಗಿಹೋತು. ಆದ್ರೂ ಪಾರ್ವತಬಾಯಿ, ಶಂಭೂರಾಯ್ರಿಗೆ ಒಂದಿಷ್ಟು ಹೇಳ್ರಿ. ನಾಟಕ ಬರಿಯೂದು ಬಿಟ್ಟು ನಾಕ ಮಂದೀ ಹಾಂಗೆ ಇರ‍್ಲಿಕ್ಕೆ ಹೇಳ್ರಿ. ನಮ್ಮವ್ರದು ಎದುರು ಸಿಟ್ಟು. ಬಂದಹಾಂಗೇ ಹೋಗಿ ಬಿಡ್ತದ ಅಂತ ನಿನ್ನೆ ಉಳಕೊಂಡ್ರು.

**ಗಂಗೂ**— ಖರೇ ಅದ ನಿಮ್ಮ ಮಾತು. ನಮ್ಮವ್ರಾಗಿದ್ರೆ ನಿನ್ನೆ ಖಾಡಾ ಖಾಡಿ ಯುದ್ಧ ಆಗಿ ಹೋಗ್ತಿತ್ತು.

**ರಂಗೂ**— ಹೌದೌದು. ಅಂದ ಹಾಂಗೆ ನಾನೂ ಅಷ್ಟು ತಲೀ ಒಳಗೆ ಹಾಕ್ಕೊಳ್ಲಿಲ್ಲ ನಿನ್ನೆ. ಈಗ ನೀವು ಹೇಳಿದ ಮ್ಯಾಲೆ ಲಕ್ಷ್ಯಕ್ಕೆ ಬಂತು ನೋಡ್ರಿ. ನನ್ನ ಸುದ್ದೀನೂ ಅದರೊಳಗೆ ಬಂದ್ಹಾಂಗಿತ್ತು.

**ಸೋನು**— ಹೌದ್ರಿ. ಒಟ್ಟಿನಲ್ಲಿ ಏನು ಅಂದ್ರಿ. ಈ ಬರಿಯೂ ಮಂದಿ ಹಣೇಬರಾನೆ ಹೀಂಗೆ. ಒಂದೇ ಖರೇ ಬರೀತೇನಿ ಅಂತೆ ಹುಚ್ಚುಚ್ಚಾರ

ಬರ್ದು ಮಂದೀ ಕಡಿಂದ ಉಗಳಿಸಿಕೊಳ್ತಾರ. ಇಲ್ಲಾ ಕಲ್ಪನೆ ಅಂತ ಎಲ್ಲೂ ಇಲ್ಲದ್ದು ಬರ್ದು "ಏನ ಹುಚ್ಚನಪಾ" ಅಂತ ಅನಿಸಿಕೊಳ್ತಾರ. ಪಾರ್ವತಬಾಯಿ, ನಾವು ಹೀಂಗಂದ್ವಿ ಅಂತ ಏನೂ ತಿಳಕೊಬ್ಯಾಡ್ರಿ. ನೀವು ನಮಗೆಲ್ಲ ಅಕ್ಕತಂಗಿ ಇದ್ದಾಂಗ ಇದ್ದೀರಿ. ಹೀಂಗೆ ನಾಟಕಾ ಬರದ್ರ ನಿಮ್ಮವ್ರಂತೂ ಜನರಿಂದ ಬಹಿಷ್ಕಾರ ಹಾಕಿಸಿಕೊಳ್ತಾರ. ನಿಮಗೂ ಅದರ ಶಾಖ ತಟ್ಟದೆ ಇರೂದಿಲ್ಲ. ಅದಕ್ಕೇ ಅವ್ರೀಗೆ ಒಂದ ನಾಲ್ಕು ಮಾತು ತಿಳಿಸಿಹೇಳ್ರಿ. ಯಾವನಾದರೂ ಸಿಟ್ಟಿಗೆದ್ದು ಬಂದಿನಾ . . .

**ಪಾರ್ವತಿ**— ನಾ ಹೇಳಿದ್ರೆ ಎಲ್ಲಿ ಕೇಳ್ತಾರ ಅವ್ರು ?

**ಸೋನು**— ಹಾಂಗ ಸಡ್ಲ ಬಿಡಬ್ಯಾಡ್ರಿ. ಒಳ್ಳೇ ಮಾತಿಂದ ಕೇಳಿದ್ರು ಸರಿ. ಇಲ್ಲಾಂತಂದ್ರ ಅಸಹಕಾರ ಹೂಡ್ರಿ. ಮೂಗು ಹಿಡದ್ರೆ ಬಾಯಿ ತೆರದೇ ತೆರೀತದ.

**ಪಾರ್ವತಿ**— ಆತು. ಹೇಳೂದಂತೂ ಹೇಳ್ತೀನಿ. ಮಾಡೂದಂತೂ ಮಾಡ್ತೇನಿ. ಆಗಲಿಲ್ಲಾ ಅಂತಂದ್ರೆ—

**ಸೋನು**— ಅದರ ಪ್ರಾಯಶ್ಚಿತ್ತದ ಬರಿ ಬಿತ್ತು ಅಂದ್ರ, ತಾನೇ ಹಾದೀಗೆ ಬರ್ತಾರ. ನೀವು ಹೇಳ್ರಿ. ಆಗಲಿಲ್ಲಾಂತ ಆದ್ರ, ಮುಂದೆ ನೋಡೋಣಂತೆ. ಎಲಾ, ಎದ್ದೇಬಿಟ್ರಲ್ಲ ಪಾರ್ವತಿಬಾಯಿ ? ಕೂಡ್ರಿ, ಕೂಡ್ರಿ. ತಟಕ್ಕನೆ ಒಂದಿಷ್ಟು ಚಾ ಮಾಡ್ತೇನಿ. ಕುಡದೇ ಹೋಗೀರಂತೆ.

**ರಂಗೂ**— ಕೂಡ್ರಿ. ಇದೇ ಈಗ ಕೋಡಬಳಿ ಮಾಡಿಟ್ಟು ಬಂದೇನಿ. ಒಂದ ನಾಲ್ಕು ತರತೇನಿ. (ಹೋಗುವಳು)

**ಸೋನು**— ಕೂಡ್ರಿ, ಅಂ. ಸ್ಟೋ ಹಚ್ಚಿ ನೀರಿಟ್ಟು ಬರ್ತೇನೆ. ಅಥವಾ ನೀವೂ ಒಳಗೇ ಬಂದಬಿಡ್ರಿ. (ಒಳಗೆ ಹೋಗುವಳು.)

**ಗಂಗೂ**— ಕೂಡ್ರಿ, ಪಾರ್ವತಬಾಯಿ. ಕೆಟ್ಟ ಅನಿಸಿಕೊ ಬ್ಯಾಡ್ರಿ. ಗಂಡಂದಿರ ಸಲುವಾಗಿ ಹೆಂಡಂದ್ರು ಮುಖ ತಗ್ಗಸೂ ಪಾಳಿ ದಿನ ನಿತ್ಯ ಇದ್ದೇ ಇರ್ತದ. ಮತ್ತೆ ಎಂದೂ ಇಲ್ದೆ ಮಾರಾಯತಿ ರಂಗೂಬಾಯಿ ದೊಡ್ಡ ಮನಸ ಮಾಡಿ ಕೋಡಬಳಿ ತರ್ತೇನಿ ಅಂದಾಳ. ತಿಂದೇ ಹೋಗ್ರಿ.

[ಮತ್ತೆ ಶಂಭೂರಾಯರ ಮನೆ]

**ಪಾರ್ವತಿ**— ಇಷ್ಟೆಲ್ಲಾ ಮಂಗಳಾರತಿ ಆತು. ಉಪಾಯ ಇಲ್ದೆ ಕೂಡಬೇಕಾತು. ಚಾ ಕುಡದದ್ದು ವಿಷ ಕುಡದ್ದಾಂಗ ಆತು.

**ಶಂಭೂ**— ಅಂ ?

**ಪಾರ್ವತಿ**— ಏನ ಬರೇ ಅಂ ! ಅಂತೀರಿ ? ಹೇಳ್ರಲ್ಲಾ ಇದಕ್ಕುತ್ತರ. ಬರೀಲಿಕ್ಕೆ ಬರದಿದ್ರೆ, ಬಿಟ್ಟಬಿಡಬೇಕು. ಯಾರೇನು ಘಾತೀಗೆ ಏರಸೂದಿಲ್ಲ. ನಾಟಕಾ ಬರೀತೇನೆ ಅಂತ ಪಂಟು ಬಡಕೋತ ಅವರಿವ್ರ ಆಡಿದ ಮಾತು ಬರ್ದು ನಾಲ್ಕು ಮಂದೀ ಒಳಗೆ ಸುಮಾರಾಗಿ, ಅವರ ದ್ವೇಷ ಯಾಕೆ ಕಟ್ಟಿಕೋಬೇಕು ? ಬರೇ ಮಂದೀಗೆ ಟೊಪಗೀ ಹಾಕೂ ಗೆಳೆಯರೀಗೆ ಅವರು ಭೇಷ್ ಅನ್ನೂದರ ಮರ್ವಾ ತಿಳೀದೆ ಕೈ ರೊಕ್ಕ ಖರ್ಚು ಮಾಡಿ ಯಾಕೆ ಚಾ ಕುಡಸಬೇಕು ? ನಾ ಖಟ್ಟ ಹೇಳ್ತೇನೆ ಕೇಳ್ರಿ. ಸಭಾನಾದ್ರೂ ಮಾಡಿಕೊಳ್ರಿ, ಹಾರಾಹಾಕ್ಕೊಂಡು ಮೆರವಣಿಗೇನಾದ್ರೂ ತೆಗಿಸಿಕೊಳ್ರಿ. ಆ ಮಂದೀನ್ನ ಮಾತ್ರ ಮನೀಗೆ ಊಟಕ್ಕೆ ಕರಕೊಂಡು ಬರಬ್ಯಾಡ್ರಿ. ನಿಮ್ಮ ಮರ್ಯಾದೆ ಉಳೀಬೇಕು ಅಂತಿದ್ರೆ, ನಾಕ ಮಂದೀ ಹಾಂಗೆ ಸುರಳೀತ ಸಂಸಾರ ಮಾಡ್ಕೊಂಡು ಇರಬೇಕು ಅಂತಿದ್ರೆ, ಸಭಾನೂ ಬ್ಯಾಡ, ಆದೇನೊ ಅಂದ್ರಲ್ಲ, ಆ ಹೆಸರೂ ಬ್ಯಾಡ ಅಂತ ಹೇಳಿ ಊಟಾ ಹಾಕೂದನ್ನ ತಪ್ಪಿಸಿಕೊಳ್ರಿ. ನೀವೇನಾದ್ರೂ ಅದಕೂ ಮೀರಿ ಸಭಾಕ್ಕೆ ಹೋದ್ರಿ, ಅಂದ್ರೆ ನಾವೂ ಹೆಂಗಸರ ಸಭಾ ಸೇರಿಸಿ ನಿಮ್ಮ ಅಂದ್ರೆ ನಿಮ್ಮಂಥ ನಾಟಕಕಾರರ ಖಂಡನಾ ಮಾಡಿ ಠರಾವು ಮಾಡ್ತೇವಿ.

**ಶಂಭೂ**— ಅಂ ! ಎಲಾ ?

**ಪಾರ್ವತಿ**— ಹಂಹಂ. ಸಿಗರೇಟ ಥಳ್ರಿ, ಕೈ ಸುಟ್ಟೀತು. ಮತ್ತೆ ಇಂದಿನಿಂದ ನಾಟಕ ಬರಿಯೂದಿಲ್ಲ ಅಂತ ಪ್ರತಿಜ್ಞೆ ಮಾಡ್ರಿ.

**ಶಂಭೂ**— ಅಲ್ಲೆ . . .

**ಪಾರ್ವತಿ**— ನಾ ಏನೂ ಕೇಳೂದಿಲ್ಲ. ನಿಮಗೆ ಬ್ಯಾಡಾದ್ರೂ ನನಗೆ ಸಂಸಾರ ಬೇಕಾಗ್ಯದ. ನಾಕ ಮಂದಿ ಒಳಗೆ ಮರ್ಯಾದೆಯಿಂದ ಇರಬೇಕಾಗ್ಯದ. ಆ ದಿನ ಸೋನೂಬಾಯಿ ಟೀಕಾ ಮಾಡುವಾಗ ನನ್ನ ಹತ್ತರ ವಿಷದ ಗುಳಿಗೆ ಇದ್ದಿದ್ರೆ ಖರೇ ಅಂದ್ರೂ ನುಂಗಿಬಿಡ್ತಿದ್ದೆ. ಇನ್ನ ನೀವು ನಾಟಕಾ ಬರಿಯೂದು ಬಿಡದಿದ್ರೆ ನನ್ನ ಪಾಲಿಗೆ ವಿಷದ ಗುಳಿಗೆ ಇಲ್ಲದಿದ್ರೂ ಹಿತ್ತಲಲ್ಲಿ ಭಾಂವಿ ಆದ. ನಳ ತಗೊಳ್ರಿ ಅಂದ್ರೆ ಭಾವಿ ಅದ ಯಾಕೆ ಸುಮ್ಮನೆ ಖರ್ಚ ಅಂತ ನೀವಂದಾಗ ಸಿಟ್ಟ ಬಂದಿತ್ತು. ಆದ್ರೆ, ಅದೇ ಛಲೋ ಆತು ಅಂತ ಈಗ ಅನ್ನಬೇಕಾಗ್ಯದ.

**ಶಂಭೂ**— ಛೀ ಛೀ, ಅಲ್ಲೆ ಹಿಂಗಂತಂದ್ರ ಹ್ಯಾಂಗೆ ? ಅವರೀಗೆಲ್ಲಾ ಬುದ್ಧಿ ಇಲ್ಲಾಂತ...

**ಪಾರ್ವತಿ**— ನಿಮಗೂ ಇಂಥಾ ಬುದ್ಧಿ ಇರೂ ಬದಲು ಅವರ ಹಾಂಗೇ ಬುದ್ಧಿ ಇರದಿದ್ರೇನೆ ಛಲೋ ಇತ್ತು. ಬರೀಬ್ಯಾಡ್ರಿ, ನನ್ನ ಕೊರಳಾಣೆ ಅದ. ಇನ್ನ ಮ್ಯಾಲೆ ನೀವು ನಾಟಕಾ ಬರೀಬ್ಯಾಡ್ರಿ. ಕೇಳಿಕೊಳ್ರಿ, ಈ ಮಂಗಳಸೂತ್ರದ ಆಣಿಮಾಡಿ ಹೇಳ್ತೇನಿ. ಯಾವ ದಿನ ನೀವು ಇನ್ನೊಂದು ನಾಟಕ ಬರೀತೀರೊ ಆ ದಿನ ಹಿತ್ತಲದಾಗಿನ ಭಾಂವಿ ನನ್ನ ಹೆಣ ಕಾಣ್ತದ.

**ಶಂಭೂ**— ತ್ಚು ತ್ಚು ಒಳಿತೆನ್ನೆ ಮಾರಾಯತಿ ಒಳಿತನ್ನು. ಆಗ್ಲಿ, ವಿಚಾರ ಮಾಡೋಣಂತೆ. ನಿನಗೇ ಬ್ಯಾಡಾದ ಮ್ಯಾಲೆ ನಾನಾದ್ರೂ ಯಾಕೆ ಬರೀಲಿ? ಆದರೆ ಈಗ ಮಾತು ಕೊಟ್ಟೇನಿ. ಇದೊಂದು ನಾಟಕಕ್ಕಾದ್ರೂ . . .

**ಪಾರ್ವತಿ**— ಊಂಹುಂ. ಇಲ್ಲ ಅಂದ ಮ್ಯಾಲೆ ಇಲ್ಲ. ನಾಟಕಾ ಬರಕೊಡಲಿಲ್ಲಾ ಅಂತ ಆ ಸಂಪಾದಕರೇನಾದ್ರೂ ನಿಮ್ಮ ಮ್ಯಾಲೆ ಖಟ್ಲೆ ಹಾಕೂದಿಲ್ಲ.

**ಶಂಭೂ**— ಹೂಂ.

**ಪಾರ್ವತಿ**—ಅಷ್ಟ ಯಾಕೆ ಮುಖ ಸಪ್ಪಗೆ ಮಾಡಿದ್ರಿ? ಬರಿಯೂ ಚಟಾ ಒಂದ ಬಿಡ್ರಿ. ಆ ಮ್ಯಾಲೆ ನೋಡ್ರಿ. ಬರಿಯೂದರ ಸಲುವಾಗಿ ಹಾಳ ಮಾಡೂ ಹೊತ್ತಿನಲ್ಲಿ ರೊಕ್ಕ ಗಳಸೂ ಉದ್ಯೋಗಾದ್ರೂ ನಡದೀತು. ಆಗ ನೀವೇ ನಿಮ್ಮಂಥ ನಾಕ ಮಂದೀಗೆ "ನಾಟಕಾ ಬರೀಬ್ಯಾಡ್ರಿ. ಛಲೋದಲ್ಲ ಅದು." ಅಂತ ಹೇಳಕೋತ ತಿರಗತೀರೊ ಇಲ್ಲೊ ನೋಡ್ರಿ. ಹೂಂ. ಏನಂದ್ರಿ ಈಗ ? ನಾ ಅಂತೇನಿ "ನಾಟಕಾ ಬರೀಬ್ಯಾಡ್ರಿ" ಅಂತ. ನೀವು--

**ಶಂಭೂ**— ನಾ-ನು-ನಾ-ನೂ ಹೂಂ. ಅಂತೇನಿ. ಈ ಜಗತ್ತಿನೊಳಗೆ ಯಾರ ಮಾತು ಕೇಳದೇ ಇದ್ರೂ ನಡದೀತು; ಹೆಂಡ್ತಿ ಮಾತು ಕೇಳದಿದ್ರೆ ನಡಿಯೂದಿಲ್ಲ ಅಂತ ನಾನೇ ನನ್ನ ಎಷ್ಟೊ ನಾಟಕದೊಳಗೆ ಸಪ್ರಮಾಣ ಬರದಿರುವಾಗ---

**ಪಾರ್ವತಿ**— ಹೌದೊ ಅಲ್ಲೊ, ಮೇಜಿನ ಮ್ಯಾಲಿನ ಆ ಕಾಗದಾ ಪೆನ್ನು ಎಲ್ಲಾ ತೆಗೆದಿಡ್ರಿ. ನಿಮಗೆ ತಿಳಸಿಹೇಳೂ ಗದ್ದಲದೊಳಗೆ ಹೊತ್ತೂ ಆಗಿ ಹೋತು. ಊಟಕ್ಕೆ ಇನ್ನೊಂದು ತಾಸಾದ್ರೂ ಬೇಕು. ಇನ್ನೊಂದು ಕಪ್ಪು ಚಾ ಮಾಡಿ ಕೊಡ್ತೇನಿ. ಕುಡೀರಿ. ಇನ್ನೊಂದು ಸಿಗರೇಟು ಹಚ್ಚರಿ. ನಿಮ್ಮಲ್ಲಿ ಇನ್ನೂ ಇರ್ಬೇಕು ಒಂದಿಷ್ಟು ಸ್ಫೂರ್ತಿ ಶಿಲ್ಕು. ಅದನ್ನೆಲ್ಲಾನೂ ಖರ್ಚ ಮಾಡಿ ಆ ಸಂಪಾದಕಗ 'ನಾಟಕಾ ಬರಿಯೂದಾಗೂದಿಲ್ಲ' ಅಂತ ಒಂದ ಥಂದನ್ನ ಪತ್ರ ಬರ್ದು ಕೈ ತೊಳಕೊಂಡ ಬಿಡ್ರಿ. ನಾನೂ ನಿಮಗೆ ಅಂಟಿದ್ದ ಒಂದ ಪೀಡಾ ಹೋತು ಅಂತ ಅದ್ಕೊಂಡು ದೇವರೀಗೆ ತುಪ್ಪದ ದೀಪಾ ಹಚ್ಚಿಟ್ಟು ಒಂದ ಪಾಯಸಾನೊ ಶಿರಾನೊ ಮಾಡಿ ಬಡಸ್ತೇನಿ. (ಒಳಗೆ ಹೋಗುವಳು.)

**ಶಂಭೂ**— ( ಅತ್ಯಂತ ಖಿನ್ನ ಸ್ವರದಲ್ಲಿ ತನ್ನಷ್ಟಕ್ಕೆ ) ಹೂಂ, ಎಂಥಾ ಮುಹೂರ್ತದೊಳಗೆ ಆ ಮಹಾರಾಯ ಗೋವಿಂದರಾಯ ಷೇಕ್ಸಪಿಯರ್ ಅಂತ ನನಗಂದನೊ ಏನೊ ? ನನ್ನೊಳಗಿನ ನಾಟಕಕಾರನ ಸಮಾಧಿ ಆಗಿ ಹೋತು. ಆಗ್ಲಿ "ಲಿಖಿತಮಪಿ ಲಲಾಟೇ"—ಬಂದ್ಯಾ ರಾಮ್ಯಾ, ಮೇಜಿನ ಮ್ಯಾಲಿನ ಕಾಗದ ಎತ್ತಿಡಪಾ. ನೋಟಬುಕ್ ಬೇಕು ಅಂತಿದ್ದಿಯಲ್ಲಾ ಕಟ್ಟಿಕೊಂಡುಬಿಡು ಬೇಕಾದ್ರೆ.

[ಪಡದೆ ಬೀಳುವದು.]

( ಲೇಖಕರ ಪೂರ್ವಸಮ್ಮತಿಯಿಲ್ಲದೇ ಯಾರೂ ಆಭಿನಯಿಸಬಾರದು. )



# ಹೊರನಾಡ ಕನ್ನಡಿಗರ ಹೊನಲು

**ಭಾರತದ ಬೇರೆ ಬೇರೆ ರಾಜ್ಯಗಳಿಗೆ ಹೋಗಿ ನೆಲಸಿದ ಕನ್ನಡಿಗರ ಸಂಖ್ಯೆ ಬಹಳ. ಅಲ್ಲಿಯ ವಾತಾವರಣಕ್ಕೆ ಹೊಂದಿಕೊಂಡು ಇವರೆಲ್ಲ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಅದೇ ಕಾಲಕ್ಕೆ ತಮ್ಮತನವನ್ನು ಕಾಯ್ದುಕೊಳ್ಳಲು ಇವರು ಹೆಣಗುತ್ತಿದ್ದಾರೆ. ಅಲ್ಲಲ್ಲಿ ಕನ್ನಡ, ಕರ್ನಾಟಕ ಸಂಘಗಳನ್ನು ರಚಿಸಿಕೊಂಡು ಆಗಾಗ್ಗೆ ಸೇರುತ್ತಿದ್ದಾರೆ. ಹೊರನಾಡ ಕನ್ನಡಿಗರ ಚಟುವಟಿಕೆಗಳು ಆಯಾ ರಾಜ್ಯಗಳಿಗೆ ಪೋಷಕವಾಗಿ ಬೆಳೆದುಬಂದಿರುವುದು ಒಂದು ವೈಶಿಷ್ಟ್ಯ. ಅವರು ಉದಾತ್ತವಾದ ಧ್ಯೇಯವನ್ನು ಮುಂದುವರಿಸಿಕೊಂಡು ಕೆಲಸಮಾಡುತ್ತಿರುವ ಬಗೆಯನ್ನು ಶ್ರೀ ಪಾಟೀಲರು ಇಲ್ಲಿ ಮನೋಜ್ಞವಾಗಿ ಚಿತ್ರಿಸಿರುವರು.**



ಲೇಖಕರು
**ಶ್ರೀ. ಎಚ್. ಎಸ್. ಪಾಟೀಲ,**
**ಚಂಡೀಗಡ**



ಹೊರನಾಡ ಕನ್ನಡಿಗರ ಹೊನಲು—ಬೆಳೆಯುತ್ತಲಿದೆ! ಬಲಿಯುತ್ತಲಿದೆ, ಬಲಗೊಳ್ಳುತ್ತಲಿದೆ! ಅವರ ದೃಷ್ಟಿಯಲ್ಲಿಯೂ ವ್ಯಾಪಕತೆ, ಸಮನ್ವಯ ಮತ್ತು ಅಂತಾರಾಷ್ಟ್ರೀಯತೆಯು ಒಡಮೂಡುತ್ತಲಿದೆ. ಇದು ಅತ್ಯಂತ ಅಪೇಕ್ಷಣೀಯ ಮತ್ತು ಸ್ವಾಭಾವಿಕ ಎಂಬು ಹೇಳಬಹುದು. ನೂರಾರು ವರ್ಷಗಳಿಂದ ಕನ್ನಡಿಗರು ಕಾರಣಾಂತರದಿಂದ ಹೊರನಾಡುಗಳಿಗೆ ಹೋಗುತ್ತಲಿದ್ದಾರೆ. ಅವರಲ್ಲಿ ಅನೇಕ ಜನರು ಅಲ್ಲಿಯೇ ನೆಲಸಿ, ಆ ನಾಡನ್ನೇ ತಮ್ಮ ನಾಡನ್ನಾಗಿ ಮಾಡಿಕೊಂಡಿದ್ದಾರೆ. ಅಲ್ಲಿಯ ಜನರೊಡನೆ ಕೂಡಿಕೊಂಡು ಅವರ ಸುಖದುಃಖಗಳಲ್ಲಿ ತಾವು ಭಾಗಿಗಳಾಗಿ ಅವರೊಡನೆ ಒಂದಾಗಿದ್ದಾರೆ.

ಹೀಗೆ ನಡೆದುಕೊಂಡಲ್ಲಿ ತಮ್ಮತನವನ್ನು, ಕನ್ನಡತನವನ್ನು ಎಷ್ಟರಮಟ್ಟಿಗೆ ಕಾಯ್ದುಕೊಂಡಿದ್ದಾರೆ ಮತ್ತು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಹಿತದ ದೃಷ್ಟಿಯಿಂದ ಅಂತಹ ವೈಶಿಷ್ಟ್ಯವನ್ನು ಎಷ್ಟರಮಟ್ಟಿಗೆ ಕಾಯ್ದುಕೊಂಡು ಅದರ ಬೆಳವಣಿಗೆಗೆ ಕಾರಣರಾಗಬೇಕು ಎಂಬುದೊಂದು ಅತ್ಯಂತ ಜಟಿಲವಾದ ಸಮಸ್ಯೆಯಾಗಿದೆ. ಭಾರತೀಯ ಸ್ವಾತಂತ್ರ್ಯದ ಹೋರಾಟದ ಕಾಲದಲ್ಲಿ ಈ ಪ್ರಶ್ನೆಯು ರಾಷ್ಟ್ರನಾಯಕರ ಕಣ್ಣೆದುರಿನಲ್ಲಿ ಸುಳಿದಿದ್ದರೂ ಆಗ್ಗೆ ಅದು ಅಂತಹ ಪ್ರಾಮುಖ್ಯವನ್ನು ಪಡೆದಿರಲಿಲ್ಲ. ರಾಷ್ಟ್ರೀಯ ಸ್ವಾತಂತ್ರ್ಯದ ಜೊತೆಯಲ್ಲಿಯೆ ನಮ್ಮದಾದ ಒಂದು ರಾಷ್ಟ್ರೀಯ (ವಿದೇಶ) ನೀತಿಯು ರೂಪುಗೊಂಡಂತೆ ಈ ಸಾಂಸ್ಕೃತಿಕ ಸಮನ್ವಯದ ಸಮಸ್ಯೆಯು ಅಷ್ಟೇ ಮತಭೇದದ ವಿಷಯವಾಗಿದೆ.

ಹೊರನಾಡುಗಳಲ್ಲಿ ಹೋಗಿ ನೆಲಸುವ ವಿಷಯವು ವಿದೇಶಗಳಲ್ಲಿ ಹೋಗಿ ವಲಸೆಮಾಡುವ (colonise) ವಿಚಾರವನ್ನು ಸಾಮಾನ್ಯವಾಗಿ ಹೋಲುತ್ತದೆ. ಅನ್ಯದೇಶೀಯರು ಅಲ್ಲಿ ಪ್ರವೇಶ ಮಾಡದಂತೆ, ಪ್ರವೇಶ ಮಾಡಿದರೂ ವಲಸೆ ಮಾಡದಂತೆ ಒಂದು ದೇಶವು ಶಾಸನವನ್ನು ಮಾಡಬಹುದು ಎಂಬುದೊಂದು ಭೇದವೇನೊ ಇದೆ. ಆದರೆ ಒಂದು ದೇಶದಲ್ಲಿಯೆ ಬೇರೆ ಭಾಗಗಳ ಜನರಿಗೆ ವಿದ್ಯಾಭ್ಯಾಸದ ಸೌಕರ್ಯ, ಸೇವೆಯ ಸ್ಥಳಗಳು – ನೌಕರಿಗಳು – ಸಿಗದಂತೆಯೂ ನಿಯಮ-ನಿರ್ಬಂಧಗಳನ್ನು ಹಾಕಬಹುದಲ್ಲ! ಹೀಗೆ ಈ ಪ್ರಶ್ನೆಯು ಕೇವಲ ರಾಜಕೀಯ ವಿಷಯಗಳ ಮೇಲೆಯಷ್ಟೆ ಅವಲಂಬಿಸಿರದೆ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮೊದಲಾದ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿದೆ. ಜೀವನದ ವಿವಿಧ ಮುಖಗಳಾದ ಈ ವಿಚಾರಗಳು ಒಂದನ್ನೊಂದು ಹೊಂದಿಕೊಂಡಿವೆ; ಒಂದರಿಂದ ಇನ್ನೊಂದು ಪ್ರಭಾವಿತ ಇಲ್ಲವೆ ಕುಂಠಿತವಾಗುತ್ತವೆ.

ಉದಾಹರಣೆಗಾಗಿ ಪ್ರವಾಸೀವಂಗೀಯರ (ಹೊರನಾಡ ಬಂಗಾಲಿಗಳ) ವಿಚಾರವನ್ನು ಮತ್ತು ಪ್ರವಾಸೀ ಉತ್ಕಲೀಯರ ವಿಚಾರವನ್ನು ನಾವು ತೆಗೆದುಕೊಳ್ಳಬಹುದು. ವಂಗೀಯರ ಸಂಖ್ಯೆಯಲ್ಲಿ ಹೆಚ್ಚಾದಂತೆ ಶಿಕ್ಷಣ, ಕಲೆ, ಸಾಮಾಜಿಕ ಸಂಘಟನೆ, ರಾಜಕೀಯ ಪ್ರಗತಿ ಮೊದಲಾದ ವಿಷಯಗಳಲ್ಲಿ ಮುಂದುವರೆದವರಾಗಿದ್ದಾರೆ. ಈ ದೇಶದ ಉತ್ತರಭಾಗದ ಎಲ್ಲ ರಾಜ್ಯಗಳಲ್ಲಿ ಅವರು ನೆಲಸಿದಂತೆ ಭಾರತದ ಅಕ್ಕಪಕ್ಕದ ಅನೇಕ ರಾಷ್ಟ್ರಗಳಲ್ಲಿ ಕೂಡ ಅವರ ಗುಂಪುಗಳು ಎಷ್ಟೋ ದಶಕಗಳಿಂದ ಕಂಡುಬರುತ್ತಿವೆ. ರಾಮಮೋಹನರಾಯ, ವಿವೇಕಾನಂದ, ರವೀಂದ್ರನಾಥ, ಸುಭಾಸಬೋಸರಂತಹ ಮೇಧಾವಿಗಳಾದ ಮುಂದಾಳುಗಳ ಮೂಲಕ ತಮ್ಮ ಜೀವನವನ್ನು ಬೆಳಗಿಕೊಂಡು ಅನ್ಯಭಾಷಿಗಳ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಲಿದ್ದಾರೆ. ಆಸಾಮ, ಉತ್ಕಲ, ಬಿಹಾರಗಳಂತೆಯೆ ಸುತ್ತಲಿನ ರಾಷ್ಟ್ರಗಳಾದ ಬ್ರಹ್ಮದೇಶ, ನೇಪಾಲ ಮೊದಲಾದವುಗಳಲ್ಲಿ ತಮ್ಮ ಸಂಖ್ಯೆಯನ್ನು ಬೆಳೆಸಿಕೊಂಡು ತಮ್ಮ ಪ್ರತಿಷ್ಠೆಯನ್ನು ಸ್ಥಾಪಿಸಿದ್ದಾರೆ. ಆದರೆ ಅದೇ ರೀತಿಯಿಂದ ಚಿಕ್ಕ ಪ್ರಮಾಣದಲ್ಲಿಯೂ ಮತ್ತು ಹತ್ತಿರದ ರಾಜ್ಯಗಳಲ್ಲಿಯಷ್ಟೆ ಸ್ಥಳಾಂತರ ಹೊಂದಿ, ಅಲ್ಲಿ ವಲಸೆ ಮಾಡಿರುವ ಪ್ರವಾಸೀ ಉತ್ಕಲೀಯರ ವಿಷಯವು ತೀರ ಭಿನ್ನವಾಗಿದೆ. ಅದರಲ್ಲಿಯೂ ನಿಖಿಲ ಭಾರತ ಪ್ರವಾಸೀ ಉತ್ಕಲ ಸಮ್ಮೇಲನ ಎಂಬ ಸಂಸ್ಥೆಯು ಈಗ ಅನೇಕ ವರ್ಷಗಳಿಂದ ಕಾರ್ಯ ಮಾಡುತ್ತಲಿದೆ. ಪಾಟ್ನಾ, ದೆಹಲಿ, ವಾರಣಾಸಿ ಮೊದಲಾದ ಉತ್ತರಭಾರತದ ನಗರಗಳಲ್ಲಿ ಉತ್ಕಲ ಸಂಘಗಳೂ ಇವೆ. ಆದರೆ ಈಗ ೨೫-೩೦ ವರ್ಷಗಳಿಂದ ವಂಗೀಯರ ಸಂಘಟನೆ ಮತ್ತು ವಂಗ ಸಂಸ್ಕೃತಿಯ ಸಂವರ್ಧನೆಗಳಾಗಿ ದುಡಿಯುತ್ತಲಿದ್ದ ನಿಖಿಲ ಭಾರತ ವಂಗಸಾಹಿತ್ಯ ಸಮ್ಮೇಳನ ಮತ್ತು ಭಾರತದ- ಅದೇಕೆ- ಅನ್ಯ ರಾಷ್ಟ್ರಗಳ ಪ್ರಮುಖ ಪಟ್ಟಣಗಳಲ್ಲಿರುವ ವಂಗೀಯರ ಸಂಘಗಳು ಮತ್ತು 'ಕಾಲೀಬಾಡಿ'ಗಳು ಮಾಡುತ್ತಿರುವ ಸೇವೆಯನ್ನು ಹೋಲಿಸಹೋದರೆ ಅವುಗಳ ತೂಕಕ್ಕೆ ಅನ್ಯ ಯಾವ ಸಂಘಟನೆಯೂ ಬರುವದಿಲ್ಲ ಎಂಬುದು ನಿಶ್ಚಿತ.

ಹೀಗೆ ಒಂದು ದೇಶದ ವಿವಿಧ ರಾಜ್ಯ (ಭಾಗ)ಗಳಲ್ಲಿ ಅಥವಾ ಪ್ರಪಂಚದ ಬೇರೆ ಬೇರೆ ರಾಷ್ಟ್ರಗಳಲ್ಲಿ ಸಾಂಸ್ಕೃತಿಕ ಮಟ್ಟ ಮತ್ತು ತನ್ಮೂಲಕ ಬೀರುವ ಪ್ರಭಾವ ಇವುಗಳಲ್ಲಿ ಭೇದಭಿನ್ನತೆಗಳು ಕಂಡುಬರುವದಕ್ಕೆ ಜೀವನದ ವಿವಿಧ ರಂಗಗಳಲ್ಲಿ ಆ ಆ ಜನರು ಇಟ್ಟುಕೊಂಡ ವೃತ್ತಿ ಮತ್ತು ಸಾಧಿಸಿದ ಪ್ರಗತಿ ಇವುಗಳೇ ಕಾರಣವಾಗಿದ್ದಂತೆ ಆ ಜನರಲ್ಲಿ ಐಕ್ಯ, ಪರಸ್ಪರ ಗೌರವ, ಅನ್ಯರ ಅಭಿಮತಕ್ಕೆ ಕೊಡಬೇಕಾದ ಸಹನಶೀಲ ಲಕ್ಷ್ಯ ಮತ್ತು ಸಮನ್ವಯಭಾವ ಇವುಗಳ ತಳಹದಿಯ ಮೇಲೆ ನಡೆಯಬೇಕಾದ ಸಂಘಟನೆಯೂ ಕಾರಣವಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಹೊರನಾಡ ಕನ್ನಡಿಗರು ಎತ್ತ ಸಾಗಿದ್ದಾರೆ ಎಂಬುದನ್ನು ನೋಡಿಕೊಳ್ಳುವದು ವಿಹಿತವೆನಿಸಬಹುದು. ಹೊರನಾಡ ಕನ್ನಡಿಗರ ಜೀವನದೃಷ್ಟಿಯು ಕನ್ನಡಿಗರ ಜೀವನ ದೃಷ್ಟಿಯು ಅಲ್ಲವೇ? ಸಾಮಾನ್ಯವಾಗಿ ಒಬ್ಬ ವ್ಯಕ್ತಿಯು ಒಳನಾಡಿನಲ್ಲಿಯೆ ಇರಲಿ ಹೊರನಾಡಿನಲ್ಲಿಯೆ ಇರಲಿ ಆತನ ಧ್ಯೇಯ—ಧೋರಣೆಗಳು ಅವನು ಪ್ರತಿನಿಧಿಸುವ ಜನಾಂಗವು ಇಟ್ಟುಕೊಂಡ, ಅಥವಾ ಅದರ ವೈಶಿಷ್ಟ್ಯವೆನಿಸಿದ ದರ್ಶನವನ್ನೆ ಪ್ರತಿಬಿಂಬಿಸುವವಲ್ಲವೆ? ಇಲ್ಲಿ ವ್ಯಕ್ತಿ ಮತ್ತು ಸಮಾಜ ಈ ಎರಡು ಶಕ್ತಿಗಳ ಪರಸರ ಸ್ಥಾನಮಾನ, ಪೋಷಣೆ ಪ್ರಭಾವಗಳ ವಿಷಯಕವಾದ ಚರ್ಚೆಯನ್ನು ಬಿಟ್ಟುಕೊಟ್ಟು ಸಾಧಾರಣವಾಗಿ ಒಂದು ಜನಾಂಗದ ಸಾಂಸ್ಕೃತಿಕ ವಿಶಿಷ್ಟತೆಯು, ತುಸು ಪ್ರಮಾಣದಲ್ಲಿ ಯಾದರೂ ಆ ಜನಾಂಗದ ಒಬ್ಬೊಬ್ಬ ಸದಸ್ಯನಲ್ಲಿ ಕಂಡುಬರುವದಷ್ಟೆ! ಈ ದೃಷ್ಟಿಯಿಂದ ನೋಡಿದಲ್ಲಿ ಸ್ಥೂಲವಾಗಿ ಕರ್ನಾಟಕ (ಮೈಸೂರು ದೇಶ) ದ ಜನತೆಯು ಶತಮಾನಗಳಿಂದ ಕೆಲವು ಸಾಂಸ್ಕೃತಿಕ ಗುಣಗಳನ್ನು ಪಡೆದಿದ್ದು ಕೆಲವು ಸಾಮಾಜಿಕ ನ್ಯೂನತೆಗಳಿಂದ ತೊಳಲುತ್ತ ಒಂದು ಜೀವನಮಾರ್ಗವನ್ನು ಕಲ್ಪಿಸಿಕೊಂಡಿದ್ದಾರೆ. ಅದಕ್ಕೆ ಅನುರೂಪವಾಗಿಯೆ ಹೊರನಾಡುಗಳಲ್ಲಿ ವಾಸಿಸುವ ಕನ್ನಡಿಗರಲ್ಲಿಯೂ ಗುಣ-ದೋಷಗಳನ್ನೊಳಗೊಂಡ ವ್ಯಕ್ತಿತ್ವವು ಕಂಡುಬರುತ್ತಿರುವದು ಸ್ವಾಭಾವಿಕ; ನಿರೀಕ್ಷಿತ. ಇಂದಿಗೂ ಕೆಲವು ಕುಟುಂಬಗಳು ಹೊರನಾಡುಗಳಲ್ಲಿ ಅನೇಕ ದಶಕಗಳಿಂದ ನೆಲಸಿದುದು ಕಂಡುಬಂದರೂ ಅವರಲ್ಲಿ ಕರ್ನಾಟಕದ ಸಾಂಸ್ಕೃತಿಕ ಪ್ರಭಾವವು ಬೇರೂರಿಕೊಂಡು ಉಳಿದು ಅವರ ದೈನಂದಿನ ಜೀವನದಲ್ಲಿ ಪ್ರೇರಣೆಯನ್ನು ನೀಡುತ್ತಿರುವದು ಇಲ್ಲವೆ ತೊಂದರೆಯನ್ನು ಒಡ್ಡುತ್ತಿರುವದು ಆಶ್ಚರ್ಯವಾಗುವಂತಹ ಪ್ರಮಾಣದಲ್ಲಿ ಗೋಚರವಾಗುತ್ತದೆ.

ಆದರೆ ಒಳನಾಡಿನಲ್ಲಿಯ ಜನರಂತೆ ಕೇವಲ ತಮ್ಮ ಜನರ ಸಂಪರ್ಕ ಸಹವಾಸ-ಸಹಕಾರಗಳಿಂದ ಮಾತ್ರ ಹೊರನಾಡಿಗರು ಬೆಳೆಯಬೇಕಾಗಿರದೆ, ಅಲ್ಲಿ ಆ ಪ್ರದೇಶದ ಜನರ ಪರಿಸರವೊಂದು ಹೆಚ್ಚಿನ ಮತ್ತು ಪ್ರಬಲ ಶಕ್ತಿಯಾಗಿ ಅವರ ಬದುಕನ್ನು ಮಾರ್ಪಡಿಸುತ್ತಿರುತ್ತದೆ. ಇಲ್ಲಿಯೊ ಸಾಮಾನ್ಯವಾಗಿ ಕರ್ನಾಟಕದ ಸರ್ವಹಿತ ದೃಷ್ಟಿಯ ವೈಶಿಷ್ಟ್ಯವು ಅವರ ಬಾಳಬಟ್ಟೆಯನ್ನು ರೂಪಿಸುತ್ತಿದೆ ಎಂಬುದು ನಿಜ. ಇಡಿಯ ಭಾರತದಲ್ಲಿ ಸ್ಥಾಪಿತವಾಗಿ ಕನ್ನಡಿಗರ ಸಂಘಟನೆಯ ಕಾರ್ಯವನ್ನು ಕೈಕೊಂಡ ನೂರಾರು ಕರ್ನಾಟಕ ಸಂಘಗಳ ಧ್ಯೇಯಧೋರಣೆಗಳ ವಿಷಯವಾಗಿಯೇ ಆಗಲಿ, ಯಾವ ಸಂಘ ಸಂಸ್ಥೆಗಳ ಚೌಕಟ್ಟಿನಲ್ಲಿಯೂ ಸಿಕ್ಕದೆ ಸ್ವತಂತ್ರವಾಗಿ, ಅಲಿಪ್ತವಾಗಿ, ಅಭಾರಿತವಾಗಿ ಸುತ್ತಲಿನ ಜನರೊಡನೆ ಸಾಮಾಜಿಕ ಜೀವನವನ್ನು ನಡೆಸಿಕೊಂಡುಬಂದ ವ್ಯಕ್ತಿಗಳನೇಕರ ವಿಷಯವಾಗಿಯೆ ಆಗಲಿ, ನಾವು ವಿಚಾರಮಾಡಲಾಗಿ ಕನ್ನಡಿಗರು ವೈಯಕ್ತಿಕವಾಗಿಯೆ ಆಗಲಿ ಸಂಘಟಿತರಾಗಿಯೆ ಆಗಲಿ ಯಾವ ರೀತಿಯಿಂದಲೂ ತಮ್ಮ ಸಾಂಸ್ಕೃತಿಕ ಸಂಪ್ರದಾಯಗಳ ಅದ್ಭುತ ಪ್ರದರ್ಶನವನ್ನು ಮಾಡುವ ಅಥವಾ ಅತಿರೇಕದ ಅಭಿಮಾನವನ್ನು ತೋರುವ ಒಲವನ್ನು ಪಡೆಯುವದಿಲ್ಲ ಎಂಬುದು ಸ್ಪಷ್ಟವಾಗದಿರದು; ಅದರ ಬದಲಾಗಿ ಅವರಿನ್ನೂ ಮಿತವಾದ ರೀತಿಗಿಂತ ಕಡಿಮೆಯಾಗಿಯೇ ಅಥವಾ ಆವಶ್ಯಕವಾಗಿದ್ದ ಸಂದರ್ಭಗಳಲ್ಲಿ ಕೂಡ ಮೂಕರಂತೆಯೆ ವರ್ತಿಸುವ — ಸದಭಿಮಾನದ ಅಭಾವವನ್ನೆ ತೋರ್ಪಡಿಸುವ—ಸ್ವಭಾವವೆನಿಸದ--ಲೋಪದ ಗುಣಗಳನ್ನು ಹೊಂದಿರುವದು ಕಂಡು ಬರಬಹುದು. ಇದು ಒಂದು ರೀತಿಯಿಂದ ತಮ್ಮ ತಾಯ್ನಾಡಿನ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತಿದ್ದರೂ ಇಡಿಯ ರಾಷ್ಟ್ರದ ವಿಕಾಸದ ದೃಷ್ಟಿಯಿಂದ ಅದು ಹಿತಕರವಲ್ಲ; ಹಾಗೆ ಅಭಿನಂದನೀಯವಲ್ಲ.

ಈ ಬಗೆಯ ನ್ಯೂನತೆಗಳನ್ನು ನಡಿಸಿಕೊಂಡು ಕಾರಣಾಂತರದಿಂದ ತಮ್ಮ ಜೀವನದಲ್ಲಿ ಸಾಂಸ್ಕೃತಿಕ ತೊಡಕುಗಳನ್ನು ಅನುಭವಿಸಬೇಕಾದ ಹೊರನಾಡಿಗರು ಆ ಬಗೆಯ ತೊಂದರೆಗಳನ್ನು ಪರಿಹರಿಸಿಕೊಂಡು, ಒಂದು ರೀತಿಯಿಂದ ತಾಯ್ನಾಡಿನಲ್ಲಿ ಪ್ರಚಲಿತವಾಗಿದ್ದ ಕುಂದುಕೊರತೆಗಳ ಹಿತಾಹಿತಗಳನ್ನು ಅರಿತು, ತಪ್ಪೊ ಒಪ್ಪೊ ಆದ ಆ ನೀತಿಯನ್ನು ತಿಳಿದು ರಾಷ್ಟ್ರದ ಪೂರ್ಣ ಪ್ರಗತಿಯ ಏಕೈಕ ಆದರ್ಶದಿಂದ ಪ್ರೇರಿತರಾಗಿ ಅನ್ಯ ರಾಷ್ಟ್ರದಂತೆ ತಾವೂ ಬೆಳೆಯಬೇಕು. ಅನ್ಯಭಾಷಾಬಾಂಧವರಂತೆ ರಾಷ್ಟ್ರದ ಉನ್ನತಿಯ ಮಾರ್ಗದಲ್ಲಿ ತಾವೂ ಸಮಭಾಗಿಗಳಾಗಬೇಕು ಎಂಬ ದೃಷ್ಟಿಯನ್ನು ಪೋಷಿಸಿಕೊಂಡು ಮುಂದುವರಿಯಬೇಕು ಎಂದು ಅಲ್ಲಲ್ಲಿ ಬೇರೆ ಬೇರೆ ರೂಪದಲ್ಲಿ ಹೊರನಾಡ ಕನ್ನಡಿಗರ ಸಂಘಟನೆಯ ಕಾರ್ಯವು ನಡೆಯುತ್ತಿರುವದು.

ಹೊರನಾಡ ಕನ್ನಡಿಗರು ಇಲ್ಲಿಯ ವರೆಗೆ ಕೈಕೊಂಡ ಕಾರ್ಯವನ್ನು ವಿಹಂಗಮ ದೃಷ್ಟಿಯಿಂದ ಪರಿಶೀಲಿಸುವದು ಇಲ್ಲಿ ಅಪ್ರಸ್ತುತವೆನಿಸಲಿಕ್ಕಿಲ್ಲ. ಹೊರನಾಡ ಕನ್ನಡಿಗರ ಸಂಸ್ಥೆ ಎಂಬ ಹೆಸರಿನಲ್ಲಿ ಅಖಿಲ ಭಾರತದ ದೃಷ್ಟಿಯನ್ನು ಇಟ್ಟುಕೊಂಡು ಸಂಘಟಿತವಾದ ಕಾರ್ಯವು ನಡೆದು ಈಗ ಕೇವಲ ೨೦ ವರ್ಷಗಳಾಗಿದ್ದರೂ ಮುಂಬೈ, ಪುಣೆ, ಹೈದರಾಬಾದು

ಮದರಾಸು ಮೊದಲಾದ ಮಹಾನಗರಗಳಲ್ಲಿ ಹೊರನಾಡ ಕನ್ನಡಿಗರು ತಮ್ಮ ನಗರಗಳ ಮಟ್ಟಿಗೆ ಅನೇಕ ಸಂಘಸಂಸ್ಥೆಗಳನ್ನು ಸ್ಥಾಪಿಸಿಕೊಂಡ ಉದಾಹರಣೆಗಳು ಅದಕ್ಕೂ ಮೊದಲಿನಿಂದ ಸಿಗುತ್ತವೆ. ಅವುಗಳಲ್ಲಿಯೂ ಮುಂಬಯಿ, ಪುಣೆ, ಹೈದರಾಬಾದು, ಮದರಾಸು, ದಿಲ್ಲಿ ಮೊದಲಾದ ಸ್ಥಳಗಳಲ್ಲಿ ಕನ್ನಡ ಮಕ್ಕಳ ಶಿಕ್ಷಣಕ್ಕಾಗಿ ವಿದ್ಯಾಸಮಿತಿಗಳನ್ನು ರಚಿಸಿಕೊಂಡು ಪ್ರಾಥಮಿಕಶಾಲೆಗಳನ್ನು ಮಾಧ್ಯಮಿಕ ವಿದ್ಯಾಲಯಗಳನ್ನು ನಡೆಸಿಕೊಂಡು ಬಂದಿರುತ್ತಾರೆ. ಮುಂಬೈ, ಮದ್ರಾಸು, ಹೈದರಾಬಾದುಗಳಂತಹ ರಾಜಧಾನಿಗಳಲ್ಲಿ ಕನ್ನಡಿಗರು ತಮ್ಮ ಸಂಘಗಳಿಗಾಗಿ ಸ್ವತಂತ್ರ ಕಟ್ಟಡಗಳನ್ನು ಮತ್ತು ಸದಸ್ಯರಿಗಾಗಿ ಸಹಕಾರಿ ತತ್ತ್ವಗಳ ಮೇಲೆ ಗೃಹನಿರ್ಮಾಣ ಸಂಘಗಳನ್ನು ರೂಪಿಸಿಕೊಂಡು ಮನೆಗಳನ್ನೂ ಒದಗಿಸಿಕೊಂಡಿದ್ದಾರೆ. ಮುಂಬಯಿ, ದೆಹಲಿ, ಅಹಮ್ದಾಬಾದುಗಳೇ ಮೊದಲಾದ ಕೇಂದ್ರಗಳಿಂದ ಒಂದೆರಡು ಕನ್ನಡ ಪತ್ರಿಕೆಗಳು ಪ್ರಕಟವಾಗುತ್ತಿದ್ದರೆ ಅಂತಹವೇ ಆದ ಕೆಲವು ಸ್ಥಳಗಳಿಂದ ಕನ್ನಡ ಪುಸ್ತಕಗಳ ಪ್ರಕಾಶನವೂ ಜರುಗುತ್ತಲಿದೆ. ಹೈದರಾಬಾದು, ಮದರಾಸು, ಪುಣೆ, ಮುಂಬಯಿ ಮೊದಲಾದ ವಿಶ್ವವಿದ್ಯಾಲಯಗಳಲ್ಲಿ ಕನ್ನಡವನ್ನು ಕಲಿಸುವ ಏರ್ಪಾಡು ಆಗಿರುವದಲ್ಲದೆ ಅದಕ್ಕೆ ಅವಶ್ಯಕವಾದ ಗ್ರಂಥಸಂಗ್ರಹವನ್ನೂ ಆ ಆ ವಿದ್ಯಾಪೀಠದ ಗ್ರಂಥಾಲಯಗಳಲ್ಲಿ ನೋಡಬಹುದಾಗಿದೆ. ಇತ್ತ ದೆಹಲಿ ವಿಶ್ವವಿದ್ಯಾಲಯದಲ್ಲಿ ಒಂದು ಕನ್ನಡ ವಿಭಾಗವೇ ನಿರ್ಮಿತವಾಗಿದ್ದು, ಆಗ್ರಾ, ವಾರಣಾಸಿ ಮೊದಲಾದ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡದಲ್ಲಿ ಸಂಶೋಧನೆಯನ್ನು ಮಾಡುವ ಅವಕಾಶವೂ ನಿರ್ಮಿಸಲ್ಪಟ್ಟಿದೆ.

ಭಾರತದಲ್ಲಿ ಭಾಷಾನುಗುಣ ತತ್ವಗಳನ್ನೇ ಪ್ರಮುಖವಾದ ತಳಹದಿಯೆಂದು ಇಟ್ಟುಕೊಂಡು ರಾಜ್ಯಗಳ ಪುನಾರಚನೆಯಾದ ಮೇಲೆ ಹೊರನಾಡ ಕನ್ನಡಿಗರ ಪ್ರವಾಹವು ಹೆಚ್ಚು ಸ್ಪಷ್ಟವಾದ ರೂಪವನ್ನು ತಳೆದು, ಅವರ ಸಂಘಟನೆಯು ನಿರ್ದಿಷ್ಟವಾದ ಮೊನೆಯನ್ನು ಪಡೆದಿದೆ ಎಂದೆನ್ನಬಹುದು. ಅದರ ಜೊತೆಯಲ್ಲಿಯೇ ಮಕ್ಕಳ ಶಿಕ್ಷಣದ ಮತ್ತು ರಾಜ್ಯ ಸರಕಾರದ ಸೇವಕರ ಸೇವಾಕ್ರಮಗಳ (Service conditions) ಸಮಸ್ಯೆಗಳೂ ಸಾಕಷ್ಟು ತೀಕ್ಷ್ಣತೆಯನ್ನು ಪಡೆದಿವೆ. ಅವುಗಳ ನಿವಾರಣೆಯು, ಬಲವಾದ ಅನೇಕ ಸಂಘಗಳನ್ನು ಅಲ್ಲಲ್ಲಿ ಸ್ಥಾಪಿಸಿಕೊಂಡು, ಅಂತಹ ಸಂಘಗಳ ಮತ್ತು ಆ ಸಂಘಗಳ ಸಂಘಟನೆಯಾದ ಹೊರನಾಡ ಕನ್ನಡಿಗರ ಸಂಸ್ಥೆಯ ಕಾರ್ಯದಲ್ಲಿ ಒಂದು ಸೂಕ್ತವಾದ ಮತ್ತು ಏಕರೂಪತೆಯುಳ್ಳ ನೀತಿಯನ್ನು ಅನುಸರಿಸುವದರಲ್ಲಿದೆ ಎಂದೆನ್ನಬಹುದು.

ಭಾಷಾಪ್ರಧಾನ ರಾಜ್ಯಗಳ ನಿರ್ಮಾಣವಾದ ನಂತರ ಹೊರನಾಡ ಕನ್ನಡಿಗರಲ್ಲಿ ಅನುಕರಣೀಯ ಎನಿಸಬಹುದಾದ ಒಂದೆರಡು ಸಂಗತಿಗಳು ಗೋಚರವಾಗುತ್ತಿದ್ದುದನ್ನು ಇಲ್ಲಿ ಗುರುತಿಸುವದು ಸಮಂಜಸವೆನಿಸಬಹುದು. ಮೊದಲನೆಯದಾಗಿ ಕನ್ನಡಿಗರೆಲ್ಲ ಒಂದು ಎಂಬ ಐಕ್ಯಭಾವನೆಯು ಅವರ ಸಾಂಘಿಕ ಜೀವನದಲ್ಲಿ ಮೂಡಿಸುವದು, ಮೊದಲು ಅಲ್ಲಲ್ಲಿ ಕಂಡುಬರುತ್ತಿದ್ದ ಪ್ರಾದೇಶಿಕ ಕನ್ನಡಿಗರ ಸಂಸ್ಥೆಗಳು ತಮ್ಮ ಪ್ರಾದೇಶಿಕ ಸ್ವರೂಪವನ್ನು ಬದಲಿಸಿಯೋ, ಅಂತಹ ಅನ್ಯ ಸಂಘಗಳೊಡನೆ ಒಂದೇ ಕನ್ನಡ ಎಂಬ ವಿಶಾಲ ದೃಷ್ಟಿಯ ತಳಹದಿಯ ಮೇಲೆ ಮಿಲಿತರಾಗಿಯೋ ಕನ್ನಡಿಗರ ಏಕೀಭಾವಕ್ಕೆ ಮೂರ್ತಸ್ವರೂಪವನ್ನು ಕೊಟ್ಟಿದ್ದಾರೆ. ಇದು ನಿಜವಾಗಿಯೂ ಒಂದು ಅಭಿನಂದನೀಯವಾದಷ್ಟೆ ಅನ್ಯರಿಗೆ ಅನುಕರಣೀಯವಾದ ಶ್ರೇಯಸ್ಸು ಎಂದು ಹೇಳಬಹುದು. ಎರಡನೆಯದಾಗಿ ಈಗ ನಾಲ್ಕೈದು ವರ್ಷಗಳಿಂದ ಭಾರತದ ವಿವಿಧ ರಾಜ್ಯಗಳಲ್ಲಿರುವ ಕರ್ನಾಟಕ ಸಂಘಗಳನ್ನು ಬಲಪಡಿಸಿಕೊಳ್ಳುವ ಉದ್ದೇಶದಿಂದ ರಾಜ್ಯದ ಮಟ್ಟದಲ್ಲಿ ಸಂಯುಕ್ತ ಕರ್ನಾಟಕ ಸಂಘಗಳನ್ನು ಸ್ಥಾಪಿಸಿಕೊಂಡುದೂ ಅಷ್ಟೇ ಮಹತ್ವಪೂರ್ಣವಾದ ಹೆಜ್ಜೆಯಾಗಿದೆ. ಆಂಧ್ರ ಪ್ರದೇಶ ಕನ್ನಡ ಸಾಹಿತ್ಯ ಸಮ್ಮೇಳನ, ಮಹಾರಾಷ್ಟ್ರ ಪ್ರದೇಶ ಕರ್ನಾಟಕ ಸಂಘ ಮತ್ತು ಗುಜರಾತ ರಾಜ್ಯ ಕನ್ನಡಿಗರ ಸಂಘ ಮೊದಲಾದ ಪ್ರಯತ್ನಗಳು ಈ ದೃಷ್ಟಿಯಿಂದ ನಿದರ್ಶನಯೋಗ್ಯ ದೃಷ್ಟಾಂತಗಳಾಗಿವೆ. ಈ ಸಂಘಟನೆಗಳು ಅಲ್ಲಲ್ಲಿ ಶಿಕ್ಷಣದ ಮತ್ತು ಸೇವಾಕ್ರಮಗಳ ಸಮಸ್ಯೆಗಳನ್ನು ಎದುರಿಸಲಿಕ್ಕೆ ಹೆಚ್ಚು ಸಮರ್ಥವಾದ ಸಾಧನಗಳಾಗಿವೆ.

ಆದರೆ ಭಾರತದಲ್ಲಿ ಸಂಭವಿಸಿದ ಈಚೀಚಿನ ಒಂದೆರಡು ಘಟನೆಗಳು ಭಾಷಾತ್ಮಕ ಸಂಬಂಧ–ಸಂಪರ್ಕ ಮತ್ತು ಭಾಷಾಮೂಲಕ ಪರಿಚಯ–ಪೋಷಣೆ ಮೊದಲಾದ ವಿಷಯದ ಮೇಲೆ ಬಲವಾದ ಪ್ರಹಾರವನ್ನು ಮಾಡಿ ರಾಷ್ಟ್ರೀಯ ಐಕ್ಯಕ್ಕೆ ಅಪಾಯ ಎಂಬ ಎಚ್ಚರಿಕೆಯನ್ನು ಕೊಡುವ ಪ್ರಸಂಗವನ್ನು ತಂದೊಡ್ಡಿವೆ. ಈ ರೀತಿಯ ಇತ್ತೀಚಿನ ಹುಯಿಲಿನಲ್ಲಿ ಸತ್ಯಾಂಶವು ಹೆಚ್ಚಿನ ಪ್ರಮಾಣದಲ್ಲಿದ್ದರೂ ಇದೇನು ಹೊರನಾಡಿಗರಿಗೆ ಅಪರಿಚಿತವಾದ ಪ್ರಮೇಯವಲ್ಲ. ೧೯೪೫ ರಲ್ಲಿಯೆ ಮುಂಬಯಿಯಲ್ಲಿ ಜರುಗಿದ ಎರಡನೆಯ ಹೊರನಾಡ ಕನ್ನಡಿಗರ ಸಮ್ಮೇಳನವನ್ನು ಉದ್ಘಾಟಿಸುತ್ತ ಜಗದ್ಗುರು ಶ್ರೀ. ಶಂಕರಾಚಾರ್ಯ, ಡಾ. ಕುರ್ತಕೋಟಿಯವರು ನಮ್ಮನ್ನು ನಿರಭಿಮಾನದಿಂದ ಮುಕ್ತರಾಗಿ ಸದಭಿಮಾನದಿಂದ ಮುಂದುವರೆಯುತ್ತ ದುರಭಿಮಾನದಿಂದ ದೂರ ಇರುವಂತೆ ಆಶೀರ್ವದಿಸಿದ್ದಾರೆ. ಅಂತೆಯೆ ಈವರೆಗಿನ ಸಂಘಟನೆಯ ಅಂಗಗಳಾದ ಸಮ್ಮೇಳನ, ಪ್ರದರ್ಶನ ಮೊದಲಾದ ಕಾರ್ಯಕಲಾಪಗಳ ಮತ್ತು ಚಟುವಟಿಕೆಗಳ ಶಕ್ತಿ ಸಾಲದು ಎಂಬ ದೃಷ್ಟಿಯಲ್ಲಿ ಒಂದು ಕಡೆಯಿಂದ ಮತ್ತು ಈ ಬಗೆಯ ಭಾಷಾತ್ಮಕ ಆಂದೋಲನ ಎನಿಸುವ ಸಂಘಟನೆಯು ಸಂಕುಚಿತ ಮತ್ತು ರಾಷ್ಟ್ರಭೇದಕ ಎಂಬ ಆಪಾದನೆಯು ನಿರಾಧಾರವಾದುದು, ತಪ್ಪು ಎಂದು ತೋರಿಸುವ ಗುರಿಯಲ್ಲಿ ಇನ್ನೊಂದು ಕಡೆಯಿಂದ ಹೊರನಾಡ ಕನ್ನಡಿಗರ ಸಂಸ್ಥೆಯು ಈಚೆಗೆ ಭಾಷಾಭಾರತೀ ಎಂಬ ಪರಸ್ಪರ (ಸಾಂಸ್ಕೃತಿಕ) ಪರಿಚಯದ ಭಾಷಣ ಮೇಳಗಳನ್ನು, ಆರೆಂಟು ಜನರ ತಂಡವೊಂದನ್ನು ತೆಗೆದುಕೊಂಡು ಅನ್ಯಭಾಷಿಗರ ಮಧ್ಯದಲ್ಲಿ ಸ್ನೇಹಶಿಬಿರಗಳನ್ನು ಜರುಗಿಸುವ ಕಾರ್ಯಕ್ರಮವನ್ನು ಆರಂಭಿಸಿದೆ.

ಹೀಗೆ ಹೊರನಾಡ ಕನ್ನಡಿಗರ ಹೊನಲು ಭಾರತೀಯ ಸಾಂಸ್ಕೃತಿಕ ಪ್ರವಾಹದಲ್ಲಿ ತನ್ನದೇ ಆದ ವೈಶಿಷ್ಟ್ಯದಿಂದ “ಸಂಗಮ”ವಾಗಿ ವಿಶ್ವಸಂಸ್ಕೃತಿಯ ಮಹಾಸಾಗರದೊಡನೆ ಮಿಲನ ಹೊಂದುತ್ತಲಿದೆ. ಇದರಲ್ಲಿ ಹೊರನಾಡ ಕನ್ನಡಿಗರಿಗೆ ಕನ್ನಡನಾಡಿನ ಜನಜೀವನವೇ ಸ್ಫೂರ್ತಿಯ ಸೆಲೆಯೆನ್ನಬಹುದು ಎಂಬಂತೆ ಭಾರತೀಯ ಸಂಪ್ರದಾಯವೇ ಅವರ ಆದರ್ಶವಾಗಿದೆ. ಕನ್ನಡ ನೆಲದಿಂದ ಪ್ರೇರಣೆಯನ್ನು ಪಡೆದು ಭಾರತೀಯರಾಗಿ ಪ್ರತಿಯೊಬ್ಬರು ಬೆಳೆಯಬೇಕು ಎಂದು ಅಖಿಲಭಾರತ ನೀತಿಯನ್ನು ಅಳವಡಿಸಿಕೊಂಡು ವಿಶ್ವಮಾನವನ ಸಾಧನೆಗಾಗಿ ಹೆಣಗಬೇಕು ಎಂಬುದೇ ಹೊರನಾಡ ಕನ್ನಡಿಗರ ಧ್ಯೇಯವಾಗಿದೆ. ಆ ದಾರಿಯಲ್ಲಿ ನಮ್ಮ ಹೆಜ್ಜೆ ಕಿರಿದಾದರೂ ನಮ್ಮ ಗುರಿ ಹಿರಿದಾದುದು, ದಾರಿ ಸರಿಯಾದುದು ಎಂಬುದೇ ಒಂದು ನಮ್ಮ ಸಮಾಧಾನವಾಗಿದೆ.








ನಮ್ಮ ಮುಂಬಯಿ ಪ್ರತಿನಿಧಿಯಿಂದ

# "ಹೋರಾಟದ ಆ ಜೀವನ ಧೈರ್ಯ-ಸಾಹಸಗಳಿಗೆ ಪ್ರೇರಕವಾಗಿದೆ"

— ಗುರುದತ್ತ

ಗುರುದತ್ತರ ಹೆಸರು ಚಿತ್ರೋದ್ಯಮದಲ್ಲಿ ಇಂದು ಮನೆಮಾತಾಗಿದೆ. ಅನೇಕ ರಜತೋತ್ಸವ ಚಿತ್ರಗಳನ್ನು ನಿರ್ಮಿಸಿದ ಕೀರ್ತಿ ಅವರಿಗಿದೆ. ಅವೆಲ್ಲ ಅವರಿಗೆ ತುಂಬ ಹಣವನ್ನು ಗಳಿಸಿಕೊಟ್ಟಿವೆ. ಅವರೀಗ ಚಿತ್ರನಿರ್ಮಾಪಕರು; ಸ್ಟೂಡಿಯೊ ಮಾಲೀಕರು. ಅವರ ಸ್ಟೂಡಿಯೋ ಒಳ್ಳೇ ಸುಸಜ್ಜಿತವಾಗಿದೆ. ಚಿತ್ರೋದ್ಯಮಕ್ಕೆ ಅವರ ಈ ಸ್ಟೂಡಿಯೋ ಒಳ್ಳೇ ಭರವಸೆಯಾಗಿದೆ. ಅವರದೇ ಆದ ಏಅರ ಕಂಡೀಶಂಡ ಕಚೇರಿ ಇದೆ.

ಅವರ ಜೀವನವೂ ಅರೇಬಿಯನ್ ನೈಟ್ಸ್ ಕತೆಯಂತೆ ತುಂಬ ಕುತೂಹಲಕಾರಿಯಾಗಿ, ರೋಮಾಂಚಕವಾಗಿದೆ. 'ಎಕ್ಸಟ್ರಾ ಅಸಿಸ್ಟಂಟ್' ಎಂದು ಜೀವನ ಪ್ರಾರಂಭಿಸಿದ ಗುರುದತ್ತ ಅಲ್ಪಾವಧಿಯಲ್ಲಿಯೇ ವೈಭವದ ಚರಮಸೀಮೆಯನ್ನು ಮುಟ್ಟಿರುವರು. ಇದು ಅಚ್ಚರಿಯೆನಿಸಿದರೂ ನಿಜ.

ಅಂಧೇರಿಯಲ್ಲಿಯ ಅವರ ಸ್ಟೂಡಿಯೋದಲ್ಲಿಯ ಸುಸಜ್ಜಿತವಾದ ಕಚೇರಿಯನ್ನು ನಾನು ಪ್ರವೇಶಿಸಿದಾಗ ಈ ನಿರ್ಮಾಪಕ, ದಿಗ್ದರ್ಶಕ, ನಟಮಹಾಶಯ ಫೈಲು—ಕಾಗದಗಳ ರಾಶಿಯ ಮಧ್ಯದಲ್ಲಿ ಸಿಲುಕಿದ್ದರು. ಅವರೀಗ ಕೈಗೆತ್ತಿಕೊಂಡಿರುವ ಚಿತ್ರದ ಹಸ್ತಪ್ರತಿ ಅವಲೋಕಿಸುತ್ತ ಆಗೀಗ ಸ್ಕೆಚ್ಚುಗಳನ್ನು ನೋಡುತ್ತಿದ್ದರು. ಅವರ ಕಾರ್ಯದಲ್ಲಿ ವ್ಯತ್ಯಯು ತರಬಾರದೆಂದು ನಾನು ಕೆಲ ನಿಮಿಷ ಹಾಗೇ ಕುಳಿತೆ. ಆದರೆ ನನ್ನ ಬರುವನ್ನು ಲಕ್ಷಿಸಿದ್ದ ಗುರುದತ್ತರು ಫೈಲುಗಳನ್ನೆಲ್ಲ ಬೇಗ ಮುಚ್ಚಿ ನಗುಮುಖದಿಂದ ನನ್ನತ್ತ ಹೊರಳಿದರು.

ಅವರು ತಮ್ಮ ಟೇಬಲ್ಲಿನ ಕೆಳಗಿದ್ದ ವಿದ್ಯುತ್ ಗುಂಡಿಯನ್ನು ಒತ್ತುವದೇ ತಡ ಎರಡು ಕಪ್ಪು ಬಿಸಿಬಿಸಿಯಾದ ಕಾಫಿಯು ನಮ್ಮೆದುರು ಬಂದಿತು. ನನ್ನ 'ಯಜಮಾನ'ನ ಈ ತ್ವರಿತ ರೀತಿಯ ಅತಿಥಿ ಸತ್ಕಾರಕ್ಕೆ ನಾನು ಮಾರುಹೋದೆ. ನಾನು ಕಾಫಿಯನ್ನು ಸವಿಯುತ್ತಿದ್ದಂತೆಯೇ ನನ್ನ ಉದ್ದೇಶವನ್ನು ವಿವರಿಸಿದೆ- 'ಕರ್ಮವೀರ' ದೀಪಾವಳಿ ಸಂಚಿಕೆಯ ಮುದ್ರಣ ಪ್ರಾರಂಭವಾಗಿರುವದರಿಂದ ನಿಮ್ಮನ್ನು ಅವಸರದಿಂದ ಕಾಣಬೇಕಾಯಿತು, ತೊಂದರೆ ಕೊಡಬೇಕಾಯಿತು, ಎಂದು ಹೇಳಿದೆ.

ಚಿತ್ರರಂಗದಲ್ಲಿಯ ತಮ್ಮ ನೆನಹುಗಳನ್ನು ಅವರು ಹೇಳಬೇಕೆಂದು ಕೇಳಿಕೊಂಡು ನಾನು ಆಲಿಸತೊಡಗಿದೆ. ಪೂರ್ಣ ಹದಿನೈದು ನಿಮಿಷಗಳವರೆಗೆ ಅವರು ತಮ್ಮ 'ನೆನಹು'ಗಳನ್ನು ತಿಳಿಸಿದರು.

'ಪ್ರತಿಯೊಬ್ಬ ಮನುಷ್ಯನ ಬಾಳಿನಲ್ಲಿ ಸಿಹಿ-ಕಹಿ ನೆನಹುಗಳಿದ್ದೇ ಇರುತ್ತವೆ. ಈ ಸಮೃದ್ಧ ಜೀವನದಲ್ಲಿ ಸವಿನೆನಹುಗಳು ಬೇಗ ಮರವೆಯಾಗುವವು. ಅದೇ ಕಹಿಯಾದ ಅಸಂತೋಷದ ಘಟನೆಗಳು ಕೊನೆವರೆಗೂ ಕಾಡುವವು. ಅವನ್ನು ಮರೆಯುವುದು ಕಠಿಣವಾಗುವುದು. ಕೆಲವೊಮ್ಮೆ ಅಂಥ ವಿಚಾರಗಳು ಸುಳಿದರೆ ಸಾಕು ಮನುಷ್ಯ ವಿಷಣ್ಣನಾಗುತ್ತಾನೆ. ಆದರೆ ನನ್ನ ಮೊದಲಿನ ಹೋರಾಟವನ್ನು ನೆನೆಸಿದಂತೆ ಹೆಚ್ಚು ಧೈರ್ಯ ದಿಟ್ಟತನಗಳು ಬಂದು ಎಂತಹ ಅಡೆತಡೆಗಳನ್ನೆದುರಿಸಿಯೂ ಮುನ್ನುಗ್ಗುವಂತೆ ಮಾಡಿ ಹೆಚ್ಚಿನ ಉನ್ನತಿ ಸಾಧ್ಯವಾಗುವುದು.

ನಾನು ಚಿತ್ರರಂಗದಲ್ಲಿ ಪ್ರವೇಶಿಸಿದ್ದು ೧೯೪೩-೪೪ ರಲ್ಲಿ. ನಾನಾಗ ನೃತ್ಯಕಲೆಗಳ ಆರಾಧಕ

ಮಾತ್ರ ಆಗಿದ್ದೆ. ಆ ಕಾಲದಲ್ಲಿ ಪ್ರಭಾತ್ ಸ್ಟೂಡಿಯೋ ಚಿತ್ರೋದ್ಯಮದಲ್ಲಿ ಹೊಂಗಳಸವಾಗಿತ್ತು. ಶಾಂತಾರಾಮ ಈ ಹಿರಿಮೆಯ ಸಂಕೇತವಾಗಿದ್ದರು. ನಾನು ನಾಯಕನಾಗಬೇಕೆಂದಿದ್ದೆ. ಆದರೆ ಎಕ್ಸ್‌ಟ್ರಾ ಅಸಿಸ್ಟಂಟ್‌ನಾದೆ. ಇದರಿಂದ ಎದೆಗುಂದದೇ ಮುನ್ನುಗ್ಗಿದೆ. ಬೇಗನೆ ಪಿ. ಎಲ್. ಸಂತೋಷಿ ಮತ್ತು ಜಾಗೀರದಾರ ಅವರೊಂದಿಗೆ ಕೆಲಸ ಮಾಡಲು ಅವಕಾಶ ದೊರೆಯಿತು. ನಾನು ಮೂರುವರುಷ 'ಪ್ರಭಾತ'ದಲ್ಲಿದ್ದೆ. ಚಲಚ್ಚಿತ್ರ ಕಲೆಯ ಪಾಠವು ನನಗೆ ದೊರೆತುದು ಇಲ್ಲಿಯೆ.

ಮುಂದೆ ನನಗೆ 'ಪುಣೆ' ಬೇಸರ ತಂದಿತು. ನನ್ನ ಕನಸು ಆಕಾಂಕ್ಷೆಗಳ ಪೂರ್ತಿಗೆ ಅದು ಸಾಲದೆಂದೆನಿಸಿತು. ಹೆಚ್ಚಿನ ಹವ್ಯಾಸವಿರಿಸಿಕೊಂಡು ಮುಂಬಯಿಗೆ ಬಂದೆ. ಫೇಮಸ್ ಪಿಕ್ಚರ್ಸ ಸ್ಟೂಡಿಯೋದಲ್ಲಿ ಬಾಬುರಾವ ಪೈ ಅವರೊಂದಿಗೆ ಕೆಲಸಕ್ಕೆ ಸೇರಿದೆ. ಇಲ್ಲಿಯೇ ಅಮಿಯಾ ಚಕ್ರವರ್ತಿ, ಗ್ಯಾನಮುಕರ್ಜಿ ಮೊದಲಾದ ಬಂಗಾಲಿ ದಿಗ್ದರ್ಶಕ ತಂತ್ರಜ್ಞರೊಂದಿಗೆ ಸೇರಿ ಕೆಲಸಮಾಡಲು ಅವಕಾಶ ದೊರಕಿತು. ಅವರ ನುರಿತ ಮಾರ್ಗದರ್ಶನದಲ್ಲಿ ನನ್ನ 'ಜ್ಞಾನ'ವನ್ನು ಸುಧಾರಿಸಿಕೊಂಡೆ. ನಾನು ಯಾವಾಗಲೂ ನಿಷ್ಠ ವಿದ್ಯಾರ್ಥಿ. ನನ್ನ ವಿದ್ವಾಂಸ ಗುರುಗಳು ತಮ್ಮೆಲ್ಲ ವಿದ್ಯೆಯನ್ನು ನನ್ನಲ್ಲಿ ತುಂಬಲು ಹಿಂದೆಮುಂದೆ ನೋಡಲಿಲ್ಲ. ನನ್ನ ಇಂದಿನ ಈ ಯಶಸ್ವೀಜೀವನದ ಶ್ರೇಯಸ್ಸು ಈ ಮಹನೀಯರಿಗೆ ಸೇರಿದ್ದು.

ನನ್ನ ಚಿತ್ರಗಳನ್ನು ನಿರ್ಮಿಸುವ ಕನಸನ್ನು ನಾನು ಕಾಣತೊಡಗಿದೆ. ಆದರೆ ಅದು ನನಸಾಗಲು ಇನ್ನೂ ಕಾಲ ದೂರವಿತ್ತು. ನನಗೆ ಮೊದಲು ದೊರೆತ ಒಳ್ಳೇ ಸುಸಂಧಿ 'ಬಾಝಿ' ಚಿತ್ರದಲ್ಲಿ. ಅದೇ ನಾನು ದಿಗ್ದರ್ಶಿಸಿದ ಮೊದಲ ಚಿತ್ರ. ಅದು ಪ್ರದರ್ಶನಕ್ಕೆ ಬಂದ ದಿನದ ಸಂದರ್ಭವಿನ್ನೂ ನನಗೆ ನೆನಪಿದೆ. ಅದರ ಹಿಂದಿನ ದಿನದಿಂದ ಇಡೀ ಎರಡು ದಿನ ನಾನು ನನ್ನ ಕೋಣೆಯಲ್ಲಿ ಏಕಾಕಿಯಾಗಿ ಕುಳಿತು ಕಳೆದೆ. ಈ ಚಿತ್ರ ಬಿಡುಗಡೆಯಾದ ನಂತರ ನನ್ನ ಸ್ನೇಹಿತನೊಬ್ಬ ಬಂದು ಅದು ತುಂಬ ಯಶಸ್ವಿಯಾಗಿದೆಯೆಂದೂ ಹಣವನ್ನು ಗಳಿಸುವದೆಂದೂ ಹೇಳಿದಾಗ ನಾನು ದೇವರಿಗೆ ಭಕ್ತಿಪೂರ್ವಕವಾಗಿ ಪ್ರಣಾಮಗೈದು ಪ್ರಾರ್ಥನೆ ಸಲ್ಲಿಸಿದೆ.

ನಂತರ 'ಆರ್‌ಪಾರ್' ಚಿತ್ರ ಬಂದಿತು; ಅದರೊಂದಿಗೆ ನಿರ್ಮಾಪಕನಾಗುವ ನನ್ನ ಆಶೆಯೂ ಕೈಗೂಡಿತು. ಇದರ ನಿರ್ಮಾಣ ದಿಗ್ದರ್ಶನಗಳ ಹೊಣೆ ವಹಿಸುವದರೊಂದಿಗೆ ನಾಯಕಪಾತ್ರವನ್ನು ನಿರ್ವಹಿಸುವದಾಗಿ ನಾನು ನಿರ್ಧರಿಸಿದೆ. ಚಿತ್ರೋದ್ಯಮದಲ್ಲಿಯ ಪ್ರತಿಯೊಬ್ಬರೂ ನನ್ನ ಈ ವಿಚಾರವನ್ನು ವಿರೋಧಿಸಿದರು. ನನ್ನ ಅತ್ಯಂತ ನಿಕಟ ಸ್ನೇಹಿತರು ಕೂಡ ಇದು ''ಅಪಾಯಕರವಾದ ಸಾಹಸ''ವೆಂದರು. ಆದರೆ ನಾನು ನನ್ನ ನಿರ್ಣಯಕ್ಕೆ ದೃಢವಾಗಿ ಅಂಟಿಕೊಂಡುಳಿದೆ. ಪರಾಕಾಷ್ಠೆಯ ಸನ್ನಿವೇಶಗಳನ್ನು ಚಿತ್ರಿಸಬೇಕಾಗಿದ್ದಿತು. ಎತ್ತರದ ಮೇಲಿಂದ ಜಿಗಿದು ಬೆಂಬತ್ತಬೇಕಾದ ದೃಶ್ಯದಲ್ಲಿ 'ಬದಲಿ' ನಟನ ಸಹಾಯ ಪಡೆಯಬೇಕೆಂದು ನನಗೆ ಹೇಳಲಾಯಿತು. ಆದರೆ ಈ ರೀತಿ ವಿಚಾರ ಮಾಡುವದು ಸಹ ನನ್ನ ಮನಸ್ಸಿಗೆ ಬರಲಿಲ್ಲ. ನನ್ನ ಚಿತ್ರದಲ್ಲಿಯ ನಾಯಿಕೆಯೂ ನನ್ನ ಧೈರ್ಯದಲ್ಲಿ ಪಾಲುಗೊಂಡಳು. ಅದರ ಚಿತ್ರಣ ಮುಗಿಯಿತು. ಆದರೆ ನಾವಿಬ್ಬರೂ ತೀವ್ರ ಗಾಯಗೊಂಡೆವು. ಈ ಅಪಾಯಕರ ಸಾಹಸವನ್ನು ನಾನು ಮಾಡಿದರೂ ಚಿತ್ರದಲ್ಲಿಯ ನನ್ನ ಪಾತ್ರಕ್ಕೆ ಜೀವಕಳೆಯನ್ನು ತುಂಬಲು ಸಮರ್ಥನಾಗಿದ್ದೆ.

ಅಲ್ಲದೆ ಈ ಚಿತ್ರದಿಂದ ಭಾರತೀಯ ಚಿತ್ರಗಳಲ್ಲಿಯ ಸಂಗೀತದ ಒಲವನ್ನೂ ನಾನು ಬದಲಿಸಿದೆ. ಗೀತಾರಾಯ (ಈಗ ನನ್ನ ಪತ್ನಿ ಗೀತಾದತ್ತ) ಬಹು ಮಂದಗತಿಯ ಹಾಡುಗಳಿಗೆ ಮಾತ್ರ ಎಂದು ಹೆಸರಾಗಿದ್ದಳು. ಆದರೆ ನಾನು ತೀವ್ರಗತಿಯ ರಾಕ್ ಎನ್ ರೋಲ್ ಬಗೆಯ ಸಂಗೀತವನ್ನು ಇದರಲ್ಲಿ ಅನುವುಗೊಳಿಸಿದೆ. ಈ ಚಿತ್ರ ಹೊರಬಂದಾಗ ಪತ್ರಿಕೆಗಳು ಈ ಹೊಸ ಬಗೆಯನ್ನು ತೀವ್ರ ಟೀಕಿಸಿದರೂ ಜನರ ಪ್ರತಿಕ್ರಿಯೆ ಬೇರೆಯೇ ಆಗಿತ್ತು. ಅದು ಒಳ್ಳೆ ಯಶಸ್ವಿ ಚಿತ್ರವೆನಿಸಿ ಮುಂಬಯಿಯಲ್ಲಿ ರಜತೋತ್ಸವ ಆಚರಿಸಿತು.

ಮುಂದಿನ ಚಿತ್ರ 'ಪ್ಯಾಸಾ'ದಲ್ಲಿ ನಾನು ಮತ್ತೆ ಕೆಲ ಬದಲಾವಣೆಗಳನ್ನು ಮಾಡಿದೆ. ಅದು ಸಂಪೂರ್ಣ ಸಾಮಾಜಿಕ ಹಿನ್ನೆಲೆಯದಾಗಿತ್ತಲ್ಲದೆ ಸಹೀರರ ೯ ಗಜಲ್‌ಗಳು ಅದರಲ್ಲಿದ್ದವು. ಈ ಚಿತ್ರದಲ್ಲಿಯ ನಾಯಕಿಯ ಪಾತ್ರಕ್ಕೆ ಯೋಗ್ಯ ಯುವತಿಯನ್ನು ನಾನು ಅರಸುತ್ತಿದ್ದೆ. ಹೈದರಾಬಾದದ ನನ್ನ ಹಂಚಿಕೆಗಾರ ಸ್ನೇಹಿತರೊಬ್ಬರು ವಹೀದಾ ರಹಮಾನಳ ಹೆಸರನ್ನು ಸೂಚಿಸಿದರು. ಚಿತ್ರರಂಗಕ್ಕೆ ಅವಳು ಸರಿಹೋಗಬಹುದೇ ಎಂದು ಪರಿಶೀಲನೆ ನಡೆಸಿದ ನಂತರ ಮುಖ್ಯ ಪಾತ್ರಕ್ಕೆ ಅವಳನ್ನು ಆರಿಸಲಾಯಿತು. ನನ್ನ ನಿರ್ಮಾಪಕರು ಅವಳ ಬಗೆಗೆ ಸಂದೇಹಗೊಂಡಿದ್ದರು. ಆದರೆ ಇಂದವಳು ಲಕ್ಷಾವಧಿ ಜನರ ಮನ ಸೂರೆಗೊಂಡಿದ್ದು ನನ್ನ ಆಯ್ಕೆ ಸರಿ ಎಂದು ತೋರಿಸಿದ್ದಾಳೆ.

ಈ ಎಲ್ಲ ಯಶಸ್ಸಿನಿಂದ ನನಗಾದ ಸಂತೋಷ ಅಷ್ಟಿಷ್ಟಲ್ಲ. ಒಂದು ರೀತಿಯ ಅಭಿಮಾನವೂ ಮೂಡಿತು. ಭಾರತೀಯ ಚಿತ್ರೋದ್ಯಮದ ಇತಿಹಾಸದಲ್ಲಿಯೇ ಮೊದಲ ಸಿನೇಮಾಸ್ಕೋಪ ಚಿತ್ರವನ್ನು ತಯಾರಿಸಲು ಮುಂದಾದೆ. ನನ್ನೆಲ್ಲ ಸಂಪನ್ಮೂಲಗಳನ್ನು ಅದರಲ್ಲಿ ತೊಡಗಿಸಿದೆ. ನನ್ನೆಲ್ಲ ಜಾಣ್ಮೆಯನ್ನು ಉಪಯೋಗಿಸಿದೆ. ಆದರೆ ದುರ್ದೈವದಿಂದ 'ಕಾಗಜ ಕೆ ಫೂಲ' ಹೆಸರು ತಂದರೂ ಹಣ ತರಲಿಲ್ಲ. ಆದರೆ ಈ ಆರ್ಥಿಕ ಹಾನಿಯಿಂದ ನಾನು ಎದೆಗುಂದಲಿಲ್ಲ.

'ಚೌದವಿ ಕಾ ಚಾಂದ'ದ ಕಥೆ ಸುಮಾರು ಹತ್ತು ವರುಷಗಳಿಂದಲೂ ನನ್ನ ಬಳಿ ಇತ್ತು. ಆದರೆ ಅದರ ಚಿತ್ರೀಕರಣಕ್ಕೆ ಇಳಿಯಬೇಕೆಂದಾಗೆಲ್ಲ ಮುಸ್ಲಿಂ ಸಾಮಾಜಿಕ ಕಥೆಗಳ ಕಾಲವೀಗ ಮುಗಿದು ಹೋಯಿತು ಎಂದು ನನ್ನ ಸ್ನೇಹಿತರು ನಿರುತ್ಸಾಹಗೊಳಿಸುತ್ತಿದ್ದರು. ಹಂಚಿಕೆಗಾರರಂತೂ ಈ ವಿಷಯದಿಂದ ದೂರ ಉಳಿಯುತ್ತಿದ್ದರು.

ಆದರೆ ನಾನು ಒಂದುದಿನ ತೀರ ಆಕಸ್ಮಿಕವಾಗಿ ಅದನ್ನು ಕೈಗೆತ್ತಿಕೊಂಡು ನಂತರ ನನ್ನ ಸ್ನೇಹಿತರಿಗೆ ತಿಳಿಸಿದಾಗ ಅವರು ದಿಗಿಲುಗೊಂಡರು. 'ಕಾಗಜ ಕಾ ಫೂಲ' ಚಿತ್ರದಿಂದ ಹಾನಿ ಸಂಭವಿಸಿದ ನಂತರವೂ ನಾನು ಹೀಗೆ ನಿರ್ಣಯಿಸಿದ್ದರಿಂದ ಇವನಿಗೆ ಹುಚ್ಚು ಹಿಡಿಯಿತೋ ಎಂದು ಅವರಂದುಕೊಂಡಿರಬೇಕು. ನಾನು ಇದಾವುದನ್ನೂ ಲಕ್ಷಿಸದೆ ಕಾರ್ಯದಲ್ಲಿ ತೊಡಗಿಬಿಟ್ಟಿದ್ದೆ. ಈ ಚಿತ್ರ ಪ್ರದರ್ಶನಕ್ಕೆ ಬಂದಾಗ ಎಲ್ಲರೂ ಮೂಕವಿಸ್ಮಿತರಾದರು. ಈಗ ಅನೇಕ ನಿರ್ಮಾಪಕರು ಮುಸ್ಲಿಂ ಸಾಮಾಜಿಕ ಚಿತ್ರಗಳನ್ನು ನಿರ್ಮಿಸತೊಡಗಿದ್ದಾರೆ. ಈ ಚಿತ್ರವು ಆರ್ಥಿಕ ದೃಷ್ಟಿಯಿಂದ ಬಹಳ ಯಶಸ್ವಿ ಆಯಿತು. ನನ್ನ ಹಿಂದಿನ ಹಾನಿಯೆಲ್ಲ ತುಂಬಿಕೊಂಡು ಬಂದಿತು.

ಈಗ ನಾನು ವಿಸ್ತಾರವಾದ ಪೇಟೆಗಳಿಗಾಗಿ ಮತ್ತು ಅಂತಾರಾಷ್ಟ್ರೀಯ ಗಳಿಕೆಯ ಮೌಲ್ಯದ ಚಿತ್ರಗಳ ನಿರ್ಮಾಣ ಮಾಡಬೇಕೆಂದು ವಿಚಾರಿಸತೊಡಗಿದ್ದೇನೆ. ಕಳೆದ ಐದಾರು ವರುಷಗಳ ನನ್ನ ವಿದೇಶಯಾತ್ರೆಗಳಲ್ಲಿ ಹಿಂದಿ ಚಿತ್ರಗಳಿಗಾಗಿ ಇರುವ ವಿದೇಶಿ ಪೇಟೆಯ ಸಂಬಂಧದಲ್ಲಿ ವಿವರವಾಗಿ ಅಭ್ಯಸಿಸಿರುವೆ. ಅಂತೇ ವ್ಯಾಪಾರಿ ಯಶಸ್ಸು ತರುವ ಚಿತ್ರ ನಿರ್ಮಿಸುವ ವಿಚಾರ ಮಾಡುತ್ತಿರುವೆ. ಭಾರತೀಯ ಚಿತ್ರಗಳ ಪೇಟೆಗಳೆನಿಸಿದ ಪೂರ್ವ ಆಫ್ರಿಕಾ, ಆಗ್ನೇಯಏಶಿಯಾ ಮಧ್ಯಪೂರ್ವ ರಾಷ್ಟ್ರಗಳು, ವೆಸ್ಟ ಇಂಡೀಜಗಳಲ್ಲಿ ಯಾವ ಬಗೆಯ ಚಿತ್ರ ಯಶಸ್ವಿಯಾಗುವದೆಂಬುದನ್ನು ನಿರೀಕ್ಷಿಸಿರುವೆ. ಅಂತೇ ಈಗ ಅರೇಬಿಯನ್ ನೈಟ್ಸ ಕಥೆಗಳನ್ನಾಧರಿಸಿ ವರ್ಣಚಿತ್ರವೊಂದನ್ನು ಸಿದ್ಧಪಡಿಸಲು ನಿರ್ಧರಿಸಿರುವೆ. ಈ ಕಥಾವಸ್ತು ನಮ್ಮ ಈ ಪೇಟೆಗಲ್ಲದೆ ಮುಂದರಿದ ಪಾಶ್ಚಿಮಾತ್ಯರಿಗೂ ತುಂಬ ಹಿಡಿಸುವದೆಂಬ ವಿಶ್ವಾಸ ನನಗಿದೆ.

'ಬಾಝಿ' ಚಿತ್ರದ ಚಿತ್ರಣದ ಸಮಯದಲ್ಲಿ ಖ್ಯಾತ ಹಿನ್ನೆಲೆಗಾಯಕಿ ಗೀತಾರಾಯಳ ಭೆಟ್ಟಿ ನನಗಾಯಿತು. ನನ್ನ ಎಲ್ಲ ಚಿತ್ರಗಳಲ್ಲಿ ಅವಳೇ ಹಾಡಿರುವಳು. ನಮ್ಮಲ್ಲಿ ಪರಸ್ಪರ ಅನುರಾಗ ಮೂಡಿ ನಾವು ಸತಿಪತಿಗಳಾದೆವು. ಗೀತಾ ನನ್ನ ಜೀವನದಲ್ಲಿ ಪ್ರವೇಶಿಸಿದಂದಿನಿಂದ ನಾನು ಯಾವಾಗಲೂ ಸುಖಿಯಾಗಿರುವೆ. ಆ ಮಳೆಗಾಲದ ದಿನ, ನನ್ನ ಚಿತ್ರವೊಂದಕ್ಕಾಗಿ ಅವಳು ಹಾಡೊಂದರ ರಿಹರ್ಸಲ್ ಮಾಡುತ್ತಿದ್ದಾಗ ನಾವು ಜೀವನಸಂಗಾತಿಗಳಾಗಲು ಮೊದಲು ಬಾರಿಗೆ ವಿಚಾರಿಸಿದ್ದು ನೆನಪಾದಾಗ ನನ್ನ ಮನವು ಆ ಸವಿ ನೆನಹುಗಳಿಂದ ಉಲ್ಲಸಿತವಾಗುವುದು.

ಇಂದು ನಾನು ಮೂರು ಮಕ್ಕಳ-ತರುಣ. ಅರುಣ, ನೀನಾ-ತಂದೆಯಾಗಿರುವೆ.'

ಈ ಹೊತ್ತಿಗಾಗಲೆ ಅವರು ದಣಿದಂತೆ ಕಂಡಿತು. ಆದರೂ ವಹೀದಾ ರಹಮಾನಳೊಂದಿಗೆ ಇರುವ ಅವರ ಸಂಬಂಧದ ಸುದ್ದಿಯ ಬಗ್ಗೆ ನೇರವಾಗಿ ಅಲ್ಲದಿದ್ದರೂ ಬೇರೆ ರೀತಿಯಲ್ಲಿ ಒಂದು ಪ್ರಶ್ನೆ ಕೇಳಿದೆ. ಅದಕ್ಕವರು ಉತ್ತರಿಸುತ್ತ 'ನನ್ನ ಮೂರು ಚಿತ್ರಗಳಲ್ಲಿ ಅಭಿನಯಿಸುವ ಕರಾರು ಇತ್ತು. ಈಗ ಈ ಕರಾರು ಮುಗಿದಿದೆ. ಇನ್ನು ಅವರು ಅಭಿನಯಿಸಬಹುದು ಇಲ್ಲವೇ ಅಭಿನಯಿಸಲಿಕ್ಕಿಲ್ಲ ಆದರೆ ನಮ್ಮಲ್ಲಿ ಯಾವದೇ ಬಗೆಯ ಭಿನ್ನಾಭಿಪ್ರಾಯಗಳಿಲ್ಲ' ಎಂದು ಸ್ಪಷ್ಟಪಡಿಸಿದರು. ಈ ಪ್ರಶ್ನೆಗೆ ಉತ್ತರಿಸುವಾಗ ಅವರಲ್ಲಿ ಯಾವದೇ ಉದ್ವಿಗ್ನತೆ ತೋರಿಬರಲಿಲ್ಲ. ಅವರಿಂದ ನಾನು ಬೀಳ್ಕೊಂಡು ಹೊರಟಾಗ ಈ ಮಹಾವ್ಯಕ್ತಿಯ ಬಗ್ಗೆ ನನ್ನಲ್ಲಿ ಆದರವೇ ಮೂಡಿತು.

# “ಸಿನೇಮಾ ಎಂದರೆ ಗೊಂಬೆಯಾಟ ಎಂದುಕೊಂಡಿದ್ದೆ”

ಲೇಖಕಿ :
ಶ್ರೀಮತಿ ಆದವಾನಿ ಲಕ್ಷ್ಮಿದೇವಿ



**ಕನ್ನಡ ನಾಯಕಿನಟಿಯ ಚಿತ್ರರಂಗದ ಕುತೂಹಲಕಾರಿ ಸ್ಮೃತಿಗಳು**



ಶ್ರೀಮತಿ ಆದವಾನಿ ಲಕ್ಷ್ಮಿದೇವಿ

**ವ**ಯಸ್ಸಿನಲ್ಲಿ ಚಿಕ್ಕವಳಾದರೂ ಪ್ರತಿಭೆಯಲ್ಲಿ ದೊಡ್ಡವಳೆಂದು ಕೆಲವು ಹಿರಿಯ ವ್ಯಕ್ತಿಗಳು ನನ್ನ ಪಾತ್ರಾಭಿನಯ ನೋಡಿ ಮೆಚ್ಚಿ ನುಡಿದಿದ್ದಾರೆ.

ಆದರೆ ನನಗೆ ಈ ಬಗೆಯ ಮಾತುಗಳಿಂದ ಬರಿಯ ಸೋಜಿಗವೇ ಆಗಿದೆ. ಏಕೆಂದರೆ ನಾನು ಅಭಿನಯಿಸುತ್ತಿದ್ದ ಮಂಗಳೂರು ನಾಟಕ ಕಂಪನಿಯಿಂದ ಮೊದಲಾದ ಈ ಪ್ರೋತ್ಸಾಹ ಈಗಂತೂ ವಿಪರೀತವಾಗಿದೆ. ಇದಕ್ಕೆ ಕಲಾಭಿಮಾನಿಗಳಾದ ಕನ್ನಡಿಗರ ವಿಶಾಲ ಹೃದಯುವೇ ಕಾರಣ. ನನ್ನದೇನೂ ಹಿರಿಮೆ ಇಲ್ಲ.

‘ಉಷಾಪರಿಣಯು’ ನಾಟಕದಲ್ಲಿ ನಾನು ಅಭಿನಯಿಸುತ್ತಿದ್ದುದನ್ನು ಅಕ್ಕ ಪಂಢರೀಬಾಯಿಯುವರು ಅನೇಕಬಾರಿ ನೋಡಿದ್ದರು. ಅವರಿಗೆ ನನ್ನ ಮೇಲೆ ವಿಶೇಷ ಪ್ರೀತಿಯುಂಟಾಯಿತು. ನನ್ನನ್ನು ಮದರಾಸಿಗೆ ಕರೆಸಲು ಯೋಚಿಸಿದರು.

ಚಿತ್ರರಂಗದ ಅತ್ತೆ ರಮಾದೇವಿಯುವರ ತಂಗಿ ನಾನೆಂದ ಮೇಲೆ ಪಂಢರೀಬಾಯಿಯುವರಿಗೆ ಅಮಿತಾನಂದವಾಯಿತು. ಅವರು ನನ್ನನ್ನು ಕೂಡಲೇ ಕರೆಸಲು ನಮ್ಮ ಅಕ್ಕನವರನ್ನು ಕೋರಿದರು.

‘ಸಿನಿಮಾ’ ಎಂದರೆ ಗೊಂಬೆಯಾಟ ಎಂದುಕೊಂಡಿದ್ದ ನಾನು ಮಾಮೂಲಿ ನಾಟಕದ ಸಂಪ್ರದಾಯುದಂತೆ ಸಿನಿಮಾದಲ್ಲೂ ವರ್ತಿಸತೊಡಗಿದೆ. ಅಂದರೆ ನನಗೆ ನಾಟಕದ ಸರ್ವೀಸು ಬಹಳವಾಗಿ ಆಗಿದ್ದುದರಿಂದ ಸಿನಿಮಾ ಅಭಿನಯು ಯಾವ ‘ಮಹಾ’ ಎಂಬ ಅಹಂಕಾರವಿತ್ತು. ಆದ್ದರಿಂದ ಕೊಟ್ಟ ಸಂಭಾಷಣೆಗಳನ್ನು ‘ಮೈಕ್’ ಮುಂದೆ ಗಟ್ಟಿಯಾಗಿ ಅರಚುತ್ತಿದ್ದೆ. ಅದನ್ನು ಕಂಡು ಪಂಢರೀಬಾಯಿಯುವರು ನನಗೆ ಚಿತ್ರರಂಗದಲ್ಲಿ ಸಂಭಾಷಣೆ ಮಾಡುವ ರೀತಿ, ಅಭಿನಯಿಸುವ ಬಗೆ ಈ ಮೊದಲಾದವುಗಳ ಮೊದಲ ಶಿಕ್ಷಣವಿತ್ತು ಜಗನ್ನಾಥ ಪ್ರೊಡ. ಕ್ಷನ್ಸ್ ಅವರ “ಭಕ್ತವಿಜಯ”ದಲ್ಲಿ ಮೊದಲು

ಬಾರಿಗೆ ಅಭಿನಯಿಸುವಂತೆ ಮಾಡಿದರು.

ಇದು ವರೆಗೆ ಸುಮಾರು ಮೂವತ್ತು ಚಿತ್ರಗಳಲ್ಲಿ ನಾನು ಅಭಿನಯಿಸಿದ್ದರೂ ಇಂದಿಗೂ ನನ್ನಲ್ಲಿ ಬಲವಾಗಿ ಬೇರೂರಿರುವ ಅಂಜುಕುಳಿತನ ಇನ್ನೂ ಹೋಗಿಲ್ಲ.

ನನಗೆ ಡೈರೆಕ್ಟರ್‌ಗಳ ಸಹಾನುಭೂತಿ ಅತಿಮುಖ್ಯ. ಸಿಡುಕು ಮೋರೆಯ ಡೈರೆಕ್ಟರ್‌ಗಳ ಕೈಕೆಳಗೆ ನಾನು ಅಭಿನಯಿಸಲಾರೆ. ಡೈರೆಕ್ಟರುಗಳು ಹಸನ್ಮುಖಿಗಳಾಗಿರಬೇಕು. ವಿನೋದಪ್ರಿಯರಾಗಿರಬೇಕು.

ನಾನು ನಮ್ಮಕ್ಕ ರಮಾದೇವಿ "ಮಧುರೈ ವೀರನ್" ಚಿತ್ರದಲ್ಲಿ ಡಬ್ಬಿಂಗ ಮಾತಾಡಲು ಅರುಣಾ ಫಿಲ್ಮ್ಸ್‌ಗೆ ಹೋಗಿದ್ದೆವು. ಆಗ ಭಾನುಮತಿಯೊಂದಿಗೆ ನಟಿಸಲು ಬರಬೇಕಾಗಿದ್ದ ನಟಿ ಬಾರದೆ ನಿರ್ದೇಶಕರಿಗೆ ತುಂಬ ಬೇಸರವಾಗಿತ್ತು. ನಟಿ ಭಾನುಮತಿ ನನ್ನನ್ನು ನೋಡಿ ತನ್ನೊಂದಿಗೆ ಅಭಿನಯಿಸುವ ಸದವಕಾಶವನ್ನು ಕಲ್ಪಿಸಿಕೊಟ್ಟಳು. ಇದರಿಂದಾಗಿ ನಾನು "ಬೊಮ್ಮಲಪೆಂಡ್ಲಿ" ತೆಲುಗು ಚಿತ್ರದಲ್ಲಿ ಅಭಿನಯಿಸಿದೆ.

ಹಾಸ್ಯಪ್ರಿಯ ಟಿ. ಪ್ರಕಾಶರಾಯರ ದಿಗ್ದರ್ಶನದಲ್ಲಿ 'ರೇಣುಕಾ ಮಹಾತ್ಮೆ' (ತೆಲುಗು) ಚಿತ್ರದಲ್ಲಿ ಹಾಸ್ಯಪಾತ್ರವನ್ನು ನನ್ನ ಎಣಿಕೆ ಮೀರಿದಷ್ಟು ಚಾತುರ್ಯದಿಂದ ಅಭಿನಯಿಸಿದೆ. ಪ್ರತಿಯೊಂದು ಸಂಭಾಷಣೆಯನ್ನೂ ಒಂದೇ 'ಟೇಕ್'ನಲ್ಲಿ 'ಓ. ಕೆ' ಮಾಡುತ್ತಿದ್ದೆ.

ಅದೇ ಸಮಯದಲ್ಲಿ ನನ್ನನ್ನು ಭಾಸ್ಕರ್ ಪ್ರೊಡಕ್ಷನ್ಸ್ ಅವರು ಮನೋರಮಾ ಚಿತ್ರದ ಎರಡನೆ ನಾಯಕಿ ಪಾತ್ರಕ್ಕೆ ಆರಿಸಿಕೊಂಡರು. ಅವರ ಚಿತ್ರದ ಚಿತ್ರಣವು ಆರಂಭವಾಯಿತು. ನಾನು ಅಲ್ಲಿನ ವಾತಾವರಣವನ್ನು ಕಂಡು ಅರ್ಧ ಇಳಿದುಹೋದೆ.

ಎಲ್ಲರೂ 'ಗುಡುಂ' ಎಂದೇ ಇರುತ್ತಿದ್ದರು ಈ ಗಂಭೀರ ವಾತಾವರಣದಲ್ಲಿ ನನ್ನದು ಒಂದೊಂದು ಸಂಭಾಷಣೆಗೂ ೮-೯ 'ಟೇಕ್'ಗಳಾಗಲು ಮೊದಲಾಯಿತು. ನನ್ನ ಈ 'ಫಿಲ್ಮ್ ಭಕ್ಷಣ' ಎಲ್ಲರಿಗೂ ಬೇಸರ ತರಿಸುವಂತಾಯಿತು.

ಆದರೆ ದ್ವಿತೀಯಾರ್ಧದ ಮೇಲೆ ವಾತಾವರಣ ತಿಳಿಯಾಗತೊಡಗಿದ್ದರಿಂದ ಒಂದೊಂದೇ 'ಟೇಕ್' 'ಓಕೆ' ಯಾಗತೊಡಗಿತು.

ನನಗೆ ಡೈರೆಕ್ಟರ್ ಪ್ರೋತ್ಸಾಹ ಚೆನ್ನಾಗಿ ಸಿಕ್ಕರೆ ಎಂಥಾ ಪಾತ್ರವನ್ನಾದರೂ ನಿರ್ವಹಿಸಬಲ್ಲೆ ಎಂಬ ಧೈರ್ಯ ಇತ್ತೀಚೆಗೆ ಬಂದಿದೆ. ತೆಲುಗು "ಕುಲದೈವಂ" ಚಿತ್ರದಲ್ಲಿ ಖಳನಾಯಕಿಯಾಗಿ ಅಭಿನಯಿಸಿದ್ದರೂ ಖಳನಾಯಕಿಯ ಪಾತ್ರನೆಂದರೆ ನಾನು ಒಪ್ಪಿಕೊಳ್ಳುತ್ತಿರಲಿಲ್ಲ, ಆದರೆ ಜಿ. ವಿ. ಅಯ್ಯರ್ ಅವರು ತಮ್ಮ 'ಭೂದಾನ' ಚಿತ್ರದಲ್ಲಿ ನನಗೇ ಆಶ್ಚರ್ಯವಾಗುವಂತೆ ಖಳನಾಯಕಿಯ ಪಾತ್ರವನ್ನು ನಿರ್ವಹಿಸುವಂತೆ ಮಾಡಿದರು. ನಾನು ನನಗೊಪ್ಪುವ ಮೃದು ಪಾತ್ರನೆಂದು ತಿಳಿದಿದ್ದರೆ ಅವರು ಮಾಡಿಸಿದ್ದು 'ಅಬ್ಬಾ' ಗಯ್ಯಾಳಿಯ ಪಾತ್ರ.

ಈಗ ನಾನು ಅಭಿನಯಿಸುತ್ತಿರುವ ಹುಣಸೂರ್ ಅವರ ಚಿತ್ರ, ಪಂಢರಿಬಾಯಿ ಅವರ ಚಿತ್ರ, ಪಾರ್ವತೀಪ್ರಭಾವ ಮೊದಲಾದ ಚಿತ್ರಗಳಲ್ಲೂ ನನಗೆ ಮನಸ್ಸೊಪ್ಪುವ ಪಾತ್ರಗಳು ದೊರಕಿವೆ.

ಆದರೆ ನನ್ನ ಚಿತ್ರರಂಗದ ಅನುಭವದ ವಯಸ್ಸು ಇನ್ನೂ ಆರು. ಈಗೀಗ ಚಿತ್ರಾಭಿಮಾನಿಗಳು ಅದರಲ್ಲೂ ಕನ್ನಡ ಬಾಂಧವರು ನನಗೆ ಅತ್ಯಂತ ಆದರ ತೋರಿದ್ದಾರೆ. ಇದಕ್ಕೆ ಕನ್ನಡ ಚಿತ್ರರಂಗಕ್ಕೆ ಎಂದೆಂದಿಗೂ ಕೃತಜ್ಞೆ.

ಈ ಸಂದರ್ಭದಲ್ಲಿ ನನ್ನನ್ನು ಬೆಳಕಿಗೆ ತರಲು ಶ್ರಮಿಸಿದ ನನ್ನ ಅಕ್ಕ ರಮಾದೇವಿಯವರಿಗೆ ನನ್ನ ಧನ್ಯವಾದಗಳು ತಪ್ಪದೆ ಸಲ್ಲುತ್ತವೆ.

ದೀಪಾವಳಿ 'ಕರ್ಮವೀರ'ರ ಕನ್ನಡ ನಾಡಿಗೆಲ್ಲ ಬೆಳಕನ್ನು ನೀಡಲಿ.



# "ಚಿತ್ರರಂಗದಲ್ಲಿ ಪಳಗುವ ವರೆಗೂ ಚಿತ್ರಹಿಂಸೆ"

**ಕನ್ನಡ ಚಿತ್ರತಾರೆಯರ ಚಿತ್ರಜೀವನದ ಮೊದಲ ವರುಷದ ಅನುಭವಗಳು**




ಲೇಖಕರು :
ಶ್ರೀ. ಎಚ್. ಕೆ. ವಿಜಯನಾರಸಿಂಹ
ಮದ್ರಾಸ


ಯಾವ ಕಾರ್ಯಕ್ಷೇತ್ರದಲ್ಲೇ ಇರಲಿ ಮೊದಲ ವರುಷದ ಅನುಭವ ಸ್ವಾರಸ್ಯಕರವಾಗಿರುವಂತೆ ಕೆಲವೊಮ್ಮೆ ಸುಖಪ್ರದವಾಗಿದ್ದರೆ ಕೆಲವೊಮ್ಮೆ ಕಹಿ ಅನುಭವದಿಂದ ಕೂಡಿರುತ್ತದೆ. ಕಲಾ ಕ್ಷೇತ್ರವೂ ಇದಕ್ಕೆ ಹೊರತಾಗಿಲ್ಲ. ಈ ರಂಗ ಕಲೆಯು ವಿಶ್ವವಿದ್ಯಾಲಯದಂತಿರುವದರಿಂದ ಇಲ್ಲಿಯ ಅನುಭವ ಅರ್ಥಪೂರ್ಣವಾಗಿರುವುದು. ನಾಟಕ ರಂಗವಾಗಲಿ ಅದರ ಸಂತಾನದಂತಿರುವ ಸಿನೇಮಾ ರಂಗವಾಗಲಿ ಇಂಥ ಹಲವಾರು ಅನುಭವಗಳನ್ನು ಅಲ್ಲಿ ದುಡಿದ ಕಲಾವಿದರಿಗೆ ಉಂಟು ಮಾಡಿದೆ. ಹಲವರು ನೋವುಂಡು ನಗುಮುಖ ತೋರುತ್ತಿದ್ದರೆ ಹಲವರು ಅದರಿಂದ ನರಳಿದವರೂ ಉಂಟು.

ಈ ವಿಷಯವನ್ನು ಪ್ರತಿಯೊಬ್ಬ ಕಲಾವಿದರೂ ಒಪ್ಪಿಕೊಳ್ಳುತ್ತಾರೆ. ನಾಟಕ ರಂಗದಿಂದ ಸಿನಿಮಾ ರಂಗಕ್ಕೆ ಬಂದಿರುವ ನಮ್ಮ ಕನ್ನಡದ ಕಲಾವಿದರಲ್ಲಿ ಪ್ರಮುಖರಾದ ರಾಜಕುಮಾರ್, ನರಸಿಂಹರಾಜು, ಬಾಲಕೃಷ್ಣ, ರಾಮಚಂದ್ರಶಾಸ್ತ್ರಿ ಇವರೂ ಲೀಲಾವತಿ, ಪಂಢರಿಬಾಯಿ, ಮೈನಾವತಿ ಇವರು ಒಬ್ಬೊಬ್ಬರೂ ಒಂದೊಂದು ವಿಧದಲ್ಲಿ ತಮ್ಮ ಮೊದಲವರ್ಷದ ಅನುಭವ ಹೇಳುತ್ತಾರೆ. ಅಂದರೆ ನಾಟಕರಂಗದಿಂದ ಚಿತ್ರರಂಗವನ್ನು ಪ್ರವೇಶಿಸಿದ ಪ್ರತಿಯೊಬ್ಬರೂ ಪಳಗುವವರೆಗೂ ಚಿತ್ರರಂಗದಲ್ಲಿ ಹಿಂಸೆಯನ್ನೇ ಅನುಭವಿಸಿದ್ದಾರೆ.

## ರಾಜಕುಮಾರ್

'ನನ್ನ ಪೂಜ್ಯ ಕಲಾವಿದ ದಿವಂಗತ ಸುಬ್ಬಯ್ಯ ನಾಯಿಡು ಅವರ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿಯಿಂದ 'ಬೇಡರ ಕಣ್ಣಪ್ಪ' ಚಿತ್ರಕ್ಕಾಗಿ ಹೆಚ್. ಎಲ್. ಎನ್. ಸಿಂಹ ಅವರ ಆದೇಶದಂತೆ ಕರ್ನಾಟಕ ಚಿತ್ರಸಂಸ್ಥೆಗೆ ಕಾಲಿಟ್ಟೆ. ಈ ಒಂದು ವರುಷದಲ್ಲಿ ನಾನು ಪಟ್ಟಪಾಡು, ಕಲಿತ ವಿದ್ಯೆ ಅಸಾಧಾರಣವಾದದ್ದು. ನನ್ನ ಈ ಹೊಸ ಅಧ್ಯಾಯ ಕುತೂಹಲಕಾರಿಯಾದದ್ದು. ಹೆಜ್ಜೆಹೆಜ್ಜೆಗೆ ಹೊಸ ಹೊಸ ಹೊಂಗನಸು. ಈಶ್ವರನ ಕೃಪೆಯಿಂದ, ನಮ್ಮ ಅಪ್ಪಾಜಿಯವರ ಆಶೀರ್ವಾದದಿಂದ ಚಿತ್ರರಂಗದ ನಾಂದಿ ಯಶಸ್ವಿಯಾಯ್ತು. ಆದರೆ ನಾಟಕ ರಂಗದಿಂದ ಚಿತ್ರರಂಗಕ್ಕೆ ಹೊಸದಾಗಿ ಬಂದ ನಾನು ಮೊದಲಲ್ಲಿ ಅಸ್ವಾತಂತ್ರ್ಯದ ಮತ್ತು ಅಧೀರ ಜೀವನದ ಅನುಭವ ಪಡೆದೆ'' ಎಂದು ತಮ್ಮ ಚಿತ್ರರಂಗದ ಒಂದು ವರುಷದ ಅನುಭವ ಕುರಿತು ಹೇಳುತ್ತಾರೆ ಕನ್ನಡದ ಹೆಮ್ಮೆಯ ನಾಯಕ ನಟ ರಾಜಕುಮಾರ.

## ನರಸಿಂಹರಾಜು–ಬಾಳಕೃಷ್ಣ

'ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ' 'ಅಲ್ಲವೆ ?'

'ಹೌದು ಅನ್ನಲೇಬೇಕು' 'ಅಲ್ಲವೆ ?'

'ಹೂಂ... ಸಾರ್ ನನಗೂ ಅಷ್ಟೆ—ಇನ್ಯಾವ ಬೃಹಸ್ಪತಿ ಬಂದರೂ ಅವನಿಗೂ ಅಷ್ಟೇ' 'ಏನು?'

'ನಾನು ಹೇಳೋ ಮಾತು ಸತ್ಯಾಂದ್ರೆ, ಅಪ್ಪಟ ಸತ್ಯ'

'ಸಿನಿಮಾ ಪ್ರಪಂಚ ದುಡ್ಡು ಕೊಟ್ಟು ಸಿನಿಮಾ ನೋಡೋವರಿಗೇ ಹೊರತು ಅದರಲ್ಲಿ ಕೆಲಸ ಮಾಡೋವರಿಗಲ್ಲ.'

'ದಿವಂಗತ ಸಿ. ಬಿ. ಮಲ್ಲಪ್ಪನವರ ಕಂಪೆನಿಯಿಂದ ಗುಬ್ಬಿ ಕಂಪೆನಿಯ ವರೆಗೆ ನಾಟಕದ ಸರ್ವೀಸ್ ಪಡೆದ ನಾನು ಮೊದಲಲ್ಲಿ ಚಿತ್ರರಂಗದ ಒಂದು ವರ್ಷ ಕಳೆದದ್ದು ಒಂದು ಯುಗ ಕಳೆದ ಹಾಗಾಯಿತು.' ಎನ್ನುತ್ತಾರೆ ಹಾಸ್ಯನಟ ನರಸಿಂಹ ರಾಜು.

ಇದರಂತೆಯೇ ನಾಟಕರಂಗದಲ್ಲಿ ಬೋರ್ಡು ಗಳಿಗೆ ಬಣ್ಣ ಹಚ್ಚುವುದರಿಂದ ಮುಖಕ್ಕೆ ಬಣ್ಣ ಹಚ್ಚುವವರೆಗೆ ಅಸಾಮಾನ್ಯ ಅನುಭವ ಪಡೆದ ಖ್ಯಾತ ಹಾಸ್ಯನಟ ಬಾಲಕೃಷ್ಣ ತಮ್ಮ ಚಿತ್ರರಂಗದ ಮೊದಲ ದಿನಗಳ ಅನುಭವ ಕುರಿತು : ನರ. ಸಿಂಹರಾಜು ಇವರು ಅಭಿಪ್ರಾಯವನ್ನೇ ಅನುಮೋದಿಸುತ್ತಾರೆ.

ಹಾಸ್ಯನಟರಾಗಿ ಕನ್ನಡಕ್ಕೆ ಸೇವೆ ಸಲ್ಲಿಸುತ್ತಿರುವ ಬಾಲಕೃಷ್ಣ ಒಳ್ಳೆಯ ಭಾವುಕ. ಚುರುಕಾಗಿ ಮಾತನಾಡುವುದರ ಜೊತೆಗೆ ಚಮತ್ಕಾರವಾಗಿ ಬರೆಯುತ್ತಾರೆ.

'ಅದೃಷ್ಟದ ಮಕ್ಕಳಿಗೇನಪ್ಪಾ ಈ ತೊಗ್ಲಬ್ ಸಾಮ್ರಾಜ್ಯದಲ್ಲಿ ಬದುಕೋ ಅಧಿಕಾರ. ಯಾ-ಕೇಂದ್ರೆ ಅವನು ಭಿಕಾರೀನ ಸರ್ವಾಧಿಕಾರಿ ಮಾಡ್ತಿದ್ದ, ಮರುಕ್ಷಣದಲ್ಲೇ ಪಾತಾಳಕ್ಕೆ ಹಾಕಿ ತುಳೀತಿದ್ದ, ಹಾಗೇನೆ ಆಗಿದೆ ನಮ್ಮ ಬಾಳೂನೂ. ಅದೃಷ್ಟದೇವತೆ ಒಲಿದರೆ ಅಂಬಾರಿ ಏರೋದು, ತುಳಿದರೆ ರಸಾತಳಕ್ಕೆ ಇಳಿಯೋದು—ಅಷ್ಟೆ'' ಎನ್ನುತ್ತಾರೆ ಅವರು. ರಂಗಭೂಮಿಯಲ್ಲಿ ಅದೃಷ್ಟದೇವತೆಯ ಅಧಿಕಾರವಿಲ್ಲವೆ ? ಎಂದರೆ ಸಿನಿಮಾ ರಂಗದ ಅದೃಷ್ಟದೇವತೆಯ ಹಾಗೆ ನಾಟಕರಂಗದ ಅದೃಷ್ಟದೇವತೆ ಚಪಲಚಿತ್ತಳಲ್ಲವೆಂದು ಅಭಿಪ್ರಾಯಪಡುತ್ತಾರೆ ಈ ನಟರು.

## ರಾಮಚಂದ್ರ ಶಾಸ್ತ್ರಿಗಳು

ಅನುಭವಿ ಹಿರಿಯ ನಟ ರಾಮಚಂದ್ರ ಶಾಸ್ತ್ರಿಗಳು ರಂಗಭೂಮಿಯಲ್ಲೂ ಚಿತ್ರರಂಗದಲ್ಲೂ ಭಾವಪೂರ್ಣ ಅಭಿನಯಕ್ಕೆ ಹೆಸರಾದವರು. ಅನೇಕ ನಾಟಕಕಂಪೆನಿಗಳ ಸರ್ವೀಸ್ ಪಡೆದು ತಮ್ಮದೆ ಆದ ಸ್ವಂತ ಕಂಪೆನಿಯನ್ನು ಸ್ಥಾಪಿಸಿ ಕೊನೆಗೆ ಚಿತ್ರರಂಗವನ್ನು ಪ್ರವೇಶಿಸಿದವರು. ಇವರ ಅನುಭವದಲ್ಲೂ ಚಿತ್ರರಂಗ ವಿಚಿತ್ರವಾಗಿಯೇ ಕಂಡಿದೆ.

''ನಾನು ಮೊದಲು ಅಭಿನಯಿಸಿದ್ದು ತಮಿಳು 'ಭಕ್ತಿ' ಅಥವಾ 'ಭಕ್ತ ಅಂಬರೀಷ' ಚಿತ್ರದಲ್ಲಿ ಹಾಸ್ಯಪಾತ್ರ. ಆದರೆ ನಾಟಕಕಂಪೆನಿಯಲ್ಲಿ ನಾನು ಅನುಭವಿಸಿದ ನಮ್ಮ ಸ್ವಾತಂತ್ರ್ಯ ಇಲ್ಲಿ ಯಾಂತ್ರಿಕ ನಿಯಂತ್ರಣಕ್ಕೆ ಸಿಕ್ಕಿ ಮಾಯವಾಯಿತು. ಯಂತ್ರ ತಂತ್ರಗಳ ನಡುವೆ ಸಿಕ್ಕಿಕೊಂಡ ಸಿನಿಮಾನಟ ಡೈರೆಕ್ಟರ್ ಮಂತ್ರಕ್ಕೆ ಮಣಿಯುವ ಮಂಗನಾಗುತ್ತಾನೆ.''

ಎನ್ನುತ್ತಾ ತಮ್ಮ ಚಿತ್ರರಂಗದ ಒಂದು ವರುಷದ ಅನುಭವದ ಬಗ್ಗೆ ನುಡಿಯುತ್ತಾರೆ. ಅನುಭವಿ ಹಿರಿಯ ನಟ ರಾಮಚಂದ್ರಶಾಸ್ತ್ರಿ ಇವರ ಅನುಭವದ ಕೃತಿಯೂ ತರುಣ ಕಲಾವಿದರಾದ ರಾಜಕುಮಾರ, ನರಸಿಂಹರಾಜು, ಬಾಲಕೃಷ್ಣ

ರಾಜಕುಮಾರ



ರೊಂದಿಗೆ ಸರಿಯಾಗಿ ಕೂಡುವುದರಿಂದ ನಾಟಕ ರಂಗವು ಚಿತ್ರರಂಗಕ್ಕಿಂತ ಹೆಚ್ಚು ಹಿತಕರವಾದದ್ದು ಎಂಬ ಅಂಶ ವ್ಯಕ್ತವಾಗುತ್ತದೆ.

## ಪಂಢರಿಬಾಯಿ ಮತ್ತು ಮೈನಾವತಿ

ರಂಗರಾಯರ ಸುಪುತ್ರಿಯರಾದ ಪಂಢರೀಬಾಯಿ, ಮೈನಾವತಿ ಸೋದರಿಯರು ತಮ್ಮ ತಂದೆಯವರ "ಶ್ರೀಕೃಷ್ಣ ಚೈತನ್ಯ ನಾಟಕ ಸಭಾ"ದಿಂದ ನಾಟಕಾಸಕ್ತರಾದರು. ತದನಂತರ ಅವರ ಅಣ್ಣ ವಿಮಲಾನಂದದಾಸರ "ಆದರ್ಶ ನಾಟಕ ಕಂಪೆನಿ"ಯಲ್ಲಿ ಅಭಿನಯಿಸತೊಡಗಿ ಇವರಲ್ಲಿ ಹಿರಿಯವರಾದ ಪಂಢರಿಬಾಯಿ ತಮ್ಮ ೧೨ ನೇ ವಯಸ್ಸಿನಲ್ಲೇ 'ವಾಣಿ' ಚಿತ್ರದ ಮೂಲಕ ಚಿತ್ರರಂಗವನ್ನು ಪ್ರವೇಶಿಸಿದರು.

ಇವರ ಚಿತ್ರರಂಗದ ಅನುಭವ ಚಿತ್ರರಂಗವನ್ನು ದೂರದಿಂದ ಜರೆಯುವಷ್ಟು ಘೋರವಾದದ್ದಲ್ಲ, ಚಿತ್ರರಂಗದಲ್ಲೂ ಯೋಗ್ಯತೆಗೆ ಪ್ರಾಧಾನ್ಯ, ನ್ಯಾಯಕ್ಕೆ ನ್ಯಾಯ ದೊರೆಯಬಲ್ಲದು ಆದರೆ ಅದನ್ನು ಪಡೆಯಲು ಮಾತ್ರ ಅಸಾಧಾರಣ ನಿಷ್ಠೆ ಬೇಕು; ಎನ್ನುತ್ತಾರೆ ಈ ಸೋದರಿಯರು. ಇವರ ಚಿತ್ರರಂಗದ ಯಾವ ಒಂದು ವರುಷದ ಅನುಭವವೂ ಕಷ್ಟಕರವಾಗಿರಲಿಲ್ಲ.




ಪಂಢರಿಬಾಯಿ



ಲೀಲಾವತಿ

## ಲೀಲಾವತಿ

ಇಂದಿನ ಕನ್ನಡ ಚಿತ್ರಗಳಲ್ಲಿ ಲೀಲಾವತಿ ಪ್ರಮುಖ ತಾರೆ. ಚಿತ್ರರಂಗವೆಂದರೇನೊ ತಿಳಿಯದೆ ಮಂಗಳೂರಿನಿಂದ ಮೈಸೂರಿಗೆ ಬಂದ ಈ ತಾರೆ ಚಿತ್ರರಂಗಕ್ಕೆ ಅವಶ್ಯವಾದ ನಾಟಕರಂಗದ ಅನುಭವಕ್ಕಾಗಿ ನಾಟಕಕಂಪನಿ ಸೇರಬೇಕಾಯ್ತು..

ಎಸ್. ಎಸ್. ಎಸ್. ನಾಟಕ ಮಂಡಳಿಯಲ್ಲಿ ಸಾಕಷ್ಟು ಅನುಭವ ಪಡೆದು "ಭಕ್ತ ಪ್ರಹ್ಲಾದ" ಚಿತ್ರದಿಂದ ಚಿತ್ರರಂಗ ಪ್ರವೇಶಿಸಿ "ಮಾಂಗಲ್ಯ ಯೋಗ" ಚಿತ್ರದಿಂದ ಈಕೆ ನಾಯಕಿ ಪಾತ್ರಧರಿಸತೊಡಗಿದರು.

ನಾಟಕರಂಗದಿಂದ ಸಿನೇಮಾರಂಗಕ್ಕೆ ಪ್ರವೇಶಿಸಿದ ನಟಿಯರಲ್ಲಿ ದಿನೇ ದಿನೇ ಅಭಿವೃದ್ಧಿ ಹೊಂದುತ್ತಿರುವ ತಾರೆ ಲೀಲಾವತಿ ಕೂಡ ಚಿತ್ರರಂಗದ ಮೊದಲ ಒಂದು ವರುಷದ ಅನುಭವ ದುಸ್ತರವಾಗಿತ್ತೆಂದು ಹೇಳುತ್ತಾರೆ.

ಈ ಎಲ್ಲ ಅಂಶಗಳನ್ನು ಪರಿಶೀಲಿಸಿದಾಗ ಕನ್ನಡಚಿತ್ರರಂಗದ ತಾರೆಯರು ಚಿತ್ರಜೀವನದ ಮೊದಲ ವರುಷದಲ್ಲಿ ಪಟ್ಟಪಾಡು ಯಾವುದು ಎಂಬುದು ಕಂಡುಬಾರದೇ ಇರದು. ಅದೇಕಾಲಕ್ಕೆ ನಮ್ಮ ಚಿತ್ರರಂಗ ವಿನ್ನೂ ಶೈಶವಾವಸ್ಥೆಯಲ್ಲಿರುವುದೂ ವ್ಯಕ್ತವಾಗುತ್ತದೆ. ಇದಕ್ಕೆ ಹಲವಾರು ಕಾರಣಗಳಿವೆ. ನಾವಿನ್ನೂ ಇನ್ನಿತರರಿಗಿಂತ ಹೆಚ್ಚು ಪರಾವಲಂಬಿಗಳಾಗಿದ್ದೇವೆ. ಕಚ್ಚಾ ಫಿಲ್ಮದ ಕೊರತೆ ಮೊದಲಾದ ತಾಪತ್ರಯಗಳೊಂದಿಗೆ ನಮ್ಮದೇ ಆದ ಸ್ಟುಡಿಯೋಗಳೂ ಇಲ್ಲದಿರುವುದು ದೊಡ್ಡದೊಂದು ತೊಂದರೆಯಾಗಿದೆ. ನಮ್ಮದೇ ಆದ ಸ್ಟುಡಿಯೋಗಳಾಗಿ ಅಲ್ಲಿ ಕನ್ನಡ ಚಿತ್ರಗಳು ನಿರ್ಮಾಣವಾಗತೊಡಗಿದರೆ ನಮ್ಮ ಚಿತ್ರರಂಗ ಎಲ್ಲ ಭಾಷೆಗಳಿಗಿಂತ ಸುಧಾರಿಸಿದ ಸುಸಂಸ್ಕೃತ ಚಿತ್ರಗಳನ್ನು ನೀಡಬಲ್ಲದು. ನಮ್ಮ ನಟನಟಿಯರಲ್ಲಿ ಪ್ರತಿಭೆಗೆ ಕುಂದಿಲ್ಲ. ಸಾಕಷ್ಟು ಪ್ರೋತ್ಸಾಹವಿಲ್ಲದಿದ್ದರೂ ಇನ್ನಿತರರಿಗಿಂತ ಹೆಚ್ಚಾದ ಕಲಾಪ್ರೌಢಿಮೆಯನ್ನು ಇವರು ವ್ಯಕ್ತಗೊಳಿಸಿದ್ದಾರೆ.

ಕನ್ನಡ ಚಿತ್ರಗಳಿಗೆ ಪ್ರೋತ್ಸಾಹ ದೊರಕಿಸಿಕೊಡುವ ಉದ್ದಿಶ್ಯದಿಂದ ಬೆಂಗಳೂರಿನ ಕೆಲವು ಉತ್ಸಾಹಿ ಯುವಕರು ಚಳವಳಿ ಹೂಡಿ ಥಿಯೇಟರ್‌ಗಳ ಹೆಸರನ್ನು ಕನ್ನಡದಲ್ಲಿ ಬರೆಸಿದ್ದಾರೆ. ಕನ್ನಡ ಚಿತ್ರಗಳೆಂದರೆ ಜನತೆ ಕಣ್ತೆರೆದು ನೋಡತೊಡಗಿದೆ. ಇದರಿಂದ ಕನ್ನಡ ಚಿತ್ರೋದ್ಯಮದಲ್ಲಿ ಹೊಸ ಹುರುಪು ಕಂಡು ಬರುತ್ತಿದೆ. ಕಳೆದ ವರ್ಷದವರೆಗೆ ಇದ್ದ ಜಡತೆ ಈ ವರ್ಷದಲ್ಲಿ ಮಾಯವಾಗುವ ಶುಭಸೂಚನೆಗಳು ಕಂಡುಬಂದಿವೆ.

ಈ ದೀಪಾವಳಿಯಿಂದ ಕನ್ನಡ ಚಿತ್ರಗಳ ಭವ್ಯಭವಿಷ್ಯದ ನಾಂದಿಯಾಗಿ ವರುಷವರುಷವೂ ಹರುಷ ಹೆಚ್ಚಲೆಂದು ಕನ್ನಡಿಗರೆಲ್ಲ ಹಾರೈಸೋಣ.





ಲೇಖಕರು :
ಶ್ರೀ ಎಂ. ನಾಗರಾಜರಾವ, ಬಿ. ಎ.
ಹುಬ್ಬಳ್ಳಿ

# ಪ್ರಗತಿಪಥದಲ್ಲಿ ಹಿಂದಿ ಚಿತ್ರರಂಗ



**೧೯೬೧-೬೨ ರಲ್ಲಿ ಹಿಂದಿ ಚಿತ್ರರಂಗವು ಕಡಿಮೆ ಚಿತ್ರಗಳನ್ನು ನಿರ್ಮಿಸಿದ್ದರೂ ಅಂತಾರಾಷ್ಟ್ರೀಯ ಖ್ಯಾತಿಯ ಕೆಲವೊಂದು ಚಿತ್ರಗಳನ್ನು ನಿರ್ಮಿಸಿ ಯಶಸ್ವಿಯಾಗಿ ಮುನ್ನಡೆದಿದೆ. ಅದೇ ಕಾಲಕ್ಕೆ ಕೆಲವೊಂದು ವಿಶಿಷ್ಟ ಘಟನೆಗಳೂ ಈ ರಂಗದಲ್ಲಿ ಸಂಭವಿಸಿವೆ. ಈ ಒಂದು ವರುಷದಲ್ಲಿ ಸಾಧಿಸಿದ ಪ್ರಗತಿಯ ನೋಟ ಇಲ್ಲಿದೆ.**

ತೆರಾಪದ್ಧತಿ, ಪೈಪೋಟಿ, ಅನೈಕ್ಯ, ಕರಭಾರ ಮೊದಲಾದ ಅನಿಷ್ಟ ಅಂಶಗಳು ಭಾರತದ ಚಿತ್ರಪ್ರಪಂಚಕ್ಕೆ ಹೊಸವೇನೂ ಅಲ್ಲ. ಅವನ್ನು ಇದುವರೆಗೂ ಹೇಗೊ ಚಿತ್ರೋದ್ಯಮಿಗಳು ಎದುರಿಸುತ್ತ ಬಂದಿದ್ದರು. ಆದರೀಗ ಹೊಸ ತೊಂದರೆಯೊಂದನ್ನು ಚಿತ್ರ ಪ್ರಪಂಚವು ಎದುರಿಸಬೇಕಾಗಿದೆ. ಅದೆಂದರೆ ಕಚ್ಚಾ ಫಿಲ್ಮುಗಳ ಅಭಾವ.

ಭಾರತ ಸರಕಾರವು ೧೯೬೧-೬೨ ರಲ್ಲಿ ಕಚ್ಚಾ ಫಿಲ್ಮುಗಳ ಆಯಾತದಲ್ಲಿ ಕಡಿತ ಮಾಡಿದ್ದರಿಂದ ಚಿತ್ರೋದ್ಯಮಕ್ಕೆ ಭಾರಿ ಪೆಟ್ಟು ಬಿದ್ದಿತು. ಹೀಗಾಗಿ ಭಾರತೀಯ ಚಿತ್ರರಂಗದಲ್ಲಿ ಭಾರಿ ಪ್ರಮಾಣದ ಮುಗ್ಗಟ್ಟು ತಲೆದೋರಿತು. ಅರ್ಧ ತಯಾರಾಗಿದ್ದ ನೂರಾರು ಚಿತ್ರಗಳ ನಿರ್ಮಾಣಕಾರ್ಯವು ಅಲ್ಲಿಗೆ ನಿಂತು ಹೋಗಿ ಕೋಟಿಗಟ್ಟಲೆ ರೂ. ಗಳ ಬಂಡವಳವು ಯಾವದೇ ಪ್ರತಿಫಲವಿಲ್ಲದೆ ಈ ಉದ್ದಿಮೆಯಲ್ಲಿ ಸಿಕ್ಕಿ ಬಿದ್ದಿತು. ನಿರ್ಮಾಣ ಕಾರ್ಯವೇ ಸ್ಥಗಿತವಾಗಿದ್ದರಿಂದ ಸ್ಟುಡಿಯೋ ಹಾಗು ಲ್ಯಾಬರೇಟರಿಗಳಲ್ಲಿ ಕೆಲಸವೇ ಇಲ್ಲದಂತಾಗಿ ಸಾವಿರಾರು ಜನರು ನಿರುದ್ಯೋಗಿಗಳಾದರು. ಇನ್ನೆಲ್ಲ ಕಾರಣಗಳ ಮೂಲಕ ಪ್ರತಿವರ್ಷ ತಯಾರಾಗುತ್ತಿದ್ದಷ್ಟು ಚಿತ್ರಗಳು ೧೯೬೧-೬೨ರಲ್ಲಿ ತಯಾರಾಗಲಿಲ್ಲ.

ಇಂಥ ನಿರಾಶಾದಾಯಕ ಪರಿಸ್ಥಿತಿಯಲ್ಲಿ, ಕೆಲವು ಉತ್ತಮ ಚಿತ್ರಗಳು ಹೊರಬಂದವು. ಅವಾವೆಂದರೆ ದಿಲೀಪಕುಮಾರರ "ಗಂಗಾ-ಜಮುನಾ", ಬಿ. ಆರ್. ಛೋಪ್ರಾರವರ "ಧರ್ಮಪುತ್ರ", ಗುರುದತ್ತರವರ "ಸಾಹಿಬ ಬೀಬಿ ಔರ ಗುಲಾಮ", ಹೇಮಂತ ಕುಮಾರರ "ಬೀಸ್‌ಸಾಲ್‌ಬಾದ್" ಮತ್ತು ಕೌಟುಂಬಿಕ ಚಿತ್ರಗಳಾದ ಸಸುರಾಲ, ಘರಾನಾ, ಆರತಿ, ಮೈಚುಪ್ ರಹೂಂಗಿ ಹಾಗು ಹರಿಯಾಲಿ ಔರ ರಾಸ್ತಾ, ಜಂಗ್ಲಿ, ಜಬ್‌ಪ್ಯಾರ ಕಿಸೀಸೆ ಹೋತಾಹೈ. ಇವುಗಳಲ್ಲಿ ಗಂಗಾ-ಜಮುನಾ, ಸಸುರಾಲ, ಘರಾನಾ, ಹರಿಯಾಲಿ ಔರ ರಾಸ್ತಾ, ಜಬ್‌ಪ್ಯಾರ ಕಿಸೀಸೆ ಹೋತಾ ಹೈ, ಬೀಸ್ ಸಾಲ ಬಾದ, ಜಂಗ್ಲಿ ಈ ಚಿತ್ರಗಳು ಮಾತ್ರ ರಜತಮಹೋತ್ಸವವನ್ನು



ಶ್ರೀಮತಿ ಮೀನಾಕುಮಾರಿ

ಕಂಡವು. ಸಾಹಿಬ ಬೀಬಿ ಔರ ಗುಲಾಮ ಮತ್ತು ಮೈ ಚುಪ್ ರಹೂಂಗಿ ಹೊಸದಾಗಿ ಬಿಡುಗಡೆಯಾಗಿದ್ದು ರಜತ ಮಹೋತ್ಸವದ ಕಡೆಗೆ ಭರದಿಂದ ಮುನ್ನುಗ್ಗುತ್ತಿವೆ.

ಇವುಗಳಲ್ಲಿ "ಗಂಗಾಜಮುನಾ" ಚಿತ್ರವು ವೈಶಿಷ್ಟ್ಯಪೂರ್ಣವಿದ್ದು ಯಾವದೇ ನೀತಿಯನ್ನು ಅದು ಬೋಧಿಸಲು ಪ್ರಯತ್ನಿಸದಿದ್ದರೂ ಸರಳಕಥೆ, ಅಭಿನಯ, ಮನೋಮೋಹಕ ವರ್ಣರಂಜಿತ ಛಾಯಾಗ್ರಹಣ, ಇಂಪಾದ ಸಂಗೀತ ಇವುಗಳ ಮೂಲಕ ಜನಪ್ರಿಯವಾಗಿರುತ್ತದೆ.

ದಿಲೀಪಕುಮಾರರು ನಿರ್ಮಿಸಿರುವ ಪ್ರಥಮ ಹಿಂದೀ ಚಿತ್ರವಿದಾಗಿದ್ದರೂ ಇದು ದೇಶ ವಿದೇಶಗಳಲ್ಲಿ ಪ್ರಶಂಸೆಗೆ ಪಾತ್ರವಾಗಿರುತ್ತದೆ. ಟೆಕ್ನಿಕಲರದಲ್ಲಿ ತಯಾರಿಸಲ್ಪಟ್ಟ ಈ ಚಿತ್ರವನ್ನು ನಿತಿನಬೋಸರು ದಿಗ್ದರ್ಶಿಸಿದ್ದು ಇದರಲ್ಲಿ ಮುಖ್ಯ ಪಾತ್ರಗಳನ್ನು ಸ್ವತಃ ದಿಲೀಪಕುಮಾರ ಹಾಗು ದಕ್ಷಿಣ ಭಾರತದ ನೃತ್ಯಗಾತಿ-ನಟಿ ವೈಜಯಂತಿಮಾಲಾ ಇವರು ವಹಿಸಿರುವರು. ವಿ. ಬಾಬಾಸಾಹೇಬ ಇವರು ಈ ಚಿತ್ರದ ಛಾಯಾಗ್ರಾಹಕರಿದ್ದು ಪ್ರಸಿದ್ಧ ಸಂಗೀತ ದಿಗ್ದರ್ಶಕರಾದ ನೌಶಾದರು ಇದಕ್ಕೆ ಸಂಗೀತ ನೀಡಿರುವರು. ತಾಂತ್ರಿಕ ಮೌಲ್ಯದ ಜೊತೆಗೆ ಈ ಚಿತ್ರದಲ್ಲಿಯ ನಾಯಕ-ನಾಯಿಕೆಯರ ಅಭಿನಯವು ಕೂಡ ಮೆಚ್ಚುಗೆಯನ್ನು ಪಡೆದಿರುತ್ತದೆ. ಇತ್ತೀಚಿಗೆ ಯುರೋಪದ ಕಾರ್ಲೋವಿವೆರಿಯಲ್ಲಿ ನಡೆದ ಅಂತಾರಾಷ್ಟ್ರೀಯ ಚಲಚ್ಚಿತ್ರ



ಪದ್ಮಶ್ರೀ ಅಶೋಕಕುಮಾರ

ಮಹೋತ್ಸವಕ್ಕೆ ಭಾರತವು ಇದೊಂದೆ ಚಿತ್ರವನ್ನು ಕಳಿಸಿತ್ತು. ನಿರೀಕ್ಷೆಯಂತೆ ಈ ಚಿತ್ರಕ್ಕೆ ಆ ಮಹೋತ್ಸವದಲ್ಲಿ ಮನ್ನಣೆ ದೊರೆಯಿತು. ಜೆಕೊಸ್ಲಾವಾಕಿಯಾದ ಆರ್ಟ ಅಕಾಡಮಿಯವರು ಉತ್ತಮ ಅಭಿನಯಕ್ಕಾಗಿ ದಿಲೀಪಕುಮಾರರಿಗೆ ಪ್ರಶಸ್ತಿಯನ್ನು ನೀಡಿದ್ದಾರೆ. ಸೀಟಲ್ ಮತ್ತು ಮಿಲಾನ್‌ಗಳಲ್ಲಿ ನಡೆದ ಅಂತಾರಾಷ್ಟ್ರೀಯ ಉತ್ಸವಗಳಲ್ಲಿಯೂ ಈ ಚಿತ್ರವು ಪ್ರದರ್ಶಿಸಲ್ಪಟ್ಟಿರುತ್ತದೆ. ಇತ್ತೀಚಿಗೆ ಭಾರತ ಸರಕಾರದ ರಾಷ್ಟ್ರಪತಿ ಪ್ರಶಸ್ತಿಯು ಕೂಡ ಈ ಚಿತ್ರಕ್ಕೆ ಸಿಕ್ಕಿರುತ್ತದೆ.

"ಧರ್ಮಪುತ್ರ" ಚಿತ್ರವು ಹೊಸ ಹಾದಿಯನ್ನು ಹಿಡಿದಿರುತ್ತದೆ. ಸಾಮಾಜಿಕ ಸಮಸ್ಯೆಗಳನ್ನು ಕುರಿತು ಚಿತ್ರಗಳನ್ನು ನಿರ್ಮಿಸುವಲ್ಲಿ ಸಿದ್ಧಹಸ್ತರಾದ ಶ್ರಿ. ಬಿ. ಆರ್. ಛೋಪ್ರಾರವರೇ ಈ ಚಿತ್ರವನ್ನು ನಿರ್ಮಿಸಿದ್ದು ಜಾತೀಯ ಐಕ್ಯಕ್ಕೆ ಇದು ಸಂಬಂಧಿಸಿರುತ್ತದೆ. ಇಂದು ರಾಷ್ಟ್ರೀಯ ಭಾವೈಕ್ಯದ ಮಾತು ದೇಶದಲ್ಲಿ ಎಲ್ಲೆಡೆಯೂ ಕೇಳಿಬರುತ್ತದೆ. ನಮ್ಮ ಧುರೀಣರು ಸಾರ್ವಜನಿಕ ವೇದಿಕೆಗಳ ಮೇಲೆ ಈ ಭಾವೈಕ್ಯದ ಮಹತ್ವದ ಬಗ್ಗೆ ಮೇಲಿಂದಮೇಲೆ ಭಾಷಣ ಮಾಡುವದುಂಟು. ಇದರಿಂದ ಸ್ಫೂರ್ತಿಗೊಂಡು ಶ್ರೀ.ಬಿ.ಆರ್. ಛೋಪ್ರಾ. ಇವರು ಭಾವೈಕ್ಯ ಸಾಧನೆಯಲ್ಲಿ ತಮ್ಮ ಅಲ್ಪ ಕಾಣಿಕೆಯೆಂದು ಈ ವಿಷಯದ ಮೇಲೆ ಚಲಚ್ಚಿತ್ರವೊಂದನ್ನು ನಿರ್ಮಿಸಿದರು. ಶ್ರೀ. ಚತುರಶಾಸ್ತ್ರಿ ಎಂಬವರಜನಪ್ರಿಯ ಕಾದಂಬರಿಯನ್ನು ತಮ್ಮ ಚಿತ್ರಕ್ಕೆ ಅಳವಡಿಸಿಕೊಂಡರು. ಅಶೋಕ ಕುಮಾರ, ರಹಮಾನ, ನಿರುಪಾರಾಯ, ಮಾಲಾಸಿಂಹ ಮತ್ತು ಶಶಿಕಪೂರ ಮೊದಲಾದ ಪ್ರಸಿದ್ಧ ನಟವರ್ಗವನ್ನು ಈ ಚಿತ್ರಕ್ಕೆ ಆಯ್ದುಕೊಂಡರು. ಈ ಚಿತ್ರವು ಛೋಪ್ರಾರ ಯಾವದೇ ಇತರ ಜನಪ್ರಿಯ ಚಿತ್ರಗಳಿಗಿಂತ ತಾಂತ್ರಿಕ ಮೌಲ್ಯಗಳಲ್ಲಿ ಕಡಿಮೆ ಇದ್ದಿಲ್ಲ. ಆದರೆ "ಬಾಕ್ಸ ಆಫೀಸ" ದೃಷ್ಟಿಯಿಂದ ಇದೊಂದು ಯಶಸ್ವಿ ಚಿತ್ರವಾಗಲಿಲ್ಲ. ಇದು ನಮ್ಮ ಪ್ರೇಕ್ಷಕವರ್ಗದ ಅಭಿರುಚಿಯನ್ನು ವ್ಯಕ್ತ ಮಾಡುತ್ತದೆ. ಇದುವರೆಗೆ ರಾಷ್ಟ್ರೀಯ ಭಾವೈಕ್ಯದ ಪ್ರಚಾರವನ್ನು ಸರಕಾರದ ಫಿಲ್ಮ್ಸ ಡಿವಿಜನ್ನದವರು ತಮ್ಮ ಸಾಕ್ಷಿ ಚಿತ್ರಗಳ ಮೂಲಕ ತಮಗೆ ತೋರಿದ ರೀತಿಯಲ್ಲಿ ಮಾಡುತ್ತಿದ್ದರು. ಯಾವದೇ ಕಥಾಚಿತ್ರ ನಿರ್ಮಾಪಕನು ಈ ಬಗ್ಗೆ ಪ್ರಯತ್ನ ನಡೆಸಿದ್ದಿಲ್ಲ. ಈ ಸಾಹಸಕ್ಕೆ ಕೈ ಹಾಕಿದವರಲ್ಲಿ ಶ್ರೀ. ಛೋಪ್ರಾರೇ ಮೊದಲಿಗರು. ದುರ್ದೈವದಿಂದ ಇಂಥ ಒಳ್ಳೆ ಚಿತ್ರಕ್ಕೆ "ಜನಪ್ರಿಯತೆ" ಸಿಗಲಿಲ್ಲ. "ಧರ್ಮಪುತ್ರ" ಚಿತ್ರವು ನಮ್ಮ ಸರಕಾರಕ್ಕೆ ಒಂದು ಪಾಠವನ್ನು ಕಲಿಸಿದೆ. ಶ್ರೀ ಛೋಪ್ರಾರ ಚಿತ್ರವು "ಜನಪ್ರಿಯ" ವಾಗದಿದ್ದ ಮೂಲಕ ಉಳಿದ ನಿರ್ಮಾಪಕರು ಇಂಥ ಹುಚ್ಚು ಸಾಹಸಗಳಿಗೆ ಕೈ ಹಾಕದಿರುವ ಸಂಭವವಿರುತ್ತದೆ. ಹೀಗಾಗಲು ಸರಕಾರವು ಅವಕಾಶವನ್ನು ಕೊಡಕೂಡದು. ಭಾವೈಕ್ಯ ಸಾಧನೆಯ ಬಗ್ಗೆ ಕಳಕಳಿ ಇದ್ದರೆ ಅದು ಇಂಥ ಚಿತ್ರಗಳು ಹೆಚ್ಚು ನಿರ್ಮಾಣವಾಗುವಂತೆ ಸಹಾಯಧನ ಮತ್ತಿತರ ಕ್ರಮಗಳಿಂದ ಪ್ರೋತ್ಸಾಹ ನೀಡಬೇಕು.

"ಬೀಸ ಸಾಲಬಾದ" ಪ್ರಸಿದ್ಧ ಗಾಯಕ ಸಂಗೀತ ದಿಗ್ದರ್ಶಕ ಹೇಮಂತಕುಮಾರರು ನಿರ್ಮಿಸಿದ ಪತ್ತೇದಾರಿ ಚಿತ್ರ. ಇದುವರೆಗೆ ಇಂಥ ಚಿತ್ರಗಳು ಭಾರತದಲ್ಲಿ ನಿರ್ಮಿಸಲ್ಪಟ್ಟಿಲ್ಲವೆಂದಲ್ಲ. ಆದರೆ ಇದುವರೆಗೆ ತಯಾರಾದ ಈ ಮಾಲಿಕೆಯ ಚಿತ್ರಗಳಲ್ಲಿ ಇದೊಂದು ಶ್ರೇಷ್ಠ ಚಿತ್ರ. ಈ ಚಿತ್ರ ನೋಡುವವರಿಗೆ ತಾವೊಂದು ಇಂಗ್ಲೀಷ ಪತ್ತೆದಾರಿ ಚಿತ್ರವನ್ನು ನೋಡುತ್ತಿರುವಂತೆ ಭಾಸವಾಗುವದು. ಅಷ್ಟರ ಮಟ್ಟಿಗೆ ಈ ಚಿತ್ರದ ಮಟ್ಟವು ಏರಿರುತ್ತದೆ. ಈ ಚಿತ್ರದಲ್ಲಿ ಪ್ರಸಿದ್ಧ ಬಂಗಾಲಿ ತರುಣ ಕಲಾವಿದ ವಿಶ್ವಜಿತ ನಾಯಕ ಪಾತ್ರ ವಹಿಸಿದ್ದು ವಹೀದಾ ರಹಮಾನ, ಮನಮೋಹನಕೃಷ್ಣ ಸಜ್ಜನ, ಮೊದಲಾದವರು ಇತರ ಪಾತ್ರಗಳಲ್ಲಿದ್ದಾರೆ. ವಿಶ್ವಜಿತನು ಅಭಿನಯಿಸುತ್ತಿರುವ ಹಿಂದೀ ಚಿತ್ರಗಳಲ್ಲಿ ಇದೇ ಮೊದಲನೆಯದಾಗಿದ್ದು ಪ್ರಸಿದ್ಧ ಬಂಗಾಲಿ ನಟನಿಗೆ ಹಿಂದೀ ಚಿತ್ರ ಪ್ರಪಂಚದಲ್ಲಿ ಪ್ರವೇಶ ಕಲ್ಪಿಸಿದ ಕೀರ್ತಿಯು ಈ ಚಿತ್ರಕ್ಕೆ ಸಲ್ಲುತ್ತದೆ.

" ಸಾಹೇಬ ಬೀಬಿ ಔರ ಗುಲಾಮ " ಹಿಂದೀ ಚಿತ್ರರಂಗಕ್ಕೆ ಗುರುದತ್ತರ ಕಾಣಿಕೆ. ಗುರುದತ್ತರ ಹಿಂದಿನ ಚಿತ್ರಗಳಂತೆ ಈ ಚಿತ್ರವಾದರೂ ನಾವೀನ್ಯಪೂರ್ಣವಾಗಿದೆ. ೧೯ ನೇ ಶತಮಾನದ ಬಂಗಾಲಿ ಕುಟುಂಬಕ್ಕೆ ಸಂಬಂಧಿಸಿದ ಈ ಚಿತ್ರದಲ್ಲಿ ಸ್ವತಃ ಗುರುದತ್ತರೇ ನಾಯಕರಾಗಿದ್ದು ಇತರ ಮುಖ್ಯ ಪಾತ್ರಗಳಲ್ಲಿ ಮೀನಾಕುಮಾರಿ ಮತ್ತು ರಹಮಾನ ಇವರು ಕಾಣಿಸಿಕೊಂಡಿದ್ದಾರೆ. ಅಪೂರ್ವ ಕಥಾವಸ್ತು, ಉತ್ತಮ ಛಾಯಾಗ್ರಹಣ, ಸಹಜಸನ್ನಿವೇಶಗಳು, ಉಚ್ಚ ಮಟ್ಟದ ದಿಗ್ದರ್ಶನ, ಗುರುದತ್ತ ಹಾಗು ಮೀನಾಕುಮಾರಿಯವರ ಅರ್ಥಪೂರ್ಣ ಅಭಿನಯ ಇವುಗಳಿಂದ ಈ ಚಿತ್ರವು ಒಂದು ರಸಘಟ್ಟಿಯಾಗಿರುತ್ತದೆ. ಈ ಚಿತ್ರದ ಯಶಸ್ಸಿಗೆ ಕೆಲಮಟ್ಟಿಗೆ ಕಾರಣರಾದ ಛಾಯಾಗ್ರಾಹಕ ವಿ. ಕೆ. ಮೂರ್ತಿಯವರು ಅಚ್ಚ ಕನ್ನಡಿಗರೆಂಬುದು ಕನ್ನಡಿಗರೆಲ್ಲರೂ ಅಭಿಮಾನ ಪಡಬೇಕಾದ ಸಂಗತಿಯಾಗಿದೆ. ಅಬ್ರಾರ ಅಲ್ವಿಯವರು ಈ ಚಿತ್ರದ ದಿಗ್ದರ್ಶಕರಾಗಿದ್ದು ಅವರು ಮೆಗಾಫೋನ್ ಕೈಯಲ್ಲಿ ಹಿಡಿಯುತ್ತಿರುವದು ಇದೇ ಮೊದಲನೆ ಸಲ. ಆದರೂ ಅವರು ತಮ್ಮ ಈ ಪ್ರಥಮ ಅವಕಾಶವನ್ನು ಚನ್ನಾಗಿ ಉಪಯೋಗಿಸಿಕೊಂಡು ಶ್ರೇಷ್ಠ ದಿಗ್ದರ್ಶಕರ ಮಾಲಿಕೆಯಲ್ಲಿ ಶಾಶ್ವತ ಸ್ಥಾನವನ್ನು ಗಳಿಸಿಕೊಂಡಿರುವರು.

ಕೌಟುಂಬಿಕ ಚಿತ್ರಗಳಲ್ಲಿ "ಆರತಿ" ಯೊಂದನ್ನು ಬಿಟ್ಟರೆ ಉಳಿದ ಚಿತ್ರಗಳೆಲ್ಲ ದಕ್ಷಿಣ ಭಾರತದವುಗಳೆ. ಇದನ್ನು ನೋಡಿದರೆ ಹಿಂದಿನ ವರ್ಷದಂತೆ ಈ ವರ್ಷದಲ್ಲಿ ಕೂಡ ಈ ಬಗೆಯ ಚಿತ್ರಗಳಲ್ಲಿ ದಕ್ಷಿಣ ಭಾರತದವರದೇ ಮೇಲ್ಗೈ ಆಗಿದ್ದು ಅವರನ್ನು ಹಿಂದೆ ಹಾಕುವದು ಯಾರಿಗೂ ಸಾಧ್ಯವಾಗಿಲ್ಲೆಂದು ವ್ಯಕ್ತವಾಗುವದು. "ಸಸುರಾಲ" ಚಿತ್ರವನ್ನು ಪ್ರಸಾದ ಪ್ರೊಡಕ್ಶನ್ನದವರು ತಯಾರಿಸಿದ್ದಾರೆ. "ಘರಾನಾ" ಚಿತ್ರವನ್ನು ಜೆಮಿನಿಯವರು ಮತ್ತು "ಮೈ ಚುಪ್ ರಹೂಂಗಿ" ಚಿತ್ರವನ್ನು ಎ.ವಿ.ಎಂ. ಸಂಸ್ಥೆಯವರು ತಯಾರಿಸಿರುವರು. ಕುಟುಂಬದ ಎಲ್ಲ ಜನರಿಗೂ ಹಿಡಿಸುವ ಕಥೆಯನ್ನು ಈ ಚಿತ್ರಗಳು ಒಳಗೊಳ್ಳುವದರ ಜೊತೆಗೆ ಇಂಪಾದ ಸಂಗೀತದಿಂದಲೂ ಕೂಡಿರುತ್ತವೆ. "ಸ ಸು ರಾ ಲ" ಚಿತ್ರಕ್ಕೆ ಶಂಕರಜೈಕಿಶನ್ "ಘರಾನಾ" ಚಿತ್ರಕ್ಕೆ ರವಿ ಮತ್ತು "ಮೈ ಚುಪ್ ರಹೂಂಗಿ" ಚಿತ್ರಕ್ಕೆ ಚಿತ್ರಗುಪ್ತ ಇವರು ಸಂಗೀತವನ್ನು ನೀಡಿದ್ದಾರೆ. ಈ ಮೂರು ಚಿತ್ರಗಳ ದಿಗ್ದರ್ಶನವನ್ನು ಅನುಕ್ರಮವಾಗಿ ಶ್ರೀ ಟಿ. ಪ್ರಕಾಶರಾವ್, ಎಸ್. ಎಸ್. ವಾಸನ್ ಮತ್ತು ಭೀಮಸಿಂಗ್ ಇವರು ವಹಿಸಿದ್ದಾರೆ.

ಇನ್ನು ಉಳಿದ ಜಬ್ ಪ್ಯಾರ ಕಿಸೀಸೆ ಹೋತಾ ಹೈ, ಜಂಗ್ಲಿ ಮತ್ತು ಹರಿಯಾಲಿ ಔರ ರಾಸ್ತಾ, ಇವುಗಳ ವಿಶೇಷ ಆಕರ್ಷಣೆ ಎಂದರೆ ಸಂಗೀತ. ನಟವರ್ಗದ ಅಭಿನಯ, ತಾಂತ್ರಿಕ ಮೌಲ್ಯ ಇವುಗಳು ಈ ಚಿತ್ರಗಳಲ್ಲಿ ಒಂದು ತೂಕವಾದರೆ, ಸಂಗೀತವೇ ಇನ್ನೊಂದು ತೂಕವಾಗಿರುತ್ತದೆ. ಅಂದರೆ ಸಂಗೀತವೇ ಈ ಚಿತ್ರಗಳ ಜೀವನಾಡಿ ಆಗಿರುತ್ತದೆ. ಈ ಮೂರು ಚಿತ್ರಗಳಿಗೆ ಸಂಗೀತವನ್ನು ಹಿಂದಿ ಚಿತ್ರಪ್ರಪಂಚದ ಚಿರ ಪ್ರಸಿದ್ಧ ಸಂಗೀತ ದಿಗ್ದರ್ಶಕರ ಜೋಡಿಯಾದ ಶಂಕರ-ಜೈಕಿಶನ್ನರು ನೀಡಿರುವರು. ಚಿತ್ರದ ಕಥೆಯು ಹೇಗೇ ಇದ್ದರೂ ಇಂಪಾದ ಸಂಗೀತವೊಂದಿದ್ದರೆ ಇತರ ದೋಷಗಳೆಲ್ಲ ಮುಚ್ಚಿಕೊಂಡು ಹೋಗಿ ಅದು ಜನಪ್ರಿಯವಾಗಲು ಸಾಧ್ಯವಿರುತ್ತದೆಂಬದನ್ನು ಈ ಚಿತ್ರಗಳು ತೋರಿಸಿಕೊಟ್ಟಿವೆ. ಚಿತ್ರದ ಜ ನ ಪ್ರಿ ಯ ತೆ ಹೆಚ್ಚಾಗಿ ಸಂಗೀತವನ್ನು ಅವಲಂಬಿಸಿದ್ದರೂ ಉತ್ತಮ ಛಾಯಾಗ್ರಹಣ ಮತ್ತು ನಿಸರ್ಗಸೌಂದರ್ಯ ಇವುಗಳೂ ಅದಕ್ಕೆ ಪೋಷಕವಾಗುವವು. ಈ ಮೂರು ಚಿತ್ರಗಳ ಛಾಯಾಗ್ರಹಣ ಉತ್ತಮವಾಗಿದೆ ಮತ್ತು ಇವು ನಿಸರ್ಗರಮಣೀಯ ದೃಶ್ಯಗಳ ಹಿನ್ನೆಲೆಯಲ್ಲಿ ಚಿತ್ರಿಸಲ್ಪಟ್ಟಿವೆ.



ಸಂಗೀತ ದಿಗ್ದರ್ಶನದಲ್ಲಿ ವಿಕ್ರಮ ಸ್ಥಾಪಿಸಿದ ಜೊತೆ ಶಂಕರ ಜೈಕಿಶನ್

ಜಬ್ ಪ್ಯಾರ ಕಿಸೀಸೆ ಮತ್ತು ಹರಿಯಾಲಿ ಔರ ರಾಸ್ತಾ ಚಿತ್ರಗಳಲ್ಲಿ ದಾರ್ಜಿಲಿಂಗದ ದೃಶ್ಯಗಳಿದ್ದರೆ, ಜಂಗ್ಲಿಯಲ್ಲಿ ಸೊಬಗಿನ ಕಾಶ್ಮೀರದ ದೃಶ್ಯಗಳಿವೆ. ಜಂಗ್ಲಿಯ ಹೆಚ್ಚಿನ ಆಕರ್ಷಣೆಯೆಂದರೆ, ಅದು ವರ್ಣರಂಜಿತ ಚಿತ್ರವಾಗಿರುತ್ತದೆ. ಜಬ್ ಪ್ಯಾರ ಹಾಗು ಜಂಗ್ಲಿ ಚಿತ್ರಗಳ ನಿರ್ಮಾಪಕರು ಅನುಕ್ರಮವಾಗಿ ನಾಸೀರ್‌ಹುಸೇನ್ ಮತ್ತು ಫಿಲ್ಮಾಲಯದ ಎಸ್. ಮುಕರ್ಜಿಯವರಾಗಿದ್ದು, ಅವರಿಗೆ ಈ ಮೊದಲೇ "ಜನಪ್ರಿಯ" ಚಿತ್ರಗಳನ್ನು ನಿರ್ಮಿಸಿದ ಅನುಭವವಿರುತ್ತದೆ.

ಭಾರತೀಯ ಚಿತ್ರಪ್ರಪಂಚದಲ್ಲಿ ಈ ವರ್ಷದಲ್ಲಿ ಕೆಲ ಮಹತ್ವದ ಘಟನೆಗಳು ಸಂಭವಿಸಿವೆ. ಚಲಚ್ಚಿತ್ರೋದ್ಯಮಕ್ಕೆ ಸರಕಾರದಿಂದ ಸಿಕ್ಕಮನ್ನಣೆ ಮುಖ್ಯವಾದುದು ಚಲಚ್ಚಿತ್ರೋದ್ಯಮ ಶಾಖೆಯನ್ನು ವಹಿಸಿಕೊಳ್ಳುತ್ತಿದ್ದ ಬಾನುಲಿ ಹಾಗು ಸುದ್ದಿ ಶಾಖೆಯ ಮಂತ್ರಿಯು ಕೇಂದ್ರ ಸರಕಾರದಲ್ಲಿ ಕೇವಲ ಸಹಾಯಕ ಮಂತ್ರಿಯಾಗಿರುತ್ತಿದ್ದನು. ಈ ಸಲ ಮಾತ್ರ ಈ ಮಂತ್ರಿಯ ಸ್ಥಾನಮಾನವನ್ನು ಕ್ಯಾಬಿನೆಟ್ ದರ್ಜೆಗೆ ಏರಿಸಲಾಗಿದೆ. ಶ್ರೀ. ಬೆಜವಾಡ ಗೋಪಾಲ ರೆಡ್ಡಿಯವರು ಹೊಸ ಮಂತ್ರಿಗಳಾಗಿದ್ದು ಅವರು ಸ್ವತಃ ಕಲಾಪ್ರೇಮಿಗಳಿರುವರು.

ಪುಣೆಯಲ್ಲಿ ಭಾರತ ಸರಕಾರವು ತೆರೆದಿರುವ ಫಿಲ್ಮ ಇನ್ಸ್ಟಿಟ್ಯೂಟದಲ್ಲಿ ಇದುವರೆಗೆ, ದಿಗ್ದರ್ಶನ, ಛಾಯಾಗ್ರಹಣ ಸೌಂಡ್‌ರಿಕಾರ್ಡಿಂಗ್, ಎಡಿಟಿಂಗ, ಸ್ಕ್ರೀನಪ್ಲೇ ಮೊದಲಾದ ವಿಷಯಗಳಲ್ಲಿ ಮಾತ್ರ ತರಬೇತಿ ಕೊಡಲಾಗುತ್ತಿತ್ತು. ಇನ್ನು ಮೇಲೆ ಅಭಿನಯದ ತರಬೇತಿಯನ್ನು (೧೯೬೩ ರ ಜೂನ ತಿಂಗಳಿಂದ) ನೀಡಲಾಗುವದು.

ಶಂಕರ—ಜಯಕಿಶನ್ನರು ಚಲಚ್ಚಿತ್ರ ರಂಗದ ಅತ್ಯಂತ ಜನಪ್ರಿಯ ಸಂಗೀತ ದಿಗ್ದರ್ಶಕರಾಗಿದ್ದಾರೆ. "ರಂಗೋಲಿ" ಚಿತ್ರದ ಸಂಗೀತ ನಿರ್ದೇಶನದೊಂದಿಗೆ ಈ ಜೋಡಿಯು ಇದುವರೆಗೆ ೫೦ ಚಿತ್ರಗಳಿಗೆ ಸಂಗೀತ ನೀಡಿದಂತಾಗಿರುತ್ತದೆ. ಅವರು ೪೦೦ ಹಾಡುಗಳಿಗೆ ಸಂಗೀತ ಒದಗಿಸಿದ್ದು ಅವುಗಳಲ್ಲಿ ಕನಿಷ್ಟ ೧೦೦ ಹಾಡುಗಳು ಜನಪ್ರಿಯವಾಗಿವೆ. ಒಂದೇ ವರ್ಷದಲ್ಲಿ ಅವರ ಸಂಗೀತವುಳ್ಳ ಐದು ಚಿತ್ರಗಳು (ಸಸುರಾಲ, ಜಿಸ್ ದೇಶಮೆ ಗಂಗಾ ಬಹತಿ ಹೈ, ಆಸ ಕಾ ಪಂಛಿ, ಜಬ್ ಪ್ಯಾರ ಕಿಸೀಸೆ ಹೋತಾ ಹೆ ಮತ್ತು ಜಂಗ್ಲಿ) ರಜತಮಹೋತ್ಸವವನ್ನು ಆಚರಿಸಿದವು. ಈ ಬಗೆಯ ವಿಕ್ರಮವನ್ನು ಯಾವ ಸಂಗೀತನಿರ್ದೇಶಕನೂ ಇದುವರೆಗೆ ಸ್ಥಾಪಿಸಿರುವದಿಲ್ಲ. ಇದಲ್ಲದೆ ಅವರು ಟಾರ್ಜನ ಗೋಸ್ ಟು ಇಂಡಿಯಾ ಎಂಬ ಇಂಗ್ಲೀಷ ಚಿತ್ರಕ್ಕೂ ಸಂಗೀತವನ್ನು ನೀಡಿದ್ದಾರೆ.

"ಸೈನ್ ಅವರ್ಸ ಟು ರಾಮಾ" ಎಂಬ ಹಾಲಿವುಡ್‌ದ ವಿವಾದಾತ್ಮಕ ಇಂಗ್ಲೀಷ ಚಿತ್ರದಲ್ಲಿ ಭಾರತೀಯ ಕಲಾವಿದರಲ್ಲಿ ಕೆಲರು ಪ್ರಮುಖ ಪಾತ್ರಗಳಲ್ಲಿದ್ದಾರೆ. ಅವರಾರೆಂದರೆ

ಜೆ. ಎಸ್. ಕಶ್ಯಪ, ಜಯರಾಜ ಮತ್ತು ಡೇವಿಡ್. ಮಹಾತ್ಮಾ ಗಾಂಧೀಜಿಯವರ ಕೊಲೆಗೆ ಸಂಬಂಧಿಸಿದ ಈ ಚಿತ್ರದಲ್ಲಿ ಕಶ್ಯಪರು ಗಾಂಧೀಜಿಯ ಪಾತ್ರವನ್ನು ವಹಿಸಿದ್ದು ಅವರ ವೇಷ ಹಾಗು ಅಭಿನಯ ನೋಡಿದವರಲ್ಲಿ "ಗಾಂಧೀಜಿ ಇನ್ನೂ ಜೀವಂತವಿರುವರೆ" ಎಂಬ ಸಂದೇಹವನ್ನು ಹುಟ್ಟಿಸುತ್ತದೆ.

ನಟ-ದಿಗ್ದರ್ಶಕ-ನಿರ್ಮಾಪಕ ರಾಜಕಪೂರರು ತಮ್ಮ ಬಣ್ಣದ ಚಿತ್ರ "ಸಂಗಮ" ದ ದೃಶ್ಯಗಳ ಚಿತ್ರೀಕರಣಕ್ಕಾಗಿ ತಮ್ಮ ತಂಡವನ್ನು ಯುರೋಪಖಂಡಕ್ಕೆ ತೆಗೆದುಕೊಂಡು ಹೋಗಿದ್ದರು. ನಟಿ ವೈಜಯಂತಿಮಾಲ, ರಾಜೇಂದ್ರಕುಮಾರ ಇವರಲ್ಲದೆ ದೊಡ್ಡ ತಾಂತ್ರಿಕ ಸಿಬ್ಬಂದಿಯೂ ಈ ತಂಡದಲ್ಲಿತ್ತು. ಇಷ್ಟೊಂದು ದೊಡ್ಡ ತಂಡವು ಚಿತ್ರನಿರ್ಮಾಣಕ್ಕಾಗಿ ಭಾರತದ ಹೊರಗೆ ಹೋಗುವದು ಇದೇ ಮೊದಲು. ಇದಕ್ಕೆ ತಕ್ಕ ವಿದೇಶಿ ವಿನಿಮಯವನ್ನು ಸರಕಾರವು ಒದಗಿಸಿತ್ತು. ಈ ತಂಡವು ರೋಮ, ಪ್ಯಾರಿಸ ಮತ್ತು ವೆನಿಸ್‌ಗಳಲ್ಲಿ ಹೊರಾಂಗಣ ದೃಶ್ಯಗಳನ್ನು ಚಿತ್ರೀಕರಿಸಿತು. ಇದರಿಂದ ಯುರೋಪದಲ್ಲಿ ವಿಶೇಷ ಪ್ರಸಿದ್ಧಿಯು ದೊರೆತು ಭಾರತೀಯ ಚಿತ್ರಗಳ ಬಗ್ಗೆ ಅಲ್ಲಿಯ ಜನರ ಆಸಕ್ತಿಯೂ ಹೆಚ್ಚಿದೆ.

ಪ್ರಸಿದ್ಧ ನಟ ಅಶೋಕಕುಮಾರನಿಗೆ ಪದ್ಮಶ್ರೀ ಪದವಿಯನ್ನು ಕೊಟ್ಟು ಭಾರತ ಸರಕಾರವು ಗೌರವಿಸಿದೆ. ನರ್ಗೀಸಳ ತರುವಾಯ ಈ ಪದವಿ ಪಡೆದವರೆಂದರೆ ಇವರೊಬ್ಬರು.

ಸಸುರಾಲ ಚಿತ್ರದ ಮೂಲಕ ಹಿಂದೀ ಚಿತ್ರಪ್ರಪಂಚದಲ್ಲಿ ಕಾಲಿಟ್ಟ ಕನ್ನಡತಿ ಬಿ. ಸರೋಜಾದೇವಿಗೆ ಹಿಂದೀ ಚಿತ್ರಗಳಿಂದ ಬೇಡಿಕೆ ಬಹಳ ಬರುತ್ತಿದೆ. ಅವಳು ಅನೇಕ ಹಿಂದೀ ಚಿತ್ರಗಳಲ್ಲಿ ಕಾಣಿಸಿಕೊಳ್ಳಲಿದ್ದಾಳೆ.

ಮುಂದಿನ ವರ್ಷದಲ್ಲಿ ಅನೇಕ ಬಣ್ಣದ ಚಿತ್ರಗಳು ಹೊರಬೀಳಲಿವೆ. ಅವುಗಳಲ್ಲಿ ಮುಖ್ಯವೆಂದರೆ ರಾಜಕಪೂರರ ಸಂಗಮ, ಮೊಗಲೆಅಜಂ ಖ್ಯಾತಿಯ ಕೆ.ಅಸೀಫರ ಲೈಲಾ ಮಜನು, ಕಮಲ ಅಮರೋಹಿ ಇವರ ಸಿನೇಮಾಸ್ಕೋಪ ಚಿತ್ರ "ಪಕೀಜಾ", ಮೆಹಬೂಬರ "ಸನ್ ಆಫ್ ಇಂಡಿಯಾ" ವ್ಹಿ. ಶಾಂತಾರಾಮರ 'ಸೆಹ್ರಾ', ಫಿಲ್ಮಾಲಯದವರ ಸಿನೇಮಾಸ್ಕೋಪ ಚಿತ್ರ 'ಲೀಡರ', ನದಿಯಾದವಾಲಾರವರ 'ತಾಜಮಹಲ'.

ಅಂತಾರಾಷ್ಟ್ರೀಯ ಸಹಕಾರದ ಮೇಲೆ ಚಿತ್ರಗಳ ನಿರ್ಮಾಣವು ಭಾರತದಲ್ಲಿ ಪ್ರಾರಂಭವಾಗಲಿದೆ. ದೇವ ಆನಂದರು ಅಮೇರಿಕೆಯ ಸಹಕಾರದಿಂದ ಮತ್ತು ಬಿಮಲರಾಯರು ಝೆಕೋಸ್ಲಾವಾಕಿಯಾದ ಸಹಕಾರದಿಂದ ಚಿತ್ರಗಳನ್ನು ನಿರ್ಮಿಸಲಿರುವರು.

ಭಾರತೀಯ ಚಿತ್ರಗಳಿಗೆ ವಿದೇಶಗಳಲ್ಲಿ ಇತ್ತೀಚಿಗೆ ಬೇಡಿಕೆ ಹೆಚ್ಚುತ್ತಲಿದೆ. ಅವುಗಳ ನಿರ್ಯಾತಕ್ಕೆ ಯೋಗ್ಯ ಅವಕಾಶವನ್ನು ಕಲ್ಪಿಸಿಕೊಟ್ಟರೆ ನಮ್ಮ ಚಿತ್ರಗಳು ಅಮೂಲ್ಯ ವಿದೇಶಿ ವಿನಿಮಯವನ್ನು ಸಂಪಾದಿಸಬಲ್ಲವು.



 ದೀಪಾವಳಿಯು ಸರ್ವರಿಗೂ ಸುಖ, ಶಾಂತಿ ಸಮೃದ್ಧಿಯನ್ನೀಯಲಿ 

*Phone:* **14** *Grams.:* **'NAYAKBANK'**

# ದಿ ಪಾಂಗಾಳ ನಾಯಕ ಬ್ಯಾಂಕ್ ಲಿಮಿಟೆಡ್

ಸ್ಥಾಪನೆ: **1928** ರಿಜಿಸ್ಟರ್ಡ್ ಆಫೀಸು ಪೋ. ಬಾ. ನಂ. **29**

## ಉಡುಪಿ (ದ. ಭಾರತ)

**ಆಕರ್ಷಣೀಯ ಬಡ್ಡಿ ದರಗಳು**

1. 3 ವರ್ಷ ವಾಯಿದೆಯ ಕ್ಯಾಶ್ ಸರ್ಟಿಫಿಕೇಟುಗಳ ಮೇಲೆ ಶೇಕಡಾ . . . . . . **5**
2. ಕರೆ, ಚಿಕ್ಕ ವಾಯಿದೆ, ನಿರಖು ಠೇವ ಖಾತೆಗಳ ಮೇಲೆ ಶೇಕಡಾ . . . . . . **5½**
3. ಸೇವಿಂಗ್ಸ್ ಬ್ಯಾಂಕ್ ಖಾತೆಗಳ ಮೇಲೆ ಶೇಕಡಾ . . . . . . . **3**

( ಯಾವತ್ತು ನಿರ್ಬಂಧಗಳಿಲ್ಲದೆ ಚೆಕ್ಕುಗಳ ಮೂಲಕ ಮರು ಪಾವತಿ ಪಡೆಯುವ ಸೌಲಭ್ಯ

**ಎಲ್ಲರಿಗೂ ಏಕ ಪ್ರಕಾರದ ಸೌಜನ್ಯದ ಸೇವೆ**

ಶಾಖೆಗಳು:

ಮೈಸೂರು ರಾಜ್ಯ: ಉಡುಪಿ-ಟೌನ್ ಬ್ರಾಂಚ್, ಮಂಗಳೂರು-ಬಂದರ, ಮಂಗಳೂರು-ಹಂಪನಕಟ್ಟೆ, ಬೆಂಗಳೂರು, ಶಿವಮೊಗ್ಗಾ, ಬೇಲೂರು, ತುಮಕೂರು, ಕಟಪಾಡಿ, ಸುರತ್ಕಲ್, ಕಿನ್ನಿಗೋಳಿ, ಕುಣಿಗಲ್, ಶಂಕರಪುರ, ಹಳೆಅಂಗಡಿ, ಮುದರಂಗಡಿ ಬೆಳ್ಳೆ ಮತ್ತು ಭದ್ರಾವತಿ.

ಕೇರಳ ರಾಜ್ಯ: ಕಾಂಜಂಗಾಡು, ನೀಲೇಶ್ವರ ಮತ್ತು ಕಾಸರಗೋಡು,

---

ನಮ್ಮ ಗ್ರಾಹಕವೃಂದಕ್ಕೆಲ್ಲ ದೀಪಾವಳಿಯು ಸುಖಪ್ರದವಾಗಲಿ

ಎನ್. ಟಿ. ಎಸ್.

## ಗೋಲ್ಡ ಮೆಡಲ್ ಟೀ

ಸೊಬಗಿನ ಬೀಡಾದ ಮೈಸೂರಿನ ಅತ್ಯುನ್ನತವಾದ ಬೆಟ್ಟಗಳಲ್ಲಿ ಬೆಳೆದ ಮತ್ತು ಫ್ಯಾಕ್ಟರಿಯಲ್ಲಿ ಆಧುನಿಕ ರೀತಿಯಲ್ಲಿ ಪ್ಯಾಕ್ ಮಾಡಲ್ಪಟ್ಟ ಪರಿಶುದ್ಧ ಹಾಗೂ ಸರ್ವೋತ್ಕೃಷ್ಟ **ಮೈಸೂರು ಟೀ**

## M. T. S.

ಮಾರ್ಕಿನಿಂದ ಗ್ರಾಹಕರಿಗೆ ಪೂರೈಸಲು ಅಭಿಮಾನಪಡುತ್ತೇವೆ.

ಇದು ನಮ್ಮ ಪ್ರಗತಿಯ ದ್ಯೋತಕ



TEL: MYSORETEAS PHONE: 33

**The Mysore Tea Supplies Co. (Regd.)**

AGENTS AND EXPORTERS

CHICKMAGALUR (Mysore State)

---

Tel: **'Jagannatha'**

Phone: Mill—25
Residence: 24
Office: 23

# G. Hutchanna Setty & Sons

General Merchants, Chemist & Druggist

HUVINAHADAGALI

**Bellary Dist.** Rly. Stn. **Hagaribommanahalli**

Proprietor:

**Shri Venkateswara Oil Mills & Ginning Factory**

JANARDHAN LORRY EXPREES

Stockists:

**Tata Oil Mills Ltd.,** Soaps and Vanaspati

**Hindustan Lever Ltd.,** Soaps and Vanaspati etc.

ದೀಪಾವಳಿಯ ಶುಭಾಶಯುಗಳು



**ವಿಜಯ ಪಂಪಸೆಟ್**

೧" ರಿಂದ ೩" ಬೆಲ್ಟ ಡ್ರಾಯವ್ಹ ಹಾಗೂ ಡಾಯರೆಕ್ಟ ಕಪಲ್ಡ ಅಲ್ಲದೆ ೧" ರಿಂದ ೬" ವರೆಗೆ ಫುಟ್‌ವ್ಹಾಲ್ವಜ ಬೋರಿಂಗದ ಕೈಪಂಪ... ಇತ್ಯಾದಿ.



೪, ೬ ಹಾಗೂ ೮ ಎತ್ತುಗಳ

**ಕಬ್ಬಿಣ ನೇಗಿಲು**

ನೇಗಿಲು ಹಾಗೂ ಬಿಡಿಭಾಗಗಳು.

ಉತ್ಪಾದಕರು :—

**ನ್ಯೂ ವಿಜಯ ಇಂಡಸ್ಟ್ರೀಜ, ಲಿ.**

ವಿಶ್ರಾಮಬಾಗ, ಸಾಂಗಲಿ (ಮಹಾರಾಷ್ಟ್ರ)

---

ದೀಪಾವಳಿಯು ಸಮಸ್ತರಿಗೂ ಶುಭದಾಯಕವಾಗಲಿ

ಕಾಮತ ಇವರ

**ವಸಂತ ಭವನ**

ಸ್ಟೇಶನ್‌ರೋಡ, ಹುಬ್ಬಳ್ಳಿ

ಕಾಮತ ಇವರ

**ಬಾಂಬೆ ರೆಸ್ಟೋರಂಟ**

ಸ್ಟೇಶನ್‌ರೋಡ, ಹುಬ್ಬಳ್ಳಿ

ಫೋ. ೩೩೮

ಅತ್ಯಾಧುನಿಕ ಮಾದರಿಯ ಬೋರ್ಡಿಂಗ—ಲಾಜಿಂಗ ಮತ್ತು ರಿಫ್ರೆಶ್‌ಮೆಂಟ

**ಕಾಮತ ಹೊಟೆಲ್**

ಬ್ರಾಡವೇ—ಹುಬ್ಬಳ್ಳಿ ಫೋ. ೬೨೩

ಶ್ರೇಷ್ಠ ತರಗತಿಯ ತಿಂಡಿ—ತಿನಸು ಪಾನೀಯದ ಅಂಗಡಿ

**ಕಾಮತ ರೆಸ್ಟೋರಂಟ**

ಬ್ರಾಡವೇ—ಹುಬ್ಬಳ್ಳಿ

ಫೋನ ನಂ. ೨೩೯

ಗದುಗಿಗೆ ಬಂದಾಗ ನಿಮಗೆ ರಸದೌತಣ

**ಕಾಮತ ರೆಸ್ಟೋರಂಟ ಮತ್ತು ಲಂಚ ಹೋಮ**

ಸ್ಟೇಶನ್ ರೋಡ, ಗದಗ

ಫೋನ ನಂ. ೧೨೪

ಮಾಲಕರು : ರಂಗಪ್ಪ ಪಾಂಡುರಂಗ ಕಾಮತ

---

**ಜೀವನ ಹ್ಯಾಂಡಲೂಮ ಇಂಡಸ್ಟ್ರೀಜ, ಈಚಲಕರಂಜಿ**




೪೦×೪೦ ಪ್ಲೇನ—ರಾಸ್ತಾ, ಚೌಕಡಿ ಮತ್ತು ಚಮಕ ಚೌಕಡಿ ತಮಲ ನೂಲಿನಿಂದ ಸಿದ್ಧವಾದ ಪತ್ತಲಗಳು

೯×೫೦, ೬×೫೦ ಮತ್ತು ೫×೫೦ ನಮ್ಮ ಕಡೆಗೆ ಯೋಗ್ಯ ದರದಲ್ಲಿ ಸಿಗುತ್ತವೆ.

ಸ್ಟಾಕಿಸ್ಟರು :— ಎಂ. ವ್ಹಿ. ಭೋಜಯ್ಯ ಬಿ. ಎ. ಆ್ಯಂಡ್ ಬ್ರದರ್ಸ

ಶಿಲ್ಕ ಕ್ಲಾಥ ವ್ಯಾಪಾರಿಗಳು,

ಇಂಡಿಯನ್ ಬ್ಯಾಂಕದೆದುರು, ಮೈಸೂರು

---

ನಮ್ಮ ಯಾವತ್ತೂ ಗ್ರಾಹಕರಿಗೂ ಹಿತೈಷಿಗಳಿಗೂ ಇಷ್ಟಮಿತ್ರರಿಗೂ ದೀಪಾವಳಿ ಸುಖಪ್ರದವಾಗಲಿ ಎಂದು ಕೋರುವೆವು



**ಕೆ. ಎ. ಜೋಶಿ**

ಪ್ರಿನ್ಸಿಪಲ್ ಹೋಲಸೇಲ ಡೀಲರ

**ಕಾನನ ದೇವನ ಚಹಾ**

ಕೊಲ್ಹಾಪುರ ಹಾಗೂ ರತ್ನಾಗಿರಿ ಜಿಲ್ಹೆಗಳಿಗಾಗಿ

ಲಕ್ಷ್ಮಿರೋಡ, ಕೊಲ್ಹಾಪೂರ

ಪೋಸ್ಟ ಬಾಕ್ಸ ನಂ. ೨

ಫೋನ ನಂ.: 261 ಟೆಲಿಗ್ರಾಂ: King Tea




---



ಈ ದೀಪಾವಳಿಯು ಸರ್ವರಿಗೂ ಮಂಗಲದಾಯಕವಾಗಲಿ

ನವೀನ ರೀತಿಯ ಎಲಿಕ್ಟ್ರಿಕಲ್ ಸಾಮಾನುಗಳಿಗೆ
ಅತ್ಯುತ್ತಮ ಸೇವೆಗೆ
ಇತರ ನವೀನ ಕರೆಂಟಿನ ಉಪಕರಣಗಳಿಗೆ

ಮತ್ತು

**HARRY**

ಹೊಲಿಗೆ ಮಿಷಿನುಗಳಿಗೆ

ಕೂಡಲೇ ಸಂದರ್ಶಿಸಿರಿ

**NIMBAGAL ELECTRICALS**

Dealers of all Electrical Goods, Gandhi Chowk, HOSPET

*Prop*: N. VIRUPAKSHIAH

## ನಿಮ್ಮ ರೇಡಿಯೋ 4 ಸ್ಪೀಡ್ ರೇಡಿಯೋಗ್ರಾಮ್ ಮಾಡಿರಿ




ನಮ್ಮ ಗ್ರಾಹಕವೃಂದಕ್ಕೆ
ದೀಪಾವಳಿಯ ಶುಭಾಶಯಗಳು !



ಈ ಹೊಸ ಯಂತ್ರವನ್ನು ಪ್ರತ್ಯಕ್ಷ ನಿಮ್ಮ ಸಮೀಪದ ಎಚ್. ಎಂ. ವ್ಹಿ. ಡೀಲರ ಕಡೆ ನೋಡಲು ಸಿಗುವದು. ಮುದ್ರಿತ ಸಂಗೀತದ ಸಮೃದ್ಧಭಾಂಡಾರವು ಈ ಹೊಸ ಸಾಧನೆ-ಯಿಂದ ನಿಮಗೆ ಸಿಗುವದು.

- ದೀರ್ಘಕಾಲ ನಡೆಯುವ (LP ಮತ್ತು EP) ಮತ್ತು ನಿತ್ಯದ (78 RPM) ಧ್ವನಿಮುದ್ರಿಕೆಗಳನ್ನು ಇದರ ಮೇಲೆ ನಿರಾಯಾಸವಾಗಿ ಕೇಳಬಹುದು.
- ಎಲ್ಲ ಹೆಸರು ವಾಸಿಯಾದ ಕಲಾಕಾರ LP ಮತ್ತು EP ರೆಕಾರ್ಡುಗಳು ಈಗ್ಗೆ ದೊರೆಯಲಿಕ್ಕೆ ಹತ್ತಿವೆ.

## ದಿ ಗ್ರಾಮೋಫೋನ ಕಂಪನಿ ಲಿಮಿಟೆಡ್



INCORPORATED IN ENGLAND WITH LIMITED, LIABILITY

ಮುಂಬಯಿ ◊ ಕಲಕತ್ತಾ ◊ ಮದ್ರಾಸ ◊ ದಿಲ್ಲಿ



ದೀಪಾವಳಿಯ ಶುಭಾಶಯಗಳು !

ಇಗೋ ! ಒಮ್ಮೆ ಪರೀಕ್ಷಿಸಿ.

ಪರಿಶುದ್ಧ ಹಾಗೂ
ಪರಿಮಳಕರವಾದ ಕಾಫಿಗೆ

## VIJAYA Coffee

DELICIOUS & REFRESHING




ವಿಜಯಾ ಕಾಫಿ ಸಪ್ಲೈಸ್
ಶಿವಮೊಗ್ಗ

ಶ್ರೀ ಜಗದ್ಗುರು ಪಂಚಾಚಾರ್ಯ ಪ್ರಸನ್ನ!
ನಮ್ಮ ಗ್ರಾಹಕರಿಗೆ, ಹಿತಚಿಂತಕರಿಗೆ
ದೀಪಾವಳಿಯ ಶುಭಾಶಯಗಳು ! !





ನಮ್ಮಲ್ಲಿ

ಶುದ್ಧ ಕುಸಬಿ ಎಣ್ಣೆ, ಶೇಂಗಾ ಎಣ್ಣೆ ಕೊಬ್ರಿಎಣ್ಣೆ ಮತ್ತು ಚಿಮಣಿಎಣ್ಣಿ ಠೋಕ ವ ಕಿರಕೋಳ ದರದಲ್ಲಿ ಸಿಗುತ್ತದೆ.

ಒಮ್ಮೆ ಸಂದರ್ಶಿಸಿ ಖಾತ್ರಿಮಾಡಿಕೊಳ್ಳಿರಿ

## ವೀರಭದ್ರಪ್ಪ ಸಂಗಪ್ಪ ಹುಯಿಲಗೋಳ

ಎಣ್ಣಿ ಅಂಗಡಿ, ಅಕ್ಕಿಹೊಂಡ, ಹುಬ್ಬಳ್ಳಿ

ಒಮ್ಮೆ ಸಂದರ್ಶಿಸಿರಿ !

## ಫೇರ್ ಪ್ರೈಸ್ ಡ್ರಗ್ ಸ್ಟೋರ್ಸ

ಕೆ. ಎಂ. ರೋಡ್ — ಚಿಕ್ಕಮಗಳೂರು

ಇಲ್ಲಿ
ಎಲ್ಲ ತರಹ ಔಷಧಿಗಳು
ದೊರೆಯುತ್ತವೆ.

ನಮ್ಮ ಗ್ರಾಹಕರಿಗೆ

ದೀಪಾವಳಿಯ ಶುಭಾಶಯಗಳು !

VISIT ONCE

## FAIR PRICE DRUG STORES

CHEMIST AND DRUGGISTS

**K. M. Road, CHICKMAGLUR**

*All kinds of Medicines avaiable here*

C/o
**M. S. R. GUNDAPPA & SONS**

ಕರಿಗೂ
ಹಿತಚಿಂತಕರಿಗೂ

ಪಾವಳಿ

BEEDI WO
s Depot

30
REGD



ನಂಬರ್
# ಮೂವತ್ತು
ಮಾರ್ಕಿನ
# ಬೀಡಿಗಳು




THE BHARATH BEEDI WORKS (Regd.) KARKALA,

